ಅಂತರಭಾರತೀಯ ಪುಸ್ತಕಮಾಲೆ

# ಹಿಂದೀ ಕಥೆಗಳು

ಸಂಪಾದಕ:

ಡಾ|| ನಾಮವರ್ ಸಿಂಗ್

ಅನುವಾದ:

ಎಂ. ಎಸ್. ಭಾರದ್ವಾಜ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪೀಠಿಕೆ

ಚಂದ್ರಧರ ಶರ್ಮಾ ಗುಲೇರಿಯವರ ಕಥೆ "ಉಸ್ನೇ ಕಹಾ ಥಾ" ೧೯೧೫ರ "ಸರಸ್ವತಿ"ಯಲ್ಲಿ ಪ್ರಕಟವಾದಾಗ ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ಅದಕ್ಕೊಂದು ವಿಶಿಷ್ಟ ಮಾನ್ಯತೆ–ಗೋಗೋಲನ 'ಓವರ್ ಕೋಟ್'ಗೆ ಯಾವ ಒಂದು ಮಾನ್ಯತೆ ಇದೆಯೋ ಅಂತಹ ಮಾನ್ಯತೆ – ಅದಕ್ಕೆ ಸಿಗುತ್ತದೆ ಎಂದು ಯಾರೂ ನಿರೀಕ್ಷಿಸಿರಲಿಲ್ಲ. ಹಾಗೆ ನೋಡಿದರೆ "ಉಸ್ನೇ ಕಹಾ ಥಾ" ಹಿಂದಿಯಲ್ಲಿ ಪ್ರಕಟವಾದ ಮೊದಲ ಕಥೆಯಲ್ಲ. ಪ್ರಾಯಶಃ ಕಿಶೋರಿಲಾಲ್ ಗೋಸ್ವಾಮಿಯವರು ಬರೆದ "ಇಂದುಮತಿ" (೧೯೦೦) ಅಥವಾ ಅದೇ ಲೇಖಕರು ಬರೆದಂತಹ "ಪ್ರಣಯಿನಿ ಪರಿಣಯ್" (೧೮೮೭), ಇಲ್ಲವೇ ಆ ಕಾಲಕ್ಕೆ ಬರೆದಂತಹ ಬೇರೆ ಯಾವುದಾದರೂ ಕಥೆ ಮೊದಲ ಕಥೆಯಾಗಿರಬಹುದು. 'ಉಸ್ನೇ ಕಹಾ ಥಾ"ಗೆ ಮೊದಲು ಇನ್ನೂ ಅನೇಕ ಶ್ರೇಷ್ಠ ಕಥೆಗಳು ಪ್ರಕಟವಾಗಿವೆ ಎಂಬ ಮಾತೂ ಸರಿ – ಬಂಗಾಳಿ ಮಹಿಳೆಯೊಬ್ಬಳು ಬರೆದ "ದುಲಾಯಿವಾಲಿ" (೧೯೦೭), ವೃಂದಾವನ ಲಾಲ್ ವರ್ಮಾ ಬರೆದ "ರಾಖಿ ಬಂದ್ ಭಾಯಿ" (೧೯೦೯), ಜಯಶಂಕರ ಪ್ರಸಾದರ "ಗ್ರಾಮ್" (೧೯೧೧), ರಾಜಾ ರಾಧಿಕಾರಮಣ ಪ್ರಸಾದ ಸಿಂಗ್ ಅವರ "ಕಾನೋಯಿ ಕಂಗನಾ" (೧೯೧೩), ವಿಶ್ವಂಭರನಾಥ ಶರ್ಮಾ ಕೌಶಿಕರು ಬರೆದ "ರಕ್ಷಾಬಂಧನ್" (೧೯೧೩) ಇತ್ಯಾದಿ. ಆದರೆ ಇವುಗಳೆಲ್ಲ ಹಿಂದಿಯಲ್ಲಿ ಪ್ರಕಟವಾದ ಮೊದಲ ಕಥೆಗಳ ಇತಿಹಾಸಕ್ಕೆ ವಸ್ತುವಾಗುತ್ತವೆಯಷ್ಟೆ. ಗುಲೇರಿಯವರು ಬರೆದ "ಉಸ್ನೇ ಕಹಾ ಥಾ" ಮಾತ್ರ ಹಿಂದೀ ಸಾಹಿತ್ಯ ಜಗತ್ತಿನಲ್ಲಿ ಇವೊತ್ತಿಗೂ ಅಮರ ಸ್ಥಾನವನ್ನು ಪಡೆದಿದೆ ಮತ್ತು ಅದರ ಜೊತೆಗೇ ಅದರ ಲೇಖಕ ಗುಲೇರಿಯವರಿಗೂ ಒಂದು ಅಮರಸ್ಥಾನ ದೊರಕಿದೆ. ಅದೂ ಸಹ ಅವರು ಬರೆದ ಇದೊಂದೇ ಕಥೆಯ ಪರಿಣಾಮವಾಗಿ! ಅದೂ ಸಂಯೋಗವಶಾತ್ ಅವರು ಈ ಕಥೆಯನ್ನು ಬರೆದಿರಬೇಕು. ಏಕೆಂದರೆ, ವಾಸ್ತವಿಕವಾಗಿ ಅವರು ಒಬ್ಬ ಸಂಸ್ಕೃತ ವಿದ್ವಾಂಸರಷ್ಟೇ ಆಗಿದ್ದರು. ಭಾಷಾಶಾಸ್ತ್ರ ಹಾಗೂ ಪ್ರಾಚೀನ ವಸ್ತುಶಾಸ್ತ್ರ – ಇವು ಅವರ ಮುಖ್ಯ ಅಭಿರುಚಿಯಾಗಿದ್ದುವು. ಇನ್ನೂ ಎರಡು ಕಥೆಗಳನ್ನು ಅವರು ಬರೆದಿದ್ದರು – "ಬುದ್ಧು ಕಾ ಕಾಂಟಾ" (೧೯೧೧) ಮತ್ತು "ಸುಖಮಯ ಜೀವನ್" (೧೯೧೧–೧೯೧೫ರ ಮಧ್ಯೆ). ಆದರೆ ಇವುಗಳನ್ನು ಓದಿದಾಗ ಗುಲೇರಿಯವರಿಗೆ ಕಥೆ ಕೂಡ ಒಂದು ಟಿಪ್ಪಣಿ ಲೇಖನ ಇದ್ದಂತೆ ಎಂದು ಭಾಸವಾಗುತ್ತದೆ. ೧೯೨೦ರಲ್ಲಿ ಅವರು ತಮ್ಮ ೩೭ನೆಯ ಅಲ್ಪಾಯುಸ್ಸಿನಲ್ಲೇ ತೀರಿಕೊಂಡರು – ಹೀಗಿರುವಾಗ ಹಿಂದೀ ಕಥೆಗಳ ಇತಿಹಾಸದಲ್ಲಿ ಒಂದು ಶುಭ ಸಂಯೋಗದ ಫಲವಾಗಿ ಗುಲೇರಿಯವರ ಲೇಖನಿಯಿಂದ "ಉಸ್ನೇ ಕಹಾ ಥಾ" ಕಥೆ ಮೂಡಿ ಬಂದಿರಬೇಕು ಎನ್ನದೆ ಮತ್ತೇನು ಹೇಳಲು ಸಾಧ್ಯ?

ಆದರೂ "ಉಸ್ನೇ ಕಹಾ ಥಾ" ಕಥೆ ಬರೇ ಆಕಸ್ಮಿಕ ಎನ್ನುವಂತಿಲ್ಲ. ಕಥೆಯ ವಸ್ತು ಆ ಕಾಲಕ್ಕೆ ಒಪ್ಪುವ ಸಹಜ ಪ್ರೇಮ ಮತ್ತು ಅದಕ್ಕಾಗಿ ಮಾಡಬೇಕಾಗಿ ಬಂದಂತಹ ಬಲಿದಾನದ ಆದರ್ಶವನ್ನು ಚಿತ್ರಿಸುವುದೇ ಆಗಿದೆ. ಪ್ರಾರಂಭದಲ್ಲಿ ಈ ಕಥೆಯನ್ನು ಮೆಚ್ಚಿಕೊಂಡವರು ಪ್ರಾಯಶಃ ಆ ಆದರ್ಶ ಚಿತ್ರಣಕ್ಕಾಗಿಯೇ ಮೆಚ್ಚಿಕೊಂಡಿರಬೇಕು. ಅದರ ಜೊತೆಗೇ ಕಥೆಯ ನಿರೂಪಣೆಯಲ್ಲಿ ಕಾಣುವ ಕಲಾತ್ಮಕ ಸಂಯಮ ಹಾಗೂ ಒಂದು ಸಹಜ ಚಿತ್ರಣದ ಕಡೆಗೂ ಅದರ ದೃಷ್ಟಿ ಇದ್ದಿರಬೇಕು ಎನಿಸುತ್ತದೆ. ಹಿರಿಯ ವಿಮರ್ಶಕ ರಾಮಚಂದ್ರ ಶುಕ್ಲ ಅವರು ಈ ಕೃತಿಯ ಬಗ್ಗೆ ಹೇಳಿರುವ ಈ ಮಾತಿನಿಂದ ಸ್ಪಷ್ಟವಾಗುತ್ತದೆ. "ಈ ಕಥೆಯಲ್ಲಿ ಪರಿಪೂರ್ಣ ಯಥಾರ್ಥವಾದದ ಹಾಗೂ ಉತ್ತಮ ಅಭಿರುಚಿಯ ಒಂದು ಸಂಪ್ರದಾಯ ಸ್ಥಿತಿಯ ಮಧ್ಯೆ ಭಾವುಕತೆಯ ಅತ್ಯುನ್ನತ ಉತ್ಕರ್ಷ ಕೂಡ ಕಲಾತ್ಮಕವಾಗಿ ಎದ್ದು ಕಾಣುತ್ತದೆ. ಕಥೆಯಲ್ಲಿನ ಘಟನೆ ಯಾವ ರೀತಿ ನಡೆದಿರಬಹುದೋ ಅದೇ ರೀತಿ ಚಿತ್ರಿತವಾಗಿದೆ. ಆದರೆ ಈ ಮಧ್ಯೆ ಪವಿತ್ರ ಪ್ರೇಮ ಪ್ರಸಂಗದ ಒಂದು ದೈವೀ ಸ್ವರೂಪ ಇಣಕು ಹಾಕುತ್ತಿದೆ – ಕೇವಲ ಇಣಕು ಹಾಕುತ್ತಿದೆ. ಅಷ್ಟೆ. ನಿರ್ಲಜ್ಜತೆಯಿಂದ ಕೂಗುಹಾಕುತ್ತಿಲ್ಲ. ಬಡಬಡಿಸುತ್ತಿಲ್ಲ. ಕಥೆಯ ಯಾವ ಭಾಗದಲ್ಲೂ ಪ್ರೇಮದ ನಿರ್ಲಜ್ಜ ಪ್ರಾಮುಖ್ಯತೆಯಾಗಲಿ ಅದರ ಮೊದಲನೆಯ ಭೀಭತ್ಸ ವಿವರಣೆಯಾಗಲಿ ಕಂಡುಬರುವುದಿಲ್ಲ. ಉಚ್ಚ ಅಭಿರುಚಿಯ ಕೋಮಲವಷ್ಟೇ ಅಲ್ಲ, ಅತ್ಯಂತ ಕೋಮಲ ಸ್ವರೂಪ ಇಲ್ಲಿ ಎದ್ದು ಕಾಣುತ್ತದೆ: ಅದರ ಮೇಲೆ ಎಲ್ಲಿಯೂ ಆಘಾತ ನಡೆದಿಲ್ಲ. ಪಾತ್ರಗಳು ಇಲ್ಲಿ ಹೇಳುವುದಿಲ್ಲ. ಘಟನೆಗಳೇ ಹೇಳುವುದನ್ನು ಹೇಳಿ ಮುಗಿಸುತ್ತವೆ." ಕಥೆಯಲ್ಲಿ ಬರುವ ಆದರ್ಶವಾದವಷ್ಟೇ ಇಲ್ಲಿ ಮುಖ್ಯವಾಗಿಲ್ಲ. ಆಗಿನ ಕಾಲದಲ್ಲಿ ಪ್ರಕಟವಾಗಿದ್ದ ಕಥೆಗಳಿಗೆ ಹೋಲಿಸಿದಾಗ ಬರಿಯ ಆದರ್ಶವಾದವಷ್ಟೇ ಅಲ್ಲದೆ ಲೇಖಕನ ಕಲಾಸಂಯಮ ಶಕ್ತಿ ಹೆಚ್ಚು ಮಹತ್ವಪೂರ್ಣವಾಗಿರುವುದು ಕಂಡು ಬರುತ್ತದೆ. ಇದು ಬೇರೆ ಕಥೆಗಳಿಂದ ಅದನ್ನು ಪ್ರತ್ಯೇಕಿಸಿ ತೋರಿಸುವುದಕ್ಕೆ ಅವಕಾಶ ನೀಡಿತು. ಆಗಿನ ಕಾಲಕ್ಕೆ ನಿರೀಕ್ಷಿಸದೆ ಇದ್ದಂತಹ ಒಂದು ವೈಶಿಷ್ಟ್ಯ ಇಲ್ಲಿ ಎದ್ದು ಕಂಡಿತು. ಲೇಖಕನ ಕಲಾಸಂಯಮಶಕ್ತಿ ಇಲ್ಲಿ ನಿಂತಿರುವುದು ಸ್ಪಷ್ಟ ಯಥಾರ್ಥವಾದದ ಆಧಾರದ ಮೇಲೆ. ವಾಸ್ತವಿಕ ಜೀವನದ ಮಾರ್ಮಿಕ ಸನ್ನಿವೇಶಗಳ ಕಡೆಗೆ ದೃಷ್ಟಿ ಹಾಯಿಸಿ ಅವುಗಳ ಜೀವಂತ ಚಿತ್ರಣವನ್ನು ಒದಗಿಸಲಾಗಿರುವುದನ್ನು ಇಲ್ಲಿ ಕಾಣಬಹುದು. ಕಥೆಯಲ್ಲಿ ಕೆಲವು ಮುಖ್ಯ ಪ್ರಾದೇಶಿಕ ಚಿತ್ರಗಳು ಬರುತ್ತವೆ. ಅಮೃತಸರದ ಪೇಟೆಯ ಒಂದು ಚಿತ್ರ, ಜರ್ಮನಿಯಲ್ಲಿ ಬಿಡಾರ ಹೂಡಿರುವ ಸಿಖ್ ಸೈನಿಕರು ಪಂಜಾಬಿ ಜಾನಪದ ಗೀತೆಗಳನ್ನು ಹಾಡುವುದು, ಲಹನಾಸಿಂಗ್ ಅಂತ್ಯಕಾಲದಲ್ಲಿ ತನ್ನ ಊರನ್ನು ನೆನಸಿಕೊಂಡು ನಡೆಸುವ ಪ್ರಲಾಪ – ಇವುಗಳೆಲ್ಲ ಪ್ರಾದೇಶಿಕ ಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ಈ ಪ್ರಾದೇಶಿಕ ಚಿತ್ರಣದ ಪ್ರವೃತ್ತಿ ಕೂಡ "ಉಸ್ನೇ ಕಹಾ ಥಾ" ಕಥೆಯಿಂದಲೇ ಆರಂಭವಾಗಿ ಮುಂದೆ ಹಿಂದೀ ಕಥೆಗಳ ಒಂದು ವಿಶಿಷ್ಟ ಪ್ರವೃತ್ತಿಯಾಗಿಯೇ

ಬೆಳೆಯಿತು ಎಂದೂ ಹೇಳಬಹುದು. ಈ ಕಥೆಯ ಇನ್ನೊಂದು ವೈಶಿಷ್ಟ್ಯವೆಂದರೆ, ಕುತೂಹಲಕಾರಿ ಘಟನೆಗಳಷ್ಟೇ ಮುಖ್ಯವಾಗಿರುತ್ತಿದ್ದ ಹಿಂದೀ ಕಥಾನಕ ಪ್ರವೃತ್ತಿಯನ್ನು ಇದು ಬದಲಿಸಿ ಜೀವನದ ವಾಸ್ತವಿಕ ಹಾಗೂ ಮಾರ್ಮಿಕ ಘಟನೆಗಳನ್ನು ಕಥೆಗೆ ಆಧಾರವನ್ನಾಗಿ ಮಾಡಿದ್ದೂ ಆಗಿದೆ. ಇದರಿಂದ ಹಿಂದೀ ಕಥಾವಾಹಿನಿಯ ದಾರಿಯೇ ಬದಲಾದಂತಾಯಿತು. ಆದರೆ ಇದೆಲ್ಲದಕ್ಕೂ ಮಿಗಿಲಾದ ಇನ್ನೊಂದು ಮುಖ್ಯ ಕೆಲಸ ಭಾಷಾಕ್ಷೇತ್ರದಲ್ಲಿ ನಡೆಯಿತು. ಮೊದಲ ಬಾರಿಗೆ ಹಿಂದೀ ಭಾಷೆ ಎಷ್ಟು ಜೀವಂತ ಭಾಷೆ ಎಂಬುದು ಕಥೆಯ ಮೂಲಕ ಪ್ರಕಟವಾಯಿತು. ಒಂದು ಹೊಸ ಅರಿವು ಮೂಡಿತು. ಆ ತನಕ ಅಂತಹ ಭಾಷಾ ಪ್ರಜ್ಞೆಯ ಕೊರತೆಯಿಂದಾಗಿ ಹಿಂದೀ ಕಥೆಗಳ ವಿಕಾಸ ಕುಂಠಿತವಾಗಿತ್ತು. ಈ ಕಥೆಯ ಬಗ್ಗೆ ಇನ್ನೊಂದು ವಿಚಾರವೂ ಇಲ್ಲಿ ಗಮನಾರ್ಹ. ೨೫ ವರ್ಷಗಳ ಹಿಂದಿನ ಜೀವನದ ಕಡೆಗೆ ಇಲ್ಲಿ ನಡೆದಿರುವ 'ಫ್ಲಾಷ್ ಬ್ಯಾಕ್' ಕಥಾನಿರೂಪಣೆಯ ವಿಧಾನ ಎಷ್ಟು ಚತುರತೆಯಿಂದ ನಡೆದಿದೆಯೆಂದರೆ ಕಾಲ ನಿರೂಪಣೆಯ ಕಲೆಯಲ್ಲಿ ಲೇಖಕ ಸಿದ್ಧಹಸ್ತನಾಗಿದ್ದಾನೆ ಎಂಬುದು ಸ್ಪಷ್ಟವಾಗುತ್ತದೆ. ಪ್ರಾಸಂಗಿಕವಾಗಿ ಇನ್ನೊಂದು ವಿಚಾರ ಕೂಡ ಇಲ್ಲಿ ಗಮನಾರ್ಹ. ೧೯೧೪ರಲ್ಲಿ ಪ್ರಥಮ ಮಹಾಯುದ್ಧ ಆರಂಭವಾಯಿತು. ಲೇಖಕ ಈ ಕಥೆಯನ್ನು ೧೯೧೫ರಲ್ಲಿ ಬರೆದಿದ್ದಾನೆ. ಯುದ್ಧರಂಗದ ಚಿತ್ರಣವನ್ನು ಕಥೆಯಲ್ಲಿ ತರಲಾಗಿದೆ. ಇದರಿಂದಾಗಿ ಲೇಖಕನಲ್ಲಿ ಕಂಡುಬರುವ ಈ ಸಮಕಾಲೀನ ಪ್ರಜ್ಞೆ ಪ್ರಾಯಶಃ ಭಾರತೀಯ ಕಥಾಪ್ರಪಂಚದಲ್ಲಿಯೇ ಒಂದು ಹೊಸ ದಾಖಲೆಯಾಗಿತ್ತು. ಭಾರತೀಯ ಸಣ್ಣ ಕಥೆಗಳ ಇತಿಹಾಸದಲ್ಲಿಯೇ ಈ ಉತ್ಥಾನಕಾರ್ಯ ಹಿಂದಿ ಸಣ್ಣ ಕಥೆಯೊಂದರ ಮೂಲಕ ನಾಂದಿಯ ರೂಪದಲ್ಲಿ ನಡೆದುದು ಒಂದು ಸೌಭಾಗ್ಯದ ವಿಷಯ.

ಹಿಂದೀ ಕಥಾ ಪ್ರಪಂಚದ ಈ ವಿಕಾಸ ಸೂತ್ರವನ್ನು ಮುಂದೆ ಪ್ರೇಮಚಂದ್ (೧೮೮೦–೧೯೩೬) ರಂತಹ ಒಬ್ಬ ಸಮರ್ಥ ಕತೆಗಾರರ ಕೈಗೆ ಒಪ್ಪಿಸಲು ಸಾಧ್ಯವಾಯಿತು. ೧೯೧೫ರ "ಸರಸ್ವತಿ"ಯಲ್ಲಿ ಗುಲೇರಿಯವರ "ಉಸ್ನೇ ಕಹಾ ಥಾ" ಪ್ರಕಟವಾದರೆ ೧೯೧೬ರ "ಸರಸ್ವತಿ"ಯಲ್ಲಿ ಪ್ರೇಮಚಂದರ ಕಥೆ "ಪಂಚಪರಮೇಶ್ವರ" ಪ್ರಕಟವಾಯಿತು. ಪ್ರಾದೇಶಿಕತೆಯ ಚಿತ್ರಣ ಒಂದು ಹೆಜ್ಜೆ ಮುಂದೆ ಹೋಗಿ ಇಲ್ಲಿ ಗ್ರಾಮಕಥೆಗ ಕೂಡಿಕೊಂಡಿರುವುದು ಕಂಡುಬರುತ್ತದೆ. ಹಳೆಯ ಒಂದು ಜಾನಪದ ಕಥೆ ತುಂಬಾ ಸಹಜ ಹಾಗೂ ಸಜೀವ ರೀತಿಯಲ್ಲಿ ಸಾಹಿತ್ಯಕ ರೂಪಾಂತರವನ್ನು ಹೊಂದಿದ್ದುದು ಇಲ್ಲಿ ಕಂಡುಬಂತು. ಹಿಂದೀ ಕಥೆಗಳನ್ನು ಯೂರೋಪಿನ "ಷಾರ್ಟ್ ಸ್ಟೋರಿ" ಹಾಗೂ ಬಂಗಾಳದ "ಗಲ್ಪ" ಗಳಿಗೆ ಹೋಲಿಸಹೋಗುತ್ತಿದ್ದವರು ಪ್ರೇಮಚಂದರ ಕಥೆಯನ್ನು ಓದಿ ಮೂಕರಾದರು. ಪ್ರೇಮಚಂದರು ಮುಂದೆ ತಮ್ಮ ಅದೇ ಧಾಟಿಯಲ್ಲಿ ಅನೇಕ ಕಥೆಗಳನ್ನು ಬರೆದರು. ಗ್ರಾಮೀಣ ಕಥೆಗಳ ರಸಪೂರ್ಣ ಶೈಲಿಯೊಂದು ಅವುಗಳಲ್ಲಿ ಮೂಡಿಬಂತು. ಅವರ ಎಷ್ಟೋ ಕಥೆಗಳು ಹೀಗೆ ನೇರವಾಗಿ ಮತ್ತು ಸರಳವಾಗಿ ಆರಂಭವಾಗುತ್ತವೆ: "ಒಂದು

ಊರಿನಲ್ಲಿ ಶಂಕರ್ ಎಂಬ ಹೆಸರಿನ ಒಬ್ಬ ಬಡ ರೈತನಿದ್ದ. ತುಂಬಾ ಸರಳ ಸ್ವಭಾವದ ಮನುಷ್ಯ—ತಾನಾಯಿತು, ತನ್ನ ಕೆಲಸವಾಯಿತು. ಯಾರ ಹವ್ಯಾಸಕ್ಕೂ ಹೋಗುತ್ತಿರಲಿಲ್ಲ. ಒಬ್ಬರಿಗೆ ಕೊಡುವಂತಿಲ್ಲ. ಒಬ್ಬರಿಂದ ತೆಗೆದುಕೊಳ್ಳುವಂತಿಲ್ಲ... ಒಂದು ದಿನ ಸಂಜೆ ಒಬ್ಬ ಸಾಧು ಬಂದು ಅವನ ಬಾಗಿಲಲ್ಲಿ ಠಿಕಾಣಿ ಹಾಕಿದ." ಮುಂದೆ ಅವನು ಏನು ಕೇಳುತ್ತಾನೆ ಎಂದು ಸ್ಪಷ್ಟವಾಗಿ ಹೇಳುವ ಆವಶ್ಯಕತೆ ಇಲ್ಲ. ಹಿಂದುಸ್ತಾನದ ಯಾವ ಮೂಲೆಗೇ ಹೋಗಿ, ಈ ರೀತಿ ನೇರವಾಗಿ ಕಥೆ ಹೇಳುವ ಕಲೆಯನ್ನು ಕಥೆ ಹೇಳುವವನೂ ತಿಳಿದಿದ್ದಾನೆ ಕೇಳುವವನೂ ತಿಳಿದಿದ್ದಾನೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಈ ಶೈಲಿಯನ್ನೇ ಪ್ರೇಮಚಂದರು ತಮ್ಮ ಕಥಾಶೈಲಿಯಲ್ಲಿ ರೂಢಿಸಿಕೊಂಡು ಕಥೆಯನ್ನು ಓದುವುದಷ್ಟೇ ಅಲ್ಲ ಹೇಳಲು–ಕೇಳಲು ಅನುಕೂಲವಾಗುವಂತೆ ಮಾಡಿಬಿಟ್ಟರು.

ಆದರೆ ಪ್ರೇಮಚಂದರು ತಮ್ಮ ಕಥಾಸೃಷ್ಟಿಯಲ್ಲಿ ಇದೇ ನಿರ್ದಿಷ್ಟ ನಿಯಮಕ್ಕೆ ಬದ್ಧರಾಗಿಲ್ಲ. ಅವರೇ ಈ ವಿಷಯವಾಗಿ ಒಂದು ಕಡೆ ಹೇಳಿದ್ದಾರೆ: "ಕಥೆ ಹೃದಯದ ಅಂತರಾಳದಿಂದ ಬರಬೇಕೇ ಹೊರತು, ಯಾವುದೇ ನಿಯಮಕ್ಕೆ ಒಳಗಾಗಿ ಅಲ್ಲ. ನಿಯಮ ಇರುತ್ತದೆ. ಆದರೆ ಅದರ ಇರುವಿಕೆ ನಮ್ಮ ಉಪಯೋಗಕ್ಕಾಗಿ ಮಾತ್ರ. ಹೃದಯದ ಮಾತಿಗೆ ನಿಯಮ ಅಡ್ಡಿ ಬರುವುದಾದರೆ ಅದನ್ನು ನಿಸ್ಸಂಶಯವಾಗಿ ಉಲ್ಲಂಘಿಸಬೇಕಾಗುತ್ತದೆ." ಇದೇ ಅಭಿಪ್ರಾಯಕ್ಕನ್ವಯಿಸಿ ಅನುಕೂಲಕ್ಕೆ ತಕ್ಕಂತೆ ತಮ್ಮ ಕಥಾನಿರೂಪಣೆಗೆ ಅನ್ಯ ಶೈಲಿಗಳನ್ನೂ ಅವರು ಬಳಸಿದರು. ಕಥೆಯ ವಸ್ತುವಷ್ಟೇ ಅಲ್ಲ, ಶೈಲಿಯ ದೃಷ್ಟಿಯಿಂದಲೂ ಅವರ ಕಥೆಗಳಲ್ಲಿ ಅತ್ಯಂತ ಉಚ್ಚ ಕಲಾಕೌಶಲ್ಯವನ್ನೂ ವೈವಿಧ್ಯತೆಯನ್ನೂ ಕಾಣಬಹುದಾಗಿದೆ. "ಶತರಂಜ್ ಕೆ ಖಿಲಾಡಿ"ಯಲ್ಲಿ ಬರುವ ಮಿರ್ಜಾ ಮತ್ತು ಮೀರ್ ಪಾತ್ರಗಳಿಂದ "ದೋ ಬೈಲೋಂಕಿ ಕಥಾ"ದಲ್ಲಿ ಬರುವ ಪಾತ್ರಗಳವರೆಗೆ ನಮಗೆ ಕಂಡು ಬರುವ ವೈವಿಧ್ಯತೆಯನ್ನು ನೋಡಿದಾಗ ಲೇಖಕನ ಅನುಭವ ಅದೆಷ್ಟು ಆಳವಾಗಿದೆ ಮತ್ತು ವ್ಯಾಪಕವಾಗಿದೆ ಎಂದು ಆಶ್ಚರ್ಯವಾಗುತ್ತದೆ. ಪ್ರೇಮಚಂದರು ಒಟ್ಟು ಸುಮಾರು ಇನ್ನೂರಿಪ್ಪತ್ತು ಕಥೆಗಳನ್ನು ಬರೆದಿರಬೇಕು. ಇಪ್ಪತ್ತು ವರ್ಷಗಳ ಕಾಲಾವಧಿಯಲ್ಲಿ ಆದರ್ಶವಾದಿ ಯಥಾರ್ಥವಾದದಿಂದ ಹಿಡಿದು ಆಲೋಚನಾತ್ಮಕ ಯಥಾರ್ಥವಾದದ ವರೆಗಿನ ದೀರ್ಘ ಯಾತ್ರೆಯನ್ನು ಸಾಹಿತ್ಯ ಕ್ಷೇತ್ರದಲ್ಲಿ ಕೈಗೊಂಡರು. ಈ ಅವಧಿಯಲ್ಲಿ ಅವರ ಈ ಯಾತ್ರೆಯ ಜೊತೆಗೇ ಹಿಂದೀ ಸಾಹಿತ್ಯ ಕ್ಷೇತ್ರದಲ್ಲಿ ಕಥಾನಕ-ಕಲೆಯ ವಿಕಾಸವೂ ಆಯಿತೆನ್ನಬಹುದು. ಈ ದಿಶೆಯಲ್ಲಿ ಅವರ ಪ್ರೌಢಮಟ್ಟಕ್ಕೆ ಸಾಕ್ಷಿಯಾಗಿ, ಅವರ ಅಂತಿಮ ದಿನಗಳಲ್ಲಿ, "ಪೂಸ್ ಕೀ ರಾತ್" (೧೯೩೦) ಮತ್ತು "ಕಫನ್" (೧೯೩೬) ದಂತಹ ಕಥೆಗಳು ಉಲ್ಲೇಖನೀಯವಾಗುತ್ತವೆ. ಆ ದಿನಗಳಲ್ಲಿ ಪ್ರೇಮಚಂದರು ತಮ್ಮ ನೋಟ್ ಬುಕ್ಕಿನಲ್ಲಿ ಒಂದು ಕಡೆ ಬರೆದಿದ್ದರು: ದುಃಖದ ಕಥೆಯ ಆನಂದ ಬಂದಿದೆ. "ಪೂಸ್ ಕಿ ರಾತ್" ಮತ್ತು "ಕಫನ್" — ಈ ಕಥೆಗಳ ಹಿಂದಿರುವ ಮೂಲ ಉದ್ದೇಶವೇನು ಎಂಬುದಕ್ಕೆ ಅವರ ಮಾತು ಉತ್ತರ ಕೊಡುತ್ತದೆ. ಈ ಕಥೆಗಳಲ್ಲಿ ಜೀವನದ ಹಲವು

ಕಥೆಗಳ ಲಕ್ಷಣವೂ ಕಂಡುಬರುತ್ತದೆ. ಹೀಗೆ ಪ್ರೇಮಚಂದರು ತಮ್ಮ ಕಥೆಗಳ ಮೂಲಕ ಹಿಂದೀ ಕಥಾಕ್ಷೇತ್ರಕ್ಕೆ ಒಂದು ನಿಶ್ಚಿತ ವರ್ಗದ ವೈಶಿಷ್ಟ್ಯ ಕೊಡುವುದರ ಜೊತೆಗೆ ಅದನ್ನು ಮುಂದೆ ಕೊಂಡೊಯ್ದು ಒಂದು ಪ್ರೌಢಾವಸ್ಥೆಗೂ ಮುಟ್ಟಿಸಿದರು.

ಜಯಶಂಕರ ಪ್ರಸಾದರು (೧೮೮೯–೧೯೩೭) ಹಿಂದೀ ಕಥಾ ಕ್ಷೇತ್ರಕ್ಕೆ ಪ್ರೇಮಚಂದರ ಜೊತೆಜೊತೆಗೇ ಬಂದರು ಎನ್ನಬಹುದು. ಅವರು ತಮ್ಮ ಕಾವ್ಯಾತ್ಮಕ ಬಹುಮುಖ ಪ್ರತಿಭೆಯ ಮೂಲಕ ಹಿಂದೀ ಕಥಾಕ್ಷೇತ್ರವನ್ನು ಒಂದು ವಿಶೇಷ ರೀತಿಯಲ್ಲಿ ಸಮೃದ್ಧ ಗೊಳಿಸಿದರು. ಪ್ರಸಾದರ ಜೀವನವೃಷ್ಟಿ ರೊಮ್ಯಾಂಟಿಕ್ ಹಾಗೂ ಕಲಾಪರಿಪೂರ್ಣ ವಾಗಿತ್ತು. ಅದರ ಪರಿಣಾಮವನ್ನು ಅವರು ಬರೆದಿರುವ ಕಥೆಗಳಲ್ಲೂ ಕಾಣಬಹುದು. ಅವರು ತಮ್ಮ ಕಥೆಗಳಿಗೆ ವಸ್ತುವನ್ನು ಆರಿಸಿಕೊಳ್ಳುವಾಗಲೂ ರೊಮ್ಯಾಂಟಿಕ್ ವಸ್ತು ವನ್ನೇ ಆರಿಸಿಕೊಂಡರು. ಪ್ರಣಯ ಸಂಬಂಧವಾದ ಸನ್ನಿವೇಶ, ವಾತಾವರಣ – ಇವು ಮುಖ್ಯವಾದುವು. ಪ್ರಕೃತಿಯ ಚಿತ್ರಗಳು ಇದರಿಂದ ತುಂಬಾ ರಮ್ಯವಾಗಿ ವರ್ಣಿತ ವಾಗಿರುವುದನ್ನು ಹಲವು ಕಡೆ ನಾವು ಕಾಣಬಹುದು. ಕಾವ್ಯಾತ್ಮಕ ರಂಗುರಂಗಿನ ವರ್ಣನೆ ಕಂಡುಬರುತ್ತದೆ. ಪಾತ್ರಗಳೂ ಅಷ್ಟೆ. ಮಧ್ಯಯುಗದ ಶೌರ್ಯ ಕಥನಗಳು ಅವರಿಗೆ ಪ್ರಿಯವೆನಿಸಿದ್ದು ಅವು ತುಂಬಾ ರೋಮಾಂಚಕ ರೀತಿಯಲ್ಲಿ ಬರುತ್ತವೆ. ಅವರ ಪಾತ್ರಗಳ ಮಾತುಕತೆ ಕೂಡ ತುಂಬಾ ನಾಟಕೀಯ. ಸುಸಂಸ್ಕೃತ ಹಾಗೂ ಕಾವ್ಯೋಚಿತ ಭಾವುಕತೆ ಯಿಂದ ಕೂಡಿದ ಭಾಷೆ. ಪ್ರಸಾದರ ದೃಷ್ಟಿಯಲ್ಲಿ ಕಥೆ ವಾಸ್ತವಿಕತೆಯನ್ನು ಚಿತ್ರಿಸುವುದ ಕ್ಕಿಂತ ಓದುಗರನ್ನು ಒಂದು ಕಲ್ಪನಾರಾಜ್ಯಕ್ಕೆ ಕೊಂಡೊಯ್ಯುವುದು ಮುಖ್ಯವಾಯಿತು. ಇದರಿಂದಾಗಿ ಅವರು ತಮ್ಮ ಕಥೆಗಳ ಮೂಲಕ ಒಂದು ಇಂದ್ರಜಾಲಸೃಷ್ಟಿಯ ಜಗ ತ್ತನ್ನೇ ನಿರ್ಮಿಸಿದರು. ರಮ್ಯ, ಅದ್ಭುತ ಘಟನೆಗಳಿಂದ ಕೂಡಿದ ಜಗತ್ತು. "ಛಾಯಾ," "ಇಂದ್ರಜಾಲ್", "ಆಕಾಶದೀಪ್" – ಅವರ ಕೆಲವು ಕಥೆಗಳ ಈ ಹೆಸರುಗಳೇ ಕಥಾ ಸೃಷ್ಟಿಯಲ್ಲಿ ಅವರ ದೃಷ್ಟಿಯೇನು ಎಂಬುದನ್ನು ಸೂಚಿಸುತ್ತವೆ. ಆದರೆ ಪ್ರಸಾದರ ರೊಮ್ಯಾಂಟಿಕ್ ಕಥೆಗಳೂ ಸ್ಥಳೀಯ ಜೀವನ ಹಾಗೂ ಪ್ರಾದೇಶಿಕತೆಯಿಂದ ಪ್ರಭಾವ ಯುತವಾಗಿವೆಯೆನ್ನುವುದಕ್ಕೆ ಸಾಕ್ಷಿಯಾಗಿ ಅವರ "ಗುಂಡಾ" ಕಥೆ ಮೂಡಿ ಬಂದಿದೆ. ಇದು ಅವರ ಪ್ರಾತಿನಿಧಿಕ ಕಥೆ, ಈ ದೃಷ್ಟಿಯಿಂದ.

ಇಲ್ಲಿ ಪ್ರಾಸಂಗಿಕವಾಗಿ ಇನ್ನೊಂದು ಮಾತನ್ನು ಹೇಳಬಹುದೆನಿಸುತ್ತೆ. ಪ್ರೇಮಚಂದ್ ಮತ್ತು ಪ್ರಸಾದ್ ಇಬ್ಬರೂ ಕಾಶಿಯಲ್ಲಿ ವಾಸವಾಗಿದ್ದರು. ಒಂದೇ ಊರಿನ ಸಮಕಾಲೀನ ಲೇಖಕರಿಬ್ಬರು ಇಷ್ಟು ಪರಸ್ಪರ ವಿರುದ್ಧ ಮನೋಧರ್ಮದವರಾಗಿರುವುದು ಕೂಡ ಒಂದು ಸೋಜಿಗವೇ. ಇಂತಹ ನಿದರ್ಶನಗಳು ದುರ್ಲಭ. ಈ ವಿಭಿನ್ನತೆಯ ಪರಿಣಾಮ ವಾಗಿ ಹಿಂದೀ ಕಥಾ ಕ್ಷೇತ್ರದಲ್ಲಿ ಎರಡು ಬೇರೆ ಬೇರೆ ಪಂಥಗಳೇ ಹುಟ್ಟಿಕೊಂಡುವು. ಒಂದು ಪ್ರೇಮಚಂದ-ಪಂಥ, ಇನ್ನೊಂದು ಪ್ರಸಾದ-ಪಂಥ. ಇದರ ಪರಿಣಾಮವಾಗಿ

ಆಗಿನ ಕಾಲದ ಕಥೆಗಾರರೂ ಎರಡು ಪ್ರತ್ಯೇಕ ಗುಂಪುಗಳಾಗಿ ಹೋಗಿದ್ದರು. ಇಂದಿಗೂ ಕೆಲವರ ಅಭಿಪ್ರಾಯದ ಪ್ರಕಾರ ಮೂಲತಃ ಈ ಎರಡು ಭಿನ್ನ ಪರಂಪರೆಗಳು ಬೆಳೆದುದರಿಂದಲೇ ಹಿಂದೀ ಕಥಾಕ್ಷೇತ್ರದ ವಿಕಾಸ ಪರಿಪೂರ್ಣವಾಗಲು ಸಾಧ್ಯವಾಯಿತು. ಆದರೆ ಇಷ್ಟು ಸರಳವಾಗಿ ಮೌಲ್ಯ ಕಟ್ಟುವುದು ಮತ್ತು ಮಾನ್ಯತೆ ನಿರ್ಧರಿಸುವುದು ಉಚಿತವಾಗಲಾರದು. ಅದಕ್ಕೆ ವೈಜ್ಞಾನಿಕ ಆಧಾರ ಇಲ್ಲ ಎನ್ನಬೇಕಾಗುತ್ತದೆ. ಇಷ್ಟು ಮಾತ್ರ ಹೇಳಬಹುದು. ಹಿಂದೀ ಕಥಾಕ್ಷೇತ್ರದ ದ್ವಿತೀಯ ಉತ್ಥಾನ ಕಾಲದಲ್ಲಿ ಪ್ರೇಮಚಂದರು ಕಥೆಯನ್ನು ಯಥಾರ್ಥೋನ್ಮುಖಗೊಳಿಸಲು ಪ್ರಯತ್ನಿಸಿದರೆ, ಪ್ರಸಾದರು ಅದಕ್ಕೆ ಸಂವೇದನಾತ್ಮಕ ಸಂಸ್ಕಾರದ ಮೆರುಗು ಕೊಟ್ಟರು. ಕಥೆ ನಿರೂಪಿಸುವ ಕಲೆ ಹಾಗೂ ಪ್ರತಿಭೆ ಇದ್ದಂತಹ ಇನ್ನೂ ಅನೇಕ ಲೇಖಕರು ಆ ಕಾಲದಲ್ಲಿದ್ದರು – ಸುದರ್ಶನ್, ವಿಶ್ವಂಭರನಾಥ ಶರ್ಮಾ, ಕೌಶಿಕ್, ಪಾಂಡೇಯ ಲೋಚನ ಶರ್ಮಾ, 'ಉಗ್ರ', ಚತುರಸೇನ್ ಶಾಸ್ತ್ರಿ, ಭಗವತಿ ಪ್ರಸಾದ್ ವಾಜಪೇಯಿ ಇವರೇ ಆದಿಯಾಗಿ ಇನ್ನೂ ಅನೇಕ ಉಲ್ಲೇಖನೀಯ ಕಥೆಗಾರರಿದ್ದರು.

ಪ್ರೇಮಚಂದರು ತುಳಿದ ದಾರಿಯಲ್ಲಿಯೇ ಕಾಣಿಸಿಕೊಂಡ ಇನ್ನೊಬ್ಬ ಪ್ರತಿಭಾವಂತ ಕಥೆಗಾರರೆಂದರೆ ಜೈನೇಂದ್ರಕುಮಾರ್ (೧೯೦೫). ಆದರೆ ಪ್ರೇಮಚಂದರ ದಾರಿಯನ್ನೇ ಅವರು ತುಳಿದರೂ ಅವರು ಅವರಿಂದ ತೀರಾ ಭಿನ್ನವಾಗಿದ್ದರು. ಅವರಿಬ್ಬರ ಹೋಲಿಕೆ ಸಾಧ್ಯವಿಲ್ಲವೆನ್ನುವಷ್ಟು ಭಿನ್ನ. ಕಥೆಯನ್ನು ನೇರವಾಗಿ ಮತ್ತು ಸರಳವಾಗಿ ಹೇಳುವ ಕಲೆಯನ್ನು ಪ್ರೇಮಚಂದರಿಂದ ಅವರು ಗ್ರಹಿಸಿದ್ದರೂ ಒಂದು ಹೆಜ್ಜೆ ಮುಂದುವರಿದು ಆ ಸರಳತೆಯನ್ನು ಅವರು ತುಂಬಾ ಕಲಾತ್ಮಕಗೊಳಿಸಿದರು; ಅದನ್ನು ಹೆಚ್ಚು ರಸವತ್ತಾಗಿ ಮಾಡಿದರು ಎಂದು ಹೇಳಬೇಕಾಗುತ್ತದೆ. ಅವರು ನಡೆಸಿದ ಈ ಪರಿಷ್ಕಾರ ಕಾರ್ಯದಿಂದಾಗಿ ಜೈನೇಂದ್ರ ಕುಮಾರರ ಕೈಯಲ್ಲಿ ಕಥೆಯ ನಿರೂಪಣೆ ಒಂದು ಕಲೆ, ಒಂದು ಪರಿಪೂರ್ಣ ಕಲೆ ಎನಿಸಿಕೊಂಡಿತು ಎಂದೂ ಹೇಳುವ ಮಟ್ಟಕ್ಕೆ ಹೋಗಬಹುದು. ಜೈನೇಂದ್ರರಷ್ಟು ಅನಾಯಾಸವಾಗಿ ಸಹಜರೂಪದಲ್ಲಿ ಒಂದು ಒಳ್ಳೆಯ ಕಥೆಯನ್ನು ಹೆಣೆಯಬಲ್ಲವರು ದುರ್ಲಭ. ಯಾವುದೇ ವಿಚಾರವಾಗಲಿ ಅಥವಾ ಯಾವ ಸಣ್ಣ ಪ್ರಸಂಗವಾಗಲಿ ದಕ್ಷ ಲೇಖಕನ ಕೈಯಲ್ಲಿ ಒಂದು ಕಥೆಯಾಗಿ ಮಾರ್ಪಡುವುದು ಸಾಧ್ಯವಿದೆಯೆಂಬುದು ಅವರ ಕಥೆಗಳಿಂದ ಗೊತ್ತಾಗುತ್ತದೆ. ಜೀವನದ ಜಟಿಲ ಸಮಸ್ಯೆಗಳ ಜಾಡಿನಿಂದ ಹೊರಬಂದು ಅನುದಿನದ ಸಣ್ಣ ಪುಟ್ಟ ಘಟನೆಗಳ ಮೇಲೆ ಬೆಳಕು ಚೆಲ್ಲುವುವರ ಕಡೆಗೆ ಅವರ ಗಮನ ಹೋಯಿತು. ಇದರಿಂದ ಹಿಂದೀ ಕಥೆಗಳ ಕ್ಷೇತ್ರದಲ್ಲಿ ಅವರು ಒಬ್ಬ "ಮನೋವೈಜ್ಞಾನಿಕ" ಹಾಗೂ "ಮನೋವಿಶ್ಲೇಷಣಾತ್ಮಕ" ಕಥೆಗಾರರೆಂದು ಹೆಸರುವಾಸಿಯಾದರು. ಈ ಕಲೆಯನ್ನು ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿಯೇ ಅವರು ರೂಢಿಸಿಕೊಂಡಿದ್ದಾರೆ ಎನ್ನಬಹುದು. ಜೈನೇಂದ್ರರು ತಮ್ಮ ಕಥೆಗಳಲ್ಲಿ ಹೊರಗಿನ ಘಟನೆಗಳಿಗೆ ಅಷ್ಟು ಪ್ರಾಮುಖ್ಯತೆ ಕೊಡದೆ ಯಾವುದೇ ಘಟನೆಯ ಫಲವಾಗಿ ಮನಸ್ಸಿ

ನಲ್ಲಿ ನಡೆಯುವ ಸಂಘರ್ಷಕ್ಕೆ ಪ್ರಾಮುಖ್ಯತೆ ಕೊಟ್ಟರು. ಒಳಮನಸ್ಸಿನ ತೋಟಿಯಲ್ಲಿ ಏನೇನು ನಡೆಯಿತು ಎಂಬುದು ಅವರಿಗೆ ಮುಖ್ಯವಾಯಿತು. ಘಟನೆಗಳನ್ನು ತುಂಬುವ ಪ್ರವೃತ್ತಿ ಪಥದಿಂದ ಕಥೆಯನ್ನು ಅವರು ಮನುಷ್ಯನ ಮನಸ್ಸಿನ ಕಡೆಗೆ ತಿರುಗಿಸಿದರು. ಮನಸ್ಸಿನ ಆಳದಲ್ಲಿ ಏಳುವ ಸಣ್ಣ ಸಣ್ಣ ವಿಚಾರಗಳ ಒಂದೊಂದು ಅಲೆಯೂ ಅವರಿಗೆ ಮುಖ್ಯವಾಯಿತು. ಇಷ್ಟರಿಂದಲೇ ಯಾವ ಕಥೆಗಾರನೂ ಮನೋವಿಶ್ಲೇಷಣವಾದಿ ಕಥೆಗಾರನಾಗಲು ಸಾಧ್ಯವಿಲ್ಲ. ಜೈನೇಂದ್ರರ ಬಹುತೇಕ ಕಥೆಗಳು ಒಬ್ಬ ಅಂತರ್ಮುಖಿ ಚಿಂತಕನ ಸತ್ಯಾನ್ವೇಷಣ ಪ್ರಯತ್ನದ ಪ್ರತಿಬಿಂಬಗಳಾಗಿವೆಯೆಂಬುದು ಇಲ್ಲಿ ಮುಖ್ಯ. ಗಾಂಧೀವಾದಿ ಸತ್ಯಾನ್ವೇಷಕನ ಸಾಹಿತ್ಯ ಸೃಷ್ಟಿಯಲ್ಲಿ ನಾವು ಕಾಣುವ ಪ್ರಾಮಾಣಿಕತೆ. ಸಹಜತೆ ಹಾಗೂ ಸರಳತೆ ಇಲ್ಲಿ ನಮಗೆ ಕಾಣಸಿಗುತ್ತವೆ. ಪ್ರೇಮಚಂದರು ಕಥೆಯನ್ನು ಹೇಗೆ ಸಮಾಜ-ಸಂಘರ್ಷದ ಚಿತ್ರಣಕ್ಕೆ ಸಾಧನವಾಗಿ ಬಳಸಿಕೊಂಡರೋ ಅದೇ ರೀತಿ ಯಲ್ಲಿ ಜೈನೇಂದ್ರರು ಕಥೆಯನ್ನು ನೈತಿಕ ಊಹಾಪೋಹಗಳ ಮೇಲೆ ಬೆಳಕು ಚೆಲ್ಲುವ ಉತ್ತಮ ಮಾಧ್ಯಮವನ್ನಾಗಿ ಮಾಡಿಕೊಂಡರು. ಜೈನೇಂದ್ರರು ಒಟ್ಟು ೧೦೧ ಕಥೆಗಳನ್ನು ಬರೆದಿರಬೇಕು: ಅವುಗಳ ಪೈಕಿ ಕಡೆಯ ಪಕ್ಷ ಹನ್ನೆರಡು ಕಥೆಗಳು ಅವರ ಲೇಖನಿಯ ಸೂಕ್ಷ್ಮ ಕಲೆಗಾರಿಕೆಗೆ ಉತ್ತಮ ಉದಾಹರಣೆಗಳಾಗಿ ಉಳಿಯುತ್ತವೆ.

ಜೈನೇಂದ್ರರ ತರುವಾಯ ಸ್ವಲ್ಪ ಸಮಯದ ನಂತರ ಹಿಂದೀ ಕಥಾಕ್ಷೇತ್ರದಲ್ಲಿ ಇಬ್ಬರು ಹೊಸ ಲೇಖಕರು ಬಂದರು. ಯಶಪಾಲ್ (೧೯೦೩) ಮತ್ತು ಅಜ್ಞೇಯ್ (೧೯೧೧). ಅವರ ಸಾಹಿತ್ಯಕಾಲವು ಮತ್ತೊಮ್ಮೆ ನಮಗೆ ಪ್ರೇಮಚಂದ್ – ಪ್ರಸಾದರ ಕಾಲವನ್ನು ನೆನಪಿಗೆ ತಂದುಕೊಡುತ್ತದೆ. ಇಪ್ಪತ್ತನೆಯ ಶತಮಾನದ ನಾಲ್ಕನೆಯ ದಶಕದಲ್ಲಿ ಇವರ ಸಾಹಿತ್ಯಸೇವೆ ಆರಂಭವಾಯಿತು. ಸಾಮಾಜಿಕ ಮೌಲ್ಯಗಳ ಸಂಘರ್ಷ ನಡೆಯುತ್ತಿದ್ದ ಪರ್ವ ಕಾಲ, ಅದು. ಗಾಂಧೀವಾದದಲ್ಲಿ ಆಸಕ್ತಿಯನ್ನು ಕಳೆದುಕೊಂಡು ಭಾರತೀಯ ಯುವ ಜನಾಂಗ ಮಾರ್ಕ್ಸ್ ಹಾಗೂ ಫ್ರಾಯ್ಡ್ ಇವರ ವಿಚಾರಗಳ ಕಡೆಗೆ ದೃಷ್ಟಿ ಹೊರಳಿಸಿದ್ದ ಕಾಲ ಅದು. ಸತ್ಯಾನ್ವೇಷಣೆಯ ಈ ಪ್ರಯತ್ನದಲ್ಲಿ ಹಳೆಯ ಹಾಗೂ ಹೊಸ ವಿಚಾರಗಳ ಸಂಘರ್ಷ ನಡೆಯುತ್ತಿತ್ತು. ಈ ವಿಚಾರ ಸಂಘರ್ಷದ ಪ್ರಭಾವವನ್ನು ಆಗಿನ ಕಾಲದ ಸಣ್ಣ ಕಥೆಗಳ ಮೇಲೂ ಕಾಣಬಹುದು. ಜೀವನದ ವಿಷಮತೆಗೆ ಯಶಪಾಲರು ಆರ್ಥಿಕ ವಾದ ಮೂಲ ಕಾರಣಗಳನ್ನು ಹುಡುಕಿದರು. ಅಜ್ಞೇಯರ ಪ್ರಕಾರ ತಾವು ಕಾಣುತ್ತಿದ್ದ ಸಾಮಾಜಿಕ ವಿಷಮತೆಗೆ ಮನುಷ್ಯನ ಮನೋವಿಕಾರಗಳೇ ಕಾರಣವಾಗಿದ್ದುವು; ಸಹಜ ವಾದ ವಾಸನಾಪೂರ್ಣ ಭಾವನೆಗಳನ್ನು ದಮನಮಾಡುವ ಪರಿಣಾಮವಾಗಿ ಅವು ಉಂಟಾಗುತ್ತಿದ್ದುವು. ಈ ಇಬ್ಬರು ಲೇಖಕರ ದಾರಿಗಳು ಬೇರೆ ಬೇರೆಯಾಗಿದ್ದುವು. ಆದರೆ ಇಬ್ಬರೂ ಹಳೆಯ ಕಾಲದ ಆದರ್ಶವಾದ ಹಾಗೂ ಮೌಲ್ಯಸೂತ್ರಗಳಿಂದ ಬಿಡುಗಡೆ ಹೊಂದಲು ಪ್ರಯತ್ನಿಸುತ್ತಿದ್ದರು. ಆಲೋಚನಾತ್ಮಕ ಯಥಾರ್ಥವಾದದ ಕಡೆ ಅವರಿಬ್ಬರ ದೃಷ್ಟಿಯೂ ಹೊರಳಿತ್ತು. ಯಶಪಾಲರ ಪ್ರಥಮ ಕಥಾಸಂಗ್ರಹ "ಪಿಂಜರೆಕೀ

ಉಡಾನ್" ೧೯೩೧ರಲ್ಲಿ ಪ್ರಕಟವಾಯಿತು: ಅಜ್ಞೇಯರ ಪ್ರಥಮ ಕಥಾಸಂಗ್ರಹ "ವಿಪಥಗಾ" ೧೯೩೭ರಲ್ಲಿ. ಹೆಚ್ಚುಕಡಿಮೆ ಒಂದೇ ಸಮಯದಲ್ಲಿ ಪ್ರಕಾಶಕ್ಕೆ ಬಂದ ಈ ಇಬ್ಬರು ಲೇಖಕರ ದೃಷ್ಟಿಯಲ್ಲಿನ ಅಂತರ ಈ ಕೃತಿಗಳಿಂದ ಸ್ಪಷ್ಟವಾಯಿತು. ಅಜ್ಞೇಯರಲ್ಲಿ ಪ್ರಾರಂಭದಲ್ಲಿ ಭಾವುಕತೆ ತೀವ್ರವಾಗಿತ್ತು. ಭಾಷೆ ಕೂಡ ಕಾವ್ಯಾತ್ಮಕ ಪ್ರಯೋಗಗಳಿಂದ ತುಂಬಿತ್ತು. ಕ್ರಮೇಣ ಈ ದೋಷದಿಂದ ಅವರು ಮುಕ್ತರಾದ ನಂತರ ಅವರ ಲೇಖನಿ ಯಿಂದ ಬಂದ ಕಥೆಯೆಂದರೆ "ರೋಜ್." ಇಂದು ಮುಂದೆ "ಗ್ಯಾಂಗ್ರೀನ್" ಎಂಬ ಹೆಸರಿ ನಿಂದ ಮತ್ತೆ ಪ್ರಕಟವಾಯಿತು. ಮೊದಲ ವಾಕ್ಯ ಹೀಗಿದೆ: "ಮಧ್ಯಾಹ್ನ ನಾನು ಬಿಸೋ ಅನ್ನುತ್ತಿದ್ದ ಆ ಅಂಗಳಕ್ಕೆ ಕಾಲಿಟ್ಟಾಗ ಅಲ್ಲಿ ಯಾವುದೋ ಶಾಪದ ಛಾಯೆ ಆವರಿಸಿರು ವಂತೆ ನನಗೆ ಭಾಸವಾಯಿತು. ಆ ವಾತಾವರಣದಲ್ಲಿ ಹೇಳಲಾಗದ, ಮುಟ್ಟಲಾಗದ – ಆದರೆ ಭಾರವಾಗುತ್ತಿರುವ ಪ್ರಕಂಪನ ಹಾಗೂ ಗಂಭೀರತೆ ತಾನೇ ತಾನಾಗಿ ಹರಡಿ ಕೊಂಡಿರುವಂತೆ ಕಾಣುತ್ತಿತ್ತು..." ಹಿಂದೀ ಕಥೆಗಳಲ್ಲಿ ವಾತಾವರಣವನ್ನು ಚಿತ್ರಿಸುವ ಈ ರೀತಿಯ ಭಾಷೆ ಹೊಸದಾಗಿತ್ತು. ಭಾಷೆಯಷ್ಟೇ ಅಲ್ಲ. ಅದರ ಮೂಲಕ ಚಿತ್ರಿತ ವಾಗಿದ್ದ ವಾತಾವರಣವೂ ಹೊಸದು. ಈ ಪ್ರಕಾರ ಅಜ್ಞೇಯರ ಕಥೆಗಳ ಮೂಲಕ ಹಿಂದೀ ಕಥೆಗಳಲ್ಲಿ ಒಂದು ಹೊಸ ಸಂವೇದನಾತ್ಮಕ ಬರವಣಿಗೆ ಅನುಭವಕ್ಕೆ ಬಂತು.

ಆ ಕಡೆ ಯಶಪಾಲರ "ದುಃಖ ಕಾ ಅಧಿಕಾರ್" (ಜ್ಞಾನ-ದಾನ)ದಂತಹ ಕಥೆಯನ್ನು ತೆಗೆದುಕೊಂಡರೆ ಅದರಲ್ಲಿನ ಹೃದಯ ಕಲಕುವ ವ್ಯಂಗ್ಯ ಹಿಂದೀ ಕಥೆಗಳ ಕ್ಷೇತ್ರದಲ್ಲಿ ಹೊಸದಾಗಿ ಉದಯಿಸಿದ ಸಾಮಾಜಿಕ ಪ್ರಜ್ಞೆಯ ಸೂಚಕವಾಗಿತ್ತು. ಒಂದು ಕಡೆ ತರಕಾರಿ ಮಾರುವ ಒಬ್ಬ ಬಡ ಹೆಂಗಸು. ವಯಸ್ಸಿಗೆ ಬಂದ ಅವಳ ಮಗ ಸತ್ತಿದ್ದಾನೆ. ಆದರೂ ಆ ದುಃಖವನ್ನು ಕಡಿಮೆ ಮಾಡಿಕೊಳ್ಳಲು ಅಳುವ ಅಧಿಕಾರ ಕೂಡ ಅವಳಿಗಿಲ್ಲ. ಆದರೆ ಇನ್ನೊಂದು ಕಡೆ ಒಬ್ಬ ಶ್ರೀಮಂತ ಮಹಿಳೆ ಸತ್ತಿದ್ದಾಳೆಂಬ ಕಾರಣದಿಂದ ಊರಲ್ಲಿ ಎಲ್ಲಿ ನೋಡಿದರೂ ಸಂತಾಪ ಸೂಚನೆಯ ಸಲುವಾಗಿ ಸಂಭ್ರಮ; ಎಲ್ಲೆಲ್ಲಿಯೂ ಅದೇ ಮಾತು. ಸುಖಪಡುವ ಅಧಿಕಾರವಷ್ಟೇ ಅಲ್ಲ ದುಃಖಪಡುವ ಅಧಿಕಾರ ಕೂಡ ಮುಖ್ಯ ವಾಗುತ್ತದೆ. ಗರೀಬರಾಗಿರುವವರಿಗೆ ದುಃಖಪಡುವ ಅಧಿಕಾರ ಕೂಡ ಇಲ್ಲ – ಎಂಬ ಸಾಮಾಜಿಕ ಸತ್ಯಸ್ಥಿತಿಯನ್ನು ಬಹಳ ಸೂಕ್ಷ್ಮವಾಗಿ ಯಶಪಾಲರು ತಮ್ಮ ಕಥೆಯಲ್ಲಿ ಚಿತ್ರಿಸಿದ್ದಾರೆ. ಇಂತಹ ಸಣ್ಣ ಪುಟ್ಟ ಪ್ರಸಂಗಗಳನ್ನೇ ಆರಿಸಿಕೊಂಡು ಹಲವಾರು ವ್ಯಂಗ್ಯಾತ್ಮಕ ಕಥೆಗಳನು ಅವರು ಬರೆದಿದ್ದಾರೆ. ಮೊದಲು ಒಂದು ವಿಚಾರ ಮಂಡಿಸಿ. ಆಮೇಲೆ ಅದರ ಒಂದು ಸ್ಪಷ್ಟ ಗುರಿಯ ಕಡೆಗೆ ಓದುಗರ ಗಮನ ಹೊರಳಿಸಿ ಮುಂದೆ ಅದಕ್ಕೆ ಹೊಂದಿಕೊಂಡಂತಹ ಕಥೆಯ ಕಡೆಗೆ ಓದುಗರ ಗಮನವನ್ನು ಸೆಳೆದು ಅಲ್ಲಿ ಅವರು ವಿಹರಿಸುವಂತೆ ಮಾಡಿ ನಂತರ ಕೊನೆಯಲ್ಲಿ ಒಂದು ಕಟು ಸತ್ಯದ ಪೆಟ್ಟು ಕೊಡುವ ಪ್ರಯತ್ನ ಅವರ ಕಥೆಗಳಲ್ಲಿ ಕಾಣುತ್ತದೆ. ಪ್ರೇಮಚಂದರಂತೆಯೇ, ಯಶಪಾಲರು ಒಂದು ನಿರ್ದಿಷ್ಟ ಉದ್ದೇಶ ಇಟ್ಟುಕೊಂಡು ಕಥೆಗಳನ್ನು ಬರೆದರು. ಅವರ ಪ್ರತಿಯೊಂದು ಕಥೆಯ

ಕೊನೆಯಲ್ಲೂ ವರ್ಗ-ವೈಷಮ್ಯದ ಫಲವಾದ ಒಂದಲ್ಲ ಒಂದು ಕಟು ಸತ್ಯ ಎದ್ದು ಕಾಣು ತ್ತದೆ. ವರ್ಗಭೇದಗಳಿಂದ ಕೂಡಿದ ಸಮಾಜದ ದೋಷಗಳನ್ನು ಎತ್ತಿ ತೋರಿಸಲು ಕಥೆ ಅವರಿಗೆ ಒಂದು ಸಾಧನವಾಯಿತು; ಇದಕ್ಕೊಂದು ಒಳ್ಳೆಯ ಪ್ರಾತಿನಿಧಿಕ ಉದಾಹರಣೆ ಯೆಂದರೆ ಅವರು ಬರೆದಿರುವ "ಫೂಲೋಂಕಾ ಕುರ್ತಾ". ಅಜ್ಞೇಯರ ಕೈಯಲ್ಲಿ ಕಥೆ ಮಾನಸಿಕ ಅನುಭವಗಳು ಹಾಗೂ ವೇದನೆಗಳ ಒಂದು ಸಮಗ್ರ ಚಿತ್ರಶಾಲೆಯಾಯಿ ತಾದರೆ ಯಶಪಾಲರ ಕೈಯಲ್ಲಿ ಕಥೆ ವಾಸ್ತವಿಕತೆಯ ಪರಂಪರೆಯನ್ನು ರೂಢಿಸಲು ವಿಶೇಷವಾಗಿ ಸಮರ್ಥವಾಯಿತು.

ಇದೇ ದಾರಿಯಲ್ಲಿ ಮುನ್ನಡೆದು ಭಗವತಿಚರಣ ವರ್ಮಾ ಮತ್ತು ಉಪೇಂದ್ರನಾಥ್ ಅಶ್ಕ್– ಇವರೂ ಕಥೆಗಳನ್ನು ಬರೆದರು. ಪ್ರೇಮಚಂದರು ಆರಂಭಿಸಿದಂತಹ ಯಥಾರ್ಥ ವಾದಿ ಪರಂಪರೆಯ ವಾಹಕರೆಂದು ಅಶ್ಕ್‌ರನ್ನು ಪರಿಗಣಿಸಲಾಗಿದೆ. ಭಗವತಿಚರಣ ವರ್ಮಾ ಅವರ ಕಥೆಗಳು ಒಟ್ಟಿನಲ್ಲಿ ಹೇಳುವುದಾದರೆ 'ಫಸಾನ್-ಎ-ಆಜಾದ್' ಕಥೆ ಬರೆದ ಸರಶಾರ್ ಅವರ ನೆನಪುಮಾಡಿಕೊಡುತ್ತವೆ; 'ದೋ ಬಾಂಕೆ'ಯನ್ನು ಓದಿದವರಿಗೆ ಇದು ಸ್ಪಷ್ಟವಾಗುತ್ತದೆ. ಈ ಸಂದರ್ಭದಲ್ಲಿ ಸಣ್ಣ ಸಣ್ಣ ತುಂಬಾ ಸ್ವಾರಸ್ಯಪೂರ್ಣ ಸಣ್ಣ ಕಥೆಗಳನ್ನು ಬರೆದ ರಾಧಾಕೃಷ್ಣ ಅವರ ನೆನಪೂ ಬರುತ್ತದೆ. ನಿರಾಲಾ ಅವರು ತಮ್ಮ ಅನುಪಮ ಪ್ರತಿಭೆಯ ಮೂಲಕ ಹಿಂದೀ ಕಥೆಗಳ ಕ್ಷೇತ್ರದಲ್ಲಿ ಕೂಡ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಸ್ಥಾಪಿಸಿಕೊಂಡರು.

ಕೆಲವು ವರ್ಷಗಳು ಹೀಗೆ ಕಳೆದಮೇಲೆ ಹಿಂದೀ ಕಥೆಗಳ ಇತಿಹಾಸದಲ್ಲಿ, ಸ್ವಾತಂತ್ರ್ಯ ಪ್ರಾಪ್ತಿಯ ನಂತರ ಶತಮಾನದ ಆರನೆಯ ದಶಕದಲ್ಲೂ ಒಂದು ಹೊಸ ಪರ್ವ ಆರಂಭ ವಾಯಿತು. ನವ್ಯ ಕವಿತೆಯ ಪ್ರಭಾವದಿಂದಾಗಿ ಕಥೆಗಾರರಿಗೂ ಹೊಸ ಹುರುಪು ಬಂದಂತಾಗಿ ನವ್ಯಕಥೆ ಆರಂಭವಾಯಿತು. ದೇಶಕ್ಕೆ ಸ್ವಾತಂತ್ರ್ಯಪ್ರಾಪ್ತಿಯಾದ ಮೇಲೆ ಸಾಹಿತಿಗಳಿಗೂ ಒಂದು ಹೊಸ ಸೃಷ್ಟಿಯ ಹುಮ್ಮಸ್ಸು ಬರುವುದು ಸ್ವಾಭಾವಿಕವಾಗಿತ್ತು. ಹೀಗೆ ಮೂಡಿಬಂದ ರೂಪಾಂತರ ನವ್ಯಕಥೆಯೆಂಬ ಹೆಸರಿನಲ್ಲಿ ಸಂಪೂರ್ಣವಾಗಿ ಒಂದು ಹೊಸ ಪಂಥ ಆರಂಭಿಸಲು ಸಾಧ್ಯವಾಗದೆ ಹೋಗಿರಬಹುದು. ಆದರೆ ಇಷ್ಟು ಮಾತ್ರ ನಿಜ. ಕಥೆಗಾರರ ಒಂದು ಹೊಸ ಪೀಳಿಗೆ ಹುಟ್ಟಿಕೊಂಡು ಈ ದಿಶೆಯಲ್ಲಿ ಕಾರ್ಯೋನ್ಮುಖ ವಾಯಿತು. ರಾಂಗೇಯ ರಾಘವ, ಫಣೀಶ್ವರನಾಥ ರೇಣು, ದ್ವಿಜೇಂದ್ರನಾಥ್ ಮಿಶ್ರ "ನಿರ್ಗುಣ್", ಭೀಷಮ್ ಸಾಹನಿ, ಕೃಷ್ಣಾ ಸೋಬತಿ, ಕೃಪಣ್ ಬಲದೇವ್ ವೈದ್, ರಾಮಕುಮಾರ್, ಕಮಲ ಜೋಷಿ, ಲಕ್ಷ್ಮೀನಾರಾಯಣ ಲಾಲ್, ಹರಿಶಂಕರ ಪರ್ಸಾಯಿ, ಮೋಹನ್ ರಾಕೇಶ್, ಅಮರ್‌ಕಾಂತ್. ಉಷಾ ಪ್ರಿಯಂವದ, ಮನ್ನು ಭಂಡಾರಿ, ನಿರ್ಮಲ್ ವರ್ಮಾ, ಮಾರ್ಕಾಂಡೇಯ್. ರಾಜೇಂದ್ರ ಯಾದವ್. ಕಮಲೇಶ್ವರ್, ಶೇಖರ್ ಜೋಷಿ, ಶಿವಪ್ರಸಾದ್ ಸಿಂಗ್, ಧರ್ಮವೀರ ಭಾರತಿ, ರಘುವೀರ ಸಹಾಯ್, ಮನೋ

ಹರ್ ಶ್ಯಾಮ್ ಜೋಷಿ, ಶೈಲೇಶ್ ಮಟಿಯಾನಿ – ಇವರೇ ಮೊದಲಾದವರ ಹೆಸರುಗಳನ್ನು ಇಲ್ಲಿ ಪ್ರಸ್ತಾಪಿಸಬಹುದು. ಇಷ್ಟು ಜನ ಪ್ರತಿಭಾವಂತರು ಒಟ್ಟಿಗೆ ಒಂದೇ ಸಲ ಹಿಂದೀ ಕಥಾಕ್ಷೇತ್ರದ ಕಡೆಗೆ ದೃಷ್ಟಿ ಹೊರಳಿಸಿದುದು ಒಂದು ಮಹತ್ವಪೂರ್ಣ ಘಟನೆಯೇ ಆಯಿತು. ಭೈರವ ಪ್ರಸಾದರ ಗುಪ್ತ ಸಂಪಾದಕತ್ವದಲ್ಲಿ ಹೊರಡುವ 'ಕಹಾನಿ' ಮಾಸಪತ್ರಿಕೆ ಮತ್ತು ಜೊತೆಗೆ 'ನಯೀ ಕಹಾನಿಯಾಂ' – ಈ ಎರಡೂ ಪತ್ರಿಕೆಗಳು ಈ ಹೊಸ ಪ್ರತಿಭಾವಂತ ಲೇಖಕರಿಗೆ ಒಂದು ವ್ಯಾಪಕ ವೇದಿಕೆಯನ್ನು ಒದಗಿಸಿದುವು. ಸಮಾಜದ ದುರ್ಬಲ ವರ್ಗಗಳ ಸಂಸಾರದ ಬವಣೆಗಳ ದುರ್ಲಭ ಚಿತ್ರಣಗಳು ಇವರ ಕೃತಿಗಳ ಮೂಲಕ ಮೂಡಿಬಂದುವು; ಹಲವು ಅಪೂರ್ವ ವ್ಯಕ್ತಿ-ಚಿತ್ರಗಳು ಕಾಣಿಸಿಕೊಂಡುವು. ಇವುಗಳಿಂದ ಕಥಾವಸ್ತು ಸಮೃದ್ಧವಾಯಿತು. ಈ ಪೈಕಿ ಕೆಲವರು ಪಟ್ಟಣದ ಮಧ್ಯಮವರ್ಗದ ಜನರ ಜೀವನಕ್ಕನ್ವಯಿಸಿದ ಕಸಿವಿಸಿಗಳನ್ನು ಮಾರ್ಮಿಕವಾಗಿ ಚಿತ್ರಿಸುವುದರ ಮೂಲಕ ಕಥನಕಲೆಯನ್ನು ಇನ್ನಷ್ಟು ಪ್ರಖರಗೊಳಿಸುವ ಪ್ರಯತ್ನ ನಡೆಸಿದರು. ಈ ದಶಕದ ಕಥಾಸೃಷ್ಟಿ ಸಂಬಂಧವಾದ ಪ್ರಯತ್ನಗಳನ್ನು ಸಂಘಟಿಸಿ ಈ ಕ್ಷೇತ್ರದಲ್ಲಿ ಒಂದು ಆಂದೋಲನ ಸಾಧ್ಯವಾಗುವಂತೆ ಈ ಲೇಖಕರು ಮಾಡಿದುದೇ ಅಲ್ಲದೆ, ಹಿಂದೀ ಕಥಾಕ್ಷೇತ್ರದಲ್ಲಿ ಇವರ ಪ್ರಯತ್ನದ ಫಲವಾಗಿ ಕಂಡುಬಂದಂತಹ ವಸ್ತು ವೈವಿಧ್ಯತೆ ಹಾಗೂ ವಿಪುಲತೆ ಈ ಹೊಸ ವಿಚಾರಧಾರೆಯ ಬಹು ಮುಖ ಕಾಣಿಕೆಯಾದುವು. ಭೀಷಮ್ ಸಾಹನಿಯವರ ಕಥೆಗಳಲ್ಲಿ ಕಾಣುವ ಸರಳತೆ ಹಾಗೂ ಸಹಜತೆ, ರಾಮಕುಮಾರರ ಕಥೆಗಳಲ್ಲಿ ಕಂಡುಬರುವ ತೀವ್ರ ಮಾನವೀಯತೆ, ನಿರ್ಮಲ ವರ್ಮಾರವರ ಭಾಷೆಯಲ್ಲಿ ಕಾಣುವಂತಹ ಸಂವೇದನಶಕ್ತಿ, ಅಮರಕಾಂತರ ಮಾರ್ಮಿಕ ವ್ಯಂಗ್ಯ. ರಘುವೀರ ಸಹಾಯ್ ಅವರ ಕಥೆಗಳಲ್ಲಿನ ವಿಚಾರ ಪ್ರಜ್ಞೆ, ರಾಜೇಂದ್ರ ಯಾದವ್ ಅವರ ಕಥೆಗಳಲ್ಲಿನ ಶಿಲ್ಪ-ಪರಿಪೂರ್ಣತೆ, ರೇಣು ಅವರ ಕೃತಿಗಳಲ್ಲಿ ಕಾಣುವ ದುರ್ಬಲ ವರ್ಗಗಳ ಚಿತ್ರಣ, ಮಾರ್ಕಂಡೇಯರಲ್ಲಿ ಕಾಣುವ ಗ್ರಾಮೀಣ ಜೀವನದ ಸಹಜ ಪ್ರತಿಬಿಂಬ, ಹರಿಶಂಕರ ಪರಸಾಯಿಯವರ ಕಥೆಗಳಲ್ಲಿ ಎದ್ದು ಕಾಣುವ ಸಾಮಾಜಿಕ ನವಚೈತನ್ಯ – ಇವುಗಳ ಪರಿಣಾಮವಾಗಿ ಹಿಂದೀ ಕಥಾಕ್ಷೇತ್ರ ಬಣ್ಣಬಣ್ಣವಾಗಿ ಬೆಳಗುವ ರಂಗಮಂಚವಾಯಿತು. ಈ ಪೀಳಿಗೆಯ ಹೊಸ ಲೇಖಕರು ಕಥೆಯ ರಚನೆಯನ್ನು ಒಂದು ಕಲಾ-ಮಾಧ್ಯಮವನ್ನಾಗಿ ಪರಿಗಣಿಸಿದರು. ಮತ್ತು ಹಳೆಯ ಹಾದಿಯನ್ನೇ ತುಳಿಯ ಹೋಗದೆ ಕಥಾರಚನೆಯನ್ನು ಜೀವನದ ಸಾಕ್ಷಾತ್ಕಾರಕ್ಕಾಗಿ ಬಳಸುವ ಹೊಸ ಮಾರ್ಗ ಹಿಡಿದರು. ಪುಸ್ತಕಗಳನ್ನು ಓದಿ ಓದಿ ಪಡೆಯುವ ಜೀವನ-ದೃಷ್ಟಿಯನ್ನು ಬದಿಗಿಟ್ಟು ಸಂಪೂರ್ಣ ಹೊಸದಲ್ಲವಾದರೂ "ಪ್ರಾಮಾಣಿಕ ಅನುಭೂತಿ" ಹಾಗೂ "ಅನುಭವಕ್ಕೆ ಬಂದ ಯಥಾರ್ಥ ಸಿದ್ಧಿ"ಯ ಆಧಾರದ ಮೇಲೆ ಒಂದು ಹೊಸ ಐತಿಹಾಸಿಕ ಹಿನ್ನೆಲೆಯಲ್ಲಿ ತುಂಬಾ ಕ್ರಾಂತಿಕಾರಿ ಹಾಗೂ ರಚನಾತ್ಮಕ ಪರಿವರ್ತನೆಗೆ ಅವರು ದಾರಿ ಮಾಡಿದರು. ಈ ಲೇಖಕರು ಬರೆದಿರುವ ಕಥೆಗಳನ್ನು ಪರಿಶೀಲಿಸಿ ನೋಡಿದಾಗ ಕೊನೆಯ ಪಕ್ಷ

ಇಪ್ಪತ್ತು-ಇಪ್ಪತ್ತೈದು ಕಥೆಗಳಾದರೂ, ಯಾವ ಕಟು ಮಾನದಂಡದಿಂದ ಅಳೆದರೂ ಪ್ರಥಮ ದರ್ಜೆಯ ಕಥೆಗಳಾಗಿರುವುದು ಕಂಡುಬರುತ್ತದೆ.

ಏಳನೆಯ ದಶಕದೊಂದಿಗೆ ಹಿಂದೀ ಕಥೆಗಾರರಲ್ಲಿ ಇನ್ನೂ ಒಂದು ಹೊಸ ಪೀಳಿಗೆ ಬಂತು. ಇವರ ದೃಷ್ಟಿಯಲ್ಲಿ ಆರನೆಯ ದಶಕದ ಬಹುತೇಕ ಕಥೆಗಾರರಲ್ಲಿ ಕಂಡುಬಂದಂತಹ ಯಥಾರ್ಥವಾದದ ದೃಷ್ಟಿ ನಿಜಕ್ಕೂ ಅನುಭವಸಿದ್ಧವಾದ ಯಥಾರ್ಥವಾದವಾಗಿರದೆ ಅದರ ಮುಖವಾಡವಷ್ಟೇ ಆಗಿತ್ತು; ಅದು ಬಹಳ ಕೃತಕವಾಗಿ ಕಂಡುಬಂದಿತ್ತು; ಸಂಯೋಗವಶಾತ್ ಆರನೆಯ ದಶಕದ ಬಹುತೇಕ ಕಥೆಗಾರರು ತಮ್ಮ ಸುತ್ತ ನಡೆಯುತ್ತಿದ್ದ ಬದಲಾವಣೆಗಳಿಗೆ ಸಂಪೂರ್ಣ ಹೊಂದಿಕೊಳ್ಳಲು ಸಾಧ್ಯವಾಗದ ತಮ್ಮ ಪಾಡಿಗೆ ತಾವು ಇದ್ದುಬಿಟ್ಟರು; ಇಲ್ಲವೇ ಹೊಸ ಪರಿಸ್ಥಿತಿಯಲ್ಲಿ ಒಂದು ರಚನಾತ್ಮಕ ಮಾರ್ಗ ಹುಡುಕುವ ಪ್ರಯತ್ನ ನಡೆಸ ಹೋಗಿ, ಕೊನೆಗೆ ತಮ್ಮ ಪೂರ್ವ ಪರಿಚಿತ ಜಗತ್ತಿನ ಮರೆಯಲ್ಲೇ ಮುಖ ಮುದುಡಿಕೊಂಡರು. ಏಳನೆಯ ದಶಕದ ಕಥೆಗಾರರು ಪರಂಪರಾಗತ ಯಥಾರ್ಥ ವಾದವನ್ನು ಕೈಬಿಟ್ಟು ಜನಜೀವನದಲ್ಲಿದ್ದ ಆದರೆ ಅವುಗಳನ್ನು ನೋಡುವ ಸಾಹಸಕ್ಕೆ ಯಾರೂ ಕೈ ಹಾಕದಿರುತ್ತಿದ್ದ ವಿಚಿತ್ರ ಸನ್ನಿವೇಶಗಳು, ಅಮಾನುಷ ಅನುಭವ ಗಳು, ಕಷ್ಟಪರಂಪರೆ – ಇವುಗಳ ಕಡೆ ಇಣಕಿ ನೋಡುವ ಪ್ರಯತ್ನ ನಡೆಸಿದರು. ಈ ಪೀಳಿಗೆಗೆ ಸೇರಿದ ಕಥೆಗಾರರಿಗೆ ಮುಕ್ತಿಬೋಧರ "ಕ್ಲಾಡ್ ಇಥರತಿ" ಮತ್ತು "ವಿಪಾತ್ರ" ದಂತಹ ಕಥೆಗಳು ಹೆಚ್ಚು ಪ್ರಿಯವೆನಿಸಿದುವು. ಸಮಕಾಲೀನ ಸಮಾಜದ ಭಯಂಕರತೆಯ 'ಫ್ಯಾಂಟಸಿ'ಯನ್ನು ಚಿತ್ರಿಸಲು ಅವರು ಪ್ರಯತ್ನಿಸಿದರು. ಈ ದೃಷ್ಟಿಯಿಂದ ಏಳನೆಯ ದಶಕದ ಕಥೆಗಾರರಲ್ಲಿ ಶ್ರೀಕಾಂತ ವರ್ಮಾ, ಮಹೇಂದ್ರ ಭಲ್ಲಾ, ಜ್ಞಾನರಂಜನ್, ಕಾಶೀನಾಥ್ ಸಿಂಗ್, ದೂಧನಾಥ್ ಸಿಂಗ್, ರವೀಂದ್ರ ಕಾಲಿಯಾ, ಕಾಮತಾನಾಥ್, ಸುಧಾ ಅರೋಡ್, ರಮೇಶ್ ಬಕ್ಷೀ, ಪ್ರಬೋಧಕುಮಾರ್, ವಿಜಯ ಚೌಹಾನ್ ಇವರೇ ಮೊದಲಾದವರ ಹೆಸರುಗಳು ಉಲ್ಲೇಖನೀಯವಾಗಿವೆ. ಈ ಪೈಕಿ ಬಹುತೇಕ ಲೇಖಕರ ಒಂದೊಂದೇ ಕಥಾಸಂಗ್ರಹ ಪ್ರಕಟವಾಗಿದೆ. ಅಲ್ಲದೆ ಈ ಪೈಕಿ ಹಲವಾರು ತರುಣ ಲೇಖಕರು ಈಗಿಂದೀಗಲೇ ಆತ್ಮಪ್ರಶಂಸೆಯಲ್ಲೂ ತೊಡಗಿದ್ದಾರೆ. ಆದರೆ ಇಷ್ಟು ಮಾತ್ರ ನಿಜ. ಈ ಪರಿವರ್ತನೆಯಿಂದಾಗಿ ಹಿಂದೀ ಕಥಾಕ್ಷೇತ್ರದಲ್ಲಿ ಹೊಸ ಸೃಷ್ಟಿಯ ಬಾಗಿಲು ತೆರೆದಂತಾಗಿದೆ.

ಹೀಗೆ ಕಳೆದ ಎಪ್ಪತ್ತು ವರ್ಷಗಳಲ್ಲಿ ಹಿಂದೀ ಕಥೆ ವಿಕಾಸದ ಹಾದಿಯಲ್ಲಿ ಮುನ್ನಡೆದು ಹಲವು ಪ್ರಮುಖ ಘಟ್ಟಗಳನ್ನು ಅತ್ಯಂತ ತ್ವರಿತ ಗತಿಯಲ್ಲಿ ದಾಟಿದೆ; ಬೇರೆ ಭಾಷೆಗಳ ಕಥಾಕ್ಷೇತ್ರಗಳಲ್ಲೂ ಇಷ್ಟೇ ಪ್ರಗತಿ ಸಾಧ್ಯವಾಗಲು ಕಡೆಯ ಪಕ್ಷ ಇದಕ್ಕಿಂತ ಒಂದೂವರೆ– ಎರಡರಷ್ಟು ಸಮಯ ಬೇಕಾಯಿತು. ಹಿಂದಿಯಲ್ಲಿ ಕಥೆಯ ಉದಯ ಕಾಲ ಸ್ವಲ್ಪ ತಡ ವಾಗಿಯೇ ಆರಂಭವಾಯಿತು ನಿಜ. ಕಥೆಗಿಂತ ಹೆಚ್ಚಾಗಿ ಕವಿತೆ ಹಾಗೂ ಕಾದಂಬರಿಯ ಕಡೆಗೆ ಹೆಚ್ಚಿನ ಒಲವು ಆಗಿನ ಕಾಲದಲ್ಲಿ ಇದ್ದುದು ಇದಕ್ಕೆ ಕಾರಣ. ಆದರೂ

ಈ ಅಲ್ಪಾವಧಿಯಲ್ಲಿ ಹಿಂದೀ ಕಥೆ ತನ್ನದೇ ಆದ ಒಂದು ವ್ಯಕ್ತಿತ್ವವನ್ನು ಪಡೆಯಲು ಸಮರ್ಥವಾಗಿದೆ. ಭಾರತೀಯ ಸಾಹಿತ್ಯಕ್ಷೇತ್ರದಲ್ಲಿಯೇ ಅಲ್ಲ, ಜಗತ್ತಿನ ಕಥಾಸಾಹಿತ್ಯ ಕ್ಷೇತ್ರದಲ್ಲಿಯೇ ತನ್ನದೇ ಆದ ಒಂದು ವಿಶಿಷ್ಟ ಅಸ್ತಿತ್ವವನ್ನು ಸಾರಲೂ ಸಮರ್ಥವಾಗಿದೆ. ಈ ಸಂಕಲನ ಹಿಂದೀ ಕಥೆಗಳ ಈ ಅಸ್ತಿತ್ವದ ಮೇಲೆ ಬೆಳಕು ಚೆಲ್ಲುವುದೆಂದು ನಿರೀಕ್ಷಿಸ ಲಾಗಿದೆ.

ಕೊನೆಯಲ್ಲಿ ಈ ಸಂಕಲನದ ವಿಷಯದಲ್ಲಿ ಎರಡು ಮಾತು ಅವಶ್ಯಕವೆನಿಸಿದೆ. ಇದು ಹಿಂದೀ ಕಥೆಗಳ ಒಂದು ಒಟ್ಟು ಪ್ರಾತಿನಿಧಿಕ ಸಂಕಲನ ಅಲ್ಲ. ಕೆಲವು ಪ್ರಸಿದ್ಧ ಕಥೆಗಾರರ ಕೃತಿಗಳು ಇಲ್ಲಿ ಇಲ್ಲವಾಗಿವೆ. ಕೆಲವು ವಿಶಿಷ್ಟ ಪ್ರಯೋಗಗಳ ವೈವಿಧ್ಯತೆಯನ್ನು ಇಲ್ಲಿ ತರಲೂ ಸಾಧ್ಯವಾಗದೆ ಹೋಗಿದೆ. ಕೆಲವು ಕಥಾಪ್ರವೃತ್ತಿಗಳ ಉದಾಹರಣೆಗಳನ್ನೂ ಇಲ್ಲಿ ತರಲು ಸಾಧ್ಯವಾಗಿಲ್ಲ. ಸಂಕಲನದ ಗಾತ್ರ ಸೀಮಿತವಾಗಿದ್ದುದು ಇದಕ್ಕೆ ಒಂದು ಮುಖ್ಯ ಕಾರಣ. ಇನ್ನೊಂದು ಕಾರಣ ಸಂಪಾದಕನ ದೃಷ್ಟಿಕೋನ. ಈ ದೃಷ್ಟಿಗೆ ಸಾಮಾ ಜಿಕ ಯಥಾರ್ಥವಾದ ದೃಷ್ಟಿ ಎಂದು ಹೇಳಬಹುದೇನೋ! ಸಂಕಲನದಲ್ಲಿ ಆಯ್ಕೆ ಯಾಗಿರುವ ಕಥೆಗಳ ಅವಲೋಕನದಿಂದ ಈ ವಿಚಾರ ನಿರ್ಧಾರವಾಗಬೇಕು. ಹಿಂದೀ ಕಥಾ ಪ್ರಪಂಚದ ಮುಖ್ಯ ಪರಂಪರೆಯನ್ನು ಪರಿಚಯ ಮಾಡಿಕೊಡುವ ದೃಷ್ಟಿಯನ್ನು ಮುಖ್ಯವಾಗಿಟ್ಟುಕೊಂಡು ಸಂಕಲನಕ್ಕೆ ಕಥೆಗಳನ್ನು ಆರಿಸಿದ್ದೇನೆ. ಪ್ರತಿಯೊಂದು ಸಂಕಲನ ದಂತೆ ಈ ಸಂಕಲನವೂ ವೈಯಕ್ತಿಕ ಅಭಿರುಚಿಯನ್ನು ಅನುಸರಿಸಿ ಸಿದ್ಧವಾಗಿದೆ ಎಂದು ಹೇಳಿಕೊಳ್ಳಲು ನನಗೆ ಯಾವ ಸಂಕೋಚವೂ ಇಲ್ಲ. ಅಜ್ಞೇಯರ 'ಗೆಂಗ್ರೀನ್' ಕಥೆ ಯನ್ನು ಈ ಸಂಕಲನದಲ್ಲಿ ಸೇರಿಸಲು ಲೇಖಕರ ಅನುಮತಿ ದೊರಕದೆ ಹೋದುದಕ್ಕಾಗಿ ವಿಷಾದಿಸುತ್ತೇನೆ. ಈ ಸಂಕಲನದ ಹಿಂದಿರುವ ಯೋಜನೆಯ ಯಶಸ್ಸು ಇದಕ್ಕೆ ನೆರ ವಾಗಿರುವ ಕಥೆಗಾರರಿಗೆ ಸಲ್ಲುತ್ತದೆ; ಅವರ ನೆರವಿನಿಂದಾಗಿ. ಈ ಸಂಕಲನ ಹೊರ ಬರಲು ಸಾಧ್ಯವಾಗಿದೆ.

ಹೊಸ ದೆಹಲಿ
೭–೧೦–೧೯೭೦

— ನಾಮವಾರ್ ಸಿಂಗ್

# ಪರಿವಿಡಿ


| | | | ಪುಟ |
|---|---|---|---|
| | ಪೀಠಿಕೆ | | V |
| ೧. | ಅವಳ ಕೋರಿಕೆ | ಚಂದ್ರಧರ ಶರ್ಮಾ ಗುಲೇರಿ | ೧ |
| ೨. | ಪ್ರೇತ ವಸ್ತ್ರ | ಪ್ರೇಮಚಂದ್ | ೧೭ |
| ೩. | ಗುಂಡಾ | ಜಯಶಂಕರ ಪ್ರಸಾದ್ | ೨೮ |
| ೪. | ನೂಪುರ | ಜೈನೇಂದ್ರ ಕುಮಾರ್ | ೪೩ |
| ೫. | ಪರಕೀಯ ಸುಖ | ಯಶಪಾಲ್ | ೬೧ |
| ೬. | ಗದಲ್ | ರಾಂಗೇಯ ರಾಘವ್ | ೮೧ |
| ೭. | ಮೂರನೆಯ ಶಪಥ | ಫಣೀಶ್ವರನಾಥ್ 'ರೇಣು' | ೧೦೨ |
| ೮. | ಲಂಡನ್ನಿನ ಒಂದು ರಾತ್ರಿ | ನಿರ್ಮಲ್ ವರ್ಮಾ | ೧೪೨ |
| ೯. | ಸುವಾಸನೆ | ರಾಜೇಂದ್ರ ಯಾದವ್ | ೧೭೮ |
| ೧೦. | ಅವಳ ರೊಟ್ಟಿ | ಮೋಹನ್ ರಾಕೇಶ್ | ೨೦೩ |
| ೧೧. | ಬೇಸಿಗೆಯ ದಿನಗಳು | ಕಮಲೇಶ್ವರ್ | ೨೦೮ |
| ೧೨. | ಶವಯಾತ್ರೆ | ಶ್ರೀಕಾಂತ ವರ್ಮಾ | ೨೨೯ |
| ೧೩. | ಮಧ್ಯಾಹ್ನದ ಭೋಜನ | ಅಮರಕಾಂತ್ | ೨೪೧ |
| ೧೪. | ಫೆನ್ಸಿನ ಈ ಕಡೆ, ಆ ಕಡೆ | ಜ್ಞಾನರಂಜನ್ | ೨೫೦ |
| ೧೫. | ಸುಖ | ಕಾಶೀನಾಥ ಸಿಂಗ್ | ೨೫೯ |
| | ಲೇಖಕರ ಪರಿಚಯ | | ೨೭೧ |

# ಅವಳ ಕೋರಿಕೆ

ದೊಡ್ಡ ದೊಡ್ಡ ನಗರಗಳಲ್ಲಿ ಟಾಂಗಾ ಹೊಡೆಯುವವರ ಬಾಯಿಂದ ಬರುವ ಮಾತು ಗಳ ಚಾಟಿಯಿಂದ ಯಾರ ಬೆನ್ನು ಸುಲಿದು ಹೋಗಿದೆಯೋ, ಮತ್ತು ಆ ಮಾತುಗಳನ್ನು ಕೇಳಿ ಕೇಳಿ ಯಾರ ಕಿವಿಗಳು ಬಾತುಕೊಂಡಿವೆಯೋ ಅಂಥವರಲ್ಲಿ ನಮ್ಮ ಪ್ರಾರ್ಥನೆ ಯಾದರೂ ಇಷ್ಟೇ, ನಮ್ಮ ಅಮೃತಸರಕ್ಕೆ ಬಂದು ಇಲ್ಲಿಯ ಟಾಂಗಾವಾಲಾಗಳ ಮಾತು ಕೇಳಿ – ಅದರಿಂದ ಸುಲಿದು ಹೋಗಿರುವ ಬೆನ್ನಿಗೆ ಮುಲಾಮುಪಟ್ಟಿ ಹಾಕಿಕೊಂಡಷ್ಟು ಹಿತ ಕಂಡುಬಂದೀತು. ದೊಡ್ಡ ದೊಡ್ಡ ನಗರಗಳಲ್ಲಿ ಅಗಲವಾದ ರಸ್ತೆಗಳಲ್ಲಿ ಟಾಂಗಾ ಹೊಡೆಯುವ ಜನ ಆಗಾಗ ಚಾಟಿಯಿಂದ ಕುದುರೆಯ ಬೆನ್ನಿಗೆ ಬಾರಿಸುತ್ತಾ ಕುದುರೆಯ ಅಜ್ಜಿಯ ಜೊತೆಗೋ ಅಮ್ಮನ ಜೊತೆಗೋ ತಮ್ಮ ನಿಕಟ ಸಂಬಂಧ ಸ್ಥಾಪಿಸಿಕೊಳ್ಳು ತ್ತಾರೆ; ಒಮ್ಮೊಮ್ಮೆ ಪಾದಚಾರಿಗಳಿಗೆ ಕಣ್ಣೇ ಇಲ್ಲವೆಂದು ಶಪಿಸುತ್ತಾರೆ; ಕೆಲವು ವೇಳೆ ಅವರ ಕಾಲಿನ ಬೆರಳುಗಳು ಕತ್ತರಿಸಿ ಬೀಳುವಂತೆ, ಅಕ್ಕಪಕ್ಕ ನೋಡದೆ, ಟಾಂಗಾ ನಡೆಸಿ ಕೊನೆಗೆ ಅವರೇ ತಮ್ಮನ್ನು ನೋಯಿಸಿರುವಂತೆ ಶಪಿಸುತ್ತಾ ಇಡೀ ಪ್ರಪಂಚದಲ್ಲಿ ತಮ್ಮಷ್ಟು ನೋವು ಸಹಿಸುತ್ತಿರುವವರು, ನಿರಾಶೆಗೊಂಡಿರುವವರು ಮತ್ತು ಕ್ಷೋಭೆಗೊಳಗಾದ ವರು ಬೇರೆ ಇಲ್ಲವೆನ್ನುವಂತೆ ಕೂಗಾಡುತ್ತಾ ಆ ಕಡೆ ಈ ಕಡೆ ನೋಡದೆಯೇ ಮುಂದೆ ಹೊರಟು ಹೋಗುವವರೂ ಉಂಟು. ಆದರೆ ನಮ್ಮ ಅಮೃತಸರದಲ್ಲಿ ಹಾಗಲ್ಲ. ಇಲ್ಲಿ ಟಾಂಗಾ ಹೊಡೆಯುವವರು ಅಲ್ಲಲ್ಲೇ ಸುತ್ತುಹಾಕಬೇಕಾಗುವ ಸಣ್ಣ ಸಣ್ಣ ಓಣಿಗಳಲ್ಲಿ ಕೂಡ ಒಬ್ಬೊಬ್ಬ ಲಾಠಿ ಹಿಡಿದು ಹೋಗುವ ಪಾದಚಾರಿಯ ಕಡೆಗೂ ಗಮನಕೊಡುತ್ತಾ ನಿಂತು ನಿಂತು ತಾವು ತಾಳ್ಮೆಯ ಅಪರಾವತಾರವೆನ್ನುವಂತೆ ನಡೆದುಕೊಂಡು ಮುಂದೆ ಹೋಗುತ್ತಾರೆ. ಅವರ ಬಾಯಿಂದ ಬರುವ ಮಾತುಗಳನ್ನು ಕೇಳಬೇಕು – "ಬಚೋ ಬಾಲ್ಸಾಜೀ", "ಹಟೋ ಮಾಯೀಜಿ", "ಠಹರನಾ ಭಾಯಿ", "ಆನೆ ದೋ ಲಾಲಾಜಿ", "ಹಟೋ ಬಾಛಾ" – ಹೀಗೆಲ್ಲ ಹೇಳಿಕೊಂಡೇ ಜನಜಂಗುಳಿಯ ಮಧ್ಯೆ ದಾರಿ ಮಾಡಿ ಕೊಂಡು ಹೋಗುತ್ತಿರುತ್ತಾರೆ. ಹೊರಲಾರದ ಭಾರ ಹೊತ್ತು ಹೋಗುತ್ತಿರುವ ಜನ ರಾದರೂ ಇಂಥದೇ ನಮ್ರತೆಯ ಮಾತುಗಳು, ದಾರಿಗೆ ಅಡ್ಡಲಾಗಿ ಕತ್ತೆಗಳು ಬಾತು ಗಳು ಬರುತ್ತಿದ್ದರೂ ಇದೇ ಮಾತುಗಳು. "ಜೀ", "ಸಾಹಬ್" ಇತ್ಯಾದಿ ಮರ್ಯಾದೆಯ ಮಾತು ಕಿವಿಗೆ ಬೀಳದೆ ಅವರು ಯಾರೂ ದಾರಿ ಬಿಡುವ ಮಾತೇ ಇಲ್ಲ. ಆದರಿಂದ ಇಲ್ಲಿಯ ಟಾಂಗಾ ಹೊಡೆಯುವವರ ನಾಲಿಗೆ ಚುರುಕಾಗಿಲ್ಲ ಎನ್ನುವಂತಿಲ್ಲ. ಮೃದು ವಾಗಿಯೇ ಅವರ ಮಾತುಗಳು, ಒಳ್ಳೆ ಚೂರಿಯಂತೆ ಕೆಲಸ ಮಾಡುತ್ತವೆ. ಪದೇ ಪದೇ ಬೇಡಿಕೊಂಡರೂ ರಸ್ತೆಯಿಂದ ಪಕ್ಕಕ್ಕೆ ಹೋಗದೆ ಇರುವ ಮುದುಕಿಯನ್ನು ಉದ್ದೇಶಿಸಿ

ಅವರು ಹೇಳುವ ಮಾತಿನ ವೈಖರಿ ಹೀಗಿರುತ್ತದೆ: "ಹಟ ಜಾ ಜೇರ್ಣ ಜೋಗಿಯೆ," "ಹಟ ಜಾ ಕರ್ಮಾವಾಲಿಯೇ," "ಹಟ ಜಾ ಪುತ್ತಾ ಪ್ಯಾರಿಯೇ," "ಬಚ ಜಾ ಲಂಬೀ ಉಮ್ರವಾಲಿಯೇ" – ಈ ಎಲ್ಲ ಮಾತುಗಳ ಅರ್ಥವಾದರೂ ಇಷ್ಟೆ: ಅಯ್ಯೋ ಮುದುಕಿ, ನೀನು ಇನ್ನೂ ನಾಲ್ಕು ದಿನ ಬದುಕಿರು, ಈಗಲೇ ಏಕೆ ಸಾಯುತ್ತೀಯೆ? ನೀನು ಭಾಗ್ಯ ವಂತೆ, ನಿನ್ನ ಮಕ್ಕಳಿಗೆ ಬೇಕಾದವಳು, ನೀನಿನ್ನೂ ಬಹಳ ಕಾಲ ಬದುಕಬೇಕಾಗಿದೆ, ಏಕೆ ನೀನು ಈ ರೀತಿ ದಾರಿಗೆ ಅಡ್ಡಲಾಗಿ ಬಂದು ನನ್ನ ಗಾಡಿಯ ಚಕ್ರಗಳ ಕೆಳಗೆ ಸಿಕ್ಕಿ ಸಾಯಲು ಹೋಗುತ್ತಿದ್ದೀಯೆ? ಹಾಗೆ ಸಾಯಬೇಡ, ಬದುಕಿಕೋ!

ಇಂತಹ ಟಾಂಗಾವಾಲಾಗಳ ಮಧ್ಯೆ ಹಾದುಕೊಂಡು ಒಬ್ಬ ಹುಡುಗ ಮತ್ತು ಹುಡುಗಿ ಚೌಕದ ಬಳಿ ಇರುವ ಒಂದು ಅಂಗಡಿಗೆ ಬಂದು ಅಲ್ಲಿ ಒಬ್ಬರನ್ನೊಬ್ಬರು ಭೇಟಿ ಮಾಡಿದರು. ಅವರ ತಲೆಗೂದಲು ಮತ್ತು ಉಟ್ಟಿದ್ದ ಪಾಯಜಾಮ – ಇವುಗಳಿಂದ ಅವರಿಬ್ಬರೂ ಸಿಖ್ಖರೆಂಬುದು ತಿಳಿಯುತ್ತಿತ್ತು. ತನ್ನ ಸೋದರಮಾವನಿಗಾಗಿ ಮೊಸರು ಕೊಳ್ಳಲು ಅವನು ಬಂದಿದ್ದ, ಅವಳು ಅಡಿಗೆಗೆ ಬೇಕಾಗಿದ್ದ ಸಂಡಿಗೆ ಕೊಳ್ಳಲು ಬಂದಿದ್ದಳು. ಅಂಗಡಿಯವನು ಒಂದು ಸೇರಿನ ಪ್ರಮಾಣದ ಹಸಿ ಹಪ್ಪಳದ ರಾಸಿಯನ್ನು ಎಣಿಸದೆ ತೆಗೆದುಕೊಳ್ಳಲು ನಿರಾಕರಿಸುತ್ತಿದ್ದ ಒಬ್ಬ ಬೇರೆ ಊರಿನವನ ಜೊತೆಗೆ ಜಗಳವಾಡುವುದ ರಲ್ಲಿ ನಿರತನಾಗಿದ್ದ.

ಹುಡುಗ ಹುಡುಗಿಯ ಸಂಭಾಷಣೆ ಹೀಗೆ ನಡೆದಿತ್ತು:

"ನಿನ್ನ ಮನೆ ಎಲ್ಲಿದೆ?"

"ಮಗರೆಯಲ್ಲಿ, ನಿನ್ನದು?"

"ಮಾಂಝಯಲ್ಲಿ ... ಇಲ್ಲಿ ಎಲ್ಲಿ ಇದ್ದೀಯೆ?"

"ಅತರಸಿಂಗ್ ಅವರ ಮನೇಲಿ, ಅವರು ನಮ್ಮ ಸೋದರಮಾವ."

"ನಾನೂ ನಮ್ಮ ಸೋದರಮಾವನ ಮನೆಗೆ ಬಂದಿದ್ದೇನೆ. ಅವರ ಮನೆ ಗುರು ಬಾಜಾರಿನಲ್ಲಿದೆ."

ಅಷ್ಟರಲ್ಲಿ ಅಂಗಡಿಯವನು ಅವರ ಕಡೆ ತಿರುಗಿದ. ಇಬ್ಬರೂ ಸಾಮಾನು ತೆಗೆದು ಕೊಂಡು ಒಟ್ಟೊಟ್ಟಿಗೇ ಹೊರಟರು. ಸ್ವಲ್ಪ ದೂರ ಹೋಗಿ ಹುಡುಗನು ಮುಗುಳ್ನಕ್ಕು ಕೇಳಿದ: "ನಿನಗೆ ಮದುವೆ ಗೊತ್ತಾಗಿದೆಯೇ?" ಇದನ್ನು ಹುಡುಗಿ ಕೇಳಿ ಕಣ್ಣುಗಳನ್ನು ಹೊರಳಿಸಿ 'ಧುತ್' ಎಂದು ಹೇಳಿಕೊಂಡು ಅಲ್ಲಿಂದ ಓಡಿಹೋದಳು. ಹುಡುಗ ಅವಳ ಮುಖವನ್ನೇ ನೋಡುತ್ತಾ ನಿಂತುಬಿಟ್ಟ.

ಮಾರನೆಯ ದಿನ ಮತ್ತು ಮುಂದಿನ ದಿನ – ಹೀಗೆ ತರಕಾರಿ ಕೊಳ್ಳುವ ಕಡೆಯೋ ಹಾಲು ಕೊಳ್ಳುವ ಕಡೆಯೋ ಅಕಸ್ಮಾತ್ ಮತ್ತೆ ಅವರು ಸಂಧಿಸುತ್ತಿದ್ದರು. ಇದೇ ರೀತಿ ಒಂದು ತಿಂಗಳು ನಡೆಯಿತು. ಎರಡು ಮೂರು ಬಾರಿ ಮತ್ತೆ ಹುಡುಗನು ಅದೇ ರೀತಿ ಕೇಳಿದ: "ನಿನ್ನ ಮದುವೆ ಗೊತ್ತಾಗಿದೆಯೇ?" ಅವಳು ಈ ಪ್ರಶ್ನೆಗೆ ಮತ್ತೆ ಅದೇ ರೀತಿ

'ಥುತ್' ಎಂದು ಉತ್ತರ ಕೊಟ್ಟು ಓಡುತ್ತಿದ್ದಳು. ಇನ್ನೊಂದು ದಿನ ಹುಡುಗನು ಅದೇ ರೀತಿ ನಗುತ್ತಾ ಅವಳನ್ನು ಛೇಡಿಸುವ ರೀತಿಯಲ್ಲಿ ಕೇಳಿದಾಗ ಹುಡುಗನ ನಿರೀಕ್ಷೆಗೆ ವಿರುದ್ಧವಾಗಿ ಅವಳು ಹೇಳಿದಳು: "ಹೌದು, ಆಗಿಹೋಯಿತು."

"ಯಾವಾಗ?"

"ನಿನ್ನೆ, ಕಾಣುವುದಿಲ್ಲವೇ ನಿನಗೆ ರೇಶ್ಮೆಯಿಂದ ಕಟ್ಟಿರುವ ಈ 'ಸಾಲೂ'?"

ಹುಡುಗಿ ಅಷ್ಟು ಹೇಳಿ ಓಡಿಬಿಟ್ಟಳು. ಹುಡುಗ ಮನೆಯ ದಾರಿ ಹಿಡಿದ. ದಾರಿಯಲ್ಲಿ ಒಬ್ಬ ಹುಡುಗನನ್ನು ಚರಂಡಿಗೆ ತಳ್ಳಿಬಿಟ್ಟ, ತಲೆಯ ಮೇಲೆ ಬುಟ್ಟಿ ಹೊತ್ತು ಹೋಗುತ್ತಿದ್ದವನೊಬ್ಬನಿಗೆ ಡಿಕ್ಕಿಹೊಡೆದು ಅವನ ಇಡೀ ದಿನದ ಸಂಪಾದನೆಯನ್ನು ಮಣ್ಣುಪಾಲು ಮಾಡಿದ; ದಾರಿಯಲ್ಲಿ ಹೋಗುತ್ತಿದ್ದ ಒಂದು ನಾಯಿಗೆ ಕಲ್ಲು ಬೀಸಿದ; ಹಾಲು ತರುತ್ತಿದ್ದವನೊಬ್ಬನಿಗೆ ಡಿಕ್ಕಿ ಹೊಡೆದು ಆ ಹಾಲೆಲ್ಲ ಚೆಲ್ಲಿಹೋಗುವಂತೆ ಮಾಡಿದ. ಆಗತಾನೇ ಸ್ನಾನಮಾಡಿ ಮಡಿಯಿಂದ ಬರುತ್ತಿದ್ದ ಒಬ್ಬ ಬ್ರಾಹ್ಮಣ ಮಹಿಳೆಯನ್ನು ಟಿಕರಾಯಿಸಿ ಅವಳಿಂದ ಅಂಧನೆಂಬ ಬಿರುದು ಪಡೆದ. ದಾರಿಯುದ್ದಕ್ಕೂ ಹಾಗೆ ಒಂದಲ್ಲ ಒಂದು ಉಪದ್ರವ ಮಾಡಿ ಕೊನೆಗೆ ಮನೆ ತಲುಪಿದ.

oo oo oo oo

"ರಾಮ ರಾಮ, ಇದೆಂತಹ ಯುದ್ಧ? ಹಗಲೂ ರಾತ್ರಿ ಕಂದರಗಳಲ್ಲಿ ಮೈ ಮುದುಡಿಕೊಂಡು ಕುಳಿತು ಮೈ ಮೂಳೆಗಳೆಲ್ಲ ಜಿಡ್ಡು ಹಿಡಿದುಹೋಗಿವೆ. ಲೂಧಿಯಾನಾಕ್ಕಿಂತ ಹತ್ತು ಪಟ್ಟು ಹೆಚ್ಚು ಚಳಿ. ಜೊತೆಗೆ ಮೇಲಿನಿಂದ ಬೀಳುವ ಮಳೆ ಮತ್ತು ಮಂಜು. ಮೊಣಕಾಲುಗಳು ಕೆಸರಿನಲ್ಲಿ ಹೂತುಹೋಗಿವೆ. ಶತ್ರು ಸೈನಿಕರಂತೂ ಎಲ್ಲೂ ಕಾಣುವುದಿಲ್ಲ. ಗಂಟೆ, ಎರಡು ಗಂಟೆಗೊಮ್ಮೆ ಕಿವಿ ಕಿವುಡಾಗುವ ರೀತಿಯಲ್ಲಿ ಆಸ್ಫೋಟನೆ ನಡೆದು ಕಂದಕವೆಲ್ಲ ನಡುಗಿ ಹೋಗುತ್ತದೆ. ನೂರು ನೂರು ಗಜದಷ್ಟು ಭೂಮಿ ಬಿರುಕುಬಿಟ್ಟು ಮೇಲಕ್ಕೆ ಸಿಡಿಯುತ್ತದೆ. ಆಗ ನುಗ್ಗಿ ಬರುವ ಗುಂಡಿಗೆ ಸಿಗದೆ ಉಳಿದರೆ ಮತ್ತೆ ಹೋರಾಡುವ ಮಾತು. ನಗರಕೋಟೆಯ ವಿಚಾರ ಕೇಳಿದ್ದೆ. ಇಲ್ಲಂತೂ ದಿನಕ್ಕೆ ಇಪ್ಪತ್ತೈದು ಸಲವಾದರೂ ಭೂಮಿ ಆಸ್ಫೋಟಿಸುವ ಪರಿಸ್ಥಿತಿ ಬರುತ್ತದೆ. ಕಂದಕದಿಂದ ತಲೆ ಹೊರಗಡೆ ಕಾಣಿಸಿದರೆ ಸಾಕು ಎಲ್ಲಿಂದಲೊ ಗುಂಡು ಹಾರಿ ಬಂದು ಬಡಿಯುತ್ತದೆ. ಮುಂಡೇ ಮಕ್ಕಳು ಎಲ್ಲಿ ಭೂಮಿಯಲ್ಲಿಯೇ ಅಡಗಿರುತ್ತಾರೆಯೋ ಅಥವಾ ಹುಲ್ಲಿನ ಗರಿಗಳ ಹಿಂದೆ ಅದೆಲ್ಲಿ ಬಚ್ಚಿಟ್ಟುಕೊಂಡಿರುತ್ತಾರೆಯೋ ತಿಳಿಯದು.

"ಲಹನಾಸಿಂಗ್, ಇನ್ನೂ ಮೂರು ದಿನ ಹೀಗೆಯೇ ಇರಬೇಕು. ನಾಲ್ಕು ದಿನಗಳನ್ನಂತೂ ಈ ಕಂದಕದಲ್ಲಿಯೇ ಕಳೆದಿದ್ದಾಯಿತು. ನಾಳಿದ್ದು 'ರಿಲೀಫ್' ಜನ ಬರುತ್ತಾರೆ. ಆಮೇಲೆ ಏಳು ದಿನದ ಛುಟ್ಟೀ. ಆಗ ಒಂದಿಷ್ಟು ಕೈಕಾಲು ಆಡಿಸಬಹುದು. ಹೊಟ್ಟೆ ತುಂಬಾ ತಿಂದು ಹಾಯಾಗಿ ಮಲಗಿರಬಹುದು. ಆ ಫಿರಂಗಿ ಮೇಮಸಾಬಳ ತೋಟದಲ್ಲಿ

ಹೇಗಿದ್ದರೂ ಹುಲ್ಲಿನ ಹಾಸಿಗೆ ಸಿಗುತ್ತದೆ. ಮಖಮಲ್ಲಿನಂತೆ ಮೆತ್ತಗಿರುತ್ತದೆ. ಹಣ್ಣು ಹಂಪಲಿಗೂ ಕೊರತೆ ಇಲ್ಲ. ಹಣ್ಣುಹಂಪಲು ಮತ್ತು ಹಾಲಿನ ಮಳೆಗರೆದುಬಿಡುತ್ತಾಳೆ. ನೀನು ಎಷ್ಟೇ ಹೇಳು, ಒಂದು ಕಾಸೂ ತೆಗೆದುಕೊಳ್ಳುವುದಿಲ್ಲ. ಹೆಚ್ಚು ಹೇಳಿದರೆ, "ದೊರೆಗಳು ನೀವು, ನಮ್ಮ ದೇಶ ಉಳಿಸಲು ಬಂದಿದ್ದೀರಿ" ಎಂದುಬಿಡುತ್ತಾಳೆ.

"ನಾಲ್ಕು ದಿನಗಳಿಂದ ರೆಪ್ಪೆ ಬಡಿಯಲು ಸಾಧ್ಯವಾಗಿಲ್ಲ. ಸುತ್ತು ಹೊಡೆಸದೆ ಹೋದರೆ ಕುದುರೆ ಹೇಗೆ ಕೆಡುತ್ತದೆಯೊ ಹಾಗೆ ಯುದ್ಧವಿಲ್ಲದೆ ಹೋದರೆ ಸೈನಿಕರು ಕೆಡುತ್ತಾರೆ. ಸದ್ಯ ನಮ್ಮ ಬಂದೂಕುಗಳಿಗೆ ಭರ್ಚಿ ಏರಿಸಿ ಮಾರ್ಚ್ ಮಾಡಿ ಎಂದು ಆಜ್ಞೆ ಬಂದರೆ ಸಾಕು ಎನಿಸಿದೆ. ಒಬ್ಬನೇ ಏಳೇಳು ಜನ ಜರ್ಮನರನ್ನು ಉರುಳಿಸಿ ಮುನ್ನಡೆಯದೆ ಹೋದರೆ, ದರ್ಬಾರ್ ಸಾಹೇಬರ ದೆಹಲಿಗೆ ನಾನು ಮುಖ ತೋರಿಸುವುದೇ ಬೇಡ. ಹೇಡಿಗಳು ಎಲ್ಲೀವೋ – ಅವರ ಕುದುರೆಗಳೋ ನಮ್ಮ ಭರ್ಚಿಗಳ ದರ್ಶನವಾದರೆ ಸಾಕು ಹೆದರಿ ಮುಂದೆ ಓಡದೆ ನಿಂತಲ್ಲೇ ನಿಲ್ಲುತ್ತವೆ. ಅದೇ ಕತ್ತಲೆಯಲ್ಲಿ ಬಂದು ಮೂವತ್ತು ಮೂವತ್ತು ಮಣದಷ್ಟು ಬಾಂಬ್ ಎಸೆದು ಹೋಗುತ್ತಾರೆ. ಆವೊತ್ತು ನನ್ನ ಛಲ ತೀರಿಸಿಕೊಂಡೆ – ನಾಲ್ಕು ಮೈಲಿಯಷ್ಟು ದೂರದ ತನಕ ಒಬ್ಬ ಜರ್ಮನ್ ಉಳಿಯಲಿಲ್ಲ. ಹಿಮ್ಮೆಟ್ಟುವಂತೆ ಆ ದಿನ ಜನರಲ್ ಸಾಹೇಬರ ಆಜ್ಞೆಯಾಯಿತು. ಇಲ್ಲದಿದ್ದರೆ ನೋಡಬೇಕಿತ್ತು – ಆ ಆಜ್ಞೆ ಆಗದೆ ಇದ್ದಿದ್ದರೆ ನೇರವಾಗಿ ಹೋಗಿ ಬರ್ಲಿನ್ ಮುಟ್ಟಬಹುದಾಗಿತ್ತು. ಏನು – ಏನು ಹೇಳ್ತಿ?"

ಸುಬೇದಾರ ಹಜಾರಾಸಿಂಗನು ಮುಗುಳ್ನಕ್ಕು ಹೇಳಿದ: "ಯುದ್ಧದ ವಿಚಾರವೇ ಹಾಗೆ; ಜಮಾದಾರ್ ಅಥವಾ ನಾಯಕ್ ಇವರುಗಳು ಅದನ್ನು ನಿರ್ಧರಿಸುವುದಿಲ್ಲ. ದೊಡ್ಡ ದೊಡ್ಡ ಆಫೀಸರುಗಳು ದೂರದೃಷ್ಟಿಯಿಂದ ಎಲ್ಲವನ್ನೂ ನಿರ್ಧರಿಸುತ್ತಾರೆ. ಮೂರುನೂರು ಮೈಲಿ ದೂರದ ವಿಚಾರ – ನಾಲ್ಕೂ ಕಡೆಯ ವಿಚಾರ ಮುಖ್ಯ, ಒಂದು ಕಡೆ ನುಗ್ಗಿ ಹೊರಟುಹೋದರೆ ಏನಾಯಿತು?"

ಲಹನಾಸಿಂಗ್ ಹೇಳಿದ: "ನಿಜ ಸುಬೇದಾರರೇ, ನೀವು ಹೇಳುವುದೂ ನಿಜ. ಆದರೆ ಏನು ಮಾಡಲಿ. ಈ ಕಂದರಗಳಲ್ಲಿ ಕುಳಿತೂ ಕುಳಿತೂ ಮೈ ಮೂಳೆಯೆಲ್ಲ ಹೆಪ್ಪುಗಟ್ಟಿದೆ. ಸೂರ್ಯನ ದರ್ಶನವೇ ಕಷ್ಟವಾಗಿದೆ. ಈ ಕಂದಕಗಳಲ್ಲೋ ಎರಡೂ ಕಡೆ ನೀರು ಬೇರೆ ಹರಿಯುತ್ತಿರುತ್ತದೆ. ಒಮ್ಮೆ ಆಕ್ರಮಣ ಆರಂಭವಾಯಿತು ಎಂದರೆ ಎಲ್ಲಿಲ್ಲದ ಬಿಸಿ ಬರುತ್ತದೆ." "ಉದಮಿ, ಈಗ ಏಳು. ಅಗ್ಗಿಷ್ಟಿಕೆಗೆ ಒಂದಿಷ್ಟು ಕಲ್ಲಿದ್ದಲು ಹಾಕು. ವಜೀರಾ ನೀವು ನಾಲ್ಕು ಜನ ಹೋಗಿ ಬಾಲ್ದಿಗಳನ್ನು ತೆಗೆದುಕೊಂಡು ಕಂದಕದ ಒಳಗಿನ ನೀರನ್ನೆಲ್ಲ ಎತ್ತಿ ಹೊರಕ್ಕೆ ಹಾಕಿ. ಲಹನಾಸಿಂಗ್, ಸಂಜೆಯಾಗಿ ಹೋಗಿದೆ, ಕಂದಕದ ಬಾಗಿಲಲ್ಲಿ ಪಹರೆ ಬದಲಾಯಿಸು," – ಹೀಗೆ ಒಬ್ಬೊಬ್ಬರಿಗೆ ಒಂದೊಂದು ಆಜ್ಞೆ ಕೊಡುತ್ತಾ ಸುಬೇದಾರನು ಕಂದಕದ ಒಳಗೆಲ್ಲ ಅತ್ತಿಂದಿತ್ತ ಇತ್ತಿಂದತ್ತ ಠಲಾಯಿಸತೊಡಗಿದನು. ವಜೀರಾಸಿಂಗ್ ತನ್ನ ತುಕ್ಕಡಿಯ ವಿದೂಷಕನಂತಿದ್ದ. ಬಾಲ್ದಿಯಲ್ಲಿ ಕಂದಕದ ಒಳಗಿನ

ಗಲೀಜು ನೀರನ್ನೆತ್ತಿ ಹೊರಕ್ಕೆ ಚೆಲ್ಲುತ್ತಾ ಹೇಳಿದ: "ನಾನೀಗ ಆಚಾರ್ಯ ಸ್ಥಾನದಲ್ಲಿದ್ದೇನೆ; ಎಲ್ಲರೂ ಸೇರಿ ಜರ್ಮನ್ ಬಾದಶಹನ ಹೆಸರಿನಲ್ಲಿ ತರ್ಪಣ ಬಿಡಿ". ಈ ಮಾತು ಕೇಳಿ ಎಲ್ಲರೂ ಘೊಳ್ಳೆಂದು ನಗತೊಡಗಿದರು; ಉದಾಸರಾಗಿದ್ದವರ ಮುಖದಲ್ಲಿ ಗೆಲುವು ಬಂತು.

ಲಹನಾಸಿಂಗನು ಇನ್ನೊಂದು ಬಾಲ್ದಿ ನೀರು ತುಂಬಿ ಅವನ ಕೈಗೆ ಕೊಡುತ್ತಾ ಹೇಳಿದ:

"ತಗೋ ನಿನ್ನ ತೋಟಕ್ಕೆ ನೀರು ಹಾಕು. ಇಂತಹ ಪುಷ್ಟಿ ಕೊಡುವ ನೀರು ನಿನಗೆ ಪಂಜಾಬಿನಲ್ಲಿ ಸಿಗುವುದಿಲ್ಲ."

"ಹೌದು, ಹೌದು. ನಿಜಕ್ಕೂ ಸ್ವರ್ಗದಂತಹ ದೇಶ ಇದು. ಯುದ್ಧದ ನಂತರ ನಾನಂತೂ ಇಲ್ಲಿ ನನ್ನ ಜಮೀನಿಗೆ ಹತ್ತರಷ್ಟು ಜಮೀನನ್ನು ಸರ್ಕಾರದಿಂದ ಕೇಳಿ ತೆಗೆದುಕೊಳ್ಳುತ್ತೇನೆ. ಮತ್ತು, ಇಲ್ಲಿ ಸೊಗಸಾದ ತೋಟ ಮಾಡುತ್ತೇನೆ; ಹಣ್ಣುಗಳ ತೋಟ."

"ನಿನ್ನ ಹೆಂಡತಿಯನ್ನೂ ಇಲ್ಲಿಗೇ ಕರೆಸಿಕೊಳ್ಳುತ್ತೀಯೋ, ಅಥವಾ ನಿನಗೆ ಇಲ್ಲಿ ಹಾಲು ಕುಡಿಸುವ ಫರಂಗಿ ಮೇಮ ಸಾಹೇಬಳನ್ನು......"

"ಸುಮ್ಮನಿರೋ. ಇಲ್ಲಿ ಜನ ನಮ್ಮ ಜನರ ಹಾಗೆ ನಾಚಿಕೆಪಟ್ಟುಕೊಳ್ಳುವುದಿಲ್ಲ."

"ಒಂದೊಂದು ದೇಶದ್ದು ಒಂದೊಂದು ರೀತಿ. ಇಷ್ಟು ದಿನ ಆಯಿತು – ಸಿಖ್ಖರು ಸಿಗರೇಟ್ ಸೇದುವುದಿಲ್ಲ ಎಂಬುದನ್ನು ಅವಳಿಗೆ ಒಪ್ಪಿಸಲು ಸಾಧ್ಯವಾಗಿಲ್ಲ. ಅವಳು ನಂಬೋದೇ ಇಲ್ಲ. ಸಿಗರೇಟ್ ಕೊಟ್ಟು ಸೇದುವಂತೆ ಒತ್ತಾಯ ಮಾಡುತ್ತಾಳೆ. ತಂದು ತುಟಿಗಳ ಮಧ್ಯೆ ಸಿಕ್ಕಿಸುತ್ತಾಳೆ. ಇಲ್ಲ, ನಾನು ಸಿಖ್, ಸಿಗರೇಟ್ ಸೇದುವುದಿಲ್ಲ ಎಂದರೆ ನಂಬುವುದಿಲ್ಲ. ನಾನು ಕೋಪಿಸಿಕೊಂಡಿದ್ದೇನೆ. ಇನ್ನು ನನ್ನ ದೇಶಕ್ಕಾಗಿ ಹೋರಾಡುವುದಿಲ್ಲ ಎಂದೇ ತಿಳಿಯುತ್ತಾಳೆ."

"ಸರಿ, ಈಗ ಬೋಧಾಸಿಂಗ್ ಹೇಗಿದ್ದಾನೆ?"

"ಚೆನ್ನಾಗಿದ್ದಾನೆ."

"ನನಗೆ ಗೊತ್ತೇ ಇಲ್ಲ ಎನ್ನುವ ರೀತಿ ಮಾತಾಡ್ತೀಯಲ್ಲ. ರಾತ್ರಿಯೆಲ್ಲ ಅವನದೇ ಉಪಚಾರ ನಡೆಯುತ್ತಿರುತ್ತೆ. ನಿನ್ನ ಕಂಬಳಿಯನ್ನು ಅವನಿಗೆ ಹೊದಿಸಿ, ನೀನು ಅಗ್ಗಿಷ್ಟಿಕೆಯ ಮುಂದೆ ಕುಳಿತೇ ಕಾಲ ಕಳೆಯುತ್ತೀಯೆ. ಅವನು ಮಾಡಬೇಕಾದ ಪಹರೆ ಕೆಲಸವನ್ನು ನೀನೇ ಮಾಡುತ್ತಿದ್ದೀಯೆ. ನಿನ್ನ ಹಲಗೆಯ ಮೇಲೆ ಅವನನ್ನು ಮಲಗಿಸಿ, ನೀನು ಕೆಸರಿನ ನೆಲದ ಮೇಲೇ ಮಲಗಿ ಕಾಲ ಹಾಕುತ್ತೀಯ. ಹೀಗೆ ಮಾಡಿದರೆ ನೀನು ಕಾಯಿಲೆಬೀಳದೆ ಇರುವುದಿಲ್ಲ. ಇಲ್ಲಿಯ ಥಂಡಿ, ಏನು ಸಾಮಾನ್ಯವಾದ ಥಂಡೀನೇ! ತಣ್ಣಗೆ ಮಾಡಿಬಿಡುತ್ತೆ. ನಿಮೋನಿಯಾದಿಂದ ಸಾಯುವ ಗತಿ ಬರುವುದು ಬೇಡ.

"ನನ್ನ ಬಗ್ಗೆ ಚಿಂತಿಸಬೇಡ. ನಾನು ನನ್ನ ಮನೆಯಲ್ಲೇ ಸಾಯುತ್ತೇನೆ. ಭಾಯಿ ಕೀರತ್ ಸಿಂಗನ ತೊಡೆಯ ಮೇಲೆಯೇ ತಲೆಯಿಟ್ಟು ಸಾಯುತ್ತೇನೆ. ಇದಲ್ಲದೆ ನನ್ನ ಅಂಗಳದಲ್ಲಿ ಬೆಳಸಿರುವ ಮಾವಿನ ಮರದ ನೆರಳೂ ಇರುತ್ತದೆ."

ವಜೀರಾಸಿಂಗನು ಆಕ್ಷೇಪದ ಧ್ವನಿಯೆತ್ತಿ ಹೇಳಿದ: "ಏನು ಹಾಗೆ ಮಾತಾಡ್ತಿದ್ದೀರೋ – ಸಾಯುವ ಚಿಂತೆಯೇಕೆ ಮಾಡುತ್ತಿದ್ದೀರಿ. ನಾವೇಕೆ ಸಾಯುತ್ತೇವೆ. ಸಾಯುತ್ತಾರೆ ಜರ್ಮನರು ಮತ್ತು ತುರ್ಕರು."

ಅದೇ ಸಮಯಕ್ಕೆ ಕೆಲವು ಸಿಖ್ಖರು ಒಟ್ಟುಗೂಡಿ ಹಾಡತೊಡಗಿದರು.

ಗಡ್ಡ ಬಿಟ್ಟಿರುವ ಗೃಹಸ್ಥ ಸಿಖ್ಖರು ಇಂತಹ ಅಶ್ಲೀಲ ಗೀತೆಯನ್ನು ಹಾಡುತ್ತಿದ್ದುದು ಆಶ್ಚರ್ಯಕರ. ಆದರೆ ಇಡೀ ಕಂದಕದಲ್ಲೆಲ್ಲ ಅವರ ಹಾಡು ಪ್ರತಿಧ್ವನಿಸತೊಡಗಿತು. ಮತ್ತು ಸೈನಿಕರಲ್ಲಿ ಹೊಸ ಚೈತನ್ಯ ಮೂಡಿಸಿತು. ಹಲವು ದಿನಗಳಿಂದ ಮಲಗಿ ನಿದ್ರಿಸುತ್ತಿದ್ದರೋ ಎಂಬಂತೆ ಮೌನ ತಾಳಿದ್ದವರು ಮತ್ತೆ ಬಾಹ್ಯಪ್ರಪಂಚಕ್ಕೆ ಬಂದಿದ್ದರು ಎನಿಸುವಂತಿತ್ತು.

ဝဝ ဝဝ ဝဝ ဝဝ

ರಾತ್ರಿಯಾಗಿದೆ. ಸುತ್ತಲೂ ಕತ್ತಲೆ ಕವಿದಿದೆ. ಯಾವ ಶಬ್ದವೂ ಇಲ್ಲ. ಸುತ್ತಲೂ ಗಂಭೀರ, ಶಾಂತ ವಾತಾವರಣ. ಬಿಸ್ಕತ್ತುಗಳ ಖಾಲಿ ಡಬ್ಬಗಳ ಮೇಲೆ ತನ್ನ ಎರಡು ಕಂಬಳಿಗಳನ್ನು ಹಾಸಿ ಬೋಧಾಸಿಂಗ್ ಮಲಗಿದ್ದಾನೆ. ಲಹನಾಸಿಂಗ್‌ನ ಎರಡು ಕಂಬಳಿಗಳನ್ನೂ ಕಂಬಳಿಯ ಎರಡು ಓವರ್‌ಕೋಟುಗಳನ್ನೂ ಮೇಲೆ ಹೊದ್ದುಕೊಂಡಿದ್ದಾನೆ. ಲಹನಾಸಿಂಗನಿಗೆ ಹೊದಿಕೆಯೇ ಇಲ್ಲ; ಹಾಗೆಯೇ ಮಲಗಿಕೊಂಡಿದ್ದಾನೆ. ಬೋಧಾಸಿಂಗ್ ನರಳಿದ ಶಬ್ದ ಕೇಳಿಸಿತು.

"ಏಕೆ ಬೋಧಾ ಭಾಯಿ, ಏನು ಬೇಕು?"

"ಒಂದಿಷ್ಟು ನೀರು ಕುಡಿಸಿಬಿಡು."

ಲಹನಾಸಿಂಗ್ ನೀರಿನ ಬಟ್ಟಲನ್ನು ಅವನ ತುಟಿಗಳಿಗೆ ಹಿಡಿಯುತ್ತಾ ಕೇಳಿದ: "ಈಗ ಹ್ಯಾಗಿದೆ, ನಿನ್ನ ದೇಹಸ್ಥಿತಿ?"

ನೀರು ಕುಡಿದು ಬೋಧಾ ಹೇಳಿದ: "ಚಳಿಯೋ ಚಳಿ. ಪ್ರಾಣ ಹೋಗ್ತಾ ಇದೆ. ಹಲ್ಲುಗಳು ಕಟಕಟಾಯಿಸುತ್ತಿವೆ."

"ನನ್ನ ಜರ್ಸಿ ಹಾಕಿಕೊ".

"ನಿನಗೆ?"

"ನನ್ನ ಹತ್ತಿರವೇ ಅಗ್ಗಿಷ್ಟಿಕೆ ಇದೆ. ನನಗೆ ಸೆಖೆಯಾಗುತ್ತಾ ಇದೆ. ಮೈಯೆಲ್ಲ ಬೆವರ್ತಾ ಇದೆ."

"ಇಲ್ಲ; ನನಗೆ ಬೇಡ. ನಾಲ್ಕು ದಿನದಿಂದ ನೀನು ನನಗಾಗಿ......"

"ನೋಡು, ನನಗೆ ಜ್ಞಾಪಕಕ್ಕೆ ಬಂತು. ನನ್ನ ಹತ್ತಿರ ಇನ್ನೊಂದು ಬೆಳ್ಳಗಿನ ಜರ್ಸಿ ಇದೆ. ಇವೊತ್ತು ಬೆಳಿಗ್ಗೆ ಬಂತು. ವಿಲಾಯಿತಿಯಿಂದ ಹೆಂಗಸರು ಹೆಣೆದು ಹೆಣೆದು ಕಳುಹಿಸುತ್ತಿದ್ದಾರೆ. ಸದ್ಗುರು ಅವರಿಗೆ ಒಳ್ಳೇದು ಮಾಡಲಿ", ಹೀಗೆ ಹೇಳಿ ಲಹನಾ ತನ್ನ ಕೋಟು ಬಿಚ್ಚಿ ಜರ್ಸಿ ತೆಗೆಯತೊಡಗಿದ.

"ನಿಜ ಹೇಳ್ತಿದಿಯೇನು?"

"ಸುಳ್ಳೇಕೆ ಹೇಳಲಿ", ಎಂದು ಹೇಳಿ ಲಹನಾ ತನ್ನ ಜರ್ಸಿಯನ್ನು ಬಲವಂತದಿಂದ ಬೋಧಾಗೆ ಉಡಿಸಿದ. ಮತ್ತು ತಾನು ಖಾಕಿ ಕೋಟು ಮತ್ತು ಜೀನ್–ಕುರ್ತಾ ಹಾಕಿಕೊಂಡು ಪಹರೆ ನಿಲ್ಲಲು ಹೊರಟುಹೋದ. ವಿಲಾಯಿತಿಯಿಂದ ಬಂದಿದ್ದ ಜರ್ಸಿಯ ಮಾತು ಕಟ್ಟುಕಥೆಯೇ ಆಗಿರಬೇಕು.

ಅರ್ಧ ಗಂಟೆಯಾಯಿತು. ಅಷ್ಟರಲ್ಲೇ ಕಂದಕದ ದ್ವಾರದ ಕಡೆಯಿಂದ ಧ್ವನಿ ಬಂತು – "ಸುಬೇದಾರ್ ಹಜಾರಾಸಿಂಗ್!"

"ಯಾರು? ಲಪಟನ್ ಸಾಹೇಬರೇ? ಏನಾಜ್ಞೆ, ಹುಜೂರ್?" – ಎಂದು ಹೇಳಿ ಸುಬೇದಾರ್ ಶಿಸ್ತಿನಿಂದ ನೆಟ್ಟಗೆ ನಿಂತು ಒಂದು ಫೌಜಿ ಸಲಾಮು ಹಾಕಿ ಮುಂದೆ ಹೋದ.

"ನೋಡು, ಈಗಲೇ ಆಕ್ರಮಣಕ್ಕೆ ಸಿದ್ಧರಾಗಬೇಕು. ಇಲ್ಲಿಂದ ಒಂದು ಮೈಲಿಯಷ್ಟು ದೂರದಲ್ಲಿ ಪೂರ್ವದ ಕಡೆಗೆ ಒಂದು ಜರ್ಮನ್ ಕಂದಕವಿದೆ. ಈ ಮರಗಳ ಕೆಳಗಡೆ ಹೋದರೆ ಎರಡು ಹೊಲಗಳು ಬರುತ್ತವೆ. ಅವುಗಳ ನಡುವೆ ಒಂದು ದಾರಿ ಹೋಗುತ್ತದೆ ಆ ಕಡೆಗೆ. ಮೂರು ನಾಲ್ಕು ಕಡೆ ರಸ್ತೆ ತಿರುಗುತ್ತದೆ. ಹಾಗೆ ಆ ದಾರಿಯಲ್ಲಿಯೇ ಹೋದರೆ ಒಂದು ಗುಡ್ಡ ಬರುತ್ತದೆ. ಅಲ್ಲಿ ಹದಿನೈದು ಜನ ಸೈನಿಕರನ್ನು ನಿಲ್ಲಿಸಿ ಬಂದಿದ್ದೇನೆ. ನೀನು ಇಲ್ಲಿ ಹತ್ತು ಜನರನ್ನು ಬಿಟ್ಟು ಉಳಿದ ಎಲ್ಲರನ್ನೂ ಜೊತೆಗೆ ಕರೆದುಕೊಂಡು ಹೋಗಿ ಅವರನ್ನು ಸೇರಿಕೋಬೇಕು. ಕಂದಕವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಮುಂದಿನ ಆಜ್ಞೆ ಬರುವ ತನಕ ಅಲ್ಲಿಯೇ ಇರಬೇಕು – ಆ ಸ್ಥಳ ಬಿಡಬಾರದು. ನಾನು ಇಲ್ಲಿ ಇರುತ್ತೇನೆ."

"ತಮ್ಮ ಆಜ್ಞೆಯಂತೆ."

ಮೌನವಾಗಿ ಎಲ್ಲರೂ ಸಿದ್ಧರಾಗತೊಡಗಿದರು. ಬೋಧಾ ಕೂಡ ಹೊದಿಕೆಯನ್ನು ಪಕ್ಕಕ್ಕೆ ಹಾಕಿ ಹೊರಡಲು ಸಿದ್ಧನಾಗತೊಡಗಿದಾಗ ಲಹನಾಸಿಂಗ್ ಅವನನ್ನು ತಡೆದ. ಅದನ್ನು ಗಮನಿಸಿದ ಬೋಧಾನ ತಂದೆ ಸುಬೇದಾರ ಬೋಧಾನ ಕಡೆಗೆ ಕೈಬೆರಳಿನ ಸೂಚನೆ ಕೊಟ್ಟಿದ್ದನ್ನು ಕಂಡು ಲಹನಾಸಿಂಗ್ ಸುಮ್ಮನಾದ. ಹತ್ತು ಜನ ಹಿಂದೆ ಉಳಿಯುವವರು ಯಾರು? ಯಾರೂ ಹಿಂದೆ ಉಳಿಯಲು ಅಪೇಕ್ಷಿಸುತ್ತಿರಲಿಲ್ಲ. ಅದು ತಮ್ಮ ಗೌರವದ ಪ್ರಶ್ನೆ. ಆದರೂ ಸಮಾಧಾನ ಹೇಳಿ ಹತ್ತು ಜನರನ್ನು ಹಿಂದೆ ಇರಲು ಒಪ್ಪಿಸಿ ಉಳಿದವರು ಹೊರಡಲು ಸುಬೇದಾರನ ಆಜ್ಞೆಯಾಯಿತು.

ಲಪಟನ್ ಸಾಹೇಬರು ಲಹನಾಸಿಂಗನ ಅಗ್ಗಿಷ್ಟಿಕೆಯ ಕಡೆಗೆ ಮುಖ ತಿರುಗಿಸಿ ನಿಂತಿದ್ದವರು ಜೇಬಿನಿಂದ ಒಂದು ಸಿಗರೇಟು ತೆಗೆದು ಹತ್ತಿಸತೊಡಗಿದರು. ಹತ್ತು ನಿಮಿಷಗಳ ನಂತರ ಲಹನಾಸಿಂಗ್‌ನ ಕಡೆಗೆ ಕೈ ನೀಡಿ ಹೇಳಿದರು:

"ತೆಗೆದುಕೊ, ನೀನೂ ಸೇದು."

ಒಂದೇ ಕ್ಷಣದಲ್ಲಿ ಲಹನಾಸಿಂಗನಿಗೆ ಎಲ್ಲ ಅರ್ಥವಾಗಿಹೋಯಿತು. ಆದರೂ ಮುಖದ

ಮೇಲಿನ ಭಾವನೆಯನ್ನು ತೋರಗೊಡದೆ ಹೇಳಿದ: "ಕೊಡಿ ಸಾಹೇಬರೇ." ಅಗ್ಗಿಷ್ಟಿಕೆಯ ಬೆಳಕಿನಲ್ಲಿ ಈಗ ಲಪಟನ್ ಸಾಹೇಬರ ಮುಖ ಸ್ಪಷ್ಟವಾಗಿ ಕಾಣುತ್ತಿತ್ತು. ಮುಖ ನೋಡಿದ. ತಲೆಯ ಕೂದಲು ನೋಡಿದ. ಅವನ ತಲೆಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಲಪಟನ್ ಸಾಹೇಬರ ಬಾಚಿದ ಗುಂಗುರು ಕೂದಲು ಒಂದೇ ದಿನದಲ್ಲಿ ಮಾಯವಾಗಿ ಅದರ ಸ್ಥಾನದಲ್ಲಿ ಕೈದಿಗಳ ತಲೆಯಂತೆ ಕತ್ತರಿಸಿದ ಈ ಮೋಟು ಕೂದಲು ಹೇಗೆ ಬಂತು ?

ಸಾಹೇಬರು ಪ್ರಾಯಶಃ ಕುಡಿದು ಮತ್ತಿನಲ್ಲಿದ್ದಾಗ ಅವರ ತಲೆಯ ಕೂದಲನ್ನು ಹೀಗೆ ಕತ್ತರಿಸುವ ಅವಕಾಶ ಬಂದಿರಬೇಕು. ಇದರ ರಹಸ್ಯವನ್ನು ತಿಳಿಯುವ ಮನಸ್ಸು ಲಹನಾಸಿಂಗನಿಗಾಯಿತು. ಲಪಟನ್ ಸಾಹೇಬರು ಕಳೆದ ಐದು ವರ್ಷಗಳಿಂದಲೂ ಅವನ ರೆಜಿಮೆಂಟಿನಲ್ಲಿಯೇ ಇದ್ದರು.

"ಏನು ಸಾಹೇಬರೇ, ನಾವು ಹಿಂದೂಸ್ತಾನಕ್ಕೆ ಹೋಗುವುದು ಯಾವಾಗ ?"

"ಯುದ್ಧ ಮುಗಿದ ಮೇಲೆ. ಯಾಕೆ ಈ ದೇಶ ನಿನಗೆ ಹಿಡಿಸಲಿಲ್ಲವೇ ?"

"ಇಲ್ಲ ಸಾಹೇಬರೇ, ಶಿಕಾರಿ ನಡೆಸುವ ಅಲ್ಲಿಯ ಮಜಾ ಇಲ್ಲಿ ಹೇಗೆ ಬರಬೇಕು ? ನಾಲ್ಕು ವರ್ಷಗಳಷ್ಟು ಹಿಂದೆ ನಾವೊಮ್ಮೆ ಜಗಾಧಾರಿ ಜಿಲ್ಲೆಯಲ್ಲಿ ಶಿಕಾರಿಗೆ ಹೋಗಿದ್ದಾಗಿನ ನೆನಪು ನಿಮಗಿರಬೇಕು. ಶಿಕಾರಿಗೆ ಸಿದ್ಧರಾಗಿ ನೀವು ಒಂದು ರೆಂಬೆ ಹತ್ತಿ ಕುಳಿತಿದ್ದಿರಿ, ನಿಮ್ಮ ಅಡಿಗೆಯ ಜವಾನ ಅಬ್ದುಲ್ಲಾ ದಾರಿಯಲ್ಲಿಯೇ ಒಂದು ಮಂದಿರದಲ್ಲಿ ಪೂಜೆ ಮಾಡಿ ಬರಲು ನಿಂತುಬಿಟ್ಟಿದ್ದ!"

"ಹೌದು, ಹೌದು. ಚೆನ್ನಾಗಿ ಜ್ಞಾಪಕ ಇದೆ. ಎಲ್ಲಿಂದಲೋ ಬಂದ ದುಷ್ಟ......"

"ಮುಂದೆ ಬಂದ ಆ ನೀಲಗಾಯಿ ಜಾತಿಯ ಜಿಂಕೆ. ನಿಮಗೆ ನೆನಪಿರಬೇಕು. ಅಷ್ಟು ದೊಡ್ಡ ನೀಲಗಾಯನ್ನು ನಾನು ಎಲ್ಲೂ ನೋಡಿಯೇ ಇರಲಿಲ್ಲ. ಅದು ಕಣ್ಣಿಗೆ ಬಿದ್ದುದೇ ತಡ, ನಿಮ್ಮ ಒಂದು ಗುಂಡು ಅದರ ಕತ್ತಿನ ಮೂಲಕ ಅದರ ದೇಹವನ್ನು ಸೀಳಿಕೊಂಡು ಹೊರಗೆ ಬಂತು. ಇಂತಹ ಆಫೀಸರ್ ಜೊತೆಗೆ ಶಿಕಾರಿಗೆ ಹೋಗುವುದೆಂದರೆ ಅದೆಷ್ಟು ಮಜಾ! ಏನು ಸಾಹೇಬರೇ, ಆ ನೀಲಗಾಯಿಯ ತಲೆ ಸಿಮ್ಲಾದಿಂದ ಪ್ರದರ್ಶನಕ್ಕೆ ಸಿದ್ಧವಾಗಿ ಬಂದಿತ್ತು. ರೆಜಿಮೆಂಟಿನ ಮೆಸ್ಸಿನಲ್ಲಿ ಅದನ್ನು ಹಾಕುವುದಾಗಿ ಹೇಳಿದ್ದಿರಿ."

"ಹೌದು. ಆದರೆ ನಾನದನ್ನು ವಿಲಾಯಿತಿಗೆ ಕಳುಹಿಸಿಬಿಟ್ಟೆ."

"ಅದರ ಕೊಂಬುಗಳಾದರೂ ಅದೆಷ್ಟು ಉದ್ದ. ಒಂದೊಂದೂ ಎರಡೆರಡು ಅಡಿ ಉದ್ದ ಇದ್ದಿರಬೇಕು."

"ಹೌದು ಲಹನಾಸಿಂಗ್, ಎರಡೆರಡು ಅಡಿ ನಾಲ್ಕು ಇಂಚಿನಷ್ಟು ಉದ್ದ ಇದ್ದುವು. ನೀನು ಸಿಗರೇಟ್ ಸೇದಲೇ ಇಲ್ಲ..."

"ಸೇದುತ್ತೇನೆ ಸಾಹೇಬರೇ. ಇರಿ, ಹೋಗಿ ದೀಪ ತರುತ್ತೇನೆ" – ಎಂದು ಹೇಳಿ ಲಹನಾಸಿಂಗ್ ಕಂದಕದ ಒಳಗೆ ಹೋದ. ಈಗ ಅವನ ಮನಸ್ಸಿನಲ್ಲಿ ಏನೊಂದೂ ಸಂಶಯ

ಉಳಿದಿರಲಿಲ್ಲ. ಮುಂದೇನು ಮಾಡಬೇಕೆಂಬುದನ್ನು ಅವನು ನಿಶ್ಚಯಮಾಡಬೇಕಾಗಿತ್ತು.

ಕತ್ತಲೆಯಲ್ಲಿ ಅವನು ಮಲಗಿದ್ದವನೊಬ್ಬನನ್ನು ಎಡವಿದ.

"ಯಾರು? ವಜೀರಸಿಂಗನೇ?"

"ಹೌದು, ಯಾಕೆ ಲಹನಾ? ಏನು ಬಂತು ಹೊಸ ಸಮಸ್ಯೆ, ಒಂದಿಷ್ಟು ಕಣ್ಣು ಮುಚ್ಚುವುದಕ್ಕೇ ಇಲ್ಲ."

"ಬೇಗ ಏಳು. ದೊಡ್ಡ ಆಪತ್ತೇ ಬಂದಿದೆ. ಅದೂ ಲಪಟನ್ ಸಾಹೇಬರ ಉಡುಪಿನಲ್ಲಿ ಕಾಳರಾತ್ರಿ ಬಂದಿದೆ."

"ಏನು?" ......

"ಲಪಟನ್ ಸಾಹೇಬರು ಸತ್ತಿದ್ದಾರೆ ಇಲ್ಲವೇ ಕೈದಾಗಿದ್ದಾರೆ. ಅವರ ಉಡುಪು ಧರಿಸಿ ಯಾರೋ ಜರ್ಮನ್ ಬಂದಿದ್ದಾನೆ. ಸುಬೇದಾರರು ಅವನ ಮುಖ ನೋಡಲಿಲ್ಲ. ನಾನು ನೋಡಿದ್ದೀನಿ ಮತ್ತು ಅವನ ಜೊತೆಗೆ ಮಾತನಾಡಿದ್ದೀನಿ. ಶುದ್ಧ ಉರ್ದು ಮಾತನಾಡು ತ್ತಾನೆ. ಆದರೆ ಎಲ್ಲ ಪುಸ್ತಕದ ಭಾಷೆ. ನನಗೆ ಸೇದಲು ಸಿಗರೇಟ್ ಕೂಡ ಕೊಟ್ಟಿದ್ದಾನೆ.

"ಹಾಗಾದರೆ ಈಗ?"

"ಈಗ ನಾವೆಲ್ಲ ಸತ್ತಹಾಗೆಯೇ. ಮೋಸಹೋಗಿದ್ದೇವೆ. ಸುಬೇದಾರರು ಕೆಸರಿನಲ್ಲಿ ಸಿಕ್ಕಿ ಒದ್ದಾಡುತ್ತಿರಬೇಕು. ಇಲ್ಲಿ ನಮ್ಮ ಕಂದಕದ ಮೇಲೆ ದಾಳಿ ನಡೆಯುತ್ತದೆ. ಅಲ್ಲಿ ಅವರ ಮೇಲೆ ಮೈದಾನದಲ್ಲೇ ದಾಳಿ ನಡೆಯುತ್ತದೆ. ಏಳು. ಈಗೊಂದು ಕೆಲಸ ಮಾಡು. ಅವರು ಇನ್ನೂ ಬಹುದೂರ ಹೋಗಿರಲಾರರು. ನಮ್ಮ ತುಕ್ಕಡಿಯ ಹೆಜ್ಜೆ ಗುರುತು ಗಳನ್ನು ನೋಡಿಕೊಂಡು ಓಡಿಹೋಗು. ಹೋಗಿ ಬೇಗ ಹಿಂದಿರುಗಿ ಬರುವಂತೆ ಸುಬೇದಾರರಿಗೆ ಹೋಗಿ ತಿಳಿಸು. ಜರ್ಮನರ ಕಂದಕದ ಮಾತು ಸುಳ್ಳು. ಕಂದಕದ ಹಿಂದಿನಿಂದ ಮೆತ್ತಗೆ ಹೊರಟು ಹೋಗು. ಸುಳಿವು ಸಿಕ್ಕುವುದು ಬೇಡ. ನಿಧಾನ ಮಾಡ ಬೇಡ, ಬೇಗ."

"ಆದರೆ ಇಲ್ಲೇ ಇರಬೇಕೆಂದು ಆಜ್ಞೆಯಾಗಿದೆ......"

"ಹೀಗೆಯೇ ಆಜ್ಞೆ ಆಗಿಹೋಯಿತು. ಈಗ ನನ್ನ ಹುಕುಂ. ಜಮಾದಾರ್ ಲಹನಾ ಸಿಂಗನ ಹುಕುಂ. ಈಗ ಇಲ್ಲಿರುವ ದೊಡ್ಡ ಆಫೀಸರ್ ಜಮಾದಾರ್ ಲಹನಾ ಸಿಂಗನ ಹುಕುಂ...... ನಾನಿಲ್ಲಿ ಈ ಲಪಟನ್ ಸಾಹೇಬನನ್ನು ವಿಚಾರಿಸಿಕೊಳ್ಳುತ್ತೇನೆ."

"ನೀವಿಲ್ಲಿ ಎಂಟು ಜನ ಮಾತ್ರ ಆಗುತ್ತೀರಿ.

"ಎಂಟಲ್ಲ, ಹತ್ತು ಲಕ್ಷ. ಒಬ್ಬೊಬ್ಬ ಅಕಾಲಿಯೂ ಸಿಖ್, ಒಂದೂಕಾಲು ಲಕ್ಷ ಜನಕ್ಕೆ ಸಮಾನ. ಈಗ ಹೊರಡು."

oo oo oo oo

ಲಹನಾಸಿಂಗ್ ಹಿಂದಿರುಗಿ ಕಂದಕದ ಗೋಡೆಗೆ ಒರಗಿಕೊಂಡು ನಿಂತು ನೋಡಿದ. ಅವನು ಹಾಗೆ ನೋಡುತ್ತಿದ್ದ ಹಾಗೆಯೇ ಲಪಟನ್ ಸಾಹೇಬನು ತನ್ನ ಜೇಬಿನಿಂದ

ಮೂರು ಗುಂಡುಗಳನ್ನು ತೆಗೆದು ಅವು ಮೂರನ್ನೂ ಒಂದೊಂದನ್ನಾಗಿ ಕಂದಕದ ಗೋಡೆಗಳ ಒಳಗೆ ಭದ್ರವಾಗಿ ಸಿಕ್ಕಿಸಿದ. ಅವು ಮೂರನ್ನೂ ಸೇರಿಸಿ ಒಂದು ತಂತಿಯನ್ನು ಕಟ್ಟಿದ. ಆ ತಂತಿಯ ಮೂಲೆಯನ್ನು ಅಗ್ಗಿಷ್ಟಿಕೆಯ ಪಕ್ಕದಲ್ಲಿಟ್ಟ. ಹೊರಗಡೆಯ ಕಡೆಗೆ ಇದ್ದ ಮೂಲೆಯ ಬಳಿಗೆ ಬೆಂಕಿಕಡ್ಡಿಯನ್ನು ತೆಗೆದುಕೊಂಡು ಹೋಗಿ ಇನ್ನೇನು ಹಚ್ಚಬೇಕು......

ಅಷ್ಟರಲ್ಲೇ ಮಿಂಚಿನ ವೇಗದಲ್ಲಿ ಲಹನಾಸಿಂಗನು ಬಂದೂಕನ್ನು ತಿರುಗುಮುರುಗಾಗಿ ಎತ್ತಿಕೊಂಡು ಜೋರಾಗಿ ಲಪಟನ್ ಸಾಹೇಬನ ಮೊಣಕೈಗೆ ಗುರಿಯಿಟ್ಟು ಬಲವಾದ ಒಂದು ಏಟು ಬಿಗಿದ. ಬೆಂಕಿ ಹಚ್ಚಲು ಹೋಗಿದ್ದ ಲಪಟನ್ ಸಾಹೇಬನ ಕೈ ಗುರಿ ತಪ್ಪಿ ಅವನು ಚೇತರಿಸಿಕೊಳ್ಳುವ ಮೊದಲೇ ಇನ್ನೊಂದು ಏಟು ಬಲವಾಗಿ ಅವನ ಹೆಗಲಿನ ಮೇಲೆ ಬಿತ್ತು. "ಓ ಮೈ ಗಾಡ್" ಎಂಬ ಚೀತ್ಕಾರದೊಡನೆ ಲಪಟನ್ ಸಾಹೇಬ ಕೆಳಗೆ ಉರುಳಿದ. ಲಹನಾಸಿಂಗನು ಗೋಡೆಗಳಲ್ಲಿ ಆತ ಹೂತಿದ್ದ ಮೂರೂ ಗುಂಡುಗಳನ್ನು ಒಂದೊಂದಾಗಿ ತೆಗೆದು ಕಂದಕದ ಹೊರಗಡೆಗೆ ಬಿಸಾಡಿದ. ಮತ್ತು ಲಪಟನ್ ಸಾಹೇಬ ನನ್ನು ಅಗ್ಗಿಷ್ಟಿಕೆಯ ಬಳಿಗೆ ದರದರನೆ ಎಳೆದು ಮಲಗಿಸಿ ಅವನ ಜೇಬಿನ ತಲಾಶೆ ಆರಂಭಿಸಿದ. ಮೂರು-ನಾಲ್ಕು ಲಕೋಟೆಗಳು ಮತ್ತು ಒಂದು ಡೈರಿ ಸಿಕ್ಕಿದುವು. ಅವು ಗಳನ್ನು ತೆಗೆದು ತನ್ನ ಜೇಬಿಗೆ ಸೇರಿಸಿಕೊಂಡ.

ಅಷ್ಟರಲ್ಲಿ ಲಪಟನ್ ಸಾಹೇಬನ ಮೂರ್ಛೆ ಕಳೆದು ಪ್ರಜ್ಞೆ ಬಂತು. ಲಹನಾಸಿಂಗ್ ನಕ್ಕು ಹೇಳಿದ: "ಏನು ಲಪಟನ್ ಸಾಹೇಬರೇ, ಹೇಗಿದೆ? ನಿಮ್ಮಿಂದ ನಾನು ಇವೊತ್ತು ಅನೇಕ ವಿಚಾರಗಳನ್ನು ತಿಳಿದುಕೊಂಡೆ. ಸಿಖ್ಖರು ಸಿಗರೇಟ್ ಸೇದುತ್ತಾರೆ ಎಂಬುದನ್ನು ತಿಳಿದೆ. ಜಗಾಧಾರಿ ಜಿಲ್ಲೆಯಲ್ಲಿ ನೀಲಗಾಯಿ ಬೇಟೆ ಸಾಧ್ಯ, ಒಂದೊಂದು ನೀಲಗಾಯಿಯ ಕೊಂಬೂ ಎರಡು ಅಡಿ ನಾಲ್ಕು ಅಂಗುಲದಷ್ಟು ಉದ್ದ ಇರುತ್ತೆ ಎಂದು ತಿಳಿದೆ. ಮುಸಲ್ಮಾನ ಅಡಿಗೆ ಪರಿಚಾರಕರು ದೇವಾಲಯಕ್ಕೆ ಹೋಗಿ ಪೂಜೆ ಮಾಡುತ್ತಾರೆ ಎಂಬುದನ್ನೂ ತಿಳಿದೆ. ಮತ್ತು ಲಪಟನ್ ಸಾಹೇಬರು ಕೊಂಬೆಯೇರಿ ಕೂರುತ್ತಾರೆ ಎಂದೂ ತಿಳಿದೆ. ಅದೆಲ್ಲ ಸರಿ, ಇಷ್ಟು ಒಳ್ಳೆ ಉರ್ದು ಎಲ್ಲಿ ಕಲಿತಿರಿ ಎಂಬುದನ್ನು ಸ್ವಲ್ಪ ಹೇಳಿ. ನಮ್ಮ ಲಪಟನ್ ಸಾಹೇಬರು ಮಾತು ಮಾತಿಗೂ 'ಡ್ಯಾಮ್' ಎಂದು ಸೇರಿಸದೆ ಮಾತೇ ಆಡುತ್ತಿರಲಿಲ್ಲ.

ಲಹನಾ ಅವರ ಶರಾಯಿ ಜೇಬುಗಳ ತಲಾಶೆ ಮಾಡಿರಲಿಲ್ಲ. ಸಾಹೇಬನು ಚಳಿ ಯಿಂದ ಬಚಾವಾಗಲು ಎನ್ನುವಂತೆ ಎರಡೂ ಕೈಗಳನ್ನು ಶರಾಯಿಗೆ ಇಳಿಸಿದನು.

ಲಹನಾಸಿಂಗ್ ಹೇಳುತ್ತಲೇ ಇದ್ದನು: "ತುಂಬಾ ಚಾಲಾಕ್ ಇದ್ದೀರಿ ಸಾಹೇಬರೇ, ಆದರೆ ಒಂದು ಮಾತು ತಿಳಿಯಿರಿ. ಮಾಂಝಾಯ ಲಹನಾ ಸಾಕಷ್ಟು ಸಮಯದಿಂದ ಲಪಟನ್ ಸಾಹೇಬರ ಜೊತೆಗಿದ್ದಾನೆ. ಅವನನ್ನು ಅಷ್ಟು ಸುಲಭವಾಗಿ ಮೋಸಹೋಗಿಸ ಲಾರಿರಿ. ಮೂರು ತಿಂಗಳಾಯಿತು, ಒಬ್ಬ ತುರ್ಕಿ ಮೌಲ್ವಿ ನಮ್ಮ ಊರಿಗೆ ಬಂದಿದ್ದ.

ಹೆಂಗಸರಿಗೆ ಮಕ್ಕಳಾಗಲು ಔಷಧಿ ಕೊಡುತ್ತಿದ್ದ ಮತ್ತು ತಾಯಿತಿಗಳನ್ನು ಹಂಚುತ್ತಿದ್ದ. ಚೌಧರಿಯವರ ತೋಟದ ಮರದ ಕೆಳಗೆ ಕುಳಿತು ಹುಕ್ಕಾ ಸೇದುತ್ತಿದ್ದ ಮತ್ತು ಜರ್ಮ ನರು ತುಂಬಾ ಪಂಡಿತರು ಎಂದು ಹೇಳುತ್ತಿದ್ದ. ವೇದಗಳನ್ನು ಚೆನ್ನಾಗಿ ಓದಿ ವಿಮಾನ ನಡೆಸುವ ವಿದ್ಯೆ ಕಲಿತಿದ್ದಾರೆ; ಗೋಹತ್ಯೆ ಮಾಡುವುದಿಲ್ಲ. ಹಿಂದುಸ್ತಾನಕ್ಕೆ ಅವರು ಬಂದು ಬಿಟ್ಟರೆ ಗೋಹತ್ಯೆ ನಿಲ್ಲಿಸಿಬಿಡುತ್ತಾರೆ ಎಂದೆಲ್ಲ ಹೇಳುತ್ತಿದ್ದ. ಬ್ರಿಟಿಷ್ ಸರ್ಕಾರ ಹೊರಟುಹೋಗುತ್ತದೆ. ಅಂಚೆಕಚೇರಿಯಲ್ಲಿ ಇಟ್ಟಿರುವ ಹಣವೆನ್ನೆಲ್ಲ ತೆಗೆದುಕೊಂಡು ಬಿಡಿ ಎಂದೆಲ್ಲ ವರ್ತಕರನ್ನು ಚತಾಯಿಸುತ್ತಿದ್ದ. ಪೋಸ್ಟ್‌ಮಾಸ್ತರ್ ಪೋಲ್ಲೂರಾಮ್ ಕೂಡ ಹೆದರಿಹೋಗಿದ್ದ. ನಾನೇನು ಮಾಡಿದೆ ಗೊತ್ತೆ? ಆ ಮುಲ್ಲಾನ ಗಡ್ಡ ಬೋಳಿಸಿ ಊರಿನ ಹೊರಗೆ ಓಡಿಸಿ, ಇನ್ನೊಮ್ಮೆ ಊರಿನೊಳಕ್ಕೆ ಕಾಲಿಟ್ಟಿಯೆ ಜೋಕೆ ಎಂದು ಹೇಳಿ ಅವನನ್ನು ಹೊರಗಟ್ಟಿದ್ದೆ......"

ಸಾಹೇಬನ ಜೇಬಿನಿಂದ ಹೊರಕ್ಕೆ ಕಾಣಿಸಿಕೊಂಡ ಪಿಸ್ತೂಲಿನ ಶಬ್ದ ಕೇಳಿಸಿತು. ಪಿಸ್ತೂಲಿನಿಂದ ಬಂದ ಗುಂಡು ಲಹನಾನ ತೊಡೆಗೆ ಹೋಗಿ ನಾಟಿತು. ಇತ್ತ ಲಹನಾ ಹಾರಿಸಿದ ಬಂದೂಕಿನ ಎರಡು ಗುಂಡುಗಳು ಢಮಾರ್ ಢಮಾರ್ ಎಂದು ಸಾಹೇಬನ ಗತಿ ಕಾಣಿಸಿತು. ಶಬ್ದ ಕೇಳಿ ಎಲ್ಲರೂ ಓಡಿ ಬಂದರು.

ಬೋಧಾ ಅಬ್ಬರಿಸಿದ: ಏನಾಯಿತು?"

ಲಹನಾಸಿಂಗ್ "ದಾರಿತಪ್ಪಿ ಒಂದು ನಾಯಿ ಬಂದಿತ್ತು, ಅದರ ಕಥೆ ಮುಗಿಸಿದೆ ಅಷ್ಟೆ" ಎಂದು ಅವನಿಗೆ ಸಂಕ್ಷಿಪ್ತವಾಗಿ ಸಮಾಧಾನ ಹೇಳಿ ಇತರರಿಗೆ ಎಲ್ಲ ಕಥೆಯನ್ನೂ ವಿವರ ವಾಗಿ ಹೇಳಿದ. ಎಲ್ಲರೂ ತಮ್ಮ ತಮ್ಮ ಬಂದೂಕು ಹಿಡಿದು ತಯಾರಾಗಿ ನಿಂತರು. ಲಹನಾ ಒಂದು ಪೇಟದ ಬಟ್ಟೆಯನ್ನು ಎರಡು ತುಂಡು ಮಾಡಿ ಹರಿದು, ತನ್ನ ಗಾಯಕ್ಕೆ ಎರಡೂ ಕಡೆಯಿಂದ ಬಿಗಿಯಾಗಿ ಕಟ್ಟಿದ. ಗುಂಡು ಮಾಂಸಖಂಡವನ್ನು ಹರಿದಿತ್ತು. ಪಟ್ಟಿ ಕಟ್ಟಿದ ಪರಿಣಾಮವಾಗಿ ರಕ್ತ ಹರಿಯುವುದು ನಿಂತುಹೋಯಿತು.

ಇಷ್ಟು ಹೊತ್ತಿಗೆ ಎಪ್ಪತ್ತು ಜನ ಜರ್ಮನರು ಘೋಷಣೆ ಮಾಡುತ್ತಾ ಕಂದಕದ ಒಳಗೆ ನುಗ್ಗಿ ಬಂದರು. ಸಿಖ್ಖರ ಬಂದೂಕುಗಳು ಈಗ ಮೊದಲು ನುಗ್ಗಿ ಬಂದವರ ಕಥೆ ಮುಗಿಸಿದುವು. ಇಷ್ಟರಲ್ಲೇ ಎರಡನೆಯ ಗುಂಪು ನುಗ್ಗಿ ಬಂತು. ಅದನ್ನೂ ಎದುರಿಸಿದರು. ಆದರೆ ಹೀಗೆ ಆಕ್ರಮಣವನ್ನು ಎದುರಿಸಲು ಇದ್ದವರ ಸಂಖ್ಯೆ ಮಾತ್ರ ಕೇವಲ ಎಂಟು. ಲಹನಾಸಿಂಗ್ ನಿಂತು ನಿಂತು ತನ್ನ ಬಂದೂಕನ್ನು ಚಲಾಯಿಸುತ್ತಿದ್ದ. ಅವನು ನಿಂತೇ ಹೆಣಗಾಡುತ್ತಿದ್ದ. ಅವರು ಹೊಟ್ಟೆಯ ಮೇಲೆ ಮಲಗಿ ಹೋರಾಡುತ್ತಿದ್ದರು. ಅವರ ಸಂಖ್ಯೆ ಎಪ್ಪತ್ತು. ಸತ್ತವರನ್ನು ಹೆಗಲಮೇಲೆ ಹಾಕಿಕೊಂಡು ಅವರು ಮುನ್ನುಗ್ಗಿ ಬರು ತ್ತಿದ್ದರು. ಕೆಲವೇ ನಿಮಿಷಗಳಲ್ಲಿ ಅವರು......

ಇದ್ದಕ್ಕಿದ್ದಂತೆಯೆ ಘೋಷಣೆ ಕೇಳಿಬಂತು. "ವಾಹ್ ಗುರೂಜಿ ದೀ ಫತಹ್! ವಾಹ್ ಗುರೂಜೀ ದಾ ಖಾಲ್ಸಾ!" ಈ ಘೋಷಣೆಗಳ ಜೊತೆಗೆ ಜರ್ಮನರ ಬೆನ್ನಿನ ಮೇಲೆ

ಸಿಖ್ಖರ ಗುಂಡೇಟಿನ ಧಾಳಿ ಆರಂಭವಾಯಿತು, ಧಡಾರ್ ಧಡಾರ್ ಎಂದು. ಜರ್ಮನರ ಗತಿ ಎರಡು ಬೀಸುವ ಕಲ್ಲುಗಳ ಮಧ್ಯೆ ಸಿಕ್ಕಿದಂತಾಯಿತು. ಹಿಂದಿನಿಂದ ಸುಬೇದಾರ್ ಹಜಾರಾಸಿಂಗನ ಸೈನಿಕರು ಗುಂಡು ಹಾರಿಸುತ್ತಿದ್ದರು, ಇತ್ತ ಕಂದಕದ ಒಳಗಿನಿಂದ ಲಹನಾಸಿಂಗನ ಸೈನಿಕರು ಭರ್ಚಿಗಳನ್ನು ಮುಂದೆ ಮಾಡಿಕೊಂಡು ಮುನ್ನುಗ್ಗುತ್ತಿದ್ದರು. ಹತ್ತಿರ ಬಂದ ಹಾಗೆ ಹಿಂದಿನವರೂ ಭರ್ಚಿಗಳನ್ನು ತಿವಿಯಲು ಆರಂಭಿಸಿದ್ದರು.

ಮತ್ತೊಮ್ಮೆ ಘೋಷಣೆ ಹಾಕಿದರು: "ಅಕಾಲ್ ಸಿಖ್ಖಾ ದೀ ಫೌಜ್ ಆಯಿ! ವಾಹ್ ಗುರೂಜಿ ದೀ ಫತಹ್! ವಾಹ ಗುರೂಜಿ ದಾ ಖಾಲಸಾ. ಸತ್‌ಸ್ರೀ ಅಕಾಲ ಪುರುಷ್!!"

ಹಗರಣ ಮುಗಿಯಿತು. ಅರವತ್ತಮೂರು ಜನ ಜರ್ಮನರು ಸಾಯುತ್ತಿದ್ದರು ಇಲ್ಲವೆ ನರಳುತ್ತಿದ್ದರು. ಸಿಖ್ಖರ ಪೈಕಿ ಹದಿನೈದು ಜನ ಸತ್ತಿದ್ದರು. ಸುಬೇದಾರನ ಹೆಗಲನ್ನು ಸೀಳಿಕೊಂಡು ಗುಂಡು ಹೋಗಿತ್ತು. ಲಹನಾಸಿಂಗನ ಪಕ್ಕೆಗೆ ಗುಂಡೇಟು ತಗಲಿತ್ತು. ಅವನು ಆ ಗಾಯಕ್ಕೆ ಕಂದಕದ ಮಣ್ಣನ್ನೇ ತೆಗೆದು ಹಚ್ಚಿ ರುಮಾಲಿನ ಬಟ್ಟೆಯನ್ನೇ ಕಮರ್‌ಬಂದಿನ ರೂಪದಲ್ಲಿ ಬಿಗಿದು ಕಟ್ಟಿಕೊಂಡಿದ್ದ. ಅದು ಪ್ರಬಲವಾದ ಗಾಯ ವೆಂಬುದು ಯಾರಿಗೂ ತಿಳಿದಿರಲಿಲ್ಲ.

ಹಗರಣದ ಸಮಯಕ್ಕೆ ಚಂದ್ರನ ಉದಯವಾಗಿತ್ತು. ಸಂಸ್ಕೃತ ಕವಿಗಳು ಯಾವ ಚಂದ್ರನನ್ನು ಕಂಡು ಮಂತ್ರಮುಗ್ಧರಾಗಿ ಅದನ್ನು 'ಕ್ಷಯೀ' ಎಂದು ವರ್ಣಿಸಹೊರ ಟರೋ ಅಂತಹ ಚಂದ್ರ. ಬಾಣಭಟ್ಟನ ಭಾಷೆಯಲ್ಲಿ ವರ್ಣಿಸಬಹುದಾದರೆ "ದಂತ ವೀಣೋಪದೇಶಾಚಾರ್ಯ" ಎನ್ನಬಹುದಾದ ರೀತಿಯಲ್ಲಿ ಗಾಳಿ ಬೀಸುತ್ತಿತ್ತು. ವಜೀರಾಸಿಂಗನು ತಾನು ಹೇಗೆ ತನ್ನ ಬೂಟುಗಳಿಗೆ ಮಣ್ಣು ಮೆತ್ತಿಕೊಂಡು ಭಾರವಾಗು ತ್ತಿದ್ದುದನ್ನು ಲೆಕ್ಕಿಸದೆ ಸುಬೇದಾರ ಹೋಗಿದ್ದ ಕಡೆಗೆ ಓಡಿಹೋಗಿ ಸುದ್ದಿ ಮುಟ್ಟಿಸಿದ ಎಂಬುದನ್ನು ವಿವರಿಸುತ್ತಿದ್ದ. ಸುಬೇದಾರನು ನಡೆದ ಎಲ್ಲ ಕಥೆಯನ್ನೂ ಲಹನಾ ಸಿಂಗ ನಿಂದ ತಿಳಿದು ಅವನ ತೀಕ್ಷ್ಣ ಬುದ್ಧಿಯನ್ನು ಮೆಚ್ಚಿ ಕೊಂಡಾಡುತ್ತಿದ್ದ. "ನೀನೊಬ್ಬ ಇಲ್ಲದೆ ಹೋಗಿದ್ದರೆ ನಾವೆಲ್ಲ ಸಾಯುತ್ತಿದ್ದೆವು" ಎಂದು ಅವನಿಗೆ ಕೃತಜ್ಞತೆಯನ್ನೂ ಸಲ್ಲಿಸುತ್ತಿದ್ದ.

ಇಲ್ಲಿ ನಡೆದ ಹಗರಣದ ಶಬ್ದ ಮೂರು ಮೈಲು ದೂರದಲ್ಲಿದ್ದ ಸೈನಿಕರ ತುಕ್ಕಡಿಗೂ ತಿಳಿದು ಅವರು ಟೆಲಿಫೋನ್ ಮೂಲಕ ವಿವರಗಳನ್ನು ತಿಳಿದುಕೊಂಡಿದ್ದರು. ಅವರು ಕೂಡಲೇ ಒಬ್ಬ ಡಾಕ್ಟರು ಹಾಗೂ ಗಾಯಗೊಂಡವರನ್ನು ಸಾಗಿಸಲು ಬೇಕಾಗುವ ಗಾಡಿಗಳ ಜೊತೆಗೆ ಸುಮಾರು ಅರ್ಧ ಗಂಟೆಯೊಳಗಾಗಿ ಅಲ್ಲಿಗೆ ಬಂದು ತಲಪಿದ್ದರು. ಯುದ್ಧರಂಗದ ಆಸ್ಪತ್ರೆ ಸಮೀಪದಲ್ಲಿಯೆ ಇತ್ತು. ಬೆಳಗಾಗುವ ಹೊತ್ತಿಗೆ ಅವರು ಅಲ್ಲಿಗೆ ತಲಪಬಹುದಿತ್ತು. ಆದುದರಿಂದ ಗಾಯಗೊಂಡವರಿಗೆ ಸಾಮಾನ್ಯ ಪಟ್ಟಿಯನ್ನು ಕಟ್ಟಿ ಅವರನ್ನು ಒಂದು ಗಾಡಿಯಲ್ಲಿ ಮಲಗಿಸಲಾಯಿತು. ಇನ್ನೊಂದರಲ್ಲಿ ಹೆಣಗಳನ್ನು ಇಡಲಾಯಿತು. ಲಹನಾಸಿಂಗನ ಗಾಯಗೊಂಡ ತೊಡೆಗೆ ಪಟ್ಟಿ ಕಟ್ಟಿಸಲು ಸುಬೇದಾರ

ಅಪೇಕ್ಷಿಸಿದ. ಅಷ್ಟೇನೂ ದೊಡ್ಡ ಗಾಯವಲ್ಲ. ಬೆಳಿಗ್ಗೆ ಹೊತ್ತಿಗೆ ನೋಡಿದರಾಯಿತು, ಎಂದು ಹೇಳಿ ಪಟ್ಟಿಕಟ್ಟಿಸಲು ಲಹನಾಸಿಂಗ್ ನಿರಾಕರಿಸಿದ. ಬೋಧಾಸಿಂಗ್ ಜ್ವರದಲ್ಲಿ ಬಡಬಡಿಸುತ್ತಿದ್ದ. ಅವನನ್ನು ಗಾಡಿಯಲ್ಲಿ ಮಲಗಿಸಲಾಯಿತು. ಲಹನಾಸಿಂಗನನ್ನು ಬಿಟ್ಟು ಹೋಗಲು ಸುಬೇದಾರ ಸಿದ್ಧನಿರುವಂತೆ ಕಾಣಲಿಲ್ಲ. ಅದನ್ನು ಗಮನಿಸಿದ ಲಹನಾ ಹೇಳಿದ:

"ನಿಮಗೆ ಬೋಧಾನ ಆಣೆ, ಸುಬೇದಾರನಿಯ ಮೇಲಿನ ಆಣೆ. ಈ ಗಾಡಿಯಲ್ಲೇ ನೀವೂ ಹೊರಟುಬಿಡಿ."

"ನೀನು?"

"ನೀವು ಅಲ್ಲಿಗೆ ಹೋಗಿ ಅನಂತರ ನನಗೆ ಗಾಡಿ ಕಳುಹಿಸಿಬಿಡಿ. ಕಳುಹಿಸದಿದ್ದರೂ ಪರವಾಗಿಲ್ಲ. ಜರ್ಮನರ ಶವಗಳನ್ನು ಸಾಗಿಸಲಂತೂ ಗಾಡಿಗಳು ಬಂದೇ ಬರುತ್ತವೆಯಲ್ಲ. ನನ್ನ ಸ್ಥಿತಿ ಅಷ್ಟು ಕೆಟ್ಟಿಲ್ಲ, ಯೋಚಿಸಬೇಡಿ. ನಾನು ನಿಂತೇ ಮಾತನಾಡುತ್ತಿದ್ದೇನೆ, ನೋಡುತ್ತಿಲ್ಲವೇ? ವಜೀರಾಸಿಂಗ್ ಕೂಡ ನನ್ನ ಜೊತೆಗೇ ಇದ್ದಾನೆ."

"ಸರಿ. ಆದರೆ......"

"ಬೋಧಾ ಗಾಡಿಯಲ್ಲಿ ಮಲಗಿಕೊಂಡ ತಾನೇ? ಸರಿ, ಈಗ ನೀವೂ ಹತ್ತಿಬಿಡಿ. ಸುಬೇದಾರರೇ, ಒಂದು ಮಾತು. ಸುಬೇದಾರಣಿಯವರಿಗೆ ನೀವು ಕಾಗದ ಬರೆದಾಗ, ನನ್ನ ನಮಸ್ಕಾರ ಕೂಡ ಬರೆದುಬಿಡಿ. ಮನೆಗೆ ಹೋದಾಗ ಹೇಳಿಬಿಡಿ, ಅವರು ನನಗೆ ಏನು ಹೇಳಿದ್ದರೋ ಅದರ ಪ್ರಕಾರ ಮಾಡಿದೆ ಎಂದು."

ಗಾಡಿಗಳು ಹೊರಟವು. ಸುಬೇದಾರನು ಗಾಡಿ ಹತ್ತುತ್ತ ಲಹನಾಸಿಂಗನ ಕೈಹಿಡಿದು ಕೃತಜ್ಞತೆಯಿಂದ ಹೇಳಿದ: "ಲಹನಾ, ನೀನು ನನ್ನ ಮತ್ತು ಬೋಧಾನ ಪ್ರಾಣ ಉಳಿಸಿದ್ದೀಯೆ. ಇದನ್ನು ಬರೆಯುವುದೆಲ್ಲಿ ಬಂತು. ಇಬ್ಬರೂ ಒಟ್ಟಿಗೆ ಮನೆಗೆ ಹೋಗೋಣ, ನೀನೇ ಸುಬೇದಾರಣಿಗೆ ಅವಳು ಏನು ಹೇಳಿದ್ದಳು, ನೀನೇನು ಮಾಡಿದೆ ಎಂಬುದನ್ನೆಲ್ಲ ಹೇಳುವಿಯಂತೆ."

"ಈಗ ನೀವು ಗಾಡಿ ಹತ್ತಿ; ನಾನು ಹೇಳಿದ ಹಾಗೆ ಕಾಗದದಲ್ಲೂ ಬರೆದುಬಿಡಿ, ಸಿಕ್ಕಿದಾಗ ಹೇಳಿಯೂ ಬಿಡಿ."

ಗಾಡಿ ಹೊರಟು ಹೋದಮೇಲೆ ಲಹನಾ ಹೋಗಿ ಹೊರಳಿಕೊಂಡ. "ವಜೀರಾ, ಒಂದಿಷ್ಟು ನೀರು ಕುಡಿಸು. ಮತ್ತು ನನ್ನ ಸೊಂಟದ ಬಿಗಿತವನ್ನು ಬಿಚ್ಚಿಬಿಡು. ತುಂಬಾ ಬಿಗಿಯಾಗಿದೆ."

ಸಾವಿಗೆ ಮೊದಲು ನೆನಪುಗಳು ತುಂಬಾ ಸ್ವಚ್ಛವಾಗುತ್ತವೆ. ಹುಟ್ಟಿದಂದಿನಿಂದ ನಡೆದ ಘಟನೆಗಳು ಸ್ಪಷ್ಟವಾಗಿ ಸ್ಮೃತಿಪಟಲದ ಮುಂದೆ ಹಾದು ಬರುತ್ತವೆ. ಒಂದೊಂದು ಚಿತ್ರವೂ ಸ್ಪಷ್ಟವಾಗಿರುತ್ತದೆ. ಉರುಳಿಹೋದ ಸಮಯದ ಧೂಳಿನ ಕವಚ ಅದರ ಮೇಲೆ ಇರುವುದಿಲ್ಲ.

ಲಹನಾಸಿಂಗ್ ಆಗಿನ್ನೂ ಹನ್ನೆರಡು ವರ್ಷ ವಯಸ್ಸಿನ ಹುಡುಗ. ಅಮೃತಸರ ದಲ್ಲಿರುವ ಅವನ ಮಾವನ ಮನೆಗೆ ಬಂದಿದ್ದಾನೆ. ಮೊಸರು ತರಲು ಹೋದಾಗ, ತರಕಾರಿ ತರಲು ಹೋದಾಗ ಮತ್ತು ಹೀಗೆ ಒಂದಲ್ಲ ಒಂದು ಸಣ್ಣ ಸಾಮಾನು ತರಲು ಹೋದಾಗ ಎಂಟು ವರ್ಷದ ಹುಡುಗಿಯೊಬ್ಬಳೂ ಅಲ್ಲಿಗೆ ಬಂದಿರುತ್ತಾಳೆ. ನಿನ್ನ ಮದುವೆ ಗೊತ್ತಾಗಿ ಹೋಯಿತೆ? –ಎಂದು ಅವನು ಕೇಳಿದಾಗ ಅವಳು 'ಧುತ್' ಎಂದು ನಾಚಿಕೆಪಟ್ಟು ಕೊಂಡು ಓಡಿಹೋಗುತ್ತಿರುತ್ತಾಳೆ. ಒಂದು ದಿನ ಅವನು ಎಂದಿನಂತೆ ಅದೇ ಮಾತು ಕೇಳಿದಾಗ ಅವಳು "ಹಾಂ, ಗೊತ್ತಾಗಿ ಹೋಯಿತು. ನಿನ್ನೆ ಗೊತ್ತಾಯಿತು. ಕಾಣಿಸುವು ದಿಲ್ಲವೇ ನಿನಗೆ ಈ ಹೂಗಳಿರುವ ಕೆಂಪು ಬಟ್ಟೆ?" ಈ ಮಾತು ಕೇಳಿ ಹುಡುಗ ಲಹನಾ ಸಿಂಗನಿಗೆ ತುಂಬಾ ದುಃಖವಾಗಿತ್ತು. ಕೋಪ ಬಂದಿತ್ತು. ಏಕೆ ಹೀಗಾಗಿತ್ತು?

"ವಜೀರಾಸಿಂಗ್, ಸ್ವಲ್ಪ ನೀರು ಕುಡಿಸು."

ಘಟನೆ ನಡೆದು ಇಪ್ಪತ್ತೈದು ವರ್ಷಗಳಾಗಿವೆ. ಲಹನಾಸಿಂಗ್ ನಂ. 77 ರೈಫಲ್ಸ್ ಪಡೆಗೆ ಜಮಾದಾರನಾಗಿದ್ದಾನೆ. ಅವನು ಕೆಲಸಕ್ಕೆ ಸೇರುವ ಸಮಯಕ್ಕೆ ಆ ಎಂಟು ವರ್ಷ ವಯಸ್ಸಿನ ಹುಡುಗಿಯ ವಿಚಾರ ಅವನ ಗಮನದಲ್ಲಿರಲಿಲ್ಲ. ಅವಳು ಮತ್ತೆ ಸಿಕ್ಕಿದ್ದಳೋ ಇಲ್ಲವೋ ಅದೂ ನೆನಪಿಲ್ಲ. ಈ ಮಧ್ಯೆ ಏಳು ದಿನಗಳ ರಜೆ ಪಡೆದು ತನ್ನ ಗ್ರಾಮದಲ್ಲಿ ಯಾವುದೋ ಜಮೀನಿನ ವ್ಯವಹಾರಕ್ಕೆ ಸಂಬಂಧಿಸಿದಂತೆ ಊರಿಗೆ ಬಂದಿ ದ್ದಾನೆ. ಹೀಗೆ ಅವನು ಊರಿಗೆ ಬಂದಿದ್ದಾಗ ರೆಜಿಮೆಂಟ್ ಆಫೀಸರ್ ಅವರಿಂದ ಒಂದು ಕಾಗದ ಬರುತ್ತದೆ. ದಂಡು ಹೊರಡಲಿದೆ, ಕೂಡಲೇ ಬಂದು ಸೇರಿಕೊಳ್ಳಬೇಕೆಂಬ ಸೂಚನೆ. ಆ ಕಾಗದದ ಜೊತೆಗೇ ಸುಬೇದಾರ ಹಜಾರಾಸಿಂಗನ ಕಾಗದ ಕೂಡ ಬರುತ್ತದೆ. ನಾನು ನನ್ನ ಮಗ ಬೋಧಾಸಿಂಗ್ ಕೂಡ ಹೊರಡುತ್ತಿದ್ದೇವೆ, ನಮ್ಮ ಊರಿಗೇ ಬಂದು ಬಿಡು, ಎಲ್ಲರೂ ಒಟ್ಟಿಗೆ ಹೋಗೋಣ, ಕೂಡಲೇ ಬಂದು ಬಿಡು ಎಂದು ಅದರಲ್ಲಿ ಬರೆ ದಿತ್ತು. ಸುಬೇದಾರನ ಗ್ರಾಮ ಅವನು ಹಿಂದಿರುಗುವ ದಾರಿಯಲ್ಲಿಯೇ ಇತ್ತು. ಜೊತೆಗೆ ತನ್ನ ಬಗ್ಗೆ ಸುಬೇದಾರನಿಗೆ ತುಂಬಾ ಅಭಿಮಾನ, ಪ್ರೀತಿ. ಇದರಿಂದಾಗಿ ಸುಬೇದಾರನ ಸೂಚನೆಯಂತೆ ಲಹನಾಸಿಂಗ್ ಅಲ್ಲಿಗೆ ಹೋದ.

ಸುಬೇದಾರ ಹಜಾರಾಸಿಂಗ್, ಅವನ ಮಗ ಭೋಧಾ ಸಿಂಗ್ ಇವರ ಜೊತೆಗೂಡಿ ಲಹನಾಸಿಂಗ್ ಹೊರಡುವ ಸಮಯಕ್ಕೆ ಸುಬೇದಾರ ಹೊರಗೆ ಬಂದು, "ನೋಡು ಲಹನಾ, ಸುಬೇದಾರಣಿಗೆ ನಿನ್ನ ಪರಿಚಯ ಇದೆಯಂತೆ. ಕರೆಯುತ್ತಿದ್ದಾಳೆ, ಹೋಗಿ ಮಾತನಾಡಿಕೊಂಡು ಬಾ". ಲಹನಾಸಿಂಗ್ ಒಳಗೆ ಹೋದ. ಸುಬೇದಾರಣಿಗೆ ನನ್ನ ಪರಿಚಯ? ಯಾವಾಗಿನಿಂದಿರಬೇಕು? ರೆಜಿಮೆಂಟಿನ ಕ್ವಾರ್ಟರ್ಸಿಗೆ ಸುಬೇದಾರರು ತಮ್ಮ ಕುಟುಂಬವನ್ನು ಕರೆದುತಂದುದೇ ಇಲ್ಲ! ಒಳಗಿನ ಬಾಗಿಲಿಗೆ ಹೋಗಿ ಹೊರಗಿ ನಿಂದಲೇ ತನ್ನ ನಮಸ್ಕಾರ ಹೇಳಿದ. ಆಶೀರ್ವಾದ ದೊರಕಿತು. ಲಹನಾಸಿಂಗ್ ಮೂಕ ನಾಗಿ ನಿಂತ.

"ನನ್ನ ಪರಿಚಯ ಸಿಕ್ಕಿತೆ?"

"ಇಲ್ಲ."

"ನಿನ್ನ ಮದುವೆ ಗೊತ್ತಾಯಿತೆ? ...ಥುತ್... ನಿನ್ನೆ ಗೊತ್ತಾಯಿತು... ಹೂವಿನ ಈ ಕೆಂಪು ಬಟ್ಟೆ ಕಾಣುವುದಿಲ್ಲವೇ?... ಅಮೃತಸರದಲ್ಲಿ..."

ಹಿಂದಿನ ನೆನಪುಗಳ ಒತ್ತಡದಿಂದಾಗಿ ಮತ್ತೆ ಇಹಲೋಕದ ಪ್ರಜ್ಞೆ ಬಂತು. ಲಹನಾ ಇನ್ನೊಂದು ಪಕ್ಕಕ್ಕೆ ಹೊರಳಿದ. ಪಕ್ಕೆಯ ಗಾಯ ಒದ್ದೆಯಾಗತೊಡಗಿತು.

"ವಜೀರಾ, ನೀರು ಕುಡಿಸು... ಆಕೆ ಹೇಳಿದ್ದಳು."

ಸ್ವಪ್ನ ಮುಂದುವರಿಯುತ್ತಿದೆ. ಸುಬೇದಾರಿಣಿ ಹೇಳುತ್ತಿದ್ದಾಳೆ: "ನೀನು ಬಂದ ಕೂಡಲೇ ನಿನ್ನ ಪರಿಚಯ ನನಗೆ ಸಿಕ್ಕಿತು. ನನ್ನ ಅದೃಷ್ಟ ತುಂಬಾ ಖೋಟಾ. ಆದರೆ ನನ್ನ ಒಂದು ಕೋರಿಕೆಯನ್ನು ನೀನು ಈಡೇರಿಸಬೇಕು. ಸರ್ಕಾರ ಬಹಾದೂರನ ಪದವಿಯನ್ನೇನೋ ಕೊಟ್ಟಿದೆ. ಲಾಯಲಪುರದಲ್ಲಿ ಜಮೀನು ಕೊಟ್ಟಿದ್ದಾರೆ. ಆದರೆ ಇವೊತ್ತು ಸರ್ಕಾರದ ಋಣ ತೀರಿಸುವ ಅವಕಾಶ ಬಂದಿದೆ. ಆದರೆ ಹೆಂಗಳೆಯರ ಒಂದು ತುಕ್ಕಡಿಯನ್ನು ಸಿದ್ಧಗೊಳಿಸಿದ್ದರೆ ಚೆನ್ನಾಗಿತ್ತು. ನಾನೂ ಸುಬೇದಾರನ ಜೊತೆಗೆ ಯುದ್ಧಕ್ಕೆ ಹೊರಟುಬಿಡಬಹುದಾಗಿತ್ತು. ಒಬ್ಬ ಮಗುಗ ಇದ್ದಾನೆ. ಅವನೂ ಸೈನ್ಯಕ್ಕೆ ಸೇರಿ ಒಂದು ವರ್ಷವಷ್ಟೇ ಆಯಿತು. ಅತನ ಹಿಂದೆ ಇನ್ನೂ ನಾಲ್ಕು ಮಕ್ಕಳಾದರು. ಆದರೆ ಒಂದೂ ಉಳಿಯಲಿಲ್ಲ." ಸುಬೇದಾರಿಣಿ ಇಷ್ಟು ಹೇಳಿ ಅಳತೊಡಗಿದಳು. "ಈಗ ಇಬ್ಬರೂ ಹೊರಟು ನಿಂತಿದ್ದಾರೆ. ಇದಕ್ಕೂ ಕೆಟ್ಟ ಅದೃಷ್ಟ ಬೇರೆ ಉಂಟೆ? ನಿನಗೆ ಆ ದಿನ ನೆನಪಿರಬೇಕು. ಟಾಂಗಾವಾಲನ ಕುದುರೆ ಮೊಸರು ಮಾರುವವನ ಅಂಗಡಿ ಎದುರು ರೊಚ್ಚಿಗೆದ್ದು ನನ್ನ ಮೇಲೆ ಎರಗಿ ಬಂದಾಗ ನೀನು ನನ್ನ ಪ್ರಾಣ ಉಳಿಸಿದ್ದೆ. ಕುದುರೆಯ ಕಾಲುಗಳ ಮಧ್ಯೆ ನುಗ್ಗಿ ಬಂದು ನನ್ನನ್ನು ಮಿಂಚಿನ ವೇಗದಲ್ಲಿ ಎತ್ತಿ ಅಂಗಡಿಯ ಮುಂದಿನ ಹಲಗೆಯ ಮೇಲೆ ನಿಲ್ಲಿಸುವ ಸಾಹಸ ಮಾಡಿದ್ದೆ. ಅದು ಇನ್ನೂ ನನಗೆ ಚೆನ್ನಾಗಿ ಜ್ಞಾಪಕದಲ್ಲಿದೆ. ಅದರಂತೆಯೆ ನೀನು ಇವರಿಬ್ಬರನ್ನೂ ಉಳಿಸಬೇಕು. ಇದು ನಾನು ನಿನ್ನಲ್ಲಿ ಬೇಡುವ ಭಿಕ್ಷೆಯೆಂದು ತಿಳಿ. ಅಂಗಲಾಚಿ ನಿನ್ನನ್ನು ಬೇಡುತ್ತೇನೆ."

ಅಳುತ್ತಲೇ ಸರ್ದಾರಿಣಿ ಒಳ ಅಂಗಳಕ್ಕೆ ಹೊರಟು ಹೋಗಿದ್ದಳು. ಲಹನಾ ಕೂಡ ತನ್ನ ಕಣ್ಣನ್ನು ಒರೆಸಿಕೊಂಡು ಹೊರಗೆ ಬಂದಿದ್ದ.

"ವಜೀರಾ ಸಿಂಗ್ ಇನ್ನಷ್ಟು ನೀರು ಕುಡಿಸು... ಅವಳು ಪಾಪ. ಕೇಳಿದ್ದಳು."

ಲಹನಾನ ತಲೆಯನ್ನು ತನ್ನ ತೊಡೆಯ ಮೇಲೆ ಇಟ್ಟುಕೊಂಡು ವಜೀರಾಸಿಂಗ್ ಕುಳಿತಿದ್ದ. ಅವನು ಕೇಳಿದಾಗ ಒಂದೆರಡು ಗುಟುಕು ನೀರು ಕುಡಿಸುತ್ತಾನೆ. ಅರ್ಧ ಘಂಟೆ ಸುಮ್ಮನಾಗಿದ್ದ ಲಹನಾ ಮತ್ತೆ ಹೇಳಿದ:

"ಯಾರು? ಕೀರತ್ ಸಿಂಗ್?"

ವಜೀರಾ ಸ್ವಲ್ಪ ಯೋಚಿಸಿ ಹೇಳಿದ: "ಹೌದು."

"ತಮ್ಮಾ, ನನ್ನನ್ನು ಸ್ವಲ್ಪ ನೆಟ್ಟಗೆ ಮಾಡು. ನನ್ನ ತಲೆಯನ್ನು ಸ್ವಲ್ಪ ಹೀಗೆ ಇರಿಸಿಕೋ."

ವಜೀರಾಸಿಂಗ್ ಹಾಗೆಯೇ ಮಾಡಿದ.

"ಹಾಂ. ಈಗ ಸರಿ ಇದೆ. ಸ್ವಲ್ಪ ನೀರು ಕುಡಿಸಿಬಿಡು. ಸರಿ. ಈ ಸಲ ತೋಟದಲ್ಲಿ ಮಾವಿನ ಫಸಲು ಚೆನ್ನಾಗಿ ಬರುತ್ತದೆ. ಚಿಕ್ಕಪ್ಪನ ಜೊತೆಗೆ ಕುಳಿತು ಹೊಟ್ಟೆತುಂಬಾ ಮಾವಿನ ಹಣ್ಣು ತಿನ್ನುವಿಯಂತೆ. ಯಾವ ತಿಂಗಳಲ್ಲಿ ಅವನ ಜನ್ಮ ಆಯಿತೊ ಅದೇ ತಿಂಗಳಲ್ಲಿ ನಾನು ಮಾವಿನ ಗಿಡಗಳನ್ನು ನೆಟ್ಟಿದ್ದೆ.

ವಜೀರಾಸಿಂಗನ ಕಣ್ಣಿನಿಂದ ನೀರು ಹರಿಯುತ್ತಿತ್ತು.

ಕೆಲವು ದಿನಗಳ ನಂತರ ಜನ ಪತ್ರಿಕೆಗಳಲ್ಲಿ ಓದಿದರು:

ಫ್ರಾನ್ಸ್ ಮತ್ತು ಬೆಲ್ಜಿಯಂ... 68ನೆಯ ಸೂಚನೆ. ಮೈದಾನದಲ್ಲಿ ಗಾಯಗೊಂಡು ಸತ್ತ... ನಂ. 77 ಸಿಖ್ ರೈಫಲ್ಸ್‌ನ ಜಮಾದಾರ್ ಲಹನಾಸಿಂಗ್.

# ಪ್ರೇತ ವಸ್ತ್ರ

ಗುಡಿಸಲಿನ ಮುಂದೆ ತಂದೆ ಮಗ ಇಬ್ಬರೂ ಆರಿಹೋದ ಅಗ್ಗಿಷ್ಟಿಕೆಯ ಮುಂದೆ ಮೌನವಾಗಿ ಕುಳಿತಿದ್ದರು. ಒಳಗೆ ಮಗನ ಎಳೆವಯಸ್ಸಿನ ಹೆಂಡತಿ ಬುಧಿಯಾ ಪ್ರಸವ ವೇದನೆಯಿಂದಾಗಿ ಮಿಲಿಮಿಲಿ ಒದ್ದಾಡುತ್ತಿದ್ದಳು. ಒಮ್ಮೊಮ್ಮೆ ಅವಳ ಕಂಠದಿಂದ ಬರುತ್ತಿದ್ದ ಆರ್ತನಾದ ಎಷ್ಟು ಕರುಣಾಜನಕ ಕೂಗಾಗಿತ್ತೆಂದರೆ ಅದನ್ನು ಕೇಳಿ ತಂದೆ ಮಗ ಇಬ್ಬರೂ ತಮ್ಮ ಗುಂಡಿಗೆಯನ್ನು ಬಿಗಿಹಿಡಿದುಕೊಳ್ಳುತ್ತಿದ್ದರು. ಚಳಿಗಾಲದ ರಾತ್ರಿ, ಪ್ರಕೃತಿ ನೀರವತೆಯಲ್ಲಿ ಮುಳುಗಿತ್ತು. ಇಡೀ ಗ್ರಾಮದ ಮೇಲೆ ಅಂಧಕಾರ ಕವಿದಿತ್ತು.

ಮೌನವನ್ನೊಡೆದು ಘೀಸು ಹೇಳಿದ: "ನೋಡಿದರೆ, ಬದುಕುವುದಿಲ್ಲ ಎಂದು ಕಾಣಿಸುತ್ತೆ. ಇಡೀ ದಿನ ಕಳೆದುಹೋಯಿತು. ಹೋಗು, ಒಳಗೆ ಹೋಗಿ ನೋಡು."

ಮಾಧವ ಕೋಪದಿಂದ ಹೇಳಿದ: "ಸಾಯುವುದೇ ಖಂಡಿತವಾದರೆ ಬೇಗ ಸಾಯುವುದಿಲ್ಲವೇಕೆ? ನಾನು ಹೋಗಿ ನೋಡಿ ಮಾಡುವುದೇನಿದೆ?"

"ನೀ ಕೂಡ ತುಂಬಾ ಗಟ್ಟಿ ಮನಸ್ಸಿನವನು ಕಣೋ. ಒಂದು ವರ್ಷದಿಂದ ಅವಳ ಜೊತೆ ಸುಖವಾಗಿ ಬದುಕಿ. ಈಗ ಅವಳ ವಿಷಯದಲ್ಲೇ ಇಷ್ಟು ಅನಾದರಿಕೆ ಮಾಡ್ತಿ."

"ಅವಳ ಆ ನೋವು, ಆ ಕೈಕಾಲು ಬಡಿದಾಟ– ನಾನು ನೋಡಲಾರೆ."

ಮೋಚಿಗಳ ಪರಿವಾರ, ಇಡೀ ಗ್ರಾಮದಲ್ಲಿ ನಿಂದೆಗೆ ಒಳಗಾಗಿದ್ದ ಜನ. ಘೀಸು ಒಂದು ದಿನ ಕೆಲಸ ಮಾಡಿದನೆಂದರೆ ಮೂರು ದಿನ ಆರಾಮು. ಮಾಧವ ಎಷ್ಟು ದುರ್ಬಲನಾಗಿದ್ದನೆಂದರೆ, ಅರ್ಧ ಗಂಟೆ ಕೆಲಸ ಮಾಡಿದರೆ ಸಾಕು ಒಂದು ಗಂಟೆ ಚಿಲಮು ಹಿಡಿದು ಹೊಗೆ ಬಿಡುತ್ತಾ ಕುಳಿತಿರುತ್ತಿದ್ದ. ಆದುದರಿಂದಲೇ ಅವನಿಗೆ ಎಲ್ಲೂ ಕೂಲಿ ಕೆಲಸ ಸಿಗುವುದೇ ಕಷ್ಟವಾಗಿತ್ತು. ಮನೆಯಲ್ಲಿ ಒಂದು ಹಿಡಿಯಷ್ಟು ಆಹಾರಧಾನ್ಯ ಇದ್ದರೂ ಸಾಕು. ಅವನು ಕೆಲಸದ ಯೋಚನೆ ಮಾಡಿದರೆ ಅವನಾಣೆ. ಮನೆಯಲ್ಲಿ ಏನೂ ಇಲ್ಲ ಅನಿಸಿದಾಗ ಘೀಸು ಯಾವುದೋ ಮರ ಹತ್ತಿ ಒಂದಿಷ್ಟು ಸೌದೆ ತರುತ್ತಾನೆ, ಅದನ್ನು ಮಾಧವ ಪೇಟೆಗೆ ತೆಗೆದುಕೊಂಡು ಹೋಗಿ ಮಾರಿಕೊಂಡು ಬರುತ್ತಾನೆ. ಎಲ್ಲಿಯ ವರೆಗೆ ಆ ನಾಲ್ಕು ಕಾಸು ಕೈಯಲ್ಲಿರುತ್ತವೆಯೋ ಅಲ್ಲಿಯ ವರೆಗೆ ಅವರು ಅಲ್ಲಿ–ಇಲ್ಲಿ ಹಾಯಾಗಿ ಅಲೆಯುತ್ತಿರುತ್ತಾರೆ. ಮತ್ತೆ ಹೊಟ್ಟೆಯ ಪಾಡಿನ ಯೋಚನೆ ಬಂದಾಗ ಒಂದಿಷ್ಟು ಸೌದೆ ಮಾರಿ ನಾಲ್ಕು ಕಾಸು ತರುತ್ತಾರೆ. ಅಥವಾ ಮಜೂರಿಯ ಕೆಲಸ ಹುಡುಕಿಕೊಂಡು ಹೋಗುತ್ತಾರೆ. ಗ್ರಾಮದಲ್ಲಿ ಕೂಲಿಗೇನೂ ಕೊರತೆ ಇರಲಿಲ್ಲ. ಒಕ್ಕಲು ರೈತರಿದ್ದ ಗ್ರಾಮ: ಮೈಮುರಿದು ಕೆಲಸ ಮಾಡುವವರಿಗೆ ಎಷ್ಟು ಕೆಲಸವಾದರೂ ಸಿಗುತ್ತಿತ್ತು. ಆದರೆ ಇವರಿಬ್ಬರೂ ಸೇರಿ ಒಬ್ಬ ಮಾಡುವಷ್ಟು ಮಾಡಿದರೂ ಸಾಕೆನಿಸುವಂತಹ ಅಸಹಾಯಕ ಪರಿಸ್ಥಿತಿ ಬಂದಾಗ

ಮಾತ್ರ ಅವರನ್ನು ಜನ ಕೂಲಿ ಕೆಲಸಕ್ಕೆ ಕರೆಯುತ್ತಿದ್ದರು. ಇಬ್ಬರೂ ಸಾಧುಗಳಾಗಿದ್ದರೆ ಸ್ವಭಾವತಃ ಸಂತೋಷವಾಗಿ ಹಾಯಾಗಿ ಇದ್ದುಬಿಡುತ್ತಿದ್ದರು. ಅದಕ್ಕಾಗಿ ಅವರು ಯಾವುದೇ ನಿಯಮ ಪಾಲಿಸುವ ಅಥವಾ ಸಂಯಮ ಅಭ್ಯಾಸ ಮಾಡುವ ಅಗತ್ಯವೇ ಬರುತ್ತಿರಲಿಲ್ಲ. ಅವರಿಬ್ಬರ ಜೀವನವೂ ವಿಚಿತ್ರ ಗತಿಯಲ್ಲಿ ಸಾಗುತ್ತಿತ್ತು. ಮನೆಯಲ್ಲಿ ಇದ್ದ ನಾಲ್ಕೈದು ಮಡಕೆಗಳು ಬಿಟ್ಟರೆ ಬೇರೆ ಆಸ್ತಿಯೇ ಇರಲಿಲ್ಲ. ತಮ್ಮ ನಗ್ನತೆಯನ್ನು ಹರಕಲು ಬಟ್ಟೆಯಿಂದ ಮುಚ್ಚಿಕೊಂಡು ಬಾಳು ಸಾಗಿಸುತ್ತಿದ್ದರು. ಸಂಸಾರದ ಚಿಂತೆಗಳಿಂದ ಸಂಪೂರ್ಣ ಮುಕ್ತರಾಗಿದ್ದರು. ಊರೆಲ್ಲ ಸಾಲ ಮಾಡಿಕೊಂಡು ಎಲ್ಲರ ಹತ್ತಿರ ಬೈಯಿಸಿಕೊಳ್ಳಲೂ ಸಿದ್ಧ, ಏಟು ತಿನ್ನಲೂ ಸಿದ್ಧ – ಅದರ ಚಿಂತೆಯೇ ಅವರಿಗೆ ಇಲ್ಲ. ಕನಿಕರಗೊಂಡು ಕೊಟ್ಟ ಹಣ ವಾಪಸ್ಸು ಬರುವುದಿಲ್ಲವೆಂಬುದು ಜನಕ್ಕೆ ಗೊತ್ತಾಗಿದ್ದರೂ ಅಷ್ಟಿಷ್ಟು ಸಾಲ ಕೊಟ್ಟುಬಿಡುತ್ತಿದ್ದರು. ಆಲೂಗಡ್ಡೆ ಮತ್ತು ಬಟಾಟೆ ಫಸಲಿನ ಕಾಲದಲ್ಲಿ ಅವರು ಅವರಿವರ ಹೊಲಕ್ಕೆ ಹೋಗಿ ಒಂದಿಷ್ಟು ಫಸಲನ್ನೂ ಕಿತ್ತು ತಂದು ಅದನ್ನು ಹುರಿದು ತಿನ್ನುವರು. ಇಲ್ಲವೆ ನಾಲ್ಕೈದು ಕಬ್ಬಿನ ಜಲ್ಲೆಗಳನ್ನು ಕಿತ್ತು ತಂದು ರಾತ್ರಿ ಅವುಗಳ ರಸ ಹೀರಿ ಬಿದ್ದುಕೊಳ್ಳುವರು. ಇಂತಹ ಅನಿಶ್ಚಿತ ಸಂಪಾದನೆಯನ್ನೇ ಆಶ್ರಯಿಸಿ ಅರವತ್ತು ವರ್ಷಗಳ ಆಯುಸ್ಸನ್ನು ಘೀಸು ಕಳೆದಿದ್ದ. ಅವನ ಮಗ ಮಾಧವ ಕೂಡ ತಂದೆಯ ಸುಪುತ್ರನಂತೆ ಅವನು ಹಾಕಿದ ಹೆಜ್ಜೆಯನ್ನೇ ಅನುಸರಿಸಿ ಮುನ್ನಡೆದಿದ್ದ. ಮತ್ತು ಹಾಗೆ ಮುನ್ನಡೆದು ತಂದೆಯ ಹೆಸರನ್ನು ಇನ್ನಷ್ಟು ಬೆಳಗಿಸಲು ಹೊರಟಿದ್ದ. ಈಗಲೂ ಅಷ್ಟೆ. ಅವರಿಬ್ಬರೂ ಅಗ್ಗಿಷ್ಟಿಕೆಯ ಮುಂದೆ ಕುಳಿತು ಆಲೂಗಡ್ಡೆ ಹುರಿದು ತಿನ್ನುತ್ತಿದ್ದರು. ಅದನ್ನು ಯಾರದೋ ಹೊಲದಿಂದ ಕದ್ದು ತಂದಿದ್ದರು. ಘೀಸುವಿನ ಹೆಂಡತಿ ಸತ್ತಂತೂ ಹಲವು ವರ್ಷಗಳಾಗಿ ಹೋಗಿದ್ದುವು. ಮಾಧವನ ಮದುವೆ ಹೋದ ವರ್ಷವಷ್ಟೇ ಆಗಿತ್ತು. ಆ ಹೆಂಗಸು ಬಂದ ಲಾಗಾಯ್ತು ಅವರ ಜೀವನದಲ್ಲಿ ಒಂದಿಷ್ಟು ವ್ಯವಸ್ಥೆಯನ್ನು ತರಲು ಪ್ರಯತ್ನಪಡುತ್ತಿದ್ದಳು. ಅವರಿವರ ಮನೆಯಲ್ಲಿ ಒಂದಿಷ್ಟು ಹಿಟ್ಟು ಬೀಸಿಯೋ, ಬೇರೆ ಕೂಲಿನಾಲಿ ಮಾಡಿಯೋ ಹೊತ್ತು ಹೊತ್ತಿಗೆ ಬೇಕಾಗುವಷ್ಟು ಹಿಟ್ಟನ್ನಾದರೂ ಸಂಪಾದಿಸಿ ತರುತ್ತಿದ್ದು ಇಬ್ಬರು ಸೋಮಾರಿಗಳ ಹೊಟ್ಟೆ ತುಂಬುತ್ತಿದ್ದಳು. ಅವಳು ಬಂದಾಗಿನಿಂದ ಅವರು ಇನ್ನಷ್ಟು ಆಲಸಿಗಳಾಗಿ ಹಾಯಾಗಿರಲು ತೊಡಗಿದ್ದರು. ಅಷ್ಟೇ ಅಲ್ಲ. ಒಂದಿಷ್ಟು ಜಬರ್ದಸ್ತು ಮಾಡಲೂ ತೊಡಗಿದ್ದರು. ಯಾರಾದರೂ ಕೂಲಿ ಕೆಲಸಕ್ಕೆ ಕರೆದರೆ ಅನಾದರಣೆಯಿಂದ ಉತ್ತರ ಕೊಡುತ್ತಾ ಒಂದಕ್ಕೆರಡು ಕೂಲಿ ಕೇಳುತ್ತಿದ್ದರು. ಅವರ ಈ ಸ್ಥಿತಿಗೆ ಕಾರಣವಾಗಿರುವ ಆ ಹೆಣ್ಣು ಜೀವವೇ ಇಂದು ಪ್ರಸವವೇದನೆಯಿಂದಾಗಿ ಸಾಯುತ್ತಾ ಬಿದ್ದಿರುವಾಗ, ಪ್ರಾಯಶಃ ಅವರಿಬ್ಬರೂ "ಸದ್ಯ ಸತ್ತುಹೋದರೆ ಸಾಕು, ಹಾಯಾಗಿರುತ್ತೇವೆ" ಎಂದು ಅವಳ ಸಾವಿನ ನಿರೀಕ್ಷೆಯಲ್ಲಿಯೇ ಇರುವಂತಿದೆ.

ಘೀಸು ಅಗ್ಗಿಷ್ಟಿಕೆಯಿಂದ ಆಲೂಗೆಡ್ಡೆಯನ್ನು ತೆಗೆದು ಸುಲಿಯುತ್ತಾ ಹೇಳಿದ:

"ಒಳಗೆ ಹೋಗಿ ಒಂದಿಷ್ಟು ನೋಡು, ಅವಳು ಏನು ಸ್ಥಿತಿಯಲ್ಲಿದ್ದಾಳೋ ಏನೋ! ಸತ್ತು ಪಿಶಾಚಿಯಾಗಿರಬೇಕು! ಭೂತ ಓಡಿಸಲೂ ಇಲ್ಲಿ ಒಂದು ರೂಪಾಯಿ ಕೊಡಬೇಕು."

ಅವನಿಗೋ ತಾನು ಕೋಠಡಿಯೊಳಕ್ಕೆ ಹೋದರೆ ಆಲೂಗಡ್ಡೆಯ ಬಹುಪಾಲನ್ನು ಅಪ್ಪ ತಿಂದು ಮುಗಿಸಿರುತ್ತಾನೆಂಬ ಹೆದರಿಕೆ. "ನನಗೇಕೋ ಹೆದರಿಕೆಯಾಗುತ್ತದೆ". ಎಂದು ಸುಳ್ಳು ನೆಪ ಹಾಕುತ್ತಾನೆ.

"ಹೆದರಿಕೆ ಯಾಕೋ, ನಾನಿಲ್ಲೇ ಕೂತಿದ್ದೀನಿ."

"ನೀನೇ ಹೋಗಿ ನೋಡು."

"ನನ್ನ ಹೆಂಡತಿ ಸಾಯುವಾಗ ನಾನು ಮೂರು ದಿನ ಅವಳನ್ನು ಬಿಟ್ಟು ಅಲ್ಲಾಡಿರಲಿಲ್ಲ. ನಾನು ಹೋದರೆ ಅವಳು ನಾಚಿಕೆಪಟ್ಟುಕೊಳ್ಳುವುದಿಲ್ಲವೇನು? ನಾನು ಯಾವತ್ತೂ ಕಣ್ಣೆತ್ತಿ ಕೂಡ ಅವಳ ಮುಖ ನೋಡಿಲ್ಲ. ಇವೊತ್ತು ಅವಳು ಬೆತ್ತಲೆ ಬಿದ್ದಿರುವುದನ್ನು ನೋಡಲೆ? ಅವಳಿಗೆ ದೇಹದ ಪ್ರಜ್ಞೆ ಕೂಡ ಇಲ್ಲದಿರಬಹುದು...ನನ್ನನ್ನು ನೋಡಿದರೆ ಹಾಯಾಗಿ ಕೈಕಾಲು ಝಾಡಿಸುವುದೂ ಅವಳಿಗೆ ಕಷ್ಟವಾಗಬಹುದು."

"ಹೆರಿಗೆಯೇನಾದರೂ ಆಗಿಹೋದರೆ ಏನು ಮಾಡುವುದು? "ಶುಂಠಿ, ಬೆಲ್ಲ, ಎಣ್ಣೆ – ಇದೊಂದೂ ಮನೇಲಿ ಇಲ್ಲ."

"ಎಲ್ಲ ಬರುತ್ತೆ, ಯೋಚಿಸಬೇಡ. ಭಗವಂತ ಕೊಡುವುದಾದರೆ ಒಂದು ಕಾಸೂ ಬಿಚ್ಚದ ಜನರೇ ಕರೆದು ನಮಗೆ ರೂಪಾಯಿ ಕೊಟ್ಟಾರು. ನನಗೆ ಒಟ್ಟು ಒಂಭತ್ತು ಮಕ್ಕಳಾದರು. ಯಾವಾಗಲೂ ಮನೆಯಲ್ಲಿ ಏನೂ ಇರ್ತಿರ್ಲಿಲ್ಲ. ಆದರೂ ಭಗವಂತ ಹೇಗೋ ಪಾರು ಮಾಡಿಬಿಡುತ್ತಿದ್ದ."

ಸಮಾಜದಲ್ಲಿ ಹಗಲೂ ರಾತ್ರಿ ಕಷ್ಟಪಟ್ಟು ದುಡಿಯುವ ಜನರ ಸ್ಥಿತಿ ಇವರಿಗಿಂತ ಅಷ್ಟೇನೂ ಚೆನ್ನಾಗಿರಲಿಲ್ಲ. ರೈತರ ಸುಲಿಗೆಯಲ್ಲಿ ನಿರತರಾಗಿದ್ದವರ ಸ್ಥಿತಿ ಮಾತ್ರ ಎಷ್ಟೊ ಚೆನ್ನಾಗಿತ್ತು; ರೈತರ ದೌರ್ಬಲ್ಯಗಳ ಪೂರ್ಣ ಫಾಯಿದೆ ಪಡೆಯುವುದು ಹೇಗೆ ಎಂಬುದು ಅವರಿಗೆ ಗೊತ್ತಿತ್ತು ಎಂತಲೇ ಅವರು ಅಷ್ಟು ಚೆನ್ನಾಗಿದ್ದರು. ಇದನ್ನು ಕಂಡು ಜೀವನದಲ್ಲಿ ಇಂತಹ ಪ್ರವೃತ್ತಿ ಬೆಳೆದಿದ್ದರೆ ಆಶ್ಚರ್ಯವೇನೂ ಇಲ್ಲ. ಒಂದು ದೃಷ್ಟಿಯಿಂದ ಘೀಸು ವೃಥಾ ದುಡಿಯುತ್ತಿದ್ದ ರೈತರಿಗಿಂತ ಎಷ್ಟೋ ಬುದ್ಧಿವಂತನಾಗಿದ್ದನೆಂದೇ ಹೇಳಬಹುದು: ಬುದ್ಧಿ ಇಲ್ಲದ ರೈತರ ಗುಂಪಿಗೆ ಸೇರುವ ಬದಲು ಆರಾಮವಾಗಿ ಕುಳಿತು ತಿನ್ನುವ ಧೂರ್ತ ವರ್ಗಕ್ಕೆ ಅವನು ಸೇರಿದವನಾಗಿದ್ದ. ಆದರೆ ಒಂದು ಮಾತು, ಕುಳಿತು ತಿನ್ನುವ ವರ್ಗದ ಜನ ಅನುಸರಿಸುವ ಜೀವನದ ನೀತಿ ನಿಯಮಗಳನ್ನು ಪಾಲಿಸುವ ಶಕ್ತಿ ಮಾತ್ರ ಅವನಿಗೆ ಇರಲಿಲ್ಲ. ಆದುದರಿಂದಲೇ ಅವನ ಆ ವರ್ಗಕ್ಕೆ ಸೇರಿದ ಉಳಿದ ಜನ ಗ್ರಾಮದ ಮುಖ್ಯಸ್ಥರು ಹಾಗೂ ಹಿರಿಯರು ಎನಿಸಿಕೊಂಡಿದ್ದರೆ, ಇವನು ಈ ಸ್ಥಿತಿಯಲ್ಲಿದ್ದ. ಮತ್ತು, ಇಡೀ ಗ್ರಾಮ ಇವನ ಕಡೆಗೇ ಬೊಟ್ಟು ಮಾಡಿ ಇವನೊಬ್ಬನೇ ಅಪರಾಧಿಯೆಂಬಂತೆ ತೋರಿಸುತ್ತಿತ್ತು. ಆದರೂ ಅವನಿಗೊಂದು ಸಮಾಧಾನ. ಅವನು

ಬಡತನದಲ್ಲಿದ್ದ ನಿಜ. ಆದರೆ ರೈತರಂತೆ ಅವನು ಮೈಮುರಿದು ದುಡಿಯಬೇಕಾಗಿರಲಿಲ್ಲ. ಅವನ ಸಾಧು ಹಾಗೂ ಸರಳ ಸ್ವಭಾವದಿಂದ ಯಾರೂ ಲಾಭ ಪಡೆಯುವಂತಿರಲಿಲ್ಲ. ಅವನ ಸುಲಿಗೆ ಸಾಧ್ಯವಿರಲಿಲ್ಲ.

ಇಬ್ಬರೂ ಆಲೂಗೆಡ್ಡೆಯನ್ನು ಅಗ್ಗಿಷ್ಟಿಕೆಯಿಂದ ತೆಗೆಯುತ್ತಾ ಬಿಸಿ ಬಿಸಿಯಾಗಿಯೇ ತಿನ್ನುತ್ತಿದ್ದರು. ನಿನ್ನೆಯಿಂದ ಏನನ್ನೂ ತಿಂದಿರಲಿಲ್ಲ. ಅವುಗಳನ್ನು ಆರಿಸಿ ತಿನ್ನುವ ತಾಳ್ಮೆ ಕೂಡ ಇರಲಿಲ್ಲ. ಇಬ್ಬರೂ ಹಲವು ಬಾರಿ ಬಾಯಿ ಆಡಿಸಿದರು. ಸುಲಿದಾಗ ಹೊರಗಿನ ಭಾಗ ಅಷ್ಟು ಬಿಸಿಯಾಗಿ ಕಾಣುತ್ತಿರಲಿಲ್ಲ. ಆದರೆ ಬಾಯಲ್ಲಿ ಹಾಕಿ ಅಗಿದಾಗ ಹಲ್ಲುಗಳ ಮಧ್ಯೆ ಸಿಗುತ್ತಿದ್ದ ತಿರುಳು ತುಂಬಾ ಬಿಸಿಯಾಗಿರುತ್ತಿದ್ದು ಬಾಯಿ ಗಂಟಲು ಎಲ್ಲ ಸುಟ್ಟು ಹೋಗುತ್ತಿತ್ತು ಮತ್ತು ಅದರ ಬಿಸಿ ನೆತ್ತಿಗೂ ಮುಟ್ಟುತ್ತಿತ್ತು. ಆ ಕೆಂಡವನ್ನು ಬಾಯಿಯಲ್ಲಿ ಇಟ್ಟುಕೊಂಡಿರುವುದಕ್ಕಿಂತ ಹೇಗಾದರೂ ಹೊಟ್ಟೆಯೊಳಕ್ಕೆ ದಾಟಿಸಿದರೆ ಸಾಕು ಎನ್ನುವ ಸ್ಥಿತಿ ಇತ್ತು. ಅಲ್ಲಿ ಅದು ತಣ್ಣಗಾಗುವುದಕ್ಕೆ ಬೇಕಾದ ಹಲವು ಸಾಮಗ್ರಿಗಳಿವೆ. ಎಂದೇ ಅವರು ಆ ಆಲೂಗಡ್ಡೆಗಳನ್ನು ಅಗೆದು ತಿನ್ನುವ ಬದಲು ಬೇಗ ಬೇಗ ನುಂಗಿಕೊಳ್ಳುತ್ತಿದ್ದರು. ಅವರ ಈ ಪ್ರಯತ್ನದಿಂದಾಗಿ ಕಣ್ಣುಗಳಲ್ಲಿ ನೀರು ಬರುತ್ತಿತ್ತು.

ಘೀಸುವಿಗೆ ಆ ಸಮಯದಲ್ಲಿ ಠಾಕೂರನ ಮದುವೆ ಜ್ಞಾಪಕಕ್ಕೆ ಬಂತು. ಇಪ್ಪತ್ತು ವರ್ಷಗಳ ಹಿಂದೆ ಅವನು ಆ ಮದುವೆಗೆ ಹೋಗಿದ್ದ. ಆಗ ಅವನಿಗೆ ದೊರೆತ ಔತಣದ ನೆನಪು ಅವನ ಜೀವಮಾನದಲ್ಲಿಯೇ ಅಚ್ಚಳಿಯದೆ ಉಳಿಯುವಂತಹ ನೆನಪು. ಈಗಲೂ ಅದು ಹಚ್ಚಹಸುರಾಗಿಯೇ ಇದೆ ಎಂದೇ ಅವನು ಹೇಳಿದ: "ಆ ಮಜಾ ಮರೆಯಲು ಸಾಧ್ಯವೇ ? ಆದಿನ ಸಿಕ್ಕಿದ್ದೇ ಮತ್ತೆ ಅಂಥ ಹೊಟ್ಟೆ ತುಂಬುವಂತಹ ಊಟ ನನಗೆ ಸಿಕ್ಕಿಲ್ಲ. ಹುಡುಗಿಯ ಕಡೆಯವರು ಆದಿನ ಹೊಟ್ಟೆ ತುಂಬಾ ಎಲ್ಲರಿಗೂ ಪೂರಿ ಹಾಕಿಸಿದ್ದರು. ದೊಡ್ಡವರು ಚಿಕ್ಕವರು ಎನ್ನದೇ ಎಲ್ಲರೂ ತಿಂದು ತೇಗಿದರು. ಅದೂ ಅಪ್ಪಟ ತುಪ್ಪದಿಂದ ತಯಾರಿಸಿದ ಪೂರಿಗಳು. ರಾಯತಾ, ಮೂರು ಬಗೆ ಪಲ್ಯಗಳು, ಒಂದು ಗೊಜ್ಜು, ಮೊಸರು, ಚಟನಿ, ಮಿಠಾಯಿ. ಆ ರುಚಿಯನ್ನು ಈಗಲೂ ನೆನಸಿಕೊಳ್ಳಬೇಕು. ಯಾವ ಆತಂಕವೂ ಇರಲಿಲ್ಲ. ಮನಸ್ಸಿಗೆ ಬಂದದ್ದನ್ನು ಕೇಳಿ ತಿನ್ನಬಹುದಿತ್ತು – ಎಷ್ಟು ಬೇಕಾದರೂ. ಜನ ತಿಂದೂ, ತಿಂದೂ ನೀರು ಕುಡಿಯಲೂ ಸ್ಥಳ ಉಳಿಯಲಿಲ್ಲ. ಹಾಗಿರುವಾಗ ಬಡಿಸುವವರು ಬಿಸಿ ಬಿಸಿ ಘಮ ಘಮ ಎನ್ನುವ ಕಚೋರಿಗಳನ್ನು ತಂದು ಹಾಕುತ್ತಿದ್ದರು. ತಿನ್ನುವ ಹಾಗಿಲ್ಲ, ಬಿಡುವ ಹಾಗಿಲ್ಲ. ಜನ ಬೇಡ ಬೇಡ ಎಂದು ಎಲೆಯ ಮೇಲೆ ಕೈ ಅಡ್ಡ ಮಾಡಿದರೂ ಅವರು ಕೇಳಬೇಕಲ್ಲ – ಹಾಕಿಯೇ ಹೋಗುತ್ತಿದ್ದರು. ಊಟ ಮುಗಿಸಿ ಕೈ ತೊಳೆದುಕೊಂಡು ಬಂದು ಕುಳಿತಾಗ ಎಲೆ, ಅಡಿಕೆ, ಯಾಲಕ್ಕಿ ಇವುಗಳನ್ನು ಮುಂದೆ ತಂದಿಟ್ಟರು. ಆದರೆ ನನಗೆ ಎಲೆ ಹಾಕಿಕೊಳ್ಳುವುದಕ್ಕಾದರೂ ಹೇಗೆ ಸಾಧ್ಯವಿತ್ತು ? ನಿಂತುಕೊಳ್ಳುವುದಕ್ಕೂ ನನ್ನಿಂದ ಆಗುತ್ತಿರಲಿಲ್ಲ. ಬೇಗ ಅಲ್ಲಿಂದ ಹೋಗಿ ಕಂಬಳಿಯಲ್ಲಿ ಬಿದ್ದುಕೊಂಡೆ. ಆ ಠಾಕೂರ ಅಷ್ಟು ದಿಲ್–ದಾರ್ ಇದ್ದ."

ಮಾಧವನು ತಂದೆ ಹೇಳಿದ ಭಕ್ಷ್ಯಭೋಜ್ಯಗಳ ರುಚಿಯನ್ನು ಮನಸ್ಸಿನಲ್ಲೇ ಸವಿಯುತ್ತಾ ಹೇಳಿದ: "ಈಗ ಯಾರೂ ನಮಗೆ ಅಂತಹ ಊಟ ಹಾಕಲಾರರು."

"ಈಗ ಯಾರು ಹಾಕಿಯಾರು? ಆ ಕಾಲ ಬೇರೆ ಇತ್ತು. ಈಗ ಎಲ್ಲರೂ ಹಣ ಉಳಿಸೋ ದಾರಿ ನೋಡ್ತಾ ಇದ್ದಾರೆ. ಮದುವೆ–ಮುಂಜಿಗೆ ಹಣ ಸುರಿಯಬೇಡಿ, ಕ್ರಿಯಾ-ಕರ್ಮಗಳಿಗೆ ದುಡ್ಡು ಹಾಳುಮಾಡಬೇಡಿ ಎಂದೆಲ್ಲ ಹೇಳುವ ಕಾಲ ಇದು. ಬಡವರ ಮನೆ ಹಾಳುಮಾಡಿ ಸಂಪಾದಿಸುವುದನ್ನೆಲ್ಲ ಎಲ್ಲಿ ಇಡ್ತೀರಿ ಎಂದು ಕೇಳಬೇಕೆನ್ನಿ ಸುತ್ತೆ. ದೋಚುವುದನ್ನೇನೂ ಕಡಿಮೆ ಮಾಡಿಲ್ಲ, ಖರ್ಚಿನ ಮಾತು ಬಂದಾಗ ಮಾತ್ರ ಮಿಗಿಸೋ ವಿಚಾರ ಬರುತ್ತೆ."

"ನೀನು ಇಪ್ಪತ್ತು ಪೂರಿಯಾದರೂ ತಿಂದಿರಬೇಕು."

"ನಲ್ವತ್ತು ತಿಂದಿದ್ದೆ."

"ನಾನಾಗಿದ್ದರೆ ಐವತ್ತು ತಿಂದುಹಾಕುತ್ತಿದ್ದೆ."

"ನಾನೂ ಐವತ್ತಕ್ಕೆ ಕಡಿಮೆ ತಿಂದಿರಲಾರೆ. ಒಳ್ಳೆ ಕಟ್ಟುಮಸ್ತಾಗಿದ್ದೆ ಆಗ. ನಾನು ಆಗ ಇದ್ದೆನಲ್ಲ, ಅವರ ಅರ್ಧದಷ್ಟೂ ನೀನಿಲ್ಲ."

ಆಲೂಗೆಡ್ಡೆ ತಿಂದು ಇಬ್ಬರೂ ನೀರು ಕುಡಿದರು. ಮತ್ತು ಅಲ್ಲಿಯೇ ಅಗ್ಗಿಷ್ಟಿಕೆಯ ಮುಂದೆ ತಮ್ಮ ಪಂಚೆಗಳನ್ನೂ ಸುತ್ತಿಟ್ಟು ಕಾಲು ಮುದುಡಿ ಹಾಯಾಗಿ ಮಲಗಿದರು. ಎರಡು ದೊಡ್ಡ ಹೆಬ್ಬಾವುಗಳು ಹಾಯಾಗಿ ಬಿದ್ದುಕೊಂಡಿರುವಂತೆ ಅವರು ಕಂಡರು.

ಒಳಗೆ ಬುಧಿಯಾ ಇನ್ನೂ ನರಳುತ್ತಲೇ ಇದ್ದಾಳೆ.

oo oo oo oo

ಬೆಳಿಗ್ಗೆ ಎದ್ದು ಮಾಧವ ಒಳಗೆ ಹೋಗಿ ನೋಡುತ್ತಾನೆ. ಅವನ ಹೆಂಡತಿಯ ಮೈ ಸಂಪೂರ್ಣ ತಣ್ಣಗಾಗಿ ಹೋಗಿದೆ. ನೊಣಗಳು ಅವಳ ಮುಖದ ಮೇಲೆ ಹಾರಾಡುತ್ತಿವೆ. ಕಣ್ಣುಗುಡ್ಡೆಗಳ ಚಲನೆ ನಿಂತು ಮೇಲಕ್ಕೆ ಹೊರಟುಹೋಗಿವೆ. ಇಡೀ ದೇಹ ಹೊಳೆ ಯುವ ಸ್ಥಿತಿಗೆ ಬರುತ್ತಿದೆ. ಹೊಟ್ಟೆಯಲ್ಲಿದ್ದ ಮಗು ಸತ್ತುಹೋಗಿದೆ.

ಮಾಧವ ಅಲ್ಲಿಂದ ಓಡಿ ಘೀಸುವಿನ ಬಳಿಗೆ ಬಂದ ಮೇಲೆ ಇಬ್ಬರೂ ಎದೆ ಬಡಿದು ಕೊಳ್ಳುತ್ತಾ ಜೋರು ಜೋರಾಗಿ ಬೊಬ್ಬೆಹಾಕತೊಡಗಿದರು. ಅವರ ಅಳು ಕೇಳಿ ನೆರೆ ಹೊರೆಯವರು ಓಡಿ ಬಂದರು ಮತ್ತು ಸಂಪ್ರದಾಯಕ್ಕನುಗುಣವಾಗಿ ಅವರನ್ನು ಸಮಾಧಾನಗೊಳಿಸಲು ತೊಡಗಿದರು.

ಆದರೆ ಹೆಚ್ಚು ಕಾಲ ಹಾಗೆ ರೋದಿಸುತ್ತಾ ಕುಳಿತಿರಲು ಅವಕಾಶವಿರಲಿಲ್ಲ. ಹೆಣಕ್ಕೆ ಹೊಸ ಬಟ್ಟೆ ತರಬೇಕಾಗಿತ್ತು, ಜೊತೆಗೆ ಸುಡಲು ಬೇಕಾದಷ್ಟು ಸೌದೆಯನ್ನೂ ಹೊಂದಿಸ ಬೇಕಾಗಿತ್ತು. ಹದ್ದಿನ ಗೂಡು ಸೇರಿದ ಮಾಂಸ ಹೇಗೆ ಉಳಿಯಲು ಸಾಧ್ಯವಿಲ್ಲವೋ ಆ ರೀತಿಯಾಗಿತ್ತು ಮನೆಯಲ್ಲಿ ದುಡ್ಡಿನ ವಿಚಾರ.

ತಂದೆ–ಮಗ ಇಬ್ಬರೂ ಗೋಳೋ ಎಂದು ಅಳುತ್ತಾ ಊರಿನ ಜಮೀನ್ದಾರನ ಬಳಿಗೆ

ಹೋದರು. ಅವರಿಬ್ಬರ ಮುಖ ನೋಡುವ ಮನಸ್ಸೂ ಇಲ್ಲದಷ್ಟು ತಿರಸ್ಕಾರ ಜಮೀನ್ದಾರನಿಗೆ. ಅವನ ಮುಂದೆ ಎಷ್ಟೋ ಬಾರಿ ಹೋಗಿ ಅವರು ಹೀಗೆ ತಮ್ಮ ಗೋಳು ತೋಡಿಕೊಂಡಿದ್ದರು. ಕಳ್ಳತನ ಮಾಡಿಯೋ, ಒಪ್ಪಿಕೊಂಡಿದ್ದ ಕೆಲಸಕ್ಕೆ ಚಕ್ಕರ್ ಹಾಕಿದ್ದ ಅಪರಾಧಿಗಳಾಗಿಯೋ, ಅವನ ಮುಂದೆ ಹೋಗಿ ನಿಂತಿದ್ದ ಪ್ರಸಂಗಗಳೂ ಇದ್ದುವು. "ಏನೋ ಘೀಸುವಾ, ಏನಾಯಿತೋ? ನಿನ್ನ ತಲೇನೇ ಕಾಣಿಸ್ತಾ ಇಲ್ಲ, ಈ ಊರಿನಲ್ಲಿ ಇರೋ ಮನಸ್ಸಿಲ್ಲಾ ಅಂತ ಕಾಣುತ್ತೆ ನಿನಗೆ."

ಘೀಸು ನೆಲಕ್ಕೆ ತಲೆಯೊಡ್ಡಿ ಗೋಳೋ ಎಂದು ಅಳುತ್ತ ಹೇಳಿದ: "ಯಜಮಾನರೇ, ತುಂಬಾ ತೊಂದರೆಯಲ್ಲಿದ್ದೀನಿ. ಮಾಧವನ ಹೆಂಡ್ತಿ ನಿನ್ನೆ ರಾತ್ರಿ ಸತ್ತುಹೋದಳು. ರಾತ್ರಿ ಯೆಲ್ಲಾ ಮಿಲಿಮಿಲಿ ಒದ್ದಾಡ್ತಾ ಇದ್ಲು. ಇಡೀ ರಾತ್ರಿ ಅವಳ ತಲೆ ಹತ್ರಾ ನಾವಿಬ್ಬರೂ ಕೂತಿದ್ವಿ. ಔಸ್ದಿ ಗೀಸ್ದಿ ಎಲ್ಲಾ ಮಾಡಿದ್ವಿ. ಏನೂ ಆಗ್ಲಿಲ್ಲ. ಏನೆಲ್ಲ ಮಾಡಬೇಕೋ ಅದೆಲ್ಲಾ ಮಾಡಿಸಿದ್ದಾಯ್ತು. ಕೊನೆಗೂ ನಮಗೆ ದಗಾ ಕೊಟ್ಟು ಹೋದ್ಲು. ಈಗ ನಮಗೆ ರೊಟ್ಟಿ ಹಾಕಿ ಕೊಡೋವ್ರು ಗತಿ ಇಲ್ಲ ಯಜಮಾನರೇ, ನಾವು ಮುಳುಗಿ ಹೋದೆವು. ನಮ್ಮ ಮನೆ ಹಾಳಾಗಿ ಹೋಯಿತು. ನಾನು ಎಷ್ಟೇ ಆಗಲಿ ನಿಮ್ಮ ಜೀತಕ್ಕೆ ಇರೋನು. ನೀವು ಅವಳಿಗೆ ಗತಿ ಕಾಣಿಸದೆ ಹೋದರೆ, ನಾನು ಬೇರೆ ಯಾರಲ್ಲಿಗೆ ಹೋಗಲಿ? ನಮ್ಮ ಕೈಯಲ್ಲಿದ್ದ ನಾಲ್ಕು ಕಾಸೂ ಅವಳಿಗೆ ಔಸದಿ ಮಾಡೋಕ್ಕೇ ಖರ್ಚಾಗಿ ಹೋಯಿತು. ಈಗ ನಿಮ್ಮ ದಯೆ ಆಗಬೇಕು ದಣಿ. ಬೇರೆ ಯಾರ ಮನೆ ಬಾಗಿಲಿಗೆ ಹೋಗಲಿ, ದೊಡ್ಡ ಮನ್ಸ್ ಮಾಡಬೇಕು ಒಡೆಯಾ."

ಜಮೀನ್ದಾರ ಸ್ವಭಾವತಃ ದಯಾಳು ಆಗಿದ್ದ. ಆದರೆ ಘೀಸು ವಿಷಯದಲ್ಲಿ ದಯೆ ತೋರುವುದು ಎಂದರೆ ಕರಿಕಂಬಳಿಗೆ ಬೇರೆ ಬಣ್ಣ ಹಾಕಲು ಹೋಗುವ ಸಾಹಸವೇ ಸರಿ ಎಂಬುದು ಅವನಿಗೆ ಗೊತ್ತಿತ್ತು. ಹೋಗು ಹೋಗು, ದೂರ ಹೋಗು ಎಂದು ಗದರಿ ಕಳುಹಿಸುವುದೇ ಸರಿ ಎಂದು ಮನಸ್ಸಿಗೆ ಬಂತು. ಹಾಗೆ ನೋಡಿದರೆ, ಹೇಳಿ ಕಳುಹಿಸಿದರೂ ಬರುವುದಿಲ್ಲ, ಈಗ ದದುಗ ಇದೆ ಎಂದು ಇಲ್ಲಿಗೆ ಬಂದು ಖುಷಾಮತ್ತು ಮಾಡಲು ಹೊರಟಿದ್ದಾನೆ. ಬದಮಾಶ್ ಇದ್ದಾನೆ. ಆದರೆ ಇದು ಅವನ ಮೇಲೆ ರೇಗುವಂತಹ ಸಮಯವಲ್ಲ – ಎಂದು ಯೋಚಿಸಿ ತಮ್ಮ ಜೇಬಿನಿಂದ ಎರಡು ರೂಪಾಯಿ ತೆಗೆದು ಅವನ ಕಡೆಗೆ ಬಿಸಾಡಿ ಒಳಗೆ ಹೊರಟು ಹೋದರು. ಸಮಾಧಾನದ ಒಂದು ಮಾತು ಹೇಳಲೂ ಮನಸ್ಸು ಬರಲಿಲ್ಲ. ಅವನ ಕಡೆ ನೋಡಲೂ ಇಲ್ಲ. ತಲೆಯ ಮೇಲಿನ ಹೊರೆ ಇಳಿಯಿತು, ಹಾಳಾಗಿ ಹೋಗಲಿ – ಎಂದು ಹಾಗೆ ಒದರಿಕೊಂಡು ಒಳಗೆ ಹೋಗಿರಬೇಕು.

ಊರಿನ ಜಮೀನ್ದಾರ ಎರಡು ರೂಪಾಯಿ ಚಂದಾ ಕೊಟ್ಟಿರುವಾಗ ಇತರ ಸಾಹುಕಾರರು ಇಲ್ಲವೆನ್ನುವುದಾದರೂ ಹೇಗೆ? ಜಮೀನ್ದಾರನ ಹೆಸರನ್ನು ಯಾವ ರೀತಿ ಪ್ರಚಾರ ಸಾಧನವನ್ನಾಗಿ ಮಾಡಿಕೊಳ್ಳಬೇಕೆಂಬುದು ಘೀಸುವಿಗೆ ಗೊತ್ತಿತ್ತು. ಕೆಲವರು ಎರಡೆರಡು ಆಣೆ ಕೊಟ್ಟರು, ಇನ್ನು ಕೆಲವರು ನಾಲ್ಕಾಣೆ ಬಿಲ್ಲೆ ಕೊಟ್ಟರು. ಒಂದು ಗಂಟೆಯೊಳಗಾಗಿ

ಘೀಸುವಿನ ಬಳಿ ಐದು ರೂಪಾಯಿಗಳ ಗಂಟು ಜಮಾ ಆಯಿತು, ಜೊತೆಗೆ ಒಂದೆರಡು ಕಡೆಯಿಂದ ಅಕ್ಕಿಕಾಳು ಸಿಕ್ಕಿತು, ಒಂದೆರಡು ಕಡೆಯಿಂದ ಕಟ್ಟಿಗೆ ಸಿಕ್ಕಿತು. ಮಧ್ಯಾಹ್ನದ ಹೊತ್ತಿಗೆ ಘೀಸು ಮತ್ತು ಮಾಧವ ಇಬ್ಬರೂ ಹೆಣದ ಮೇಲೆ ಹೊದಿಸಲು ಬೇಕಾಗುವ ಬಟ್ಟೆ ತರಲು ಪೇಟೆಯ ಕಡೆ ಹೊರಟರು. ಇತ್ತ ಜನ ಅವರನ್ನು ಶಪಿಸುತ್ತಾ ಕುಳಿತಿದ್ದರು. ಊರಿನ ಮೃದು ಮನಸ್ಸಿನ ಹೆಂಗಳೆಯರು ಒಬ್ಬೊಬ್ಬರಾಗಿ ಬಂದು ಹೆಣ ನೋಡಿಕೊಂಡು, ಅವಳ ಈ ದುರ್ದೆಶೆಗಾಗಿ ಕಣ್ಣೀರಿಟ್ಟು, ಹೋಗುತ್ತಿದ್ದರು.

ಃ ಃ ಃ ಃ

ಪೇಟೆಯನ್ನು ತಲಪಿದ ಮೇಲೆ ಘೀಸು ಹೇಳಿದ: "ಅವಳನ್ನು ಸುಡಲು ಬೇಕಾದಷ್ಟು ಕಟ್ಟಿಗೆಯೇನೋ ಸಿಕ್ಕಿಬಿಟ್ಟಿತು. ಅಲ್ಲವೇ ಮಾಧವಾ."

ಮಾಧವ ಹೇಳಿದ: "ಹೌದು, ಕಟ್ಟಿಗೆ ಸಾಕಷ್ಟಿದೆ, ಈಗ ಏನಿದ್ದರೂ ಬಟ್ಟೆ ತೆಗೆದು ಕೊಳ್ಳಬೇಕು."

"ಸರಿ, ಇಲ್ಲಿಯೇ ಎಲ್ಲಾದರೂ ಒಂದಿಷ್ಟು ಸಾಧಾರಣ ಬಟ್ಟೆ ತೆಗೆದುಕೊಂಡರಾಯಿತು."

"ಅಷ್ಟೆ. ಹೆಣ ಸಾಗಿಸುವ ಹೊತ್ತಿಗೆ ರಾತ್ರಿಯಾಗಿಹೋಗುತ್ತೆ. ರಾತ್ರಿ ಯಾರು ನೋಡುತ್ತಾರೆ, ಎಂಥ ಬಟ್ಟೆ ಹೊದಿಸಿದ್ದಾರೆ ಅಂತ?"

"ಎಂತಹ ವಿಚಿತ್ರ ಸಂಪ್ರದಾಯವೋ ಏನೋ, ಬದುಕಿರುವಾಗ ಮೈ ಮುಚ್ಚಿಕೊಳ್ಳಲು ಚಿಂದಿ ಬಟ್ಟೇನೂ ಇರೋದಿಲ್ಲ. ಸತ್ತಾಗ ಹೊಸ ಬಟ್ಟೇನೇ ತಂದು ಹೊದಿಸಬೇಕು."

"ಹೀಗೆ ಹೊದಿಸುವ ಬಟ್ಟೆ ಹೆಣದ ಜೊತೆಗೇ ಹೋಗುತ್ತೆ ಅಲ್ಲವೇ?"

"ಇನ್ನೇನು ಮತ್ತೆ ಇದೇ ಐದು ರೂಪಾಯಿ ಮೊದಲೇ ಸಿಕ್ಕಿದ್ದರೆ ಒಂದಿಷ್ಟು ಔಷಧಿ ಆದ್ರೂ ಮಾಡಬಹುದಿತ್ತು."

ಹೀಗೆ ಇಬ್ಬರೂ ಪರಸ್ಪರ ಒಬ್ಬರ ಮನಸ್ಸನ್ನು ಒಬ್ಬರು ತಿಳಿಯಲೆತ್ನಿಸುತ್ತಿದ್ದರು. ಮತ್ತು, ಪೇಟೆಯಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸುಮ್ಮನೆ ಅಲೆಯುತ್ತಿದ್ದರು. ಒಮ್ಮೆ ಈ ಬಜಾರಿನ ಅಂಗಡಿಗೆ ಹೋಗುವರು, ಇನ್ನೊಮ್ಮೆ ಇನ್ನೊಬ್ಬನ ಅಂಗಡಿಗೆ. ಬಗೆಬಗೆಯ ಬಟ್ಟೆಗಳನ್ನು ತೆಗೆಸಿ ನೋಡಿದರು – ರೇಶಿಮೆ ಬಟ್ಟೆಗಳು ಹಾಗೂ ಹತ್ತಿ ಬಟ್ಟೆಗಳನ್ನು. ಆದರೆ ಒಂದೂ ಮನಸ್ಸಿಗೆ ಹಿಡಿಸದು. ಹೀಗೆಯೇ ಅವರು ಸುತ್ತುತ್ತಿರುವ ಹಾಗೆ ಸಂಜೆಯಾಗಿ ಹೋಯಿತು. ಅದಾವ ದೇವಿಯ ಪ್ರೇರಣೆಯಿಂದಲೋ ಏನೋ. ಅವರ ಕಾಲುಗಳು ತಾವಾಗಿಯೇ ಅವರನ್ನು ಹೆಂಡದಂಗಡಿಯ ಎದುರು ತಂದು ನಿಲ್ಲಿಸಿ ದ್ದುವು. ಮೊದಲೇ ತೀರ್ಮಾನ ಮಾಡಿಕೊಂಡು ಬಂದವರಂತೆ ಇಬ್ಬರೂ ಒಳಗಡೆಗೆ ಧಾವಿಸಿದರು. ಅಲ್ಲಿ ಸ್ವಲ್ಪ ಹೊತ್ತು ಮುಂದೇನು ಮಾಡುವುದು ಎಂದು ತಿಳಿಯದೆ ನಿಂತಿದ್ದರು. ಅನಂತರ ಘೀಸುವೇ ಗಲ್ಲದ ಬಳಿಗೆ ಹೋಗಿ "ಒಂದೊಂದು ಬಾಟ್ಲಿ ನಮಗೂ ಕೊಡಿ, ಸಾಹೂಜಿ" ಎಂದು ಹೇಳಿದ.

ಬಾಟ್ಲಿಗಳು ಬಂದಮೇಲೆ ಹಾಗೆಯೇ ತಿನ್ನಲೂ ಒಂದಿಷ್ಟು ಬೇಕಲ್ಲ! ಅದೂ ಬಂತು, ಕರೆದ ಮೀನು ಇತ್ಯಾದಿ. ಇಬ್ಬರೂ ಆರಾಮವಾಗಿ ಕುಳಿತು ಕುಡಿಯತೊಡಗಿದರು, ತಿನ್ನ ತೊಡಗಿದರು.

ಒಂದೇ ಸಮನೆ ಹಾಗೆ ಸ್ವಲ್ಪ ಹೊತ್ತು ಕುಡಿದ ಮೇಲೆ ಇಬ್ಬರಿಗೂ ಮತ್ತು ಬಂತು.

ಘೀಸು ಹೇಳಿದ: "ಹೊಸ ಬಟ್ಟೆ ಸುತ್ತುವುದರಿಂದ ಏನು ಬಂತು? ಅದೂ ಸುಟ್ಟು ಹೋಗುತ್ತೆ, ಅಷ್ಟೆ. ಏನು ಅದು ಅವಳ ಜೊತೆಗೇ ಹೋಗಬೇಕಾಗಿದೆಯೇ?"

ಮಾಧವ ಆಕಾಶದ ಕಡೆಗೆ ನೋಡುತ್ತಾ ದೇವತೆಗಳನ್ನೇ ತನ್ನ ಪಾಪರಹಿತ ನಿಲುವಿಗೆ ಸಾಕ್ಷಿಗಳನ್ನಾಗಿ ಇಟ್ಟುಕೊಂಡಿರುವವನಂತೆ ಹೇಳಿದ: "ಇದೆಲ್ಲ ಲೋಕರೂಢಿ. ಇಲ್ಲವಾದರೆ ಜನ ಬ್ರಾಹ್ಮಣರಿಗೆ ಸಾವಿರಾರು ರೂಪಾಯಿ ಏಕೆ ಸುರೀತಾ ಇದ್ರು? ಪರಲೋಕದಲ್ಲಿ ಯಾವ ಗತಿ ಕಾಣುತ್ತಾರೆಯೋ ಏನೋ, ಯಾರಿಗೆ ಗೊತ್ತು?"

'ದೊಡ್ಡವರ ಹತ್ತಿರ ಹಣ ಇದೆ. ಬೇಕಾದ ಹಾಗೆ ಹಾಳು ಮಾಡಬಹುದು. ಹಾಳು ಮಾಡುವುದಕ್ಕೆ ನಮ್ಮ ಹತ್ತಿರ ಆದ್ರೂ ಏನಿದೆ?"

"ಆದರೆ ಜನರಿಗೆ ಏನು ಹೇಳ್ತೀಯೆ? ಹೆಣದ ಮೇಲೆ ಹಾಕೋದಕ್ಕೆ ಬಟ್ಟೆ ಎಲ್ಲಿ ಎಂದು ಕೇಳ್ತಾರೆ, ಸುಮ್ಮನಿರುತ್ತಾರೆಯೇ?"

ಘೀಸು ನಕ್ಕು ಹೇಳಿದ: "ಬಿಡೋ, ದುಡ್ಡು ಕಂಕುಳಲ್ಲಿ ಸಿಕ್ಕಿಸಿಕೊಂಡಿದ್ದೆ, ಎಲ್ಲೋ ಬಿದ್ದು ಹೋಯಿತು, ಎಷ್ಟು ಹುಡುಕಿದರೂ ಸಿಗಲಿಲ್ಲ ಎಂದು ಹೇಳಿದರಾಯಿತು. ಜನ ನಮ್ಮ ಮಾತನ್ನು ನಂಬದೆ ಹೋಗಬಹುದು, ಆದರೂ ಮತ್ತೆ ಅವರೇ ಕೊಡುತ್ತಾರೆ."

ಮಾಧವನೂ ನಕ್ಕು ತಮಗೆ ಒದಗಿ ಬಂದಿದ್ದ ಅನಿರೀಕ್ಷಿತ ಸದವಕಾಶವನ್ನು ಕುರಿತು ಹೇಳಿದ: "ಪಾಪ, ಇದ್ದಷ್ಟು ದಿನ ಒಳ್ಳೆಯವಳಾಗಿದ್ದಳು. ಸತ್ತರೂ ತುಂಬಾ ಉಣಿಸಿ, ಸಂತೈಸಿ ಸತ್ತಳು."

ಅರ್ಧ ಬಾಟ್ಲಿಗಿಂತಲೂ ಮಿಕ್ಕಿ ಒಳಗೆ ಹೋಗಿತ್ತು. ಘೀಸು ಎರಡು ಸೇರಿನಷ್ಟು ಪೂರಿ ತರಿಸಿದ. ಜೊತೆಗೆ ಚಟ್ನಿ, ಉಪ್ಪಿನಕಾಯಿ ಮತ್ತು ಮಾಂಸಾಹಾರಪದಾರ್ಥ ಗಳು ಬೇರೆ. ಮದ್ಯದ ಅಂಗಡಿಯ ಎದುರಿಗೇ ಆ ಅಂಗಡಿಯೂ ಇತ್ತು. ಮಾಧವ ಹುಮ್ಮಸ್ಸಿನಿಂದ ಹೋಗಿ ಒಂದು ತಟ್ಟೆಯಲ್ಲಿ ಎಲ್ಲವನ್ನೂ ತಂದ. ಇನ್ನೂ ಒಂದೂವರೆ ರೂಪಾಯಿ ಇವಕ್ಕೆಂದು ಖರ್ಚಾಗಿಹೋಯಿತು. ಒಂದಿಷ್ಟು ಚಿಲ್ಲರೆ ಕೊನೆಗೆ ಉಳಿ ಯಿತು.

ಇಬ್ಬರೂ ಈಗ ತುಂಬಾ ಸಂತುಷ್ಟರಾಗಿ ಕುಳಿತು ಪೂರಿಗಳನ್ನು ಹೊಡೆಯುತ್ತಿದ್ದರು. ಅರಣ್ಯದಲ್ಲಿ ಶಿಕಾರಿ ಹೊಡೆದು ತಂದು ಹಾಯಾಗಿ ತಿನ್ನುತ್ತಿದ್ದ ಹುಲಿಗಳಂತಿದ್ದರು ಇಬ್ಬರೂ. ಅವರಿಗೆ ಈಗ ಯಾರಿಗೂ ಜವಾಬು ಹೇಳುವ ಯೋಚನೆಯೇ ಇರಲಿಲ್ಲ. ಕೆಟ್ಟ ಹೆಸರು ಬರುವುದೆಂಬ ಚಿಂತೆಯೂ ಇರಲಿಲ್ಲ. ಇಂತಹ ಭಾವನೆಗಳನ್ನು ಅವರು ಬಹಳ ಹಿಂದೆಯೇ ಕೈಬಿಟ್ಟಿದ್ದರು.

ಘೀಸು ಒಬ್ಬ ವೇದಾಂತಿಯಂತೆ ಹೇಳಿದ: "ನಮ್ಮ ಅಂತರಾತ್ಮನ ತೃಪ್ತಿಯಾಗುತ್ತಿರುವಾಗ, ಅವಳ ಆತ್ಮಕ್ಕೆ ಶಾಂತಿ ದೊರಕದೆ ಹೋದೀತೇ?"

ಮಾಧವನು ಶ್ರದ್ಧಾಭಕ್ತಿಯಿಂದ ತಲೆ ತಗ್ಗಿಸಿ ಅವನ ವಿಚಾರಕ್ಕೆ ಪುಷ್ಟಿ ಕೊಡುತ್ತಾ ಹೇಳಿದ: "ಖಂಡಿತವಾಗಿಯೂ ಅವಳ ಆತ್ಮಕ್ಕೆ ಶಾಂತಿ ದೊರಕುತ್ತದೆ. ಇದು ಖಂಡಿತ, ಸಂಶಯವೇನೂ ಇಲ್ಲ. ಭಗವಂತ ಎಷ್ಟೇ ಆಗಲಿ ಅಂತರ್ಯಾಮಿ; ಅವನು ಅವಳನ್ನು ವೈಕುಂಠಕ್ಕೇ ಕೊಂಡೊಯ್ಯುತ್ತಾನೆ. ನಾವಿಬ್ಬರೂ ಹಾರ್ದಿಕವಾಗಿ ಅವಳಿಗೆ ಆಶೀರ್ವಾದ ಕೊಡುತ್ತಿದ್ದೇವೆ. ಇವೊತ್ತು ನಮಗೆ ಸಿಕ್ಕಿರುವಷ್ಟು ಒಳ್ಳೇ ಭೋಜನ, ನಮ್ಮ ಜೀವಮಾನದಲ್ಲಿಯೇ ಸಿಕ್ಕಿಲ್ಲ."

ಒಂದು ಕ್ಷಣದ ತರುವಾಯ ಮಾಧವನ ಮನಸ್ಸಿನಲ್ಲಿ ಒಂದು ಶಂಕೆ ಹುಟ್ಟಿತು, ಕೇಳಿದ: "ಸರಿಯಪ್ಪ, ನಾವೂ ಒಂದಲ್ಲ ಒಂದು ದಿನ ಅಲ್ಲಿಗೇ ಹೋಗ್ತೇವಲ್ವೇ?"

ಘೀಸು ಈ ಸರಳ ಸವಾಲಿಗೆ ಯಾವ ಉತ್ತರವನ್ನೂ ಕೊಡಲಿಲ್ಲ. ಪರಲೋಕದ ವಿಚಾರಗಳನ್ನು ಯೋಚಿಸಿ ಮನಸ್ಸಿನ ಆನಂದವನ್ನು ಹಾಳುಮಾಡಿಕೊಳ್ಳಲು ಅವನು ಸಿದ್ಧನಿರಲಿಲ್ಲ.

"ಅಲ್ಲಿ ಅವಳು ನಮ್ಮನ್ನು ನನಗೆ ಹೊಸ ಬಟ್ಟೆ ಯಾಕೆ ಕೊಡಲಿಲ್ಲ ಎಂದು ಕೇಳಿದರೆ ನಾವೇನು ಉತ್ತರ ಕೊಡಬೇಕು?"

"ನಿನ್ನ ತಲೆ......"

"ಖಂಡಿತಾ ಕೇಳಿಯೇ ಕೇಳುತ್ತಾಳೆ."

"ಅವಳಿಗೆ ಹೊಸ ಬಟ್ಟೆ ಸಿಗೋಲ್ಲ ಅಂತ ನಿನಗೆ ಹೇಗೆ ಗೊತ್ತು? ನನಗೆ ಅಷ್ಟೂ ಬುದ್ಧಿ ಇಲ್ಲ ಅಂತ ತಿಳ್ಕೊಂಡ್ಬಿಟ್ಟೆಯಾ? ಅರವತ್ತು ವರ್ಷ ಈ ಪ್ರಪಂಚವನ್ನು ನೋಡಿದ್ದೀನಿ, ಗೊತ್ತೇನು?... ನಾನೇನೂ ಇಷ್ಟು ವರ್ಷ ಕುರಿ ಮೇಯಿಸ್ತಾ ಕಳೆದಿಲ್ಲ. ಅವಳಿಗೆ ಖಂಡಿತಾ ಹೊಸ ಬಟ್ಟೆ ಸಿಗುತ್ತೆ: ಅಷ್ಟೇ ಅಲ್ಲ. ತುಂಬಾ ಒಳ್ಳೆಯ ಬಟ್ಟೇನೇ ಸಿಗುತ್ತೆ, ನೋಡ್ತಿರು."

ಅವನ ಮಾತಿನಲ್ಲಿ ಮಾಧವನಿಗೆ ನಂಬಿಕೆ ಬರಲಿಲ್ಲ. ಹೇಳಿದ: "ಯಾರು ಕೊಡುತ್ತಾರೆ? ಕೈಯಲ್ಲಿದ್ದ ದುಡ್ಡನ್ನೂ ನೀನು ಉಫ್ ಎಂದು ಹಾರಿಸಿಬಿಟ್ಟೆ. ಅವಳು ನನ್ನನ್ನು ಕೇಳುತ್ತಾಳೆ, ನಿನ್ನನ್ನಲ್ಲ. ತಾಳಿ ಕಟ್ಟಿದ್ದವನು ನಾನು ತಾನೇ?"

ಘೀಸು ಈ ಮಾತು ಕೇಳಿ ಸ್ವಲ್ಪ ಗಡುಸಾಗಿಯೇ ಹೇಳಿದ: "ಅವಳಿಗೆ ಖಂಡಿತಾ ಹೊಸ ಬಟ್ಟೆ ಸಿಕ್ಕಿಯೇ ಸಿಗುತ್ತದೆ. ನಾನು ಹೇಳಿದ ಮೇಲೆ ಆಯಿತು. ನೀನ್ಯಾಕೆ ನಂಬುತ್ತಿಲ್ಲ?"

"ಯಾರು ಕೊಡುತ್ತಾರೆ, ಅದನ್ನಾದರೂ ಹೇಳಬಾರದೆ?"

"ಈಗ ಯಾರು ಕೊಟ್ಟಿದ್ದಾರೆಯೋ ಅವರೇ ಕೊಡುತ್ತಾರೆ, ನೋಡುತ್ತಿರು. ಆದರೆ ಈ ಸಲ ಅವರು ನಮ್ಮ ಕೈಗೆ ನಗದು ಕೊಡೋದಿಲ್ಲ, ಅಷ್ಟೆ."

ಕತ್ತಲೆಯಾದಂತೆ ಆಕಾಶದಲ್ಲಿ ನಕ್ಷತ್ರಗಳ ಹೊಳಪು ಹೆಚ್ಚುತ್ತಿತ್ತು. ಜೊತೆಗೆ ಪಡ ಖಾನೆಯ ವೈಖರಿ ಕೂಡ ಕಳೆ ಕಟ್ಟುತ್ತಿತ್ತು. ಇಲ್ಲೊಬ್ಬ ಹಾಡುತ್ತಿದ್ದರೆ, ಅಲ್ಲೊಬ್ಬ ತನ್ನ ಪ್ರತಾಪ ಕೊಚ್ಚಿಕೊಳ್ಳುತ್ತಿದ್ದಾನೆ, ಮತ್ತೊಬ್ಬ ಬೇರೆಯೇ ಲೋಕದಲ್ಲಿದ್ದು ತನ್ನ ಸಂಗಡಿಗ ನನ್ನು ಆಲಂಗಿಸಿಕೊಳ್ಳಲು ಹೊರಟಿದ್ದಾನೆ. ಒಬ್ಬ ತನ್ನ ಸ್ನೇಹಿತನ ಮುಖಕ್ಕೆ ತನ್ನ ತಿಂಡಿಯ ತಟ್ಟೆಯನ್ನು ಹಿಡಿಯುತ್ತಿದ್ದಾನೆ.

ಅಲ್ಲಿಯ ವಾತಾವರಣದಲ್ಲಿ ಆನಂದವಿತ್ತು, ಅಲ್ಲಿಯ ಗಾಳಿಯಲ್ಲಿ ಮಾದಕತೆ ಇತ್ತು. ಅನೇಕರು ಬಂದು ಒಂದು ಬೊಗಸೆಯಷ್ಟು ಕುಡಿದು ಅಷ್ಟರಿಂದಲೇ ಮತ್ತರಾಗು ತ್ತಿದ್ದರು. ಕುಡಿತದ ಮಾದಕತೆಗಿಂತ ಅಲ್ಲಿಯ ವಾತಾವರಣ ಅವರನ್ನು ಹುಚ್ಚರನ್ನಾಗಿ ಮಾಡುತ್ತಿತ್ತು. ಜೀವನದ ಕಹಿ ಪ್ರಸಂಗಗಳನ್ನು ಮರೆಯಲು ಅವರು ಇಲ್ಲಿಗೆ ಬರು ತ್ತಿದ್ದರು. ಇಲ್ಲಿಗೆ ಬಂದು ಕೆಲ ಸಮಯದ ಮಟ್ಟಿಗೆ ತಮ್ಮನ್ನು ತಾವೇ ಮರೆಯುತ್ತಿದ್ದರು. ಅವರು ಆ ಸಮಯದಲ್ಲಿ ಬದುಕಿರುತ್ತಿದ್ದರೋ ಸತ್ತಿರುತ್ತಿದ್ದರೋ ತಿಳಿಯದು.

ಈ ತಂದೆ ಮಗ ಇವರಿಬ್ಬರಂತೂ ಈಗಲೂ ತುಂಬಾ ಆನಂದದಲ್ಲಿ ಮುಳುಗಿದ್ದು ಒಂದೊಂದೇ ಗುಟುಕು ಇಳಿಸುತ್ತಿದ್ದಾರೆ. ಎಲ್ಲರ ದೃಷ್ಟಿ ಈಗ ಅವರ ಕಡೆಗೆ ಕೇಂದ್ರೀಕೃತ ವಾಗಿದೆ. ಇಬ್ಬರೂ ಅದೆಷ್ಟು ಭಾಗ್ಯವಂತರು! ಮದ್ಯ ತುಂಬಿದ ಬಾಟ್ಲಿ ಅವರ ಮಧ್ಯೆ ವಿರಾಜಮಾನವಾಗಿದೆ.

ಹೊಟ್ಟೆ ತುಂಬಾ ತಿಂದು ತೇಗಿದ ಮಾಧವ ತಟ್ಟೆಯಲ್ಲಿ ಮಿಕ್ಕಿದ್ದ ಪೂರಿಗಳನ್ನು ಎತ್ತಿ ತಮ್ಮ ಕಡೆಯೇ ಹಸಿದ ಕಣ್ಣುಗಳಿಂದ ನೋಡುತ್ತಾ ನಿಂತಿದ್ದ ಭಿಕ್ಷುಕನಿಗೆ ಕೊಟ್ಟಿದ್ದಾನೆ. ಹಾಗೆ ಇನ್ನೊಬ್ಬರಿಗೆ ಕೊಡುವ ಆನಂದವನ್ನೂ ಹೆಮ್ಮೆಯನ್ನೂ ಅವನು ತನ್ನ ಜೀವನ ದಲ್ಲಿಯೇ ಪ್ರಥಮ ಬಾರಿಗೆ ಅನುಭವಿಸಿದ್ದಾನೆ.

ಅದನ್ನು ಕಂಡ ಘೀಸು ಹೇಳಿದ: "ತೆಗೆದುಕೊಂಡು ಹೋಗು. ಚೆನ್ನಾಗಿ ತಿಂದು ಆಶೀರ್ವಾದ ಕೊಡು. ಸಂಪಾದಿಸಿದವಳಂತೂ ಕಣ್ಣು ಮುಚ್ಚಿದ್ದಾಳೆ. ಆದರೆ ನಿನ್ನ ಆಶೀರ್ವಾದ ಅವಳಿಗೆ ಖಂಡಿತ ತಲಪುತ್ತೆ. ತುಂಬಾ ಕಷ್ಟಪಟ್ಟು ಸಂಪಾದಿಸಿದ ಹಣ, ಮನಃಪೂರ್ತಿಯಾಗಿ ಆಶೀರ್ವಾದ ಮಾಡು."

ಮಾಧವ ಆಕಾಶದತ್ತ ನೋಡುತ್ತಾ ಹೇಳಿದ: "ಅವಳು ನಿಜಕ್ಕೂ ವೈಕುಂಠಕ್ಕೆ ಹೋಗುತ್ತಾಳೇಪ್ಪಾ; ಅವಳು ಅಲ್ಲಿಯ ರಾಣಿ ಆಗುತ್ತಾಳೆ."

ಘೀಸು ಎದ್ದು ನಿಂತು ಆವೇಶಭರಿತನಾಗಿ ಹೇಳಿದ: "ಹೌದು ಮಗನೇ, ಅವಳು ಖಂಡಿತಾ ವೈಕುಂಠಕ್ಕೆ ಹೋಗುತ್ತಾಳೆ. ಬದುಕಿದ್ದಷ್ಟು ದಿನ ಯಾರಿಗೂ ತೊಂದರೆ ಕೊಡ ಲಿಲ್ಲ. ಯಾರಿಗೂ ಕಷ್ಟ ಕೊಡಲಿಲ್ಲ. ಅವಳು ವೈಕುಂಠಕ್ಕೆ ಹೋಗದೆ ಬೇರೆ ಯಾರು ಹೋಗಬೇಕು? ತಮ್ಮ ಎರಡೂ ಕೈಗಳಿಂದ ಬಡವರ ಸುಲಿಗೆ ನಡೆಸಿ ಪಾಪ ತೊಳೆದು ಕೊಳ್ಳಲು ಗಂಗಾಸ್ನಾನಕ್ಕೆ ಮತ್ತು ದೇವಸ್ಥಾನಗಳಿಗೆ ಹೋಗುವ ಈ ಧಾಂಡಿಗರು ವೈಕುಂಠಕ್ಕೆ ಹೋಗಲು ಸಾಧ್ಯವೇ? ಅವಳು ಇದ್ದಷ್ಟೂ ದಿನ ನಮ್ಮ ಹೊಟ್ಟೆ

ತುಂಬಿಸಿದ್ದಷ್ಟೇ ಅಲ್ಲ, ಹೋಗುವಾಗಲೂ ನಮ್ಮ ಜೀವನದ ಅಭೀಷ್ಟವನ್ನು ಪೂರೈಸಿಯೇ ಹೋಗಿದ್ದಾಳೆ."

ಅವರ ಮನಸ್ಸಿನ ವಿಶ್ವಾಸ ಇದ್ದಕ್ಕಿದ್ದಂತೆ ಮಾಯವಾಗಿ ದುಃಖ ಹಾಗೂ ನಿರಾಶೆಯ ತೀವ್ರ ನೋವು ಅನುಭವಕ್ಕೆ ಬಂತು. ಮನಸ್ಸು ನಶೆಯಲ್ಲಿರುವಾಗಿನ ಸ್ಥಿತಿಯೇ ಹಾಗೆ. ಮನಸ್ಸು ಸ್ಥಿರವಾಗಿ ಯಾವುದನ್ನೂ ಯೋಚಿಸುವುದಿಲ್ಲ.

ಮಾಧವ ಹೇಳಿದ: "ಆದರೆ ಒಂದು ಮಾತು ಕಣಪ್ಪಾ, ಪಾಪ, ಅವಳಿದ್ದಷ್ಟೂ ದಿನ ದುಃಖದಲ್ಲಿಯೇ ಕಾಲ ಹಾಕಿದಳು. ಕೊನೆಯ ತನಕ ಅದೆಷ್ಟು ಕಷ್ಟಪಟ್ಟು ಪ್ರಾಣ ಬಿಟ್ಟಳು!"

ಹಾಗೆ ಹೇಳಿದವನೇ ಕಣ್ಣುಗಳ ಮೇಲೆ ಕೈಗಳನ್ನು ಇಟ್ಟುಕೊಂಡು ಒಂದೇ ಸಮನೆ ಗೋಳೋ ಎಂದು ಅಳತೊಡಗಿದ.

ಘೀಸು ಸಮಾಧಾನ ಹೇಳಿದ: "ಏಕೋ ಅಳುತ್ತೀ...? ಅವಳು ಈ ಮಾಯಾಜಾಲ ದಿಂದ ಪಾರಾದಳು ಎಂದು ಸಂತೋಷಪಡು. ಅಳುತ್ತೀ ಏಕೆ? ಪ್ರಪಂಚದ ಈ ಜಂಜಾಟ ದಿಂದ ಪಾರಾದಳು. ಇಷ್ಟು ಬೇಗ ಈ ಲೋಕದ ಎಲ್ಲ ಬಂಧನಗಳನ್ನೂ ಕಿತ್ತುಹಾಕಿ ಹೋದಳು; ನಿಜಕ್ಕೂ ಪುಣ್ಯ ಮಾಡಿದ್ದಳು."

ಇಬ್ಬರೂ ನಿಂತು ಹಾಡತೊಡಗಿದರು.

"ಠಗಿನೀ ಕ್ಯೊಂ ನೈನಾ ಝುಮಕಾವೇಂ । ಠಗಿನೀ ॥"

ಅಲ್ಲಿಯ ಕುಡುಕರ ದೃಷ್ಟಿ ಇವರ ಕಡೆಗೇ ನಾಟಿತ್ತು. ಅವರಂತೂ ಈ ಲೋಕವನ್ನೇ [illegible]ತು ಹಾಡುತ್ತಿದ್ದರು. ಹಾಗೆ ಹಾಡುತ್ತಿದ್ದವರು ಒಮ್ಮೆಲೆ ಕುಣಿಯಲು ತೊಡಗಿದರು. [illegible] [illegible]ಡತೊಡಗಿದರು. ಭಾವೋನ್ಮತ್ತರಾಗಿದ್ದ ಅವರ ಹಾವಭಾವಗಳೇನು, ಅದೇನು [illegible]. ನೋಡುವವರಿಗೆ ನಿಜಕ್ಕೂ ಒಂದು ಮೋಜು. ಕೊನೆಗೆ ಅವರು ಆ ಕುಡಿತದ ಅಮಲಿನಲ್ಲೇ ಅಲ್ಲಿ ಬಿದ್ದುಕೊಂಡರು.

# ಗುಂಡಾ

ಅವನ ವಯಸ್ಸು ಐವತ್ತಕ್ಕೂ ಮೀರಿತ್ತು. ಆದರೂ ಯುವಕರಿಗಿಂತಲೂ ಹೆಚ್ಚು ದೃಢಕಾಯನೂ ಬಲಿಷ್ಠನೂ ಆಗಿದ್ದನು. ಇನ್ನೂ ಅವನ ಚರ್ಮ ಸುಕ್ಕು ಹಿಡಿದಿರಲಿಲ್ಲ. ತುಂತುರು ಮಳೆಯಲ್ಲಿ, ಪುಷ್ಯಮಾಸದ ಕಗ್ಗತ್ತಲೆಯ ರಾತ್ರಿಗಳಲ್ಲಿ, ಜ್ಯೇಷ್ಠಮಾಸದ ಉರಿ ಬಿಸಿಲಿನಲ್ಲಿ, – ಬರಿಮೈ ಬಿಟ್ಟುಕೊಂಡು ಓಡಾಡುವುದರಲ್ಲಿ ಆತನು ಒಂದು ರೀತಿಯ ಸುಖ ಕಾಣುತ್ತಿದ್ದ. ಚೂಪಾಗಿ ನಿಂತಿದ್ದ ಅವನ ಮೀಸೆಗಳು ಚೇಳಿನ ಕೊಂಡಿಯಂತಿದ್ದು ನೋಡುವವರ ಕಣ್ಣನ್ನು ಕುಕ್ಕುತ್ತಿದ್ದುವು. ಅವನು ಉಡುತ್ತಿದ್ದ ನಾಗಪುರದ ರೇಷ್ಮೆ ಧೋತರದ ಕೆಂಪು ಅಂಚು ಎಷ್ಟೋ ದೂರದಿಂದಲೂ ಜನರ ಗಮನವನ್ನು ಸೆಳೆಯುವಂತಿತ್ತು. ನಡುವಿಗೆ ಅವನು ಕಟ್ಟುತ್ತಿದ್ದ ಆ ಬನಾರಸಿ ರೇಷ್ಮೆಯ ಶಲ್ಯ, ಅದರಲ್ಲಿ ಸಿಕ್ಕಿಸಿರುತ್ತಿದ್ದ ಸೀಪಿಯ ಮುಷ್ಟಿ ಇರುವ ಚೂರಿ – ಇವೂ ಒಂದು ಆಕರ್ಷಣೆ. ಜೊತೆಗೆ ಅವನ ತಲೆಯ ಗುಂಗುರು ಕೂದಲುಗಳ ಮೇಲೆ ಭೂಷಣಪ್ರಾಯವಾಗಿ ಇರುತ್ತಿದ್ದ ಜರಿ ಅಂಚಿನ ಆ ಪೇಟ, ಮತ್ತು ಅವನ ಅಗಲವಾದ ಬೆನ್ನಿನ ಮೇಲೆ ಹರಡಿಕೊಂಡಿರುತ್ತಿದ್ದ ಪೇಟದ ನೆರಿಗೆ. ಅವನ ಉದ್ದವಾದ ಕಂಠದ ಸುತ್ತ ಅಗಲವಾದ ಪಟ್ಟಿ ಇರುವಂತಹ ಒಂದು ತಾಯಿತಿ – ಇದು ಅವನ ಉಡುಪಿನ ಒಂದು ವೈಶಿಷ್ಟ್ಯ. ಅವನ ಕಾಲುನಡಿಗೆ ಎಷ್ಟು ಬಲಯುತವಾಗಿತ್ತು ಎಂದರೆ ಅವನು ನಡೆಯುವಾಗ ಅವನ ಕಾಲಿನ ನರಗಳು ಚಟ್‌ಪಟ್ ಎನ್ನುತ್ತಿದ್ದುವು. ಅವನೇ ಗುಂಡಾ.

ಉಪನಿಷತ್ತಿನ ಅಜಾತಶತ್ರು ಪರಿಷತ್ತಿನಲ್ಲಿ ಬ್ರಹ್ಮವಿದ್ಯೆಯನ್ನು ಕಲಿಯಲು ದೇಶದ ಮೂಲೆಮೂಲೆಯಿಂದ ವಿದ್ವಾಂಸ ಯುವಕರು ಬರುತ್ತಿದ್ದು ಆ ಮೂಲಕ ಕಾಶಿಪಟ್ಟಣ ಪ್ರಸಿದ್ಧಿ ಪಡೆದಿದ್ದ ಕಾಲ ಒಂದಿತ್ತು. ಆದರೆ ಕ್ರಿಸ್ತ ಶಕ ಹದಿನೆಂಟನೆಯ ಶತಮಾನದ ಅಂತಿಮ ಭಾಗದಲ್ಲಿ ಆ ಕೀರ್ತಿಯನ್ನು ಕಾಶಿ ಪಟ್ಟಣ ಕಳೆದುಕೊಂಡಿತ್ತು. ಗೌತಮ ಬುದ್ಧ ಮತ್ತು ಶಂಕರಾಚಾರ್ಯ ಇವರು ಬೋಧಿಸಿದ ತತ್ವಗಳ ಘರ್ಷಣೆಯಿಂದಾಗಿ ಕೆಲವು ಶತಮಾನಗಳಿಂದ ಒಂದೇ ಸಮನೆ ದೇವಾಲಯಗಳು ಮತ್ತು ಮಠಗಳ ಮೇಲೆ ಧ್ವಂಸ ನಡೆದು ಅನೇಕ ತಪಸ್ವಿಗಳ ವಧೆಯಾಗಿದ್ದುದರಿಂದ ಪ್ರಾಯಶಃ ಅವುಗಳೆಲ್ಲ ಮುಚ್ಚಿ ಹೋಗಿದ್ದುವು. ನವಾಗಂತುಕ ಧರ್ಮದ ಉನ್ಮಾದಾವಸ್ಥೆಯಲ್ಲಿ ವೈಷ್ಣವಧರ್ಮದ ಅಸಫಲತೆ ಎದ್ದು ಕಾಣುತ್ತಿತ್ತು. ಪವಿತ್ರತೆ ಮತ್ತು ಸ್ಪೃಶ್ಯತೆ-ಅಸ್ಪೃಶ್ಯತೆ ಇವುಗಳ ಅರ್ಥ ಮಾಯವಾಗತೊಡಗಿತ್ತು. ಎಲ್ಲ ನ್ಯಾಯ ಹಾಗೂ ಬುದ್ಧಿಮತ್ತೆ ಶಸ್ತ್ರಬಲಕ್ಕೆ ಅಧೀನವಾಗುತ್ತಿದ್ದುದನ್ನು ಕಂಡು ಕಾಶಿಪಟ್ಟಣದ ವಿಚ್ಛಿನ್ನ ಹಾಗೂ ನಿರಾಶ ನಾಗರಿಕ ಜೀವನದಲ್ಲಿ ಒಂದು ಹೊಸ ಸಂಪ್ರದಾಯ ಹುಟ್ಟಿಕೊಂಡಿತು. ವೀರತಾ ಈ ಹೊಸ

ಧರ್ಮ ಹಾಗೂ ಸಂಪ್ರದಾಯವಾಗಿತ್ತು. ಕೊಟ್ಟ ವಾಕ್ಯ ಪರಿಪಾಲನೆ, ವೀರರಂತೆ ಬಾಳುವುದು, ಪ್ರಾಣಭಿಕ್ಷೆ ಬೇಡುವಂತಹ ಹೇಡಿಗಳು ಹಾಗೂ ಗಾಯಗೊಂಡು ಬಿದ್ದಿರುವ ಅಸಹಾಯಕ ಪ್ರತಿದ್ವಂದಿಯ ಮೇಲೆ ಶಸ್ತ್ರ ಚಲಾಯಿಸದೆ ಇರುವುದು, ದಮನಕ್ಕೆ ಒಳಗಾಗಿರುವ ದುರ್ಬಲ ವರ್ಗಗಳಿಗೆ ಸಹಾಯ ನೀಡುವುದು ಮತ್ತು ಪ್ರತಿ ನಿಮಿಷವೂ ತಮ್ಮ ಪ್ರಾಣವನ್ನು ಅಪಾಯಕ್ಕೆ ಈಡುಮಾಡಿಕೊಂಡೇ ಸುತ್ತುತ್ತಿರುವುದು ಅವರ ಜೀವನ ವಿಧಾನವಾಗಿರುತ್ತಿತ್ತು. ಅಂಥವರನ್ನು ಕಾಶಿಯ ಜನ ಗುಂಡಾ ಎಂದು ಕರೆಯುತ್ತಿದ್ದರು.

ಜೀವನದಲ್ಲಿ ಯಾವುದಾದರೂ ಅಲಭ್ಯ ಅಭಿಲಾಷೆಯ ಪರಿಣಾಮವಾಗಿ ಪ್ರಾಯಶಃ ಕೆಲವರು ಈ ವೀರವೃತ್ತಿಯನ್ನು ಅಪೇಕ್ಷಿಸಿ ಮುಂದೆ ಬರುತ್ತಿದ್ದರು. ಯಾವುದೋ ಮಾನಸಿಕ ಆಘಾತಕ್ಕೆ ಬಲಿಯಾಗಿ ಆ ವರ್ಗಕ್ಕೆ ಸೇರಲು ನಿಶ್ಚಯಿಸಿದ್ದ ಒಬ್ಬ ವ್ಯಕ್ತಿಯೆಂದರೆ ನನ್ಹಕೂ ಸಿಂಗ್. ಒಬ್ಬ ಪ್ರತಿಷ್ಠಿತ ಜಮೀನ್ದಾರನ ಮಗನಾಗಿದ್ದೂ ಆತ ಗುಂಡಾ ಆಗಲು ನಿರ್ಧರಿಸಿದ್ದ. ಅದರ ಪರಿಣಾಮವಾಗಿಯೇ ತನ್ನ ಸಂಪತ್ತನ್ನೆಲ್ಲ ಎರಡೂ ಕೈಗಳಿಂದ ಪೋಲು ಮಾಡಿದ. ತನ್ನ ಹೊಸ ರೂಪದಲ್ಲಿ ಕಾಣಿಸಿಕೊಳ್ಳುವ ಮತ್ತು ಆ ಮೂಲಕ ಖ್ಯಾತಿಗೆ ಬರುವ ಸಲುವಾಗಿ ಅವನು ಆಡಿದ ಆಟಗಳು ಬಹಳ ಕಾಲದ ವರೆಗೆ ಕಾಶಿಯ ಜನ ಮರೆಯಲು ಸಾಧ್ಯವಾಗಲಿಲ್ಲ. ವಸಂತಋತುವಿನ ಕಾಲದಲ್ಲಿ ಪ್ರಹಸನ ಅಭಿನಯಿಸಲು ಆ ಕಾಲದಲ್ಲಿ ವಿಶೇಷ ಹಣ ಖರ್ಚಾಗುತ್ತಿತ್ತು. ನಿರ್ಭೀತ ಮನೋಧರ್ಮ ಬೇಕಾಗುತ್ತಿತ್ತು, ಪರಿಣಾಮ ಲೆಕ್ಕಿಸದಂತಹ ಒಂದು ರೀತಿಯ ದಿಟ್ಟತನ ಹಾಗೂ ಮುನ್ನುಗ್ಗುವಿಕೆಯ ಆವಶ್ಯಕತೆ ಇತ್ತು. ಒಂದು ಬಾರಿ ನನ್ಹಕೂ ಸಿಂಗ್ ಇಂತಹ ವಿಚಿತ್ರ ವೇಷ ಧರಿಸಿ ನಡೆದ – ಒಂದು ಕಾಲಿನಲ್ಲಿ ನೂಪುರ, ಒಂದು ಕೈಗೆ ಕಡಗ, ಒಂದು ಕಣ್ಣಿಗೆ ಕಾಡಿಗೆ, ಒಂದು ಕಿವಿ ತುಂಬ ಮುತ್ತಿನ ಆಭರಣ, ಇನ್ನೊಂದು ಕಿವಿಯಲ್ಲಿ ಹರಿದ ಚಪ್ಪಲಿಗಳು, ಒಂದು ಕೈಯಲ್ಲಿ ರತ್ನಖಚಿತ ಹಿಡಿ ಇರುವ ಖಡ್ಗ – ಇಂತಹ ವಿಚಿತ್ರ ವೇಷದಲ್ಲಿ ಒಂದು ಕೈಯನ್ನು ಆ ಭೂಷಣಾಲಂಕೃತಳಾದ ಪ್ರೇಯಸಿಯ ಹೆಗಲ ಮೇಲೆ ಇಟ್ಟು ಈ ರೀತಿ ಹಾಡಿದ್ದ – "ಕಹೀಂ ಬೈಗನ್‌ವಾಲಿ ಮಿಲೇ ತೋ ಬುಲಾ ದೇನಾ."

ಬನಾರಸ್ಸಿನ ಹೊರಗಿರುವ ತೋಟಗಳಲ್ಲಿ, ಸ್ವಚ್ಛ ನೀರಿರುವ ಕೊಳಗಳ ಪಕ್ಕದಲ್ಲಿ, ಗ್ರಾಮಗಳ ಸಮೀಪದ ಹೊಳೆಗಳಲ್ಲಿ ಸಂಚರಿಸುತ್ತಿದ್ದ ದೋಣಿಗಳಲ್ಲಿ ಅವನ ದರ್ಶನ ಸಾಮಾನ್ಯವಾಗಿ ಆಗುತ್ತಿತ್ತು. ಆಗೊಮ್ಮೆ ಈಗೊಮ್ಮೆ ಜೂಜುಕಟ್ಟೆಯಿಂದ ಹೊರ ಬಂದು ಚೌಕದಲ್ಲಿ ಕಾಣಿಸಿಕೊಂಡರೆ ಕಾಶಿಯ ರಸಿಕ ವೇಶ್ಯೆಯರು ಅವನನ್ನು ಕಂಡು ಮುಗುಳ್ನಕ್ಕು ಅವನಿಗೆ ಸ್ವಾಗತ ಬಯಸುತ್ತಿದ್ದರು ಮತ್ತು ಅವನ ದೃಢಕಾಯವನ್ನೇ ನೋಡುತ್ತಾ ನಿಂತುಬಿಡುತ್ತಿದ್ದರು. ಅವನು ಕೆಳಗೆ ಪಾನ್‌ಬೀಡಾ ಮಾರುವವನ ಅಂಗಡಿಯಲ್ಲಿ ಅವರ ಹಾಡುಗಳಿಗೆ ಕಿವಿಗೊಡುತ್ತಿದ್ದನೇ ಹೊರತು ಮೇಲೆ ಹೋಗುತ್ತಿರಲಿಲ್ಲ. ಜೂಜಿನಲ್ಲಿ ಗೆದ್ದು ತರುತ್ತಿದ್ದ ಹಣವನ್ನು ಬೊಗಸೆ ಬೊಗಸೆಯಾಗಿ ಕೆಳಗಿನಿಂದಲೇ ಅವರ ಕಿಟಕಿಗಳ ಮೂಲಕ ಎಸೆಯುತ್ತಿದ್ದುದನ್ನು ಕಂಡು ಸಮಾಜದ

ಜನ ಪುಳಕಿತರಾಗುತ್ತಿದ್ದರು.. ಆಗ ಅವನು ಗೊಳ್ಳೆಂದು ನಕ್ಕುಬಿಡುತ್ತಿದ್ದ. ಯಾರಾದರೂ 'ಮೇಲೆ ಹೋಗಬಾರದೆ?' ಎಂದು ಸೂಚಿಸಿದರೆ, ಅವನು ನಿರುತ್ಸಾಹದ ಉಸಿರೊಂದನ್ನು ಬಿಟ್ಟು ಸುಮ್ಮನಾಗಿಬಿಡುತ್ತಿದ್ದ.

ಅವನು ಈಗತಾನೇ ಬನ್ನಿಯ ಜೂಜುಕಟ್ಟೆಯಿಂದ ಹೊರಗೆ ಬಂದಿದ್ದ. ಇವೊತ್ತು ಅವನು ಜೂಜಿನಲ್ಲಿ ಗೆದ್ದಿರಲಿಲ್ಲ. ಅಲ್ಲಿ ನಡೆದ ಹದಿನಾರು ಸುಂದರಿಯರ ನೃತ್ಯ ಕೂಡ ಅವನ ಮನಸ್ಸಿಗೆ ಬಂದಿರಲಿಲ್ಲ. ಪಾನ್‌ಬೀಡಾ ಮಾರುವ ಮುನ್ನೂವಿನ ಅಂಗಡಿಯಲ್ಲಿ ಹೋಗಿ ಕುಳಿತುಕೊಳ್ಳುತ್ತಾ ಅವನು ಹೇಳಿದ – "ಇವೊತ್ತು ಘಳಿಗೆ ಕೂಡಿ ಬರಲಿಲ್ಲ ಮುನ್ನೂ."

"ಯಾಕೆ ಧಣಿ?... ನಿಮಗೇನು ಕೊರತೆ? ನಾವಿರುವುದು ಯಾಕೆ? ನಮ್ಮಲ್ಲಿ ಏನಿದೆಯೋ ಅದೆಲ್ಲ ನಿಮ್ಮದೇ ಆಗಿದೆ."

"ನೀನು ಬಿಡು, ಶುದ್ಧ ಮೂರ್ಖ. ನನ್ನಕೂಸಿಂಗನನ್ನು ಇನ್ನೂ ನೀನು ತಿಳ್ಕೊಂಡೇ ಇಲ್ಲ. ಅವನು ಒಬ್ಬರಿಂದ ಹಣ ತಕೊಂಡು ಜೂಜಾಡಿದ ಅಂತ ತಿಳಿದರೆ, ಅಂದು ಅವನು ಸತ್ತಾ ಅಂತ ತಿಳಿ. ಜೂಜಾಡಲು ನಾನು ಯಾವಾಗ ಹೋಗ್ತೀನಿ ಅನ್ನೋದು ನಿನಗೆ ಗೊತ್ತೇ ಇಲ್ಲ. ನನ್ನ ಹತ್ತಿರ ಯಾವತ್ತು ಒಂದು ಮೂರು ಕಾಸು ಕೂಡಾ ಇರೋಲ್ಲವೋ ಆದಿನ ಜೂಜುಕಟ್ಟೆಗೆ ಹೋಗುತ್ತೇನೆ. ಹೋಗಿ ನೋಡಿದಾಗ ಯಾವ ಕಡೆ ಜಾಸ್ತಿ ಸೇರಿರುತ್ತದೋ ಅದರ ಮೇಲೆ ಬಾಜಿ ಕಟ್ಟುತ್ತೇನೆ. ಕೊನೆಗೆ ಅದೇ ಬಾಜಿ ಗೆದ್ದು ಬರುತ್ತೇನೆ. ಬಾಬಾ ಕೀನಾರಾಮ್ ಅವರ ವರದಾನ, ಇದು."

"ಹಾಗಾದರೆ ಇವೊತ್ತು ಯಾಕೆ ಹೀಗಾಯಿತು ಧಣಿ?"

"ಮೊದಲನೆಯ ಬಾಜಿ ನನ್ನ ಕಡೆಗೇ ಆಯ್ತು. ಆಮೇಲೆ ನಾಲ್ಕೈದು ಬಾರಿ ಬಾಜಿ ಕಟ್ಟಿದಾಗ ಬಂದದ್ದು ಹೋಯಿತು. ಹಾಗೆ ಹೋಗಿಯೂ ಐದು ರೂಪಾಯಿ ಉಳಿದಿವೆ. ಇವುಗಳಪೈಕಿ ಒಂದನ್ನು ಬೀಡಾಗೋಸ್ಕರ ನಿನ್ನ ಹತ್ತಿರ ಇಡು. ಉಳಿದ ನಾಲ್ಕು ರೂಪಾಯಿಗಳನ್ನು ಮಲ್ಲಕ್ಕಿಗೆ ಕೊಟ್ಟುಬಿಡು. ಅವನು ದುಲಾರಿಗೆ ಹಾಡಲಿಕ್ಕೆ ಹೇಳಲಿ; ಹಾಂ, ಅದೇ ಹಾಡು – "ಬಿಲಮಿ ವಿದೇಸ ರಹೇ" – (ಪ್ರಿಯತಮ ಹೊರದೇಶದಲ್ಲಿದ್ದಾನೆ.)

ನನ್ನಕೂಸಿಂಗನ ಮಾತು ಕೇಳುವುದೇ ತಡ, ಚಿಲಮಿನ ಮೇಲೆ ಕೆಂಡದ ಚೂರು ಹಾಕುತ್ತಿದ್ದ ಮಲ್ಲಕೀ ಗಾಬರಿಗೊಂಡು ಸೆಟೆದು ನಿಂತ. ಮತ್ತು ಮಹಡಿಯ ಮೆಟ್ಟಲುಗಳನ್ನು ಓಡಿ ಓಡಿ ಹತ್ತತೊಡಗಿದ. ಚಿಲಮು ಎಳೆದಿದ್ದುದರಿಂದ ಅದರ ಘಾಟು ನೆತ್ತಿಗೂ ಹತ್ತಿತ್ತು. ಅದರಿಂದ ಮೆಟ್ಟಲು ಹತ್ತುವಾಗ ಎಡವಿ ಪೆಟ್ಟೂ ತಿಂದ. ಆದರೆ ನನ್ಹಕೂಸಿಂಗನ ಹುಬ್ಬಿನ ಗಂಟು ನೋಡುವ ಸಾಹಸ ಅವನದಾಗಿರಲಿಲ್ಲ. ಆ ದಿನದ ನನ್ಹಕೂಸಿಂಗನ ಮುಖಮುದ್ರೆಯನ್ನು ಅವನು ಇನ್ನೂ ಮರೆಯಲು ಸಾಧ್ಯವಾಗಿರಲಿಲ್ಲ. ಜೂಜಿನಲ್ಲಿ ಗೆದ್ದು ಹಣ ದೋಚಿಕೊಂಡು, ತೋಡಾ ತೊಟ್ಟು ಬಂದಿದ್ದ

ನನ್ಹಕೂಸಿಂಗ್ ಬೀಡಾ ಅಂಗಡಿಯಲ್ಲಿ ಕುಳಿತಿದ್ದ. ಮತ್ತೆ "ಇದು ಯಾರ ಬಾರಾತ್?" ಎಂದು ಕೇಳಿದ್ದ.

"ಠಾಕುರ್ ಬೋಧಿಸಿಂಗನ ಮಗನ್ದು–" ಬೀಡಾ ಅಂಗಡಿಯ ಮನ್ನೂ ಇಷ್ಟು ಹೇಳಿದುದೇ ತಡ, ನನ್ಹಕೂ ಹೇಳಿದ: "ಮನ್ನೂ, ಇದು ಸಾಧ್ಯವಿಲ್ಲ. ಇವೊತ್ತು ಈ ಕಡೆಯಿಂದ ಬಾರಾತ್ ಹೋಗುವ ಹಾಗಿಲ್ಲ. ಹಾಗೂ ಹೋಗಬೇಕಾದರೆ ಬೋಧಿಸಿಂಗ್ ನಮ್ಮ ಕೈಯಿಂದ ಗತಿ ಕಾಣಿಸಿಕೊಂಡಮೇಲೇ ಹೋಗಬೇಕಾಗುತ್ತದೆ."

ಮುನೂ ಕೇಳಿದ–"ಇದಕ್ಕೆ ನಾನೇನು ಮಾಡಬೇಕು, ಧಣಿ?"

ನನ್ಹಕೂ ತನ್ನ ಕತ್ತಿನಲ್ಲಿ ತಾಯಿತಿಯಂತಿದ್ದ ಪಟ್ಟಿಯನ್ನು ಮೇಲಕ್ಕೆ ಮಾಡಿಕೊಳ್ಳುತ್ತಾ, ಮಲ್ಲುಕಿಯನ್ನು ಉದ್ದೇಶಿಸಿ ಗುಡುಗಿದ್ದ–"ಮಲುಕಿಯಾ. ಇನ್ನೂ ನೋಡ್ತಾ ನಿಂತಿದ್ದೆಯೇನೋ? ಹೋಗು, ಹೋಗಿ ಠಾಕುರ್‌ಗೆ ಹೇಳು, ಬಾಬೂ ನನ್ಹಕೂಸಿಂಗ್ ಇವೊತ್ತು ನಿಮ್ಮನ್ನು ಎದುರಿಸಲು ಇಲ್ಲೇ ನಿಂತಿದ್ದಾರೆ ಎಂದು. ಮಗನ ಬಾರಾತ್ ತರುವ ಮೊದಲು ಸ್ವಲ್ಪ ಯೋಚನೆ ಮಾಡಿ ಬನ್ನಿ ಎಂದು ಹೇಳು."

ಮಲ್ಲುಕಿ ನಡುಗುತ್ತಾ ಬೋಧಿಸಿಂಗನ ಬಳಿಗೆ ಹೋದ. ಬೋಧಿಸಿಂಗ್‌ಮತ್ತು ನನ್ಹಕೂಸಿಂಗ್ ಪರಸ್ಪರ ಎದಿರುಬದಿರಾಗಿ ಬಂದು ಐದು ವರ್ಷಗಳಾಗಿದ್ದುವು. ಒಂದು ದಿನ ಜೂಜುಕಟ್ಟೆ ವ್ಯವಹಾರದಲ್ಲಿ ಮಾತಿಗೆ ಮಾತು ಬೆಳೆದು ಸದ್ಯ ಅವನು ಬಚಾವ್ ಆಗಿದ್ದ. ಆಮೇಲೆ ಎದಿರುಬದಿರಾಗುವ ಸಂದರ್ಭ ಬಂದಿರಲಿಲ್ಲ. ಇವೊತ್ತು ನನ್ಹಕೂ ಜೀವದ ಹಂಗು ಬಿಟ್ಟು ಒಬ್ಬನೇ ಅವನನ್ನು ಎದುರಿಸಲು ಸಿದ್ಧನಾಗಿ ನಿಂತಿದ್ದಾನೆ. ಬೋಧಿಸಿಂಗನಿಗೂ ಅವನ ಕೆಚ್ಚು ಅರ್ಥವಾಗಿದೆ. ಎಂದೇ, ಆತ ಮಲ್ಲುಕೀ ಜೊತೆಗೆ ಹೀಗೆ ಹೇಳಿ ಕಳಿಸಿದ–"ಹೋಗೆಲೇ, ಹೋಗಿ ಹೇಳಿಬಿಡು ನಮಗೇನು ಗೊತ್ತು, ಬಾಬು ಸಾಹೇಬರು ಅಲ್ಲಿ ನಿಂತಿದ್ದಾರೆ ಅಂತ. ಅವರು ಅಲ್ಲಿ ನಿಂತಿದ್ದಾರೆ ಎಂದಮೇಲೆ, ಇಬ್ಬರಲ್ಲಿ ಒಬ್ಬರು ಬಾರಾತ್ ತೆಗೆದುಕೊಂಡು ಹೋದರಾಯಿತು. ಇಬ್ಬರ ಆಗತ್ಯವಿಲ್ಲ."

ಬೋಧಿಸಿಂಗ್ ಅಲ್ಲಿಂದಲೇ ಹಿಂದಿರುಗಿದರು. ನನ್ಹಕೂಸಿಂಗ್ ಸ್ವತಃ ಬಾರಾತ್ ತೆಗೆದುಕೊಂಡು ಹೋದನು. ಮಲ್ಲಕಿಯೂ ಬಾರಾತಿನ ಮುಂಬಾಗದಲ್ಲಿ ಭುಜದ ಮೇಲೆ 'ತೋಡಾ' ಹೊತ್ತುಕೊಂಡು ಹೋಗಬೇಕಾಗಿ ಬಂದಿತ್ತು. ಮದುವೆಗೆ ಮಾಡಬೇಕಾಗಿದ್ದ ಖರ್ಚನ್ನೆಲ್ಲಾ ನನ್ಹಕೀಸಿಂಗನೇ ಆದಿನ ಮಾಡಿದ್ದ. ಮದುವೆಯೆಲ್ಲ ಮುಗಿದು ಮಾರನೆಯ ದಿನ ಅದೇ ಅಂಗಡಿಯ ವರೆಗೆ ಬಂದು ನನ್ಹಕೀಸಿಂಗ್ ಅಲ್ಲಿಯೇ ನಿಂತು ಮದುವೆ ಗಂಡು ಹಾಗೂ ಅವನ ಬಾರಾತನ್ನು ಮನೆಗೆ ಕಳುಹಿಕೊಟ್ಟಿದ್ದ.

ಆದಿನ ಮಲ್ಲುಕಿಯಾಗೂ ಹತ್ತು ರೂಪಾಯಿ ಸಿಕ್ಕಿತ್ತು. ಅದು ನೆನಪಿಗೆ ಬಂದಿತ್ತು ಅವನಿಗೆ. ನನ್ಹಕೂಸಿಂಗನ ಆಜ್ಞೆ ಕಿವಿಗೆ ಬಿದ್ದಮೇಲೂ ಕುಳಿತಿರುವುದೂ ಯಮರಾಯನಿಗೆ ಆಹ್ವಾನ ಕೊಡುವುದೂ ಒಂದೇ ಎಂದು ಅವನು ತಿಳಿದಿದ್ದನು. ಎಂದೇ ಅವನು ಓಡಿ

ಹೋಗಿ ದುಲಾರಿಗೆ ಹೇಳಿದ – ಸಾರಂಗಿಯವನು ನೀರು ಕುಡಿದು ಬರುವ ವರೆಗೆ ನಾವು ಜೊತೆ ಕೊಡುತ್ತೇವೆ, ನೀನು ಹಾಡು.

"ಬಾಪರೇ, ಮತ್ತೇನಾದರೂ 'ಆಫತ್' ಬಂದಿದೆಯೇ ಬಾಬೂ ಸಾಹೇಬರೇ? ಸಲಾಂ", ಎಂದು ದುಲಾರಿ ಕಿಟಕಿಯಿಂದ ಇಣುಕು ಹಾಕಿ ಮುಗುಳ್ನಕ್ಕಿದ್ದಳು. ನನ್ಹಕೂ ಸಿಂಗ್ ಅವಳ ಸಲಾಮಿಗೆ ಉತ್ತರ ಕೊಟ್ಟು, ಬೇರೆ ಯಾರೋ ಅಲ್ಲಿ ಬರುತ್ತಿದ್ದವರ ಕಡೆ ತಿರುಗಿದ.

ಕೈಯಲ್ಲಿ ಸಣ್ಣಗಿರುವ ಒಂದು ಬೆತ್ತ, ಕಣ್ಣುಗಳಲ್ಲಿ ಸುರ್ಮಾ, ಬಾಯಲ್ಲಿ 'ಪಾನ್', ಮೆಹಂದಿ ಹಚ್ಚಿರುವ ಕೆಂಪು ಗಡ್ಡ, ಅದರ ಬಿಳಿಯ ಬೇರು ಅಲ್ಲಲ್ಲಿ ಕಾಣಿಸುತ್ತಿದೆ, 'ಖುಬ್ಬೇದಾರ್' ಟೊಪ್ಪಿ, ಮೊಣಕಾಲಿನ ವರೆಗೂ ಬಂದಿರುವ ನಿಲುವಂಗಿ, – ಅವನ ಜೊತೆಗೆ ದಿರಸು ಧರಿಸಿದ ಇಬ್ಬರು ಸಿಪಾಹಿಗಳು. ಯಾರೋ ಮೌಲ್ವಿ ಸಾಹೇಬನಿರ ಬೇಕು. ಅವನನ್ನು ನೋಡಿ ನನ್ಹೂಕಿಸಿಂಗ್ ನಕ್ಕುಬಿಟ್ಟ. ನನ್ಹೂಕಿಯ ಕಡೆ ನೋಡದೆಯೆ ಮೌಲ್ವಿ ಒಬ್ಬ ಸಿಪಾಹಿಯ ಕಡೆಗೆ ತಿರುಗಿ ಹೇಳಿದ – ಹೋಗಿ ದುಲಾರಿಗೆ ಹೇಳಿಬಿಡು, ಈದಿನ ರೆಸಿಡೆಂಟ್ ಸಾಹೇಬರ ಕೋಠಿಗೆ ಹೋಗಬೇಕು ಅಂತ. ಈಗಲೇ ಹೋಗಬೇಕು ಅಂತ ಹೇಳು. ನೋಡು, ಅಲ್ಲಿಯ ವರೆಗೆ ನಾವು "ಜಾನ್ ಅಲಿಯ ಹತ್ತಿರ ಒಂದಿಷ್ಟು ಅತ್ತರ್ ತಕೊಳ್ತಾ ಇರ್ತೀವಿ." ಸಿಪಾಹಿ ದುಲಾರಿಯ ಮನೆ ಮೆಟ್ಟಲುಗಳನ್ನು ಹತ್ತುತ್ತಿದ್ದ. ಮೌಲ್ವಿ ಇನ್ನೊಂದು ಕಡೆಗೆ ಹೋಗುತ್ತಿದ್ದಂತೆಯೇ ಇತ್ತ ನನ್ಹೂ ಕೆಳಗಿನಿಂದಲೇ ಅಬ್ಬರಿಸಿದ – "ದುಲಾರಿ, ನಾವು ಇಲ್ಲಿ ಎಷ್ಟು ಹೊತ್ತೂ ಅಂತ ಕುಳಿತಿರೋದು? ಇನ್ನೂ ಸಾರಂಗಿಯೂ ಬಂದಿಲ್ಲವೇನು?"

ದುಲಾರಿ ಹೇಳಿದಳು– "ವಾಹ್ ಬಾಬೂ ಸಾಹೇಬ್, ನಿಮಗಾಗಿಯೆಂದೇ ನಾನು ಇಲ್ಲಿಗೆ ಬಂದು ಕುಳಿತಿದ್ದೇನೆ. ಕೇಳಿ, ನೀವಂತೂ ಯಾವತ್ತೂ ಮೇಲೆ..." ಅದನ್ನು ಕೇಳಿ ಮೌಲ್ವಿ ಕೆಂಡ ಕಾರುತ್ತಾ ಹೇಳಿದ– "ಚೌಬದಾರ್, ಇನ್ನೂ ಆ 'ಸುಅರ್ ಕಿ ಬಚ್ಚಿ' ಕೆಳಗೆ ಇಳೀಲಿಲ್ಲವೇನು? ಕೊತ್ವಾಲನ ಬಳಿಗೆ ಹೋಗಿ ಮೌಲ್ವಿ ಅಲ್ಲಾವುದ್ದೀನ್ ಕುಬರಾ ಕರೀತಿದ್ದಾರೆ ಅಂತ ಹೇಳು. ಬಂದು ಇವಳನ್ನು ವಿಚಾರಿಸಿಕೊಳ್ಳಲಿ. ನವಾಬರ ಕಾಲ ಹೋದದ್ದೇ ಹೋಯಿತು, ಈ ಕಾಫರರ ಕೊಬ್ಬು ಹೆಚ್ತಾ ಇದೆ."

ಕುಬರಾ ಮೌಲ್ವಿ! ಬಾಪರೇ, – ಬೀಡಾ ಅಂಗಡಿಯವನು ತನ್ನ ಅಂಗಡಿ ಎತ್ತುವ ಸಿದ್ಧತೆ ಮಾಡಿಕೊಂಡ. ಹತ್ತಿರದಲ್ಲಿಯೇ ಒಂದು ಅಂಗಡಿಯ ಮುಂದೆ ಕೂತು ತೂಕಡಿಸುತ್ತಾ ಇದ್ದ ಬಜಾಜ್ ಗಾಬರಿ ಬಿದ್ದು ಏಳಲು ಹೋಗಿ ತಲೆ ಬಡಿದುಕೊಂಡ. ಇದೇ ಮೌಲ್ವಿ ತಾನೇ ಮಹಾರಾಜ ಚೇತ್‌ಸಿಂಗರ ಹತ್ತಿರ ಮೂರೂಕಾಲು ಸೇರಿನಷ್ಟು ಇರುವೆಯ... ಕೇಳಿದ್ದನಲ್ಲವೇ? ಮೌಲ್ವಿ ಅಲ್ಲಾವುದ್ದೀನ್ ಕುಬರಾ ಬಂದಿದ್ದಾನೆ ಎಂದು ಪೇಟೆಯಲ್ಲೆಲ್ಲ ಕೋಲಾಹಲ ಹಬ್ಬಿತು. ನನ್ಹಕೂಸಿಂಗ್ ಮನ್ನೂಸಿಂಗನಿಗೆ ಹೇಳಿದ – "ಸುಮ್ಮನೆ ನಿನ್ನ ಪಾಡಿಗೆ ನೀನು ಕೂತು ವ್ಯಾಪಾರ ಮಾಡೋಕಾ

ಗೋಲ್ವೇನು?" ದುಲಾರಿಗೆ ಹೇಳಿದ – "ಅಲ್ಲಿಂದಲೇ ಹಾಡು... ಈ ಕಡೆ ಆ ಕಡೆ ಸರಿಯುವುದೂ ಬೇಡ – ಹಾಡು, ನಿನ್ನಷ್ಟಕ್ಕೆ. ಇಂತಹ ಬಿಕನಾಸಿಗಳನ್ನೆಷ್ಟೋ ನಾವು ನೋಡಿದ್ದೇವೆ. ಮೊನ್ನೆ ಮೊನ್ನೆ ವರೆಗೆ ನಾಲ್ಕು ಜನರ ಮುಂದೆ ಪುಡಿಕಾಸುಗಳಿಗೆ ಕೈಯೊಡ್ಡಿ ಜೀವನ ನಡೆಸ್ತಾ ಇದ್ದ ಮನುಷ್ಯ ಈಗ ಜಬರದಸ್ತು ಮಾಡಲು ಬಂದಿದ್ದಾನೆ!"

ಈಗ ಕುಬರಾ ತಿರುಗಿ ಅವನ ಕಡೆ ನೋಡಿದ – "ಯಾರೋ ಈ ಪಾಖಂಡಿ?"

"ನಿನ್ನ ಕಕ್ಕಾ ಬಾಬೂ ನನ್ಹಕೂಸಿಂಗ್, ತಿಳೀತೇನು?" ಎಂದು ಹೇಳಿ ಅದರ ಜೊತೆಗೇ ಬಲವಾಗಿ ಫಟೀರೆಂದು ಒಂದು ಬನಾರಸಿ ಝಾಪಡ ಬಿಗಿದ. ಕುಬರಾನ ತಲೆ ಗಿರ‍್ರನೆ ಸುತ್ತತೊಡಗಿತು. ಲೇಸಿನ ದಿರಸು ಧರಿಸಿ ಬಂದಿದ್ದ ಸಿಪಾಹಿಗಳು ಬೇರೆ ದಿಕ್ಕಿಗೆ ಓಡಿದರು. ಮತ್ತು, ಮೌಲ್ವಿ ಸಾಹೇಬರು ಬದುಕಿದರೆ ಸಾಕು ಎನ್ನುವ ರೀತಿಯಲ್ಲಿ ತಾಳುತ್ತಾ, ಬೀಳುತ್ತಾ, ಹೇಗೋ ಜಾನ್ ಅಲಿಯ ಅಂಗಡಿಗೆ ಬಂದು ಸೇರಿಕೊಂಡರು.

ಜಾನ್ ಅಲಿ ಮೌಲ್ವಿಯವರನ್ನು ಕೇಳಿದ – "ಮೌಲ್ವಿ ಸಾಹೇಬ್, ನೀವಾದರೂ ಏಕೆ ಆ ಗುಂಡಾನ ಎದುರು ನಿಲ್ಲುವ ಸಾಹಸ ಮಾಡಿದಿರಿ? ಸದ್ಯ ನೀವು ಅವನ ಕೈಯಲ್ಲಿ ಇಷ್ಟಕ್ಕೇ ಬಚಾವಾಗಿ ಬಂದರಲ್ಲ!" ಕುಬರಾನ ಬಾಯಿಂದ ಮಾತೇ ಹೊರಡುತ್ತಿರ ಲಿಲ್ಲ... "ಬಿಲಮಿ ವಿದೇಹ ರಹೇ," ಹಾಡು ಮುಕ್ತಾಯವಾಯಿತು. ಯಾರೂ ಆ ಕಡೆ ಸುಳಿಯಲಿಲ್ಲ. ಆಗ ನನ್ಹಕೂಸಿಂಗ್ ನಿಧಾನವಾಗಿ ತೂರಾಡುತ್ತಾ ಇನ್ನೊಂದು ದಾರಿ ಹಿಡಿದು ಹೊರಟು ಹೋದ. ಅವನು ಹೋದ ಸ್ವಲ್ಪ ಹೊತ್ತಿಗೆ ರೇಷ್ಮೆ ಬಟ್ಟೆಯಿಂದ ಮುಚ್ಚಿದ್ದ ಒಂದು ಮೇನೆ... ಅಲ್ಲಿಗೆ ಬಂತು. ಅದರ ಜೊತೆಗೆ ಒಬ್ಬ ಸಿಪಾಹಿ ಇದ್ದ. ಅವನು ಹೋಗಿ ದುಲಾರಿಗೆ ರಾಜಮಾತೆಯ ಆಜ್ಞೆ ತಿಳಿಸಿದ.

ದುಲಾರಿ ಬೇರೆ ಮಾತಾಡದೆ ಹೋಗಿ ಮೇನೆಯಲ್ಲಿ ಕುಳಿತಳು. ಧೂಳು ಮತ್ತು ಸಾಯಂಕಾಲದ ಹೊಗೆಯಿಂದ ಕೂಡಿದ್ದ ಮೇನೆ ಬನಾರಸ್ಸಿನ ಸಣ್ಣ ಪುಟ್ಟ ಬೀದಿಗಳ ಮಾರ್ಗವಾಗಿ ಶಿವಾಲಯ ಘಾಟ್ ಕಡೆಗೆ ಹೋಯಿತು.

(೨)

ಕೊನೆಯ ಶ್ರಾವಣ ಶನಿವಾರ. ರಾಜಮಾತಾ ಪನ್ನಾ ಶಿವಾಲಯದಲ್ಲಿ ಕುಳಿತು ಪೂಜೆ ಮಾಡುತ್ತಿದ್ದಳು. ದುಲಾರಿ ಹೊರಗೆ ಕುಳಿತು ಇನ್ನು ಕೆಲವು ಜನ ಹೆಂಗಳೆಯರ ಜೊತೆಗೆ ಭಜನೆಗಳನ್ನು ಹಾಡುತ್ತಿದ್ದಳು. ಮಂಗಳಾರತಿ ಮುಗಿದ ಮೇಲೆ ರಾಜಮಾತಾ ಪನ್ನಾ ದೇವರಿಗೆ ಪುಷ್ಪಾಂಜಲಿಯನ್ನು ಭಕ್ತಿಭಾವದಿಂದ ಅರ್ಪಿಸಿ ಶಿವನ ಪಾದಗಳಿಗೆರಗಿ ಸಾಷ್ಟಾಂಗ ನಮಸ್ಕಾರ ಮಾಡಿದ ಮೇಲೆ ಪ್ರಸಾದಸ್ವೀಕರಿಸಿ ಹೊರಡುವಾಗ ದುಲಾರಿ ಅವರ ಕಣ್ಣಿಗೆ ಬಿದ್ದಳು. ದುಲಾರಿ ಕೈಮುಗಿದು, "ಮೊದಲೇ ಬಂದು ತಲಪುತ್ತಿದ್ದೆ

ದೇವೀಜಿ, ಆದರೆ ಏನು ಮಾಡಲಿ, ಆ ಕುಬರಾ ಮೌಲ್ವಿ ರೆಜಿಮೆಂಟ್ ಸಾಹೇಬನಲ್ಲಿಗೆ ಎಳೆದುಕೊಂಡು ಹೋಗಲು ಬಂದಿದ್ದ. ಅದೇ ಝುಂಝಾಟದಲ್ಲಿ ಗಂಟೆಗಳು ಕಳೆದು ಹೋದುವು. ಸರ್ಕಾರ್ ಕ್ಷಮಿಸಬೇಕು."

"ಕುಬರಾ ಮೌಲ್ವಿ! ಎಲ್ಲೆಲ್ಲೂ ಅವನದೇ ಮಾತಾಗಿದೆ. ಅವನು ಇಲ್ಲಿಗೂ ಬಂದು ಏನಾದರೂ..." ಯಾವ ಕಾರಣದಿಂದಲೋ ಏನೋ ವಾಕ್ಯವನ್ನು ಮುಗಿಸದೆ ಮಾತಿನ ಧಾಟಿಯನ್ನು ಬದಲಾಯಿಸುತ್ತಾ, "ಹಾಂ, ಆಮೇಲೆ ಏನಾಯಿತು? ಇಲ್ಲಿಗೆ ಹ್ಯಾಗೆ ಬಂದೆ?" ಎಂದು ಕೇಳಿದಳು.

"ಬಾಬೂ ನನ್ಹಕೂಸಿಂಗ್ ಅಷ್ಟರಲ್ಲೇ ಬಂದರು. ನಾನು ಹೇಳಿದೆ–'ರಾಜಮಾತೆಯವರು ಪೂಜೆಗೆ ಹೊರಟಿದ್ದಾರೆ, ಭಜನ್ ಹಾಡಲು ಹೋಗಬೇಕು, ಇವನು ಅವಕಾಶ ಕೊಡುತ್ತಿಲ್ಲ ಎಂದು. ಅದನ್ನು ಕೇಳಿ ಅವರು ಮೌಲ್ವಿಗೆ ಒಂದು ಬಿಗಿದರು. ಅವನ ತಲೆ ಸುತ್ತಿಬಂತು. ಹೀಗಾಗಿ ನಾನು ಇಲ್ಲಿಗೆ ಬರಲು ಅಂತೂ ಸಾಧ್ಯವಾಯಿತು.

"ಯಾರು? ಬಾಬೂ ನನ್ಹಕೂಸಿಂಗ್?"

ದುಲಾರಿ ತಲೆ ತಗ್ಗಿಸಿ ಹೇಳಿದಳು–"ಏನು ಸರ್ಕಾರ್, ತಮಗೆ ಗೊತ್ತಿಲ್ಲವೇ? ಬಾಬು ನಿರಂಜನ ಸಿಂಗರ ಮಗ. ನಾನು ಆಗಿನ್ನೂ ಚಿಕ್ಕವಳಿದ್ದಾಗ ತಮ್ಮ ತೋಟದಲ್ಲಿ ಉಯ್ಯಾಲೆ ಆಡ್ತಾ ಇದ್ದೆ. ಆಗಲೇ ತಾನೇ ನವಾಬರ ಆನೆ ಕೆರಳಿ ನುಗ್ಗಿ ಬಂದಿದ್ದು? ಆಗ ಬಾಬೂ ನಿರಂಜನ ಸಿಂಗ್ ಅವರ ಕುಮಾರರು ತಾನೆ ನಮ್ಮನ್ನೆಲ್ಲ ಕಾಪಾಡಿದ್ದು ನೆನಪಿಲ್ಲವೆ?"

ಆ ಹಳೆಯ ಘಟನೆಯನ್ನು ಸ್ಮರಿಸಿಕೊಂಡಾಗ ರಾಜಮಾತಾ ಮುಖ ಅದೇಕೆ ವಿವರ್ಣಗೊಂಡಿತೋ ತಿಳಿಯದು. ಮತ್ತೆ ಸಾವರಿಸಿಕೊಂಡು ಕೇಳಿದ್ದಳು–"ಬಾಬೂ ನನ್ಹಕೂ ಸಿಂಗ್ ಸವಾರಿ ಈ ಕಡೆ ಹೇಗೆ ಬಂತು?"

ದುಲಾರಿ ಮುಗುಳ್ನಕ್ಕು ತಲೆ ತಗ್ಗಿಸಿಕೊಂಡಳು. ದುಲಾರಿ ರಾಜಮಾತಾ ಪನ್ನಾ ಅವರ ತಂದೆಯ ಜಮೀನ್ದಾರಿಯಲ್ಲಿ ಇದ್ದ ವೇಶ್ಯೆಯ ಮಗಳು. ಎಂದೇ ಅವಳ ಜೊತೆಗೆ ಬಾಲ್ಯದಲ್ಲಿ ಪನ್ನಾ ಎಷ್ಟೋ ಬಾರಿ ಆಟಪಾಟಗಳಲ್ಲಿ ಭಾಗವಹಿಸಿದ್ದಳು. ಉಯ್ಯಾಲೆ ಆಡಿದ್ದಳು. ದುಲಾರಿಯ ಕಂಠ ಬಾಲ್ಯದಲ್ಲಿಯೇ ತುಂಬಾ ಮಧುರವಾಗಿತ್ತು. ಅವಳು ಸುಂದರಿಯಾಗಿದ್ದುದಷ್ಟೇ ಅಲ್ಲ, ತುಂಬಾ ಮೋಹಕಳೂ ಆಗಿದ್ದಳು. ಪನ್ನಾ ಈ ಕಾಶಿ ರಾಜನ ತಾಯಿ ಎಂದು ಪ್ರಸಿದ್ಧಿಗೆ ಬಂದಾಗ, ದುಲಾರಿ ಕಾಶಿಯ ಪ್ರಸಿದ್ಧ ಗಾಯಕಿ ಎಂದು ಪ್ರಸಿದ್ಧಿ ಪಡೆದಿದ್ದಳು. ರಾಜಮಹಲಿನಲ್ಲಿ ಅವಳ ಸಂಗೀತ ಕಚೇರಿ ಆಗಾಗ ನಡೆಯುತ್ತಿತ್ತು. ಮಹಾರಾಜ ಬಲವಂತಸಿಂಗರ ಸಮಯದಿಂದಲೇ ಸಂಗೀತವೆಂಬುದು ಪನ್ನಾಳ ಜೀವನದ ಒಂದು ಮುಖ್ಯ ಅಂಗವಾಗಿ ಹೋಗಿತ್ತು. ಪ್ರಣಯಗೀತೆಗಳು ಹಾಗೂ ವೇದನಾಪೂರ್ಣ ವಿರಹಗೀತೆಗಳು ಎಂದರೆ ಆಗ ಹೆಚ್ಚಿನ ಒಲವು. ಈಗ ಸಾತ್ವಿಕ ಭಾವದ ಭಜನೆಗಳ ಕಡೆ ಒಲವು ತಿರುಗಿತ್ತು. ವೈಧವ್ಯದಿಂದಾಗಿ ಅವಳ ಪ್ರಕಾಶಮಯ ಶಾಂತ ಮುಖಮಂಡಲವು ಈಗ ಸ್ವಲ್ಪಮಟ್ಟಿಗೆ ಮಲಿನಗೊಂಡಿತ್ತು.

ದೊಡ್ಡ ರಾಣಿಯ ಸವತಿಮತ್ಸರ ಬಲವಂತಸಿಂಗ್ ಸತ್ತ ಮೇಲೂ ಶಮನ ಗೊಂಡಿರಲಿಲ್ಲ. ಅಂತಃಪುರವಲ್ಲಿ ಶಾಂತಿ ಇರಲಿಲ್ಲ. ಪ್ರಾಯಶಃ ಇದೇ ಕಾರಣಕ್ಕಾಗಿ ಪನ್ನಾ ಕಾಶಿಯ ರಾಜಮಂದಿರಕ್ಕೆ ಬಂದು ಪೂಜೆ ಪುನಸ್ಕಾರಗಳಲ್ಲಿ ತೊಡಗಿ ಮನಸ್ಸಿಗೆ ಶಾಂತಿ ತಂದುಕೊಳ್ಳುತ್ತಿದ್ದಳು. ರಾಮನಗರದಲ್ಲಿ ಅವಳಿಗೆ ನೆಮ್ಮದಿ ಇರಲಿಲ್ಲ. ಕಿರಿಯ ರಾಣಿ ಹಾಗೂ ಬಲವಂತಸಿಂಗನ ನಿಜ ಪ್ರೇಯಸಿಯಾಗಿದ್ದ ಅಭಿಮಾನವೇನೋ ಅವಳಿಗಿತ್ತು. ಅಷ್ಟೇ ಅಲ್ಲ, ಅದರ ಜೊತೆಗೆ ಪುತ್ರನನ್ನು ಪಡೆಯುವ ಸೌಭಾಗ್ಯವೂ ಅವಳದಾಗಿತ್ತು. ಆದರೆ ಅನ್ಯ ಜಾತಿಯವಳೆಂಬ ದೋಷ ಮಾತ್ರ ತಪ್ಪಲಿಲ್ಲ; ಇದರಿಂದಾಗಿ ಅವಳು ವ್ಯಥೆಗೊಂಡಿದ್ದಳು. ತನ್ನ ಮದುವೆಯ ಸಮಯದಲ್ಲಿ ಕಿವಿಗೆ ಬಿದ್ದ ಮಾತುಗಳು ಸ್ಮರಣೆಗೆ ಬಂದುವು.

ಒಂದು ಕಲ್ಲುಬೆಂಚಿನ ಮೇಲೆ ಕುಳಿತು ಪನ್ನಾ, ಗಂಗಾನದಿಯ ಪ್ರವಾಹ ಹರಿಯುತ್ತಿದ್ದುದರ ಕಡೆಗೆ ಅನ್ಯಮನಸ್ಕಳಾಗಿ ನೋಡುತ್ತಿದ್ದಳು. ಕಳೆದುಹೋದ ವಿಷಯದ ಚಿಂತನೆ ಮಾಡಿ ಏನು ಪ್ರಯೋಜನ? ಕೈಯಿಂದ ಬಿಟ್ಟುಹೋದ ವಸ್ತು ಮತ್ತೆ ಹೇಗೆ ಬರಬೇಕು? ಅದರ ಗೊಡವೆ ಏಕೆ ಎಂದು ಗೊತ್ತಿದ್ದರೂ ಸಹ ಹಳೆಯದನ್ನೇ ಯೋಚಿಸುತ್ತಾ ಕೊರುವುದು ಮನುಷ್ಯನ ಸ್ವಭಾವ. ಆಗ ಇಚ್ಛಿಸಿದ್ದ ಹಾಗೆ ನಡೆದಿದ್ದರೆ, ಇಂದಿನ ಈ ಪರಿಸ್ಥಿತಿ ಬರುತ್ತಿರಲಿಲ್ಲವೇನೋ ಎಂದು ಅವನು ಯೋಚಿಸುತ್ತಾನೆ. ಈಗ ಅದನ್ನು ಯೋಚಿಸಿ ಆಗುವುದಾದರೂ ಏನಿದೆ? – ಎಂದು ಗೊತ್ತಿದ್ದರೂ ಸಹ. ಅದೇ ರೀತಿಯಲ್ಲಿ ಪನ್ನಾ ಕೂಡ ರಾಜಾ ಬಲವಂತಸಿಂಗ್ ತನ್ನನ್ನು ಬಲಾತ್ಕಾರದಿಂದ ರಾಣಿಯನ್ನಾಗಿ ಮಾಡಿಕೊಂಡ ಸಮಯಕ್ಕೆ ಹಿಂದೆಯೇ ನಡೆಯಬಹುದಾಗಿದ್ದ ಒಂದು ಪ್ರಸಂಗವನ್ನು ನೆನಪಿಗೆ ತಂದುಕೊಂಡು ಅದನ್ನೇ ಯೋಚಿಸುತ್ತಿದ್ದಳು. ಬಾಬು ನನ್ಹಕೂಸಿಂಗನ ಹೆಸರು ಕೇಳಿ ಅದರ ನೆನಪು ಬಂದಿತ್ತು. ಗೇಂದಾ ಅವಳ ದಾಸಿ – ಮೊದಲಿಂದಲೂ ಜೊತೆಗೆ ಇರುವವಳು. ಪನ್ನಾ ಬಲವಂತಸಿಂಗನ ಪ್ರೇಯಸಿಯಾದ ಸಮಯದಿಂದಲೂ ಅವಳು ಜೊತೆಯಾಗಿದ್ದಳು. ಅವಳಿಗೆ ಎಷ್ಟೋ ವಿಷಯ ಗೊತ್ತಿದ್ದ ಕಾರಣ ರಾಜ್ಯದ ಎಲ್ಲಾ ಕಾರುಬಾರು ಅವಳ ಮೂಲಕವೇ ಗೊತ್ತಾಗುತ್ತಿತ್ತು. ದುಲಾರಿಯ ಮುಖಭಂಗ ಮಾಡಲು ಈ ಸಂದರ್ಭವನ್ನು ಉಪಯೋಗಿಸಿಕೊಳ್ಳುವುದು ಅವಳಿಗೆ ಆವಶ್ಯಕವೆನಿಸಿತು.

"ಮಹಾರಾಣಿ! ನನ್ಹಕೂಸಿಂಗ್ ತನ್ನ ಎಲ್ಲಾ ಜಮೀನ್ದಾರಿ ಜಾಯದಾದನ್ನು ಜೂಜು, ಕೋಣಗಳ ಕಾಳಗ, ಕುದುರೆ ಜೂಜು ಮತ್ತು ಸಂಗೀತಕಚೇರಿ ಇವುಗಳ ಮೇಲೆಲ್ಲ ಹಾಳು ಮಾಡಿದ್ದಾನೆ. ಮತ್ತು ಈಗ ಡಾಕೂ ಆಗಿದ್ದಾನೆ. ಎಷ್ಟು ಖೂನಿಗಳು ನಡೆಯುತ್ತವೆಯೋ ಅವುಗಳಲ್ಲೆಲ್ಲ ಅವನ ಕೈವಾಡ ಒಂದಲ್ಲ ಒಂದು ರೀತಿಯಲ್ಲಿರುತ್ತೆ. ಎಷ್ಟು..." ದುಲಾರಿ ಅವಳನ್ನು ಅಷ್ಟಕ್ಕೇ ತಡೆದು ಹೇಳಿದಳು – "ಇದು ಸುಳ್ಳು. ಬಾಬೂ ಸಾಹೇಬರಂತಹ ಧರ್ಮಾತ್ಮ ಬೇರೆ ಯಾರೂ ಇಲ್ಲ. ಅವರು ಕೊಡೋ

ಬಟ್ಟೆಬರೆಯಿಂದ ಎಷ್ಟು ಜನ ವಿಧವೆಯರು ತಮ್ಮ ದೇಹ ಮುಚ್ಚಿಕೊಂಡು ಬದುಕಿಲ್ಲ? ಎಷ್ಟು ಜನ ಹುಡುಗಿಯರ ಮದುವೆ ನಡೆಸಿಲ್ಲ? ಹಿಂಸೆಗೊಳಗಾದ ಎಷ್ಟು ಜನರಿಗೆ ಅವರು ರಕ್ಷಣೆ ಕೊಟ್ಟಿಲ್ಲ?"

ರಾಣಿ ಪನ್ನಾಳ ಅಂತರಾಳದಲ್ಲಿ ಏಕೋ ಮೃದುವಾಗಿ ಕಚಕುಳಿ ಇಟ್ಟಂತಾಯಿತು. "ದುಲಾರಿ, ಅವರು ನಿನ್ನ ಮನೆಗೆ ಬರುತ್ತಿರಬೇಕು. ಅದಕ್ಕೇ ನೀನು ಅವರ ಪ್ರಶಂಸೆ..."

"ಇಲ್ಲ ಸರ್ಕಾರ್, ಪ್ರಮಾಣ ಮಾಡಿ ಬೇಕಾದರೆ ಹೇಳ್ತೇನೆ, ಬಾಬೂ ನನ್ಹಕೂಸಿಂಗ್ ಈ ತನಕ ಒಂದು ದಿನ ಕೂಡ ನನ್ನ ಮನೆಗೆ ಕಾಲು ಸಹ ಇಟ್ಟಿಲ್ಲ."

ಆ ಅದ್ಭುತ ವ್ಯಕ್ತಿಯ ಬಗ್ಗೆ ಹೆಚ್ಚು ತಿಳಿಯಲು ರಾಜಮಾತಾ ಅದೇಕೆ ಕುತೂಹಲಿಯಾಗಿದ್ದಳೋ ತಿಳಿಯದು. ಆದರೂ ದುಲಾರಿಯ ಕಡೆಗೆ ಕಣ್ಣಿನ ಅಂಚಿನ ಮೂಲಕ ನೋಡಿ ಮುಂದೇನೂ ಹೇಳುವುದು ಬೇಡ ಎಂದು ಸೂಚ್ಯವಾಗಿ ತಿಳಿಸಿದಳು. ಅವಳು ಸುಮ್ಮನಾಗಿಬಿಟ್ಟಳು. ಸಾಯಂಕಾಲದ ಮೊದಲನೆಯದ ಪ್ರಹರದ ಶಹನಾಯಿ ಕೇಳಿಸಿತು. ದುಲಾರಿ ರಾಜಮಾತೆಯ ಅನುಮತಿ ಪಡೆದು ಮೇನೆಯನ್ನು ಹತ್ತಿದಳು. ಅವಳು ಹೋದಮೇಲೆ ಗೇಂದಾ ಹೇಳಿದಳು – "ಸರ್ಕಾರ್, ಈಚೀಚೆಗೆ ನಗರದ ವಿದ್ಯಮಾನಗಳು ತುಂಬಾ ಕೆಟ್ಟಿವೆ. ಬೆಳಗಿನ ಹೊತ್ತೇ ಜನ ದರೋಡೆ ಮಾಡಲು ಹೇಸುತ್ತಿಲ್ಲ. ನೂರಾರು ಕಡೆ ಜೂಜಿನ ಕಟ್ಟೆಗಳು ನಡೆಯುತ್ತಿದ್ದು, ಜನ ತಮ್ಮ ಸರ್ವಸ್ವವನ್ನೂ ಜೂಜಿನಲ್ಲಿ ಕಳೆದುಕೊಳ್ಳುತ್ತಿದ್ದಾರೆ. ಬೀದಿಯಲ್ಲಿ ಮಕ್ಕಳು ಓಡಾಡುವುದೇ ಕಷ್ಟವಾಗಿದೆ. ಪುಸಲಾಯಿಸಿ ಕರಕೊಂಡ್ಹೋಗ್ತಾರೆ. ಮನಸ್ತಾಪದಿಂದಾಗಿ ನಡು ಬೀದಿಯಲ್ಲೇ ಲಾಠಿ ಹಿಡಿದೋ ಚೂರಿ ತೆಗೆದೋ ನಿಲ್ಲುತ್ತಾರೆ. ಅತ್ತ ರೆಸಿಡೆಂಟ್ ಸಾಹೇಬರ ಜೊತೆಗೆ ಮಹಾರಾಜರ ವ್ಯವಹಾರ ಬೇರೆ ನಡೆಯುತ್ತಿದೆ." ರಾಜಮಾತಾ ಏನೂ ಹೇಳದೆ ಸುಮ್ಮನಿದ್ದಳು.

ಮಾರನೆಯ ದಿನ ರಾಜಾ ಚೇತಸಿಂಗ್ ಅವರಿಗೆ ರೆಸಿಡೆಂಟ್ ಸಾಹೇಬರ ಕಾಗದ ತಲಪಿತು. ಅದರಲ್ಲಿ ನಗರದ ದುರ್ವ್ಯವಸ್ಥೆಯ ಪ್ರಸ್ತಾಪ ಇತ್ತು. ಡಾಕುಗಳು ಮತ್ತು ಗುಂಡಾಗಳನ್ನು ಹಿಡಿದು ಅವರ ಚಲನವಲನದ ಮೇಲೆ ನಿಯಂತ್ರಣ ನೀಡಬೇಕೆಂದು ಸೂಚಿಸಲಾಗಿತ್ತು. ಕುಬರಾ ಮೌಲ್ವಿ ಪ್ರಕರಣ ಕೂಡ ಅಲ್ಲಿ ಪ್ರಸ್ತಾಪಕ್ಕೆ ಬಂದಿತ್ತು. ಹೇಸ್ಟಿಂಗ್ಸ್ ಬರಲಿರುವುದಾಗಿ ತಿಳಿಸಲಾಗಿತ್ತು. ಶಿವಾಲಯ ಘಾಟ್ ಮತ್ತು ರಾಮನಗರ – ಎರಡೂ ಕಡೆ ಕೋಲಾಹಲಕರ ಪರಿಸ್ಥಿತಿ ಕಂಡುಬಂತು. ಕೊತ್ವಾಲ್ ಹಿಮ್ಮತ್ ಸಿಂಗ್ ಹುಚ್ಚನಂತಾಗಿದ್ದ. ಯಾರ ಕೈಯಲ್ಲಿ ಲಾಠಿ, ಕತ್ತಿನಲ್ಲಿ ಪೈಲ್ವಾನ್‌ಗಿರಿಯ ಪಟ್ಟಿ, ತೋಳಿನಲ್ಲಿ ಕಡಗ ನೋಡಿದರೂ ಸಾಕು ಅವರನ್ನೆಲ್ಲ ಹಿಡಿದು ಹಾಕುತ್ತಿದ್ದ.

ಒಂದು ದಿನ ನನ್ಹಕೂಸಿಂಗ್ ಸಂಗಮದ ಬಳಿ ಹುಲುಸಾಗಿ ಬೆಳೆದಿದ್ದ ಹುಲ್ಲಿನ ದಿಣ್ಣೆಯ ಮೇಲೆ ತನ್ನ ಆಯ್ದ ಸಂಗಾತಿಗಳೊಡನೆ ಕುಳಿತು ಹುಲ್ಲಿನ ಗರಿಕೆಗಳ ಮಧ್ಯೆ ಕೈಯಾಡಿಸುತ್ತಾ ಕುಳಿತಿದ್ದನು. ಗಂಗಾನದಿಯಲ್ಲಿ ಅವರ ಸಣ್ಣ ದೋಣಿಯೊಂದು ನಿಂತಿತ್ತು.

ಆಲದ ಮರದ ಬೇರಿಗೆ ಕಟ್ಟಿದ ಹಗ್ಗ, ಅದನ್ನು ಹಿಡಿದು ನಿಲ್ಲಿಸಿತ್ತು. ಅದರಲ್ಲಿ ಕುಳಿತ ಗಾಯಕರು ಹಾಡುತ್ತಿದ್ದರು.

ನನ್ಹಕೂಸಿಂಗ್ ಹಠಾತ್ತನೆ ಹೇಳಿದ – "ಮಲ್ಲೂಕಿ, ಯಾಕೋ ನಾದ ಕೂಡ್ತಾ ಇಲ್ಲ. ಗಾಡಿ ತಕೊಂಡು ಹೋಗಿ ದುಲಾರೀನ ಕರ್ಕೊಂಡು ಬಾ". ಮಲ್ಲೂಕಿ ಮಜೀರಾ ಬಾರಿಸುತ್ತಾ ಇದ್ದ. ಕೂಡಲೇ ಹೋಗಿ ಗಾಡಿಯಲ್ಲಿ ಕುಳಿತ. ಇವೊತ್ತು ಏಕೋ ನನ್ಹಕೂಸಿಂಗನ ಮನಸ್ಸು ಒಂದು ಥರಾ ಆಗಿತ್ತು. ಯಾವುದೂ ರುಚಿಸುತ್ತಿರಲಿಲ್ಲ. ಎಷ್ಟು ಬಾರಿ ಸೋಸಿ ದಮ್ ಎಳೆದರೂ ಅದರ ನಶೆಯೇ ಹತ್ತುತ್ತಿರಲಿಲ್ಲ. ಒಂದು ಗಂಟೆಯೊಳಗೆ ದುಲಾರಿ ಅಲ್ಲಿಗೆ ಬಂದಳು. ಅವಳು ಮುಗುಳ್ನಕ್ಕು ಕೇಳಿದಳು – "ಏನು ಹುಕುಂ ಇದೆ ಬಾಬೂ ಸಾಹೇಬರೇ ?"

"ದುಲಾರಿ, ಇವೊತ್ತು ಹಾಡು ಕೇಳುವ ಮನಸ್ಸಾಗುತ್ತಿದೆ."

"ಈ ಕಾಡಿನಲ್ಲಿ ಏಕೆ ?" – ಅವಳು ಅರ್ಥಗರ್ಭಿತವಾಗಿ ನಕ್ಕು ಸೂಚ್ಯವಾಗಿ ಹೇಳಿದಳು.

"ನಿನಗೆ ಅದರ ಚಿಂತೆ ಬೇಡ", ಎಂದು ನನ್ಹಕ್ಕೂಸಿಂಗ್ ಅವಳ ಕಡೆ ನೋಡಿ ನಕ್ಕು ಹೇಳಿದ.

"ಇದೇ ಮಾತನ್ನು ನಾನು ಆವೊತ್ತು ಮಹಾರಾಣಿಯವರಿಗೆ ಹೇಳಿ ಬಂದೆ."

"ಏನು ? ...ಯಾರಿಗೆ ಹೇಳಿದೆ ?"

"ರಾಜಮಾತಾ ಪನ್ನಾದೇವಿಯವರ ಜೊತೆ"... ಮತ್ತೆ ಆ ದಿನ ಹಾಡಿನ ಮಜಾ ಬರಲಿಲ್ಲ. ಅವಳು ಹಾಡುತ್ತಿದ್ದಂತೆ ನನ್ಹಕೂಸಿಂಗನ ಕಣ್ಣುಗಳಲ್ಲಿ ನೀರು ಕಾಣಿಸುತ್ತಿದ್ದುದನ್ನು ಕಂಡು ದುಲಾರಿಗೆ ಆಶ್ಚರ್ಯವಾಯಿತು. ಗಾನಾ-ಬಜಾನಾ ಎಲ್ಲ ಸಮಾಪ್ತಗೊಂಡಿತ್ತು. ಮಳೆಗಾಲದ ಆ ರಾತ್ರಿಯಲ್ಲಿ ಭಿಲ್ಲರ ಹೆಂಗಸರು ಹಾಡುತ್ತಿದ್ದ ಸ್ವರ ಅಲ್ಲಿಯ ವೃಕ್ಷಸಮೂಹದ ಮೂಲಕ ಕೇಳಿಬರುತ್ತಿತ್ತು. ದೇವಸ್ಥಾನದ ಸಮೀಪದ ಒಂದು ಸಣ್ಣ ಕೋಣೆಯಲ್ಲಿ ಕುಳಿತಿದ್ದ ನನ್ಹಕೂಸಿಂಗ್ ಚಿಂತೆಯಲ್ಲಿ ಮುಳುಗಿದ್ದಂತೆ ತೋರುತ್ತಿತ್ತು. ಅವನಿಗೆ ನಿದ್ದೆಯೆಂಬುದೇ ಇಲ್ಲ. ಎಲ್ಲರೂ ಮಲಗಿ ನಿದ್ದೆಹೋಗತೊಡಗಿದ್ದರು. ದುಲಾರಿ ಎಚ್ಚರವಾಗಿದ್ದಳು. ಅವಳೂ ಏನೋ ಯೋಚಿಸುತ್ತಿದ್ದಳು. ಇವೊತ್ತು ಅವಳು ತನ್ನ ಮನಸ್ಸನ್ನೇ ಅಂಕಿತದಲ್ಲಿಟ್ಟುಕೊಳ್ಳುವ ಪ್ರಯತ್ನ ನಡೆಸಬೇಕಾಗಿತ್ತು. ಈ ಪ್ರಯತ್ನದಲ್ಲಿ ಅವಳು ಸಫಲಗೊಳ್ಳಲಾರದೆ ಕುಳಿತಲ್ಲಿಂದ ಎದ್ದಳು. ಮತ್ತು ನಿಧಾನವಾಗಿ ಹೋಗಿ ನನ್ಹಕೂಸಿಂಗನ ಬಳಿಗೆ ಹೋದಳು. ಕಾಲಿನ ಸಪ್ಪಳ ಕೇಳಿ ಬೆಚ್ಚಿಬಿದ್ದ ನನ್ಹಕೂಸಿಂಗ್ ಕೂಡಲೇ ಸಮೀಪದಲ್ಲಿಯೇ ಇದ್ದ ಕತ್ತಿಯನ್ನು ಎತ್ತಿಕೊಂಡ. ಆಗ ದುಲಾರಿ ನಗುತ್ತಾ ಕೇಳಿದಳು – "ಬಾಬೂ ಸಾಹೇಬ್, ಇದೇನು ? ಹೆಂಗಸರ ಮೇಲೆ ಕತ್ತಿ ಚಲಾಯಿಸುತ್ತೀರೇನು ?"

ಸಣ್ಣ ಮಿಣುಕುದೀಪದ ಪ್ರಕಾಶದಲ್ಲಿ ಮೋಹಕಳಾಗಿ ಕಾಣುತ್ತಿದ್ದ ಹೆಂಗಸಿನ ಮುಖ ಕಂಡು ನನ್ಹಕೂಸಿಂಗನಿಗೂ ನಗು ಬಂತು. ಹೇಳಿದ– "ಇಲ್ಲಿಗೇಕೆ ಬಂದೆ ? ಈಗಲೇ

ಹೋಗಬೇಕೇನು? ಮೌಲ್ವಿ ಮತ್ತೆ ಕರೆದಿದ್ದಾನೇನು?" ದುಲಾರಿ ನನ್ಹಕೂ ಸಮೀಪದಲ್ಲೇ ಕುಳಿತುಬಿಟ್ಟಳು. ನನ್ಹಕೂ ಕೇಳಿದ– "ಯಾಕೆ ನಿನಗೆ ಭಯ ಆಗುತ್ತಿದೆಯೇನು?"

"ಇಲ್ಲ, ಹೀಗೇ ಒಂದು ಮಾತು ಕೇಳಲು ಬಂದೆ."

"ಏನು?"

"ಇಲ್ಲ... ಒಂದು ಮಾತು... ಯಾವಾಗಲಾದರೂ ನಿಮ್ಮ ಹೃದಯದಲ್ಲಿ..."

"ಅದೊಂದೂ ಕೇಳಬೇಡ, ದುಲಾರಿ. ಹೃದಯ ಇನ್ನು ಯಾಕಿರಬೇಕು ಎಂದೇ, ಅದನ್ನು ನನ್ನ ಕೈಯಲ್ಲಿಟ್ಟುಕೊಂಡು ಓಡಾಡ್ತಾ ಇದ್ದೇನೆ. ಏನಾದರೂ ಮಾಡ್ತಾನೇ ಇರ್ತೀನಿ, ಕೈಗೆ ಸಿಕ್ಕಿದ್ದನ್ನು ಕುಟ್ಟಿ ಪುಡಿ ಪುಡಿ ಮಾಡುತ್ತೇನೆ, ಸೀಳಿ ಬಿಸಾಡುತ್ತೇನೆ, ಸಿಕ್ಕಿದವರ ಮೇಲೆ ಹಾರಾಡ್ತಾ ಇರ್ತೀನೆ. ಸಾಯಬೇಕೆಂದು ಏನೇನೋ ಮಾಡುತ್ತೇನೆ, ಆದರೆ ಸಾಯುತ್ತಿಲ್ಲ..."

"ಸಾಯುವುದಕ್ಕೂ ಹೀಗೆ ಹುಡುಕಾಡಿಕೊಂಡು ತಿರುಗಬೇಕೇನು? ನಿಮಗೆ ಕಾಶಿಯ ಹಕೀಕತ್ತು ಇನ್ನೂ ಸಂಪೂರ್ಣ ಗೊತ್ತಿಲ್ಲ. ಒಂದು ಘಳಿಗೆಯಲ್ಲಿ ಏನೇನು ಆಗಿಬಿಡುತ್ತೋ ಏನೋ! ಬನಾರಸಿನ ಬೀದಿಗಳಲ್ಲಿ ಓಡಾಡುವುದೇ ಕಷ್ಟವಾಗಿದೆ–ಕಚ್ಚಲು ಅಟ್ಟಿಸಿ ಕೊಂಡು ಬರುತ್ತಿರುವ ಹಾಗೆ ಬೀದಿಗಳು ಕಾಣುತ್ತವೆ."

"ಏನಾದರೂ ಹೊಸ ಸಮಾಚಾರ ಇದೆಯೇನು?"

"ಯಾರೋ ಹೇಸ್ಟಿಂಗ್ಸ್ ಸಾಹೇಬನಂತೆ. ಬಂದಿದ್ದಾನೆ. ಶಿವಾಲಯ ಘಾಟಿನ ಮೇಲೆ ತಿಲಂಗೆ ಸಿಪಾಯಿಗಳ ಪಹರೆ ಹಾಕಿದ್ದಾನೆಂದೂ ಹೇಳುತ್ತಾರೆ. ರಾಜಾ ಚೇತ್‌ಸಿಂಗ್ ಮತ್ತು ರಾಜಮಾತಾ ಪನ್ನಾ ಇಬ್ಬರೂ ಇಲ್ಲ. ಅವರನ್ನು ಬಂಧಿಸಿ ಕಲ್ಕತ್ತೆಗೆ ಕಳುಹಿಸಲು ...ಎಂದು ಏನೇನೋ ಕೆಲವರು ಹೇಳುತ್ತಾರೆ."

"ಪನ್ನಾಳನ್ನೂ?... ಅಂತಃಪುರ ಕೂಡ ಅಲ್ಲೇ ಇದೆಯೆ?" ನನ್ಹಕೂ ಅಧೀರನಾದ.

"ಯಾಕೆ ಬಾಬೂ ಸಾಹೇಬ್, ...ಇವೊತ್ತು ರಾಣಿ ಪನ್ನಾ ಹೆಸರು ಕೇಳಿ ನಿಮ್ಮ ಕಣ್ಣಿನಲ್ಲಿ ನೀರು ಬಂತು... ಏಕೆ?"

ಕೂಡಲೇ ನನ್ಹಕೂ ಮುಖ ಭಯಾನಕಗೊಂಡಿತು. ಅವನು ಹೇಳಿದ– "ಸುಮ್ಮನಿರು, ಅದನ್ನು ತಿಳಿದು ನೀನೇನು ಮಾಡುತ್ತಿ?" ಅವನು ಎದ್ದು ನಿಂತ. ಉದ್ವಿಗ್ನಗೊಂಡು ತಡಕಾಡತೊಡಗಿದ. ಮತ್ತೆ ಸ್ಥಿರಗೊಂಡು ಹೇಳಿದ–"ದುಲಾರಿ, ಒಬ್ಬ ಹೆಂಗಸು ಹೀಗೆ ನನ್ನ ಮಂಚದ ಮೇಲೆ ಏಕಾಂತ ರಾತ್ರಿಯಲ್ಲಿ ಬಂದು ಕುಳಿತಿರುವುದು ಇದೇ ಮೊದಲ ಬಾರಿ. ನಾನು ಬ್ರಹ್ಮಚಾರಿ. ಯಾವುದೋ ಪ್ರತಿಜ್ಞೆಯನ್ನು ಪೂರೈಸುವ ಸಲುವಾಗಿ ನೂರಾರು ಅಪರಾಧಗಳನ್ನೆಸಗುತ್ತಾ ತಿರುಗುತ್ತಿದ್ದೇನೆ. ಯಾಕೆ, ನಿನ್ಗೆ ಗೊತ್ತೆ? ನಾನು ಸ್ತ್ರೀಯರ ಪ್ರಬಲ ವಿದ್ರೋಹಿ; ಅವರ ಮುಖ ಕಂಡರಾಗದು. ಮತ್ತು ಪನ್ನಾ...? ಆದರೆ ಅವಳದಾದರೂ ಏನು ಅಪರಾಧ? ಅತ್ಯಾಚಾರಿ ಬಲವಂತಸಿಂಗನ

ಎದೆಗೆ ಚೂರಿ ಹಾಕಲು ನನ್ನ ಕೈಯಲ್ಲಾಗಲಿಲ್ಲ. ಈಗ ಪನ್ನಾಳನ್ನು ಹಿಡಿದು ಬಿಳಿಯರು ಕಲ್ಕತ್ತೆಗೆ ಕಳುಹಿಸಿಬಿಡುತ್ತಾರೆ, ಆಯಿತು, ಅಲ್ಲೇ...!"

ನನ್ಹಕೂಸಿಂಗ್ ಉನ್ಮತ್ತನಾಗಿ ಎದ್ದು ನಿಂತ. ದುಲಾರಿ ನೋಡುತ್ತಿದ್ದಂತೆಯೇ ಅವನು ಆ ಅಂಧಕಾರದಲ್ಲಿಯೇ ಆ ವಟವೃಕ್ಷದ ಕೆಳಗೆ ಹೋಗಿ ದೋಣಿಯನ್ನು ಗಂಗೆಯ ಆ ಭೀಕರ ಪ್ರವಾಹದಲ್ಲಿ ಹರಿಯಬಿಟ್ಟ – ಆ ಘೋರಕತ್ತಲೆಯಲ್ಲಿ. ದುಲಾರಿಯ ಹೃದಯ ಕಂಪಿಸತೊಡಗಿತು.

(೩)

ಸನ್ 1781 ಆಗಸ್ಟ್ 16ರಂದು ಕಾಶಿಯ ಜನಜೀವನ ತುಂಬಾ ಪ್ರಕ್ಷುಬ್ಧಾವಸ್ಥೆಯಲ್ಲಿತ್ತು. ಶಿವಾಲಯ ಘಾಟಿನಲ್ಲಿ ರಾಜಾ ಚೇತ್‌ಸಿಂಗನನ್ನು ಕೈದುಮಾಡಿ ಲೆಫ್ಟಿನೆಂಟ್ ಹಸ್ಟಾಕರ್ ಪಹರೆ ನಿಂತಿದ್ದ. ನಗರದಲ್ಲಿ ಆತಂಕ ಹರಡಿತ್ತು. ಅಂಗಡಿಗಳೆಲ್ಲ ಮುಚ್ಚಿದ್ದುವು. ಮನೆಗಳಲ್ಲಿ ಮಕ್ಕಳು ತಮ್ಮ ತಾಯಿಯನ್ನು ಕೇಳುತ್ತಿದ್ದರು – "ಅಮ್ಮಾ, ಇವೊತ್ತು ಮಿಠಾಯಿಯವನು ಬರುವುದಿಲ್ಲವೇ ?" ತಾಯಂದಿರು ತಮ್ಮ ಮಕ್ಕಳನ್ನು, "ಸುಮ್ಮನಿರಿ, ಮಾತಾಡಬೇಡಿ" ಎಂದು ಹೇಳಿ ತಟಸ್ಥಗೊಳಿಸುತ್ತಿದ್ದರು... ಬೀದಿಗಳೆಲ್ಲ ಪಾಳುಬಿದ್ದಿದ್ದುವು. ತೆಲುಂಗರ ಕಂಪೆನಿಯ ಮುಂದೆ ಆಗೊಮ್ಮೆ ಈಗೊಮ್ಮೆ ಮೌಲ್ವಿ ಕುಬರಾ ಬಂದು ಹೋಗುತ್ತಿದ್ದುದು ಕಾಣುತ್ತಿತ್ತು. ಆ ಸಮಯದಲ್ಲಿ ಅವನನ್ನು ನೋಡುವುದೇ ತಡ, ಎಲ್ಲರೂ ತಮ್ಮ ಮನೆಯ ಕಿಟಕಿಗಳನ್ನು ಹಾಕಿಕೊಳ್ಳುತ್ತಿದ್ದರು. ಎಲ್ಲೆಲ್ಲೂ ಭಯ ಮತ್ತು ಕಾತರತೆ. ಚೌಕದಲ್ಲಿದ್ದ ಜಥರೂಸಿಂಗನ ಆ ದೊಡ್ಡ ಮನೆ ಇಡೀ ಕಾಶೀ ನಗರದ ಶೌರ್ಯವನ್ನೆಲ್ಲ ತನ್ನಲ್ಲಿ ಅಡಗಿಸಿಕೊಂಡು ಹೊರಗಡೆಗೆ ಕೊತ್ವಾಲಿಯ ಅಣಕವಾಡು ನಡೆಸುತ್ತಿತ್ತು. ಯಾರೋ ಕೂಗಿದರು ಹೊರಗಡೆಯಿಂದ...

"ಹಿಮ್ಮತ್‌ಸಿಂಗ್ !"

ಕಿಟಕಿಯಿಂದ ತಲೆಯನ್ನು ಹೊರಗೆ ಹಾಕಿ ನೋಡಿದ ಹಿಮ್ಮತ್‌ಸಿಂಗ್ ಕೇಳಿದ – "ಯಾರು ?"

"ಬಾಬೂ ನನ್ಹಕೂಸಿಂಗ್ !"

"ಅಚ್ಛಾ, ನೀನು ಈ ತನಕ ಹೊರಗಡೆಯೇ ಇದ್ದೀಯೇನು ?"

"ಪೆದ್ದೇ – ರಾಜರು ಬಂಧಿಯಾಗಿದ್ದಾರೆ. ನಿನ್ನ ಎಲ್ಲ ವೀರರನ್ನು ಕಳುಹಿಸಿಕೊಡು. ಅವರನ್ನು ಕರೆದುಕೊಂಡು ಶಿವಾಲಯ ಘಾಟಿಗೆ ಹೋಗುತ್ತೇನೆ."

"ಸ್ವಲ್ಪ ಇರು" ಎಂದು ಹಿಮ್ಮತ್‌ಸಿಂಗ್ ಏನೋ ಆಜ್ಞೆ ಕೊಟ್ಟ. ಸಿಪಾಯಿಗಳು ಹೊರಗೆ ಬಂದರು. ನನ್ಹಕೂನ ಕತ್ತಿ ಫಳ ಫಳ ಹೊಳೆಯುತ್ತಿತ್ತು. ಅದನ್ನು ನೋಡಿಯೇ

ಸಿಪಾಯಿಗಳು ಒಳಕ್ಕೆ ಓಡಿದರು. ನನ್ಹುಕೂ ಹೇಳಿದ – "ನಮಕ್‌ಹರಾಮರು ಎಲ್ಲೀದೋ! ಹೋಗಿ ಬಳೆಯಾದರೂ ತೊಟ್ಟುಕೊಳ್ಳಿ." ಜನರು ನೋಡುತ್ತಿದ್ದಂತೆಯೇ ನನ್ಹುಕೂಸಿಂಗ್ ಅಲ್ಲಿಂದ ಹೊರಟುಹೋದ. ಕೊತ್‌ವಾಲಿಯ ಎದುರುಗಡೆ ಮತ್ತೆ ನಿಶ್ಶಬ್ದ ಆವರಿಸಿತು.

ನನ್ಹುಕೂ ಉದ್ರೇಕಗೊಂಡು ಹುಚ್ಚನಂತಾಗಿದ್ದನು. ಅವನ ಕೆಲವೇ ಜನ ಸಂಗಾತಿಗಳು ಅವನು ಆಜ್ಞೆಯನ್ನು ಪಾಲಿಸುವ ಸಲುವಾಗಿ ತಮ್ಮ ಪ್ರಾಣ ಕೊಡಲೂ ಸಿದ್ಧರಾಗಿ ನಿಂತಿದ್ದರು. ರಾಜಾ ಚೇತ್‌ಸಿಂಗ್ ಮಾಡಿರಬಹುದಾದ ರಾಜಕೀಯ ಅಪರಾಧವೇನೋ ಅವನಿಗೆ ತಿಳಿಯದಾಗಿತ್ತು. ನನ್ಹುಕೂ ಈಗ ತನ್ನ ದೋಣಿಯಲ್ಲಿ ಕುಳಿತು ಶಿವಾಲಯ ಕಿಟಕಿಯ ಕಡೆಗೆ ದೃಷ್ಟಿ ಇಟ್ಟುಕೊಂಡು ಹೊರಟನು. ದೇವಾಲಯದ ಬಳಿ ದೋಣಿಯನ್ನು ನಿಲ್ಲಿಸಿ ಹೇಗೋ ಹಗ್ಗವನ್ನು ಒಂದು ಬಂಡೆಗೆ ಸಿಕ್ಕಿಸಿದ ಬಳಿಕ ಒಂದು ಕೋತಿಯಂತೆ ನೆಗೆದು ದೇವಾಲಯದ ಒಳಕ್ಕೆ ಕಿಟಕಿಯ ಮೂಲಕ ಪ್ರವೇಶಿಸಿದನು. ಆ ಸಮಯದಲ್ಲಿ ರಾಜಮಾತಾ ಪನ್ನಾ ಮತ್ತು ಯುವಕ ರಾಜಾ ಚೇತ್‌ಸಿಂಗ್‌ರೊಡನೆ ಕುಳಿತು ಬಾಬೂ ಮುನಿಯಾರ್‌ಸಿಂಗ್ ಸಮಾಲೋಚನೆ ನಡೆಸುತ್ತಿದ್ದರು – "ನೀವು ಇಲ್ಲಿ ಇದ್ದುಬಿಟ್ಟರೆ ನಾವು ತಾನೇ ಏನು ಮಾಡುವುದು? ನನಗೊಂದೂ ಗೊತ್ತಾಗುತ್ತಿಲ್ಲ. ಪೂಜೆ ಪುನಸ್ಕಾರ ಮುಗಿಸಿಕೊಂಡು ತಾವು ರಾಮನಗರಕ್ಕೆ ತಾವು ಹೊರಟುಬಿಟ್ಟಿದ್ದರೆ ಈ..."

ತೇಜಸ್ವಿನಿ ಪನ್ನಾ ಹೇಳಿದಳು– "ನಾನೀಗ ರಾಮನಗರಕ್ಕೆ ಹೇಗೆ ಹೋಗಲಿ?"

ಮುನಿಯಾರ್‌ಸಿಂಗ್ ದುಃಖಿತರಾಗಿ ಹೇಳಿದರು– "ಏನೆಂದು ಹೇಳಲಿ? ನನ್ನ ಸಿಪಾಯಿಗಳಂತೂ ಬಂದಿಯಾಗಿದ್ದಾರೆ."

ಇಷ್ಟರಲ್ಲೇ ಬಾಗಿಲಿನ ಬಳಿ ಕೋಲಾಹಲವೆದ್ದಿತು. ರಾಜಪರಿವಾರದವರು ತಮ್ಮ ಸಮಾಲೋಚನೆಯಲ್ಲಿ ತೊಡಗಿದ್ದುದರಿಂದ ನನ್ಹುಕೂಸಿಂಗ್ ಬಂದಿದ್ದು ಅವರ ಗಮನಕ್ಕೇ ಬಿದ್ದಿರಲಿಲ್ಲ. ಮುಂಭಾಗದ ಬಾಗಿಲು ಮುಚ್ಚಿತ್ತು. ನನ್ಹುಕೂಸಿಂಗ್ ಬಂದು ಗಂಗೆಯ ನೀರಿನ ಕಡೆಗೆ ದೃಷ್ಟಿ ಹಾಯಿಸಿ ನೋಡಿದ. ಹಾಗೆ ನೋಡಿದಾಗ ಒಂದು ನಾವೆ ದಡ ಮುಟ್ಟಲು ಅಲೆಗಳ ಜೊತೆಗೆ ಗುದ್ದಾಡುತ್ತಿದ್ದುದು ಕಂಡುಬಂತು. ಅದನ್ನು ನೋಡಿ ಅವನು ಪ್ರಸನ್ನಗೊಂಡ. ಅದರ ನಿರೀಕ್ಷೆಯಲ್ಲಿಯೇ ಅವನು ಇಷ್ಟು ಹೊತ್ತು ಸುಮ್ಮನಿದ್ದ. ಈಗ ಪರಿವಾರದವರನ್ನು ಎಚ್ಚರಿಸುತ್ತಾ ಕೇಳಿದ– "ಮಹಾರಾಣಿ ಎಲ್ಲಿದ್ದಾರೆ?"

ಎಲ್ಲರೂ ಆ ಕಡೆ ತಿರುಗಿ ನೋಡಿದರು – ಒಬ್ಬ ಅಪರಿಚಿತ ವೀರಪುರುಷ ಶಸ್ತ್ರಸಜ್ಜಿತನಾಗಿ ಅವರ ಮುಂದೆ ನಿಂತಿದ್ದಾನೆ.

ರಾಜಾ ಚೇತ್‌ಸಿಂಗ್ ಕೇಳಿದ– "ನೀನು ಯಾರು?"

"ರಾಜ ಪರಿವಾರದ ಒಬ್ಬ ಬಿಟ್ಟೀ ನೌಕರ."

ಪನ್ನಾ ಅವನನ್ನು ನೋಡಿ ಲಘುವಾಗಿ ನಿಟ್ಟುಸಿರುಬಿಟ್ಟಳು. ಕೂಡಲೇ ಅವಳಿಗೆ ಅವನ ಪರಿಚಯ ಸಿಕ್ಕಿತು – ಇಷ್ಟು ವರ್ಷಗಳ ನಂತರ. ಅವನೇ ನನ್ಹುಕೂಸಿಂಗ್.

ಮುನಿಯಾರ್‌ಸಿಂಗ್ ಕೇಳಿದ– "ನೀನೇನು ಮಾಡಬಲ್ಲೆ?"

"ನಾನು ಪ್ರಾಣ ಕೊಡಬಲ್ಲೆ. ಮೊದಲು ಮಹಾರಾಣಿಯವರನ್ನು ದೋಣಿಯಲ್ಲಿ ಕೂರಿಸಿ. ಎರಡನೆಯ ದೋಣಿಯಲ್ಲಿ ಒಳ್ಳೆಯ ನಾವಿಕರು ಸಿದ್ಧರಾಗಿ ನಿಂತಿದ್ದಾರೆ. ಅವರನ್ನು ಕಳಿಸಿದ ಮೇಲೆ ಬೇರೆ ಮಾತನಾಡುವಿರಂತೆ." ಮುನಿಯಾರ್‌ಸಿಂಗ್ ಕಿಟಕಿಯ ಮೂಲಕ ನೋಡಿದ. ಅಲ್ಲಿ ಅರಮನೆಯ ಕಾವಲು ಪಡೆಯ ದರೋಗಾ ಒಂದು ದೋಣಿಯ ಮೇಲೆ ನಾಲ್ಕು ಜನ ನಾವಿಕರೊಡನೆ ಸಿದ್ಧನಾಗಿ ನಿಂತಿದ್ದಾನೆ–ಮಹಾರಾಣಿಯ ನಿರೀಕ್ಷೆಯಲ್ಲಿ. ಪನ್ನಾ ಕಡೆಗೆ ತಿರುಗಿ ಮುನಿಯಾರ್‌ಸಿಂಗನು–"ನಡೀರಿ; ನಿಮಗೆ ಜೊತೆಕೊಡುತ್ತೇನೆ."

"ಅರೇ..." ಚೇತಸಿಂಗನ ಕಡೆ ನೋಡಿ ರಾಜಮಾತೆಯು ಪ್ರಶ್ನಾತ್ಮಕ ದೃಷ್ಟಿ ಬೀರಿದಾಗ ಆ ಪ್ರಶ್ನೆಗೆ ಅಲ್ಲಿ ಯಾರ ಬಳಿಯೂ ಉತ್ತರವಿರಲಿಲ್ಲ. ಮುನಿಯಾರ್‌ಸಿಂಗ್ ಹೇಳಿದ– "ಹಾಗಾದರೆ ನಾನು ಇಲ್ಲಿಯೇ ಇರಲೇ?" ಆಗ ನನ್ಹಕೂ ರಾಜಮಾತೆಯನ್ನುದ್ದೇಶಿಸಿ ಹೇಳಿದ– "ಮಾಲಿಕ್, ತಾವು ಹೋಗಿ ದೋಣಿಯಲ್ಲಿ ಕುಳಿತುಕೊಳ್ಳಿ. ರಾಜರೂ ಎಲ್ಲಿಯ ತನಕ ದೋಣಿಯಲ್ಲಿ ಕುಳಿತು ಹೋಗುವುದಿಲ್ಲವೋ ಅಲ್ಲಿಯ ವರೆಗೆ ಎಪ್ಪತ್ತು ಗುಂಡುಗಳು ತಗಲಿದ್ದರೂ ಸರಿ, ನನ್ಹಕೂಸಿಂಗ್ ಜೀವಿತವಾಗಿದ್ದು ಹೋರಾಡುವ ಪ್ರತಿಜ್ಞೆ ಮಾಡುತ್ತಾನೆ, ಯೋಚಿಸಬೇಡಿ ಹೋಗಿ."

ಪನ್ನಾ ಆಗ ನನ್ಹೂಕನ ಕಡೆ ನೋಡಿದಳು. ಒಂದು ಕ್ಷಣದ ಮಟ್ಟಿಗೆ ನಾಲ್ಕೂ ಕಣ್ಣುಗಳು ಸಂಧಿಸಿದುವು. ಅವುಗಳಲ್ಲಿ ಜನ್ಮಜನ್ಮಾಂತರದಿಂದ ವಿಶ್ವಾಸದ ಜ್ಯೋತಿ ಬೆಳಗುತ್ತಿರುವಂತೆ ಕಂಡುಬಂತು. ಬಾಗಿಲನ್ನು ಬಲಪ್ರಯೋಗ ಮಾಡಿ ತೆಗೆಯುತ್ತಿದ್ದರು. ನನ್ಹಕೂ ಉನ್ಮತ್ತನಾಗಿ ಹೇಳಿದ– "ಮಾಲಿಕ್, ಬೇಗ ಹೋಗಿ".

ಮುಂದಿನ ಕ್ಷಣದಲ್ಲಿ ಪನ್ನಾ ದೋಣಿಯಲ್ಲಿದ್ದಳು; ನನ್ಹಕೂಸಿಂಗ್ ಇತ್ತ ಬಾಗಿಲ ಬಳಿ ಹಸ್ಕಾಕರ್ ಜೊತೆಗೆ. ಚೇತರಾಮ್ ಬಂದು ಒಂದು ಚೀಲಿಯನ್ನು ಮುನಿಯಾರ್ ಸಿಂಗ್ ಕೈಗೆ ಕೊಟ್ಟನು. ಲೆಫ್ಟಿನೆಂಟ್ ಹೇಳಿದ– "ನಿಮ್ಮ ಜನ ಹಲ್ಲೆ ನಡೆಸುತ್ತಿದ್ದಾರೆ. ಗುಂಡು ಹಾರಿಸದೆ ವಿಧಿಯಿಲ್ಲ. ನಮ್ಮ ಸಿಪಾಯಿಗಳಿಗೆ ನಾನು ಅಡ್ಡಿ ಮಾಡಲಾರೆ."

"ಇಲ್ಲಿ ನನ್ನ ಸಿಪಾಯಿಗಳಾದರೂ ಎಲ್ಲಿದ್ದಾರೆ ಸಾಹೇಬರೇ?" ಮುನಿಯಾರ್‌ಸಿಂಗ್ ನಕ್ಕು ಹೇಳಿದ. ಹೊರಗಡೆ ಕೋಲಾಹಲ ಹೆಚ್ಚತೊಡಗಿತು.

ಚೇತರಾಮ್ ಹೇಳಿದ– "ಮೊದಲು ಚೇತಸಿಂಗರನ್ನು ಕೈದುಮಾಡಿ."

"ಈ ಸಾಹಸ ಯಾರು ಮಾಡುತ್ತಾರೆ?–ಎಂದು ಮುನಿಯಾರ್‌ಸಿಂಗ್ ಪ್ರತಿಭಟಿಸಿ ಖಡ್ಗ ಬಿಚ್ಚಿದನು. ಇನ್ನೂ ಮಾತು ಪೂರ್ತಿಯಾಗಿರಲಿಲ್ಲ, ಅಷ್ಟರಲ್ಲೇ ಕುಬರಾ ಮೌಲ್ವಿಯ ಸವಾರಿ ಅಲ್ಲಿಗೆ ಬಂತು. ಇಲ್ಲಿ ಮೌಲ್ವಿ ಸಾಹೇಬರ ಕಲಮು ಕೆಲಸ ಮಾಡುತ್ತಿರಲಿಲ್ಲ. ಅವರು ಅಲ್ಲಿಂದ ಹೋಗುವುದೂ ಸಾಧ್ಯವಿರಲಿಲ್ಲ. ಅವರು ಹೇಳಿದರು– "ಏನು ನೋಡ್ತಾ ನಿಂತಿದ್ದೀಯಾ ಚೇತ್‌ರಾಮ್."

"ಚೇತ್‌ರಾಮ್ ರಾಜನ ಹೆಗಲ ಮೇಲೆ ಕೈ ಇಡಲು ಹೋದುದೇ ತಡ ನನ್ಹುಕೂಸಿಂಗ್‌ನ ಬಲಿಷ್ಠ ಕೈಗಳು ಒಂದೇ ಏಟಿಗೆ ಅವನ ಕಥೆ ಮುಗಿಸಿದುವು. ಹಸ್ಟಾಕರ್ ಮುಂದೆ ನುಗ್ಗಿದನು. ಮೌಲ್ವಿ ಸಾಹೇಬರು ಕೂಗಾಡುತ್ತಿದ್ದರು. ಎಲ್ಲರೂ ನೋಡುತ್ತಿದ್ದಹಾಗೆಯೇ ನನ್ಹುಕೂಸಿಂಗ್ ಹಸ್ಟಾಕರ್ ಮತ್ತು ಅವನ ಸಂಗಡಿಗರನ್ನು ಒಂದೇ ಹೊಡೆತಕ್ಕೆ ನೆಲಕ್ಕುರುಳಿಸಿದನು. ಇನ್ನು ಮೌಲ್ವಿ ಸಾಹೇಬ್ ಹೇಗೆ ಬಚಾವ್ ಆದಾರು?

"ಏನು? ಆವೊತ್ತಿನ ಏಟನ್ನು ಇಷ್ಟು ಬೇಗ ಮರೆತುಬಿಟ್ಟೆಯೇನು? ಪಾಖಂಡಿ ಎಲ್ಲೀದೋ!" ಎಂದು ಒಂದು ಬಾರಿ ನನ್ಹುಕೂಸಿಂಗ್ ಕೈಬೀಸಿದ್ದೇ ಸಾಕು ಮೌಲ್ವಿ ಮಿಲಿಮಿಲಿ ಒದ್ದಾಡುತ್ತಾ ಪಾತಾಳಕ್ಕೇ ಕುಸಿದುಹೋದ. ಕೆಲವೇ ಕ್ಷಣಗಳಲ್ಲಿ ನಡೆದು ಹೋದ ಭೀಷಣ ಘಟನೆಯಂತಹ ಘಟನೆ ಈ ತನಕ ನಡೆದಿರಲಿಲ್ಲ.

ನನ್ಹುಕೂಸಿಂಗ್ ಗರ್ಜಿಸಿ ಚೇತಸಿಂಗನಿಗೆ ಹೇಳಿದ– "ಏನು ನೋಡುತ್ತಾ ಇದ್ದೀರಿ. ದೋಣಿ ಕಾದಿದೆ ಹೋಗಿ. ಹೋಗಿ ಕುಳಿತುಕೊಳ್ಳಿ." ಅವನ ಮೈಮೇಲಿನ ಗಾಯಗಳಿಂದ ರಕ್ತ ಚಿಮ್ಮುತ್ತಿತ್ತು. ಅತ್ತ ಬಾಗಿಲು ದಾಟಿಕೊಂಡು ತಿಲಂಗರು ನುಗ್ಗುತ್ತಿದ್ದರು. ಕಿಟಿಕಿಯಿಂದ ಇಳಿಯುತ್ತಿದ್ದ ರಾಜಾ ಚೇತ್‌ಸಿಂಗ್ ಹಿಂದಿರುಗಿ ನೋಡಿದಾಗ ಇಪ್ಪತ್ತು ಜನ ತಿಲಂಗರು ಅವನನ್ನು ಮುತ್ತಿ ಬಂದೂಕಿನ ಭರ್ಚಿಗಳಿಂದ ಅವನನ್ನು ತಿವಿಯುತ್ತಿದ್ದರು. ಅವನು ಮಾತ್ರ ಒಂದಿಷ್ಟೂ ಚಿಂತಿಸದೆ ತನ್ನ ಖಡ್ಗದಿಂದ ಅವರೆಲ್ಲರನ್ನೂ ಎದುರಿಸುವ ಸಾಹಸ ಮಾಡುತ್ತಿದ್ದ. ನನ್ಹುಕೂವಿನ ಕಲ್ಲಿನಂತಹ ದೇಹದಿಂದ ರಕ್ತದ ಧಾರೆ ಒಂದೇ ಸಮನೆ ಹರಿಯುತ್ತಿತ್ತು. ಕ್ರಮೇಣ ಗುಂಡಾ ನನ್ಹುಕೂಸಿಂಗ್‌ನ ದೇಹದ ಒಂದೊಂದು ಭಾಗವೂ ಪ್ರತ್ಯೇಕ ಪ್ರತ್ಯೇಕವಾಗಿ ಕತ್ತರಿಸಿ ಬೀಳುತ್ತಿತ್ತು. ಅವನು ಕಾಶೀ–ಕಾ–ಗುಂಡಾ ಎಂದು ಪ್ರಸಿದ್ಧಿ ಪಡೆದಿದ್ದ.

# ನೂಪುರ

## ಜೈನೇಂದ್ರ ಕುಮಾರ್

ಪೇಟೆಯಲ್ಲಿ ಒಂದು ಹೊಸ ಬಗೆಯ ಕಾಲಿನ ಆಭರಣ ಬಂದಿದೆ. ಕಾಲಿಗೆ ಅದು ತುಂಬಾ ಒಪ್ಪುತ್ತದೆ. ಕೊಂಡಿಗಳು ಎಷ್ಟು ಚೆನ್ನಾಗಿ ಒಂದಕ್ಕೊಂದು ಸೇರಿಕೊಂಡಿವೆಯೆಂದರೆ ಯಾರ ಕಾಲು ಯಾವ ರೀತಿ ಇದೆಯೋ ಅದಕ್ಕೆ ಸರಿಯಾಗಿ ಈ ನೂಪುರ ಹೊಂದಿ ಕೊಳ್ಳುತ್ತದೆ; ಅದರದೇ ಒಂದು ಆಕಾರವಿದೆಯೆನ್ನುವಂತಿಲ್ಲ, ಯಾವ ಕಾಲಿನ ಮೇಲೆ ಇರುತ್ತದೆಯೋ ಅದೇ ಆಕಾರ.

ನಮ್ಮ ನೆರೆಹೊರೆಯಲ್ಲಿ ಚಿಕ್ಕವರು ದೊಡ್ಡವರೆನ್ನದೆ ಯಾರ ಕಾಲಿನಲ್ಲಾದರೂ ಇದನ್ನು ನೋಡಬಹುದು. ಒಬ್ಬಳು ಹಾಕಿಕೊಂಡಿದ್ದುದನ್ನು ನೋಡಿ ಇನ್ನೊಬ್ಬಳು ಹಾಕಿಕೊಂಡಳು. ಒಬ್ಬಳನ್ನು ನೋಡಿ ಇನ್ನೊಬ್ಬಳು ಎಂದು ಯಾರ ಕಾಲಿನಲ್ಲಿ ನೋಡಿ ದರೂ ಅದೇ.

ನಮ್ಮ ಮಗಳೂ ಹೇಳಿದಳು: ನಾನೂ ಕಾಲಿಗೆ ಚೈನು ಹಾಕಿಕೊಳ್ತೇನೆ, ಅಣ್ಣಾ... ಅಬ್ಬಬ್ಬ ಎಂದರೆ ನಾಲ್ಕು ವರ್ಷ ವಯಸ್ಸು, ಕಾಲಿಗೆ ಚೈನು ಹಾಕಿಕೊಳ್ಳಬೇಕಂತೆ– ಏನು ಹೇಳುತ್ತೀರಿ?

ಎಂಥ ಚೈನು? ಎಂದು ಕೇಳಿದೆ.

ರುಕ್ಮಿಣಿ ಹಾಕ್ಕೊಳ್ತಾಳಲ್ಲ ಅಂಥದು, ಶೀಲಾ ಹಾಕ್ಕೊಳ್ತಾಳಲ್ಲ ಅಂಥದು.

ಆಗಲಿ... ಆಗಲಿ; ಹಾಕ್ಕೊಳ್ಳುವಂತೆ.

ಇವೊತ್ತೇ ನಾನು ತರಸ್ಕೊಳ್ತೀನಿ.

ಆಗಲೀಮ್ಮ, ಹಾಗೇ ಆಗಲಿ; ತರಸ್ಕೊಳ್ಳುವಂತೆ, ಎಂದು ನಾನು ಸಮಾಧಾನ ಹೇಳಿದೆ.

ನಮ್ಮ ಮಗಳು ಆ ಸಮಯದಲ್ಲೇನೋ ಬೇರೆ ವಿಚಾರಗಳ ಕಡೆಗೆ ಗಮನ ಹರಿಸಿ ದಳು. ಆದರೆ ಆ ಮಧ್ಯಾಹ್ನ ಅವಳ ಸೋದರತ್ತೆ ಮನೆಗೆ ಬಂದಾಗ ಮತ್ತೆ ಅದೇ ಮಾತು ತೆಗೆದಳು; ಒಂದೇ ಸಮನೆ ಹಟಹಿಡಿದಳು.

ಅವಳ ಸೋದರತ್ತೆ ಅವಳಿಗೆ ತಿಂಡಿತಿನಸು ಕೊಟ್ಟು, ತನ್ನ ತೊಡೆಯ ಮೇಲೆ ಮಲ ಗಿಸಿಕೊಂಡು, ನಾನಾ ರೀತಿಯಲ್ಲಿ ಸಮಾಧಾನ ಹೇಳಿ ಮುಂದಿನ ಭಾನುವಾರ ಬರುವಾಗ ಖಂಡಿತ ತಂದುಕೊಡುವುದಾಗಿ ಭರವಸೆ ಕೊಟ್ಟಳು.

ಮುಂದಿನವಾರ ಸೋದರತ್ತೆ ಬಂದಳು, ಜೊತೆಗೆ ನೂಪುರವೂ ಬಂತು. ನಮ್ಮ ಮಗಳು ಅದನ್ನು ಹಾಕಿಕೊಂಡು ಮನೆಯಲ್ಲೆಲ್ಲ ಓಡಾಡಿದಳು. ರುಕ್ಮಿಣಿಯ ಮನೆಗೆ ಹೋಗಿ, ನೋಡೇ ನನ್ನ ಚೈನು ಎಂದು ತೋರಿಸಿ ಕುಣಿದಾಡಿದಳು. ಹೋಗಿ ಶೀಲಳಿಗೂ

ತೋರಿಸಿಕೊಂಡು ಬಂದಳು. ಅವಳು ಕಾಲಿಗೆ ನೂಪುರ ಹಾಕಿಕೊಂಡಿದ್ದುದನ್ನು ಕಂಡು ಎಲ್ಲರೂ ಅವಳನ್ನು ಮುದ್ದಾಡಿದರು; ಅದನ್ನು ನೋಡಿ ಹೊಗಳಿದರು. ಬೆಳ್ಳಿಯ ಎರಡು ಮೂರು ಬಿಳಿಯ ಎಳೆಗಳನ್ನು ಒಂದುಗೂಡಿಸಿ, ನಾಲ್ಕೂ ಕಡೆ ಸುತ್ತಿ, ಹಾಗೆಯೇ ಬಿಡಿಬಿಡಿಯಾಗಿ ಹೆಣೆಯಲಾಗಿದೆ; ಹಗುರವಾಗಿ ನೋಡುವುದಕ್ಕೆ ನಿಜಕ್ಕೂ ತುಂಬಾ ಚೆನ್ನಾಗಿದೆ. ಪುಟ್ಟಿಯ ಸಂತೋಷಕ್ಕಂತೂ ಪಾರವೇ ಇಲ್ಲ.

ಇನ್ನು ನಮ್ಮ ಕುಮಾರ ಕಂಠೀರವ ಆಶುತೋಷ್, ನಮ್ಮ ಪುಟ್ಟಿಯ ಅಣ್ಣ, ಅವಳು ಕಾಲಿಗೆ ಚೈನು ಹಾಕಿಕೊಂಡು ಕುಣಿದಾಡಿದುದನ್ನು ನೋಡಿ ಸಂತೋಷಪಟ್ಟ. ತಾನೇ ಅವಳ ಕೈ ಹಿಡಿದುಕೊಂಡು ಮನೆ ಮನೆಗೆ ಕರೆದುಕೊಂಡು ಹೋಗಿ ತೋರಿಸಿಕೊಂಡು ಬಂದ. ಪುಟ್ಟಿಯ ಕಾಲಿನ ಚೈನು ತನ್ನದೇ ಎನ್ನುವಷ್ಟು ಅಭಿಮಾನ ಅವನದಾಗಿತ್ತು. ತಾನು ಅವಳೊಡನೆ ಸೇರಿಕೊಂಡು ಕುಣಿದಾಡಿದ, ಚಪ್ಪಾಳೆ ಹಾಕಿ ಕುಣಿದ. ಆದರೆ ಸ್ವಲ್ಪ ಹೊತ್ತಿನ ಮೇಲೆ ಅಳುವ ಮುಖ ಮಾಡಿಕೊಂಡು, "ಪುಟ್ಟೀಗೆ ಚೈನು ಕೊಡಿಸಿದಿರಿ, ನನಗೆ ಬೈಸಿಕಲ್ ಕೊಡಿಸಿ", ಎಂದು ಹಟಹಿಡಿದ.

ಅವನ ಸೋದರತ್ತೆ ಸಮಾಧಾನ ಹೇಳಿದಳು: ಆಗಲಿ ಮಗೂ. ನಿನ್ನ ಹುಟ್ಟಿದ ಹಬ್ಬಕ್ಕೆ ಬೈಸಿಕಲನ್ನೇ ಕೊಡಿಸೋಣ.

ಈಗಲೇ ಬೇಕು ಎಂದು ನಮ್ಮ ಆಶಾಬಾಬು ಹಟಹಿಡಿಯದೆ ಬಿಟ್ಟಾನೇ?

ಛೀ, ಛೀ ನೀನೇನು ಹುಡುಗಿ ಕೆಟ್ಟು ಹೋದೆಯೇನೋ... ಹುಡುಗೀರು ಹಾಗೆ ಹಟ ಹಿಡೀತಾರೆ... ಹೀಗೆ ಅಳ್ತಾರೆ: ಬಾಬು ಸಾಹೇಬರಾಗುವವರು ಅಳ್ತಾರೆಯೇ? ಎಂದು ಅತ್ತೆ ಸಮಾಧಾನ ಹೇಳಿದಳು.

ನನ್ನ ಹುಟ್ಟಿದ ಹಬ್ಬದ ದಿನ ನಾನು ಬೈಸಿಕಲ್ ಕೊಳ್ಳಲೇಬೇಕು, ಎಂದು ಆಶುತೋಷ್ ಬಾಬು ದೃಢ ಸ್ವರದಲ್ಲಿ ಹೇಳಿದ.

ಹಾಂ, ನಿನ್ನ ಹುಟ್ಟಿದ ಹಬ್ಬದ ದಿನ ನಿನಗೆ ಖಂಡಿತ ಬೈಸಿಕಲ್ ಸಿಗುತ್ತೆ, ಅತ್ತೆಯ ಭರವಸೆ.

ಹೀಗೆ ಆ ಭಾನುವಾರವನ್ನು ನಗುನಗುತ್ತಾ ಸುಖವಾಗಿ ಕಳೆದಿದ್ದಾಯಿತು. ಸಂಜೆಯ ಹೊತ್ತಿಗೆ ಅತ್ತೆ ಹೊರಟುಹೋದಳು. ಕಾಲಿನ ಆ ಚೈನಿನ ಸಡಗರ ಮಾತ್ರ ಕ್ಷಣಕಾಲದ್ದಾಗಿತ್ತು. ಸ್ವಲ್ಪ ಹೊತ್ತು ಕಾಲಿಗೆ ಹಾಕಿದ್ದು. ಎಲ್ಲಾದರೂ ಕಳೆದುಹೋದೀತು ಎಂದು ತೆಗೆದು ಜೋಪಾನವಾಗಿ ಒಂದು ಕಡೆ ಇಡಲಾಯಿತು. ತುಂಬಾ ನಾಜೂಕಾಗಿದ್ದ ಆಭರಣ. ಎಂದೇ ಸಾಕಷ್ಟು ಬೆಲೆಯನ್ನೂ ಅದಕ್ಕೆ ತೆರಲಾಗಿತ್ತು.

ಏನೂ ಅಂದ್ರೆ, ತುಂಬಾ ಚೆನ್ನಾಗಿದೆ, ನಾನೂ ಒಂದನ್ನು ಮಾಡಿಸಿಕೊಳ್ಳಬಾರದೇಕೆ? ಎಂದು ನನ್ನ ಶ್ರೀಮತಿ ರಾಗ ಎಳೆದಿದ್ದಳು.

ಹಾಂ, ಹಾಂ ಮಾಡಿಸಿಕೋ, ನಿನಗೂ ನಾಲ್ಕು ವರ್ಷ ತುಂಬಿಲ್ಲವೇ ಹೇಗಾದರೂ, ಎಂದು ನಾನು ಹೇಳಿದೆ.

ಆ ಮಾತು ಹಾಗಿರಲಿ. ಬೇರೆ ಘಟನೆಯೇ ಆ ದಿನ ನಡೆಯಿತು. ನಾನು ಆ ರಾತ್ರಿ ಟೇಬಲ್ಲಿನ ಮುಂದೆ ಕುಳಿತು ಕೆಲಸ ಮಾಡುತ್ತಿದ್ದೆ. ಏನೂಂದ್ರೆ, ನೀವು ಕಾಲಿನ ಚೇನು ನೋಡಿದಿರಾ? ಎಂದು ಶ್ರೀಮತಿ ಕೇಳಿಕೊಂಡು ಬಂದಳು.

ಅಂದ್ರೆ? – ನಾನು ಆಶ್ಚರ್ಯದಿಂದ ಕೇಳಿದೆ.

ನೋಡಿ ಸ್ವಲ್ಪ. ಇಲ್ಲಿ ಮೇಜಿನ ಮೇಲೆ ಎಲ್ಲಾದರೂ ಬಿದ್ದಿದೆಯೋ ಏನೋ. ಒಂದು ಕಾಲಿನದು ಇದೆ. ಇನ್ನೊಂದು ಕಾಣುತ್ತಿಲ್ಲ. ಎಲ್ಲಿ ಬಿದ್ದಿದೆಯೋ ಏನೋ.

ಎಲ್ಲಿ ಹೋಗುತ್ತೆ? ಅಲ್ಲೇ ಎಲ್ಲಾದರೂ ಬಿದ್ದಿರಬೇಕು ನೋಡು. ಸಿಗುತ್ತೆ.

ಅವಳು ಮಾತ್ರ ನನ್ನ ಮೇಜಿನ ಮೇಲಿನ ಕಾಗದಗಳನ್ನೆಲ್ಲ ಆ ಕಡೆ ಈ ಕಡೆ ಮಾಡಿ ಹುಡುಕತೊಡಗಿದಳು. ಅಷ್ಟಕ್ಕೇ ನಿಲ್ಲದೆ ಅಲಮಾರಿಯ ಪುಸ್ತಕಗಳನ್ನೆಲ್ಲ ತೆಗೆದು ನೋಡಲು ಕೈಹಾಕಿದಳು.

"ಏನು ಮಾಡ್ತಿದ್ದೀಯೆ? ಅದು ಇಲ್ಲೆಲ್ಲಿ ಬರಬೇಕು? – ಎಂದು ನಾನು ಕೂಗು ಹಾಕಿದೆ.

ಅದಕ್ಕೆ ಉತ್ತರವಾಗಿ ನನ್ನನ್ನೇ ಅವಳು ಕೇಳತೊಡಗಿದಳು – ಇನ್ನೆಲ್ಲಿದೆ ಮತ್ತೆ?

ನೀನೇ ಎಲ್ಲೋ ಇಟ್ಟಿರಬೇಕು; ಎಲ್ಲಿ ಹಾಕಿದ್ದೀಯೋ ನೋಡು, ಎಂದು ನಾನು ಹೇಳಿದೆ.

ನಾನು ಮಧ್ಯಾಹ್ನ ಎರಡು ಗಂಟೆ ಹೊತ್ತಿಗೆ ಎರಡನ್ನೂ ತೆಗೆದು ಕೆಳಗಿರುವ ಪೆಟ್ಟಿಗೆಯಲ್ಲಿ ಭದ್ರವಾಗಿ ಇಟ್ಟಿದ್ದೆ. ಈಗ ನೋಡಿದರೆ ಒಂದಿದೆ, ಇನ್ನೊಂದಿಲ್ಲ, ಎಂದು ಅವಳು ಹೇಳತೊಡಗಿದಳು.

ಹಾಗಾದರೆ ಅದು ನಡೆದು ಇಲ್ಲಿಗೆ, ಈ ಕೋಣೆಗೆ, ಹೇಗೆ ಬರುತ್ತೆ? ನೀನು ಎಲ್ಲೋ ಮರೆತಿರಬೇಕು. ಒಂದನ್ನು ನೀನು ಭದ್ರವಾಗಿ ಇಟ್ಟಿರಬೇಕು, ಇನ್ನೊಂದನ್ನು ಅಲ್ಲೇ ಎಲ್ಲೋ ಬೀಳಿಸಿಕೊಂಡಿರಬೇಕು. ಸ್ವಲ್ಪ ಹುಡುಕಾಡು, ಸಿಗುತ್ತೆ. ಎಲ್ಲಿ ಹೋದೀತು? – ಎಂದು ನಾನು ಹೇಳಿದೆ.

ನೀವು ಯಾವಾಗಲೂ ಹೀಗೇನೇ! ತುಂಬಾ ಬೇಜವಾಬ್ದಾರಿ, ಈಗ ನನ್ನ ಮೇಲೇ ದೋಷ ಹಾಕ್ತಿದ್ದೀರಿ. ಎರಡನ್ನೂ ಭದ್ರವಾಗಿ ನಾನೇ ಇಟ್ಟೆ ಅಂತ ಹೇಳ್ತಿದೀನಿ. ನೀವು... ಎಂದು ಒಂದೇ ಸಮನೆ ಶುರುಮಾಡಿದಳು.

ಭದ್ರವಾಗಿ ಇಟ್ಟಿದ್ದೆ ಎಂದಮೇಲೆ ಇಲ್ಲೆಲ್ಲ ಏಕೆ ಹುಡುಕಾಡುತ್ತಿದ್ದೀಯೆ? ಎಲ್ಲಿ ಇಟ್ಟಿದ್ದೆಯೋ ಅಲ್ಲಿಂದಲೇ ತೆಗೆದುಕೊಳ್ಳಬಾರದೆ? ಅಲ್ಲಿಲ್ಲ ಎಂದರೆ, ಅಲ್ಲಿಂದ ಯಾರೋ ತೆಗೆದಿರಬೇಕು, ಎಂದೆ.

ನನಗೂ ಅದೇ ರೀತಿ ಅನಿಸುತ್ತಿದೆ. ಮನೆ ಕೆಲಸದ ಬಸ್ಯಾ ಏನಾದರೂ ತೆಗೆದುಕೊಂಡನೋ ಏನೋ! ನಾನು ಅದನ್ನು ಇಡುತ್ತಿದ್ದಾಗ ಅಲ್ಲೇ ಇದ್ದ – ಎಂದು ಶ್ರೀಮತಿ ಹೇಳಿದಳು.

ಅವನನ್ನು ಕೇಳಿದೆಯೇನು, ಎಂದು ಕೇಳಿದೆ.

ನನಗೆ ಗೊತ್ತೇ ಇಲ್ಲ ಅನ್ನುತ್ತಾನೆ, ಎಂದಳು.

ಹಾಗಾದರೆ? –ನನ್ನ ಪ್ರಶ್ನೆ.

ಶ್ರೀಮತಿ ಗಡುಸಾಗಿಯೇ ಹೇಳಿದಳು–ಹಾಗಾದರೆ ಎಂದರೆ ಏನು ಹೇಳಲಿ? ನಿಮಗಂತೂ ಯಾವುದೇ ವಿಚಾರದ ಚಿಂತೆಯಿಲ್ಲ. ಆ ಬನ್ನಿಯನ್ನು ಕರೆದು ಗದರಿಸಿ ಕೇಳಬಾರದೆ? ಅವನೇ ಎತ್ತಿಕೊಂಡಿದ್ದಾನೆ; ಇದು ಖಂಡಿತ.

ಸರಿ, ನಾನು ಅವನಿಗೆ ಏನು ಹೇಳಬೇಕು ಹೇಳು. ನೋಡು ತಮ್ಮಾ, ಚೈನು ಕೊಟ್ಟು ಬಿಡು ಎಂದು ಹೇಳಲೆ? – ಎಂದು ಕೇಳಿದೆ.

ಶ್ರೀಮತಿ ಇನ್ನಷ್ಟು ಜೋರಾಗಿ ಒದರಿದಳು – ಸರಿ, ನಾನು ಬಂದು ನಿಮಗೆ ಹೇಳುತ್ತಿದ್ದೇನಲ್ಲ! ಈ ನೌಕರರ ಜಾತೀನ ನೀವು ಅಟ್ಟದ ಮೇಲೆ ಕೂಡಿಸಿದ್ದೀರಿ. ಅವನ ಮೇಲೆ ರೇಗಾಡದೆ ಇದ್ದರೆ, ತಲೆಯ ಮೇಲೆ ಕುಳಿತುಕೊಳ್ಳದೆ ಬಿಡುತ್ತಾರೇನು?"

ಅವಳು ಮುಂದುವರಿದು ಹೇಳಿದಳು:

ಯಾರೋ ಆ ಪೆಟ್ಟಿಗೆಯಿಂದ ತೆಗೆದಿರುವುದು ನಿಜ. ಹದಿನೈದಾಣೆ ಭಾಗ ಬನ್ನಿಯೇ ಆ ಕೆಲಸ ಮಾಡಿರಬೇಕು. ನಾನು ಹೇಳೋದು ನಿಮ್ಮ ಕಿವಿಗೆ ಬೀಳುತ್ತಿದೆಯಲ್ಲ, ಅವನೇ ಆ ಕೆಲಸ ಮಾಡಿದ್ದಾನೆ.

ಅವನು ತೆಗೆದುಕೊಂಡಿಲ್ಲ ಎಂದು ತೋರುತ್ತೆ, ನನ್ನ ವಾದ.

ನನ್ನ ಈ ಮಾತಿಗೆ, ನಿಮಗೆ ಕೆಲಸದವರ ವಿಚಾರ ತಿಳಿಯದು. ಅವರು ತುಂಬಾ ದಗಾಕೋರರಾಗುತ್ತಾರೆ. ಖಂಡಿತಾ ಅವನೇ ತೆಗೆದುಕೊಂಡಿದ್ದಾನೆ. ಬೇರೆ ಯಾರು ಬರುತ್ತಾರೆ? ಎಂದು ಅವಳು ಒದರಿದಳು.

ಆಶುತೋಷನನ್ನೂ ವಿಚಾರಿಸಿದೆಯೇನು ಎಂದು ಕೇಳಿದೆ.

ಹಾಂ. ಕೇಳಿದೆ ಎಂದಳು. ಅವನಂತೂ ತಾನೇ ಟ್ರಂಕ್, ಪೆಟ್ಟಿಗೆ ಇವುಗಳ ಸಂದಿಗೊಂದಿ ಲೆಲ್ಲಾ ನುಗ್ಗಿ ನೋಡಿ ಅದನ್ನು ಹುಡುಕಾಡುವುದರಲ್ಲಿ ಸಹಕರಿಸಿದ ಎಂದೂ ಹೇಳಿದಳು. ಅವನು ತೆಗೆದುಕೊಂಡಿರಲಾರ.

ಅವನಿಗೆ ಗಾಳಿಪಟದ ಶೋಕಿ ಬಹಳ ಇದೆ ಎಂದೆ.

ಅವನಿಗೆ ನೀವು ಯಾವತ್ತಾದರೂ ಹೀಗೆ ಮಾಡು ಹಾಗೆ ಮಾಡು ಎಂದು ಹೇಳಿ ಕೊಟ್ಟರೆ ತಾನೆ? ಅವನ ವಯಸ್ಸಾಗುತ್ತಿದೆ. ಅವನು ಹೀಗೇ ಉಳಿಯಬೇಕಾಗುತ್ತದೆ. ಅವನಿಗೆ ಗಾಳಿಪಟ ಹಾರಿಸುವ ಶೋಕಿ ಕಲಿಸಿದವರೂ ನೀವೆ ಎಂದು ನನ್ನನ್ನೇ ಅವಳು ಆಕ್ಷೇಪಿಸಿದಳು.

ಅವನ ಕೈಗೆ ಕಳೆದುಹೋಗಿರುವ ಚೈನು ಸಿಕ್ಕಿದ್ದರೆ? ಎಂದು ಕೇಳಿದೆ.

ಇಲ್ಲ, ಇಲ್ಲ. ಖಂಡಿತಾ ಇಲ್ಲ. ಸಿಕ್ಕಿದ್ದರೆ ಅವನು ಅದನ್ನು ತೋರಿಸುತ್ತಿರಲಿಲ್ಲವೇನು? – ಎಂದು ಅವಳು ಹೇಳಿದಳು.

ಹೀಗೇ ಮಾತುಮಾತಿನಲ್ಲಿ ಒಂದು ವಿಷಯ ತಿಳಿಯಿತು. ಆಶುತೋಷ್ ಆ ದಿನ ಸಂಜೆ ಒಂದು ಗಾಳಿಪಟ ಮತ್ತು ಒಂದು ಹೊಸ ದಾರದ ಉಂಡೆಯನ್ನು ತಂದಿದ್ದುದು ಮಾತ್ರ ನಿಜ. ಇಷ್ಟಂತೂ ಗೊತ್ತಾಯಿತು.

ಗಾಳಿಪಟ ಹಾರಿಸುವುದಕ್ಕೆ ಅನುಮತಿ ಕೊಟ್ಟವರು ನೀವು ತಾನೇ, ಎಂದು ಶ್ರೀಮತಿ ನನ್ನನ್ನೇ ಆಕ್ಷೇಪಣೆ ಮಾಡಿದಳು. ಇಡೀ ದಿನ ಗಾಳಿಪಟದ ಹಿಂದೆಯೇ ಬಿದ್ದಿರುತ್ತಾನೆ. ಯಾವತ್ತಾದರೂ ಒಂದು ಕಡೆ ಅವನನ್ನು ಕೂರಿಸಿ ಪಾಠದ ವಿಚಾರ ಕೇಳಿದ್ದೀರಾ? ಒಂದು ದಿನ ಇರಿ ಮಾಡುತ್ತೀನಿ, ಅವನ ಗಾಳಿಪಟ, ಆ ದಾರದ ಉಂಡೆ ಅವೆಲ್ಲವನ್ನೂ ಕಿತ್ತು ಬೀದಿಗೆ ಬಿಸಾಡುತ್ತೇನೆ. ಯಾವಾಗಲೂ ಅದರ ಹಿಂದೆಯೇ ಬಿದ್ದಿರುತ್ತಾನೆ.

ಇರಲಿ ಬಿಡು, ನಾಳೆ ಬೆಳಿಗ್ಗೆ ಅವನನ್ನು ವಿಚಾರಿಸಿದರಾಯಿತು ಎಂದು ನಾನು ಹೇಳಿದೆ.

೦ ೦ ೦ ೦

ಮಾರನೆಯ ದಿನ ಅವನನ್ನು ಕರೆದು ಗಂಭೀರವಾಗಿ ಕೇಳಿದೆ: ನೋಡು ಆಶು, ಎರಡು ಚೈನುಗಳ ಪೈಕಿ ಒಂದು ಎಲ್ಲೋ ಸಿಗುತ್ತಿಲ್ಲ. ನೀನು ನೋಡಿಲ್ಲತಾನೇ?

ಅವನು ಏನೂ ಮಾತನಾಡದೆ ನಿಂತುಕೊಂಡ, ಕೋಪ ಬಂದವನಂತೆ. ತನಗೆ ಗೊತ್ತಿಲ್ಲವೆಂದು ತಿಳಿಸಲು ತಲೆಯನ್ನೇನೋ ಅಲ್ಲಾಡಿಸಿದ, ಆದರೆ ಬಾಯಿ ಮಾತ್ರ ಬಿಡಲಿಲ್ಲ.

ನೋಡು ಆಶೂ, ನೀನು ತೆಗೆದುಕೊಂಡಿದ್ದರೆ ತಪ್ಪೇನೂ ಇಲ್ಲ, ನಿಜ ಹೇಳಿಬಿಡು ಎಂದು ನಾನು ಹೇಳಿದೆ.

ಅವನ ಮುಖ ಇನ್ನಷ್ಟು ಊದಿಕೊಂಡಿತು. ತುಟಿ ಪಿಟಕ್ಕೆನ್ನದೆ ಕುಳಿತಲ್ಲೇ ಕುಳಿತು ಕೊಂಡ.

ನನ್ನ ಮನಸ್ಸಿನಲ್ಲಿ ಆಗ ಅನೇಕ ಸಿದ್ಧಾಂತಗಳು ಮುಂದೆ ಬರುತ್ತಿದ್ದುವು. ಅಪರಾಧ ನಡೆದಿರುವ ಕಡೆ ಕರುಣೆಯನ್ನು ಪ್ರದರ್ಶಿಸಬೇಕೇ ಹೊರತು ಕೋಪಗೊಂಡು ಅಧಿಕಾರ ಚಲಾಯಿಸಹೋಗುವುದು ಸರಿಯಲ್ಲ ಎಂಬ ತೀರ್ಮಾನಕ್ಕೆ ಬಂದಿದ್ದೆ. ಅಪರಾಧ ಪ್ರವೃತ್ತಿ ಯನ್ನು ಪ್ರೇಮದಿಂದಲೇ ಗೆಲ್ಲಬೇಕು. ಹಡಾಹುಡಿ ಹಾರಾಟ ಚೀರಾಟ ಪ್ರಯೋಜನ ವಿಲ್ಲ. ಹುಡುಗರ ಮನಸ್ಸು ತುಂಬಾ ಕೋಮಲವಾಗಿರುತ್ತದೆ. ಯಾವಾಗಲೂ ಅವರ ಜೊತೆಗೆ ಮೃದುವಾಗಿಯೇ ನಡೆದುಕೊಳ್ಳಬೇಕು. ಇತ್ಯಾದಿ ವಿಚಾರಗಳು ನನ್ನ ತಲೆ ಹೊಕ್ಕಿದ್ದುವು.

ನೋಡು ಆಶುತೋಷ್, ನೀನು ಗಾಬರಿಗೊಳ್ಳಬೇಡ. ನಿಜ ಹೇಳುವಾಗ ಹೆದರ ಬೇಕಾದ ಅಗತ್ಯವಿಲ್ಲ. ನೀನು ತೆಗೆದುಕೊಂಡಿದ್ದರೆ ಮುಚ್ಚುಮರೆಯಿಲ್ಲದೆ ಹೇಳಿಬಿಡು. ನೀನು ನಿಜ ಹೇಳಿದರೆ, ನಿನಗೆ ಯಾವ ಶಿಕ್ಷೆಯೂ ಇಲ್ಲ. ಅದಕ್ಕೆ ಬದಲು ಇನಾಮು ಸಿಗುತ್ತದೆ.

ಆಶುತೋಷ್ ಎಲ್ಲವನ್ನೂ ಕೇಳುತ್ತಾ ಕುಳಿತಿದ್ದ. ಅವನ ಮುಖ ಊದಿಕೊಂಡಿತ್ತು. ನನ್ನ ಕಣ್ಣಲ್ಲಿ ಕಣ್ಣಿಟ್ಟು ಅವನು ನೋಡುತ್ತಿರಲಿಲ್ಲ. ಅವನ ಹಣೆ ಬಿಗಿಯಾಗುತ್ತಿತ್ತು ಮಾತ್ರ.

ಏನು ಪುಟ್ಟ ನೀನು ತೆಗೆದುಕೊಂಡಿಲ್ಲತಾನೆ?

ತೆಗೆದುಕೊಂಡಿಲ್ಲ, ತೆಗೆದುಕೊಂಡಿಲ್ಲ, ತೆಗೆದುಕೊಂಡಿಲ್ಲ – ಅವನು ತಲೆಯಲ್ಲಾಡಿಸಿ ಕೋಪಗೊಂಡ ಸ್ಥಿರ ಸ್ವರದಲ್ಲಿ ಜೋರಾಗಿ ಒಂದೇ ಸಮನೆ ಒದರಿದ. ಇಷ್ಟು ಹೇಳಿದ ಮೇಲೆ ಅವನಿಗೆ ಅಳು ಬರುತ್ತಿತ್ತು. ಆದರೆ ಅಳಲಿಲ್ಲ. ಕಣ್ಣೀರು ಬರದಂತೆ ಮನಸ್ಸು ಬಿಗಿಹಿಡಿದ.

ಅದನ್ನು ಗಮನಿಸಿದಾಗ ದೋಷಪೂರ್ಣ ಮನಸ್ಸು ಉಗ್ರಗೊಳ್ಳುವುದು ಸಹಜ ಎಂದು ನನಗನಿಸಿತು.

ನಾನು ಹೇಳಿದೆ: ನೋಡು ಪುಟ್ಟಾ, ಹೆದರಬೇಡ. ಹೋಗು ಪರವಾಗಿಲ್ಲ, ಹೋಗಿ ಹುಡುಕಿ ನೋಡು. ಅಲ್ಲಿಯೇ ಎಲ್ಲಾದರೂ ಬಿದ್ದಿರಬೇಕು. ಸಿಗುತ್ತದೆ. ಹುಡುಕಿ ತಂದರೆ ನಿನಗೆ ಇನಾಮು ಕೊಡುತ್ತೇನೆ.

ಅವನು ಹೊರಟು ಹೋದ. ಹೋದವನೇ ಪಕ್ಕದ ಕೊಠಡಿಯಲ್ಲಿ, ಒಂದು ಮೂಲೆಯಲ್ಲಿ, ನಿಂತುಕೊಂಡುಬಿಟ್ಟ. ಸ್ವಲ್ಪ ಹೊತ್ತು ಹಾಗೆ ನಿಂತಿದ್ದು ಅನಂತರ ಅಲ್ಲಿ ಇಲ್ಲಿ ಚೈನಿನ ಹುಡುಕಾಟದಲ್ಲಿ ನಿರತನಾದ.

ಶ್ರೀಮತಿ ಬಂದು ಆಶುತೋಷನನ್ನು ವಿಚಾರಿಸಿದಿರೇನು ಎಂದು ಕೇಳಿದಳು. ಏನಾದರೂ ತಿಳಿಯಿತೆ!

ಜವಾನನನ್ನು ಕೇಳಿದೆ, ಅವನು ತೆಗೆದುಕೊಂಡಿಲ್ಲ ಅಂತ ಕಾಣುತ್ತೆ, ಎಂದು ನಾನು ಹೇಳಿದೆ. ಆಶು ಏಕೆ ತೆಗೆದುಕೊಳ್ಳುತ್ತಾನೆ, ಎಂದು ನನ್ನ ಹೆಂಡತಿ ಹೇಳಿದಳು.

ನಾನು ಏನೂ ಹೇಳಲಿಲ್ಲ. ಆಶುತೋಷನ ವಿಷಯದಲ್ಲಿ ಪ್ರೇಮಭಾವನೆ ನನ್ನಲ್ಲಿ ಪ್ರಬಲವಾಗಿತ್ತು. ಈ ಸಮಯದಲ್ಲಿ ನಾವು ಅವನಿಗೆ ಸಹಾನುಭೂತಿ ತೋರಿಸಬೇಕು, ಇದು ತುಂಬಾ ಆವಶ್ಯಕ ಎಂದು ನನಗನ್ನಿಸತೊಡಗಿತ್ತು. ಇಡೀ ಘಟನೆಯ ಕುರಿತಾದ ವಿಮರ್ಶೆ ನನ್ನ ಮನಸ್ಸಿನಲ್ಲಿ ನಡೆಯುತ್ತಿತ್ತು. ಆಶುತೋಷನು ಚೈನನ್ನು ಕದ್ದಿದ್ದಾನೆ ಎಂದೇ ಇಟ್ಟುಕೊಳ್ಳೋಣ. ಆದರೆ ಇದರಲ್ಲಿ ಅವನ ದೋಷವೇನೂ ಇಲ್ಲ. ಇದರ ಮೇಲಿನ ದೊಡ್ಡ ಆರೋಪ ನಮ್ಮ ಮೇಲೆಯೇ ಬರುತ್ತದೆ. ಒಂದು ಮಗುವಿನಲ್ಲಿ ಕಳುವಿನ ಸ್ವಭಾವ ಕಂಡಾಗ ಅದು ಭಯಾನಕವಾಗಿ ಕಾಣುತ್ತದೆ, ನಿಜ. ಆದರೆ ಮಗುವು ಅಂತಹ ಒಂದು ಸ್ಥಿತಿಗೆ ಬರಲು ಯಾರು ಕಾರಣ ಎಂದು ಯೋಚಿಸಿದಾಗ ಅದು ನಮ್ಮ ಹೊಣೆಗಾರಿಕೆಯ ಗಂಭೀರ ಪ್ರಶ್ನೆಯಾಗುತ್ತದೆ. ಅದಕ್ಕೂ ನಮಗೂ ಸಂಬಂಧ ಇಲ್ಲ ಎನ್ನುವಂತಿಲ್ಲ.

ನಾನು ಅವನನ್ನು ಕರೆದು ಹೇಳಿದೆ: ನೋಡು ಇಲ್ಲಿ ಕೇಳು, ನನ್ನ ಕಡೆ ನೋಡು, ನೀನು ಆ ಚೈನನ್ನು ಧುನ್ನು ಕೈಗೆ ಕೊಟ್ಟಿದ್ದೀಯೋ ಇಲ್ಲವೋ, ಹೇಳು ?

ಸ್ವಲ್ಪ ಹೊತ್ತು ಅವನು ಏನೂ ಹೇಳಲಿಲ್ಲ. ಅವನ ಮುಖದ ಮೇಲೆ ರಂಗು ಬಂತು ಮತ್ತು ಹೋಯಿತು. ನಾನು ಒಂದೊಂದು ಎಳೆಯನ್ನೂ ಬಿಡಿಸಿ ಅರ್ಥಮಾಡಿಕೊಳ್ಳಲು ಅಪೇಕ್ಷಿಸಿದ್ದೆ.

ನಾನು ಧೈರ್ಯ ಪೇಳುತ್ತಾ ಉತ್ತೇಜನ ನೀಡಿದೆ: "ಪರವಾಗಿಲ್ಲ, ಹೇಳು. ಹಾಂ, ಹೇಳು ಪರವಾಗಿಲ್ಲ. ಹೆದರಬೇಡ. ನಿಜ ಹೇಳಿಬಿಡು ಪುಟ್ಟಾ, ನೀನು ಎಷ್ಟೇ ಆಗಲಿ ನಮ್ಮ ಮಗ ಅಲ್ಲವೇ, ನಿಜ ಹೇಳಬೇಕು."

ಹೀಗೆ ಬಹಳ ಪ್ರಯಾಸಪಟ್ಟ ಮೇಲೆ ಕೊನೆಗೆ ಅವನು ತಲೆ ಆಡಿಸಿದ.

ನಾನು ತುಂಬಾ ಪ್ರಸನ್ನಚಿತ್ತನಾಗಿ ಹೇಳಿದೆ: ನೀನು ಅವನಿಗೆ ಕೊಟ್ಟೆಯಲ್ಲಾ ?

ಅವನು ತಲೆಯಲ್ಲಾಡಿಸಿಬಿಟ್ಟ.

ನಾನು ಬಹಳ ಮೃದುವಾಗಿ ಅವನನ್ನು ಸಾಂತ್ವನಗೊಳಿಸುವ ಸ್ವರದಲ್ಲಿ ಸ್ನೇಹ ಪೂರ್ವಕವಾಗಿ ಬಾಯಿಬಿಟ್ಟು ಹೇಳು ಮಗು ಎಂದು ಸೂಚಿಸಿದೆ.

"ಹಾಂ – ಆಂ" ಎಂದು ಅವನು ಹೇಳಿದ.

ನಾನು ಬಹಳ ಹರ್ಷಗೊಂಡು ಅವನನ್ನು ಎರಡೂ ಕೈಗಳಿಂದ ಎತ್ತಿಕೊಂಡೆ. ಒಳ್ಳೆಯ ಹುಡುಗರು ಹೀಗೆಯೇ ನಿಜವನ್ನು ಹೇಳುತ್ತಾರೆ ಎಂದು ಹೇಳಿದೆ. ಆಶು ನಮ್ಮ 'ರಾಜಾ ಬೇಟಾ'. ತುಂಬಾ ಅಭಿಮಾನದಿಂದ, ಅವನನ್ನು ಎತ್ತಿಕೊಂಡು ಅವನ ತಾಯಿ ಇದ್ದ ಎಡೆಗೆ ಹೋದೆ. ನೋಡು, ನಮ್ಮ ಹುಡುಗ ಎಲ್ಲಾ ಒಪ್ಪಿಕೊಂಡುಬಿಟ್ಟ. ಚೈನನ್ನು ಅವನು ಧುನ್ನೂ ಕೈಗೆ ಕೊಟ್ಟಿದ್ದಾನೆ.

ಅದನ್ನು ಕೇಳಿ ಅವನ ತಾಯಿ ತುಂಬಾ ಸಂತೋಷಪಟ್ಟಳು. ಪ್ರೀತಿಯಿಂದ ಅವನನ್ನು ಮುದ್ದಿಟ್ಟಳು. ಅವನಿಗೆ ಬಾಯಿ ತುಂಬ ಶಹಬಾಸ್‌ಗಿರಿ ಕೊಟ್ಟು ಅವನ ಮೇಲಿನಿಂದ ನಟಿಗೆ ತೆಗೆದಳು.

ಆಶುತೋಷ್ ಮುಖದ ಮೇಲೆ ನಗು ತಂದುಕೊಂಡ; ಆದರೆ ಅವನ ಮುಖದ ಮೇಲಿನ ಉದಾಸೀನತೆ ಮಾತ್ರ ಲವಲೇಶವೂ ಹೋಗಿರಲಿಲ್ಲ.

ಅನಂತರ ಅವನನ್ನು ಪ್ರತ್ಯೇಕ ಕರೆದುಕೊಂಡು ಹೋಗಿ ಮೃದುವಾಗಿ ಕೇಳಿದೆ: ಚೈನು ಧುನ್ನೂ ಹತ್ತಿರ ಇದೆ ಅಲ್ಲಾ ? ಹೋಗಿ ಈಸಿಕೊಂಡು ಬರುತ್ತೀ ತಾನೇ ?

ಆಶುತೋಷ್ ನನ್ನ ಕಡೆಯೇ ನೋಡುತ್ತಾ ಕುಳಿತುಬಿಟ್ಟ. ನಾನು ಹೇಳಿದೆ – ಹೋಗು ಮರಿ, ಹೋಗಿ ಈಸಿಕೊಂಡು ಬಾ ಹೋಗು.

ಅವನಿಂದ ಉತ್ತರವಿಲ್ಲ. ಮಾತನಾಡದೆ ಕುಳಿತಿದ್ದ.

ನಾನು ಆಗ್ರಹಪಡಿಸಿದ ಮೇಲೆ ಅವನು ಹೇಳಿದ: ಧುನ್ನು ಹತ್ತಿರ ಇಲ್ಲದಿದ್ದರೆ ಅವನು ಹೇಗೆ ಕೊಡುತ್ತಾನೆ ?

ಯಾರಿಗೆ ಕೊಟ್ಟಿದ್ದಾನೋ ಅವನ ಹೆಸರು ಹೇಳುತ್ತಾನೆ, ಅಷ್ಟೆ–ಎಂದು ನಾನು ಹೇಳಿದೆ.

ಅದನ್ನು ಕೇಳಿ ಅವನು ಸುಮ್ಮನಾದ. ನಾನು ಮತ್ತೆ ಮತ್ತೆ ಅವನಿಗೆ ಹೇಳಿದಾಗ ಲೆಲ್ಲಾ ಅವನು ಅದೇ ಉತ್ತರ ಹೇಳಿದ: ಭುನ್ನು ಹತ್ತಿರ ಇಲ್ಲದಿದ್ದರೆ ಅವನು ಹೇಗೆ ಕೊಡುತ್ತಾನೆ?

ಕೊನೆಗೆ ನಾನೇ ಸೋತು ಹೇಳಿದೆ: ಎಲ್ಲಿಯಾದರೂ ಅದು ಇರಲೇಬೇಕಲ್ಲ. ಅದು ಸರಿ, ನೀನು ಅದನ್ನು ಎಲ್ಲಿಂದ ಎತ್ತಿದ್ದೆ ಹೇಳು.

ಅಲ್ಲಿಯೇ ಬಿದ್ದಿತ್ತು, ಎತ್ತಿಕೊಂಡೆ.

ಆಮೇಲೆ ನೀನು ಅದನ್ನು ತೆಗೆದುಕೊಂಡು ಹೋಗಿ ಭುನ್ನುವಿಗೆ ತೋರಿಸಿದೆ.

ಹೂಂ.

ಇದನ್ನು ಮಾರೋಣ ಎಂದು ಅವನು ಹೇಳಿದ.

ಹೂಂ.

ಎಲ್ಲಿ ಮಾರೋಣ ಎಂದು ಕೇಳಿದ?

ಮಾರಿ ಮಿಠಾಯಿ ತರೋಣ ಎಂದ.

ಇಲ್ಲ, ಗಾಳಿಪಟ ತರೋಣ ಎಂದೆ.

–ಓಹ್, ಗಾಳಿಪಟ ತರೋಣ ಅಂದೆಯಾ?

ಹೂಂ.

ಹಾಗಾಗಿ ಚೀಸು ಭುನ್ನು ಬಳಿ ಸೇರಿತು.

ಹೂಂ.

ಹಾಗಾದರೆ ಅವನ ಬಳಿಯೇ ಅದು ಇರಬೇಕು, ಅಲ್ಲವೆ? ಇಲ್ಲವೆಂದರೆ ಗಾಳಿಪಟ ಮಾರುವವನ ಹತ್ತಿರ ಇರಬೇಕು. ಹೋಗು ಮರಿ, ಅವನ ಹತ್ತಿರ ಹೋಗಿ ಈಸ್ಕೊಂಡು ಬಾ. ನಮ್ಮ ತಂದೆ ನಿನಗೆ ಇನಾಮು ಕೊಡುತ್ತಾರೆ ಎಂದು ಹೇಳು."

ಅವನು ಹೋಗಲು ಒಪ್ಪುತ್ತಿರಲಿಲ್ಲ. ಮತ್ತೆ ಅದೇ ಪ್ರಶ್ನೆ: ಭುನ್ನು ಹತ್ತಿರ ಅದು ಇಲ್ಲವಾದರೆ ಅವನು ಹೇಗೆ ಅದನ್ನು ಕೊಡುತ್ತಾನೆ?

ಅವನ ಹಟಮಾರಿತನ ನನಗೆ ತುಂಬಾ ಕೆಟ್ಟದಾಗಿ ತೋರಿತು. ಹಾಗಾದರೆ ನೀನೇ ಅದನ್ನು ಹೂತಿಟ್ಟಿದ್ದೀಯೇನು? ಏನು ಮಾಡಿದ್ದಿ, ಹೇಳೋದಿಲ್ಲ ಏಕೆ? ಎಂದು ಕೇಳಿದೆ.

ಅವನು ನನ್ನ ಕಡೆಗೇ ನೋಡುತ್ತಿದ್ದನೇ ಹೊರತು ಏನೂ ಹೇಳಲಿಲ್ಲ.

ಯಾಕೆ ಏನೂ ಹೇಳೋದಿಲ್ಲ, ಎಂದು ಕೇಳಿದೆ.

ಅವನು ಮೂಕನಾಗಿಯೇ ಇದ್ದ: ಏನೇನೂ ಹೇಳಲಿಲ್ಲ.

ನಾನು ಗದರಿಕೊಂಡು ಹೇಳಿದೆ: ಹೋಗು. ಅದನ್ನು ಎಲ್ಲಿಟ್ಟಿದ್ದೀಯೋ ಅಲ್ಲಿಂದ ತೆಗೆದು ಕೊಂಡು ಬಾ ಹೋಗು.

ಅವನು ಕುಳಿತ ಸ್ಥಳದಿಂದ ಕದಲಲಿಲ್ಲ. ಎಲ್ಲಿಯೂ ಹೋಗಲಿಲ್ಲ. ನಾನಾಗ ಅವನ ಕಿವಿ ಹಿಡಿದು ಅಲ್ಲಿಂದ ಏಳಿಸಿ ಹೇಳಿದೆ: ಕೇಳಿದೆಯಾ? ಹೋಗು, ಹೋಗಿ ಚೈನು ತೆಗೆದು ಕೊಂಡು ಬಾ, ಹೋಗು. ಇಲ್ಲ ಎಂದರೆ ನಿನ್ನನ್ನು ಮನೆಗೇ ಸೇರಿಸೋಲ್ಲ.

ಹಾಗೆ ಏಳಿಸಿದ ಮೇಲೆ ಅವನು ಅಲ್ಲಿಂದೆದ್ದು ಹೋದ. ಹೋಗಿ ಜಗಲಿಯ ಮೇಲೆ, ಕೋಪಗೊಂಡ ಮುಖ ಮಾಡಿಕೊಂಡು. ಒಂದು ಮೂಲೆಯಲ್ಲಿ ನಿಂತುಕೊಂಡ.

ನನಗೆ ಕೋಪ ಉಕ್ಕಿ ಬರುತ್ತಿತ್ತು. ಈ ಹುಡುಗ ನಿಜ ಹೇಳಿಯೂ ಯಾವ ಕಾರಣ ಕ್ಕಾಗಿ ಹೆದರುತ್ತಿದ್ದಾನೆ, ನನಗಿದು ಅರ್ಥವಾಗಲಿಲ್ಲ, ನಾನು ಹೊರಗೆ ಹೋಗಿ, ಹೋಗೋ, ಹೋಗಿ ಘುನ್ನೂಗೆ ಹೇಳಬಾರದೆ? ಹೋಗಿ ಹೇಳು ಹೋಗು, ಎಂದೆ.

ಮೊದಮೊದಲು ಅವನು ಮಾತೇ ಆಡಲಿಲ್ಲ. ಮಾತಾಡುವುದಕ್ಕೆ ಆರಂಭಿಸಿದ ಮೇಲೆ ಒಂದೇ ಸಮನೆ ಅದೊಂದೇ ಮಾತು – ಅವನಲ್ಲಿ ಇಲ್ಲದೆ ಇದ್ದರೆ ಅವನು ಹೇಗೆ ಕೊಡುತ್ತಾನೆ?

ಅವನು ಎಷ್ಟಕ್ಕೆ ಅದನ್ನು ಮಾರಿದ್ದಾನೋ, ಅಷ್ಟು ಹಣ ಕೊಟ್ಟುಬಿಡೋಣ. ತಿಳಿಯಿತೆ? ಹೋಗಿ ಅವನಿಗೆ ಹೇಳು ಹೋಗು, ಎಂದು ನಾನು ಹೇಳಿದೆ.

ಅತ್ತ ಘುನ್ನುವಿನ ತಾಯಿ ತನ್ನ ಮಗ ಹಾಗೆ ಮಾಡುವವನಲ್ಲ ಎಂದು ಹೇಳು ತ್ತಿದ್ದಾಳೆ. ಅವನು ಚೈನನ್ನು ನೋಡೇ ಇಲ್ಲ ಎಂಬುದು ಅವಳ ವಾದ.

ನಿನ್ನ ಮಗ ಸುಳ್ಳು ಹೇಳುತ್ತಿದ್ದಾನೆ ಎಂದು ಆಶುತೋಷನ ತಾಯಿಯ ಆರೋಪ. ಮತ್ತು ಮಗನಿಗೆ, ಅದರ ಜೊತೆಗೇ, ತನ್ನ ಆರೋಪವನ್ನು ಸಮರ್ಥಿಸುವ ಪ್ರಶ್ನೆ ಬೇರೆ – ಯಾಕೋ, ನೀನು ಅವನಿಗೆ ಅದನ್ನು ಕೊಟ್ಟಿ ತಾನೇ?

"ಹೌದು ಕೊಟ್ಟಿದ್ದೆ."

ಅವಳು ಹಾಗೆ ಹೇಳುವುದೇ ತಡ, ಇನ್ನೊಂದು ಕಡೆ ಘುನ್ನು ಆವೇಶಭರಿತನಾಗಿ ಬಂದು ಕೈ ಝಾಡಿಸುತ್ತಾ ಹೇಳಿದ: ಇಲ್ಲ. ನನಗೆ ಕೊಟ್ಟಿಲ್ಲ. ಏನೋ. ನನಗೆ ಕೊಟ್ಟೆ ಯೇನೋ, ಯಾವಾಗ ಕೊಟ್ಟಿಯೋ?

ಆಶುತೋಷ್ ತಾನು ಕೊಟ್ಟುದಾಗಿ ಈಗ ಪಟ ಹಿಡಿದ – ಹೇಳೋ, ನಾನು ಕೊಟ್ಟಿಲ್ಲ ವೇನೋ?

ಇದರ ಪರಿಣಾಮ ಇಷ್ಟೇ ಆಯಿತು. ಘುನ್ನುವಿನ ತಾಯಿ ತನ್ನ ಮಗನಿಗೆ ಸಾಕಷ್ಟು ಹೊಡೆದಳು, ಜೊತೆಗೇ ತಾನೂ ಗೋಳೋ ಎಂದು ಅಳತೊಡಗಿದಳು. ಅಯ್ಯೋ, ಈ ಹಾಳಾದ ಹುಡುಗನಿಂದ ನಮ್ಮ ಮೇಲೆ ಕಳ್ಳತನದ ಅಪಾದನೆ ಬರುವ ಕಾಲವೂ ಬಂತಲ್ಲ, ಈ ಕುಲಗೇಡಿ ಯಾಕೆ ಹುಟ್ಟಿದ. ಎಂದೆಲ್ಲ ಗೋಳಾಡಿದಳು.

ಒಬ್ಬರಿಂದ ಒಬ್ಬರಿಗೆ ಮಾತು ಸಾಕಷ್ಟು ಹರಡಿತು. ಎಲ್ಲರ ಬಾಯಲ್ಲೂ ಅದೇ ಮಾತು. ನೆರೆಹೊರೆಯ ಹೆಂಗಸರ ಬಾಯಿಗೆ ಬ್ರೇಕೇ ಇಲ್ಲದಂತಾಯಿತು. ಮನೆಗೆ

ಹಿಂದಿರುಗಿದ ನನ್ನ ಹೆಂಡತಿ ಘುನ್ನೂ ಮತ್ತು ಅವನ ತಾಯಿ ಇಬ್ಬರೂ ಒಂದಾಗಿದ್ದಾರೆ ಎಂದು ಆಪಾದಿಸಿದಳು.

ನೀನೇಕೆ ಹೀಗೆ ಹಡಾಹುಡಿ ಮಾಡಿಬಿಟ್ಟೆ. ಹೀಗೆ ಮಾಡಿದರೆ ಆಗುತ್ತೆಯೇ ಎಂದು ಕೇಳಿದೆ.

ಹೌದು, ಹೌದು ನಾನು ಮಾಡುವ ಹಡಾಹುಡಿಯೇ ನಿಮಗೆ ಕಾಣಿಸೋದು. ನೀವೇ ಹೋಗಿ ಅವರಿಂದ ಚೈನು ತೆಗೆದುಕೊಂಡು ಬರಬಾರದೇಕೆ? ತನ್ನಿ ನೋಡೋಣ. ಎಂದು ಅವಳೆಂದಳು.

ಆ ಚೈನು ಅಷ್ಟು ಮುಖ್ಯವಲ್ಲ. ಮನಸ್ಸಿನ ಶಾಂತಿ ಮುಖ್ಯ. ಸುಮ್ಮನೆ ತಲೆ ಕೆಡಿಸಿ ಕೊಳ್ಳುವುದರಿಂದ ನಿನ್ನ ಚೈನು ಸಿಗುವುದಿಲ್ಲ ತಿಳಿದುಕೋ ಎಂದೆ.

ಶ್ರೀಮತಿ ಬುಸುಗುಟ್ಟುತ್ತಾ ನನ್ನ ಮುಂದೆ ನಿಲ್ಲದೆ ಅಲ್ಲಿಂದ ಹೊರಟು ಹೋದಳು.

ಸ್ವಲ್ಪ ಹೊತ್ತಿನ ಮೇಲೆ ಘುನ್ನೂವಿನ ತಾಯಿ ನಮ್ಮ ಮನೆಗೆ ಬಂದಳು. ನನ್ನ ಹೆಂಡತಿಯೇ ಅವಳನ್ನು ಕರೆದುಕೊಂಡು ಬಂದಿದ್ದಳು. ಅವರೀಗ ತುಂಬಾ ಸಮಾಧಾನ ಚಿತ್ತರಾಗಿಯೇ ನನ್ನ ಮುಂದೆ ಬಂದಿದ್ದರು. ಘುನ್ನೂ ಚೈನನ್ನು ತಾನು ತೆಗೆದುಕೊಂಡಿಲ್ಲ ವೆಂದು ಈಗಲೂ ನಿರಾಕರಿಸುತ್ತಾನೆ. ಆದರೆ ಅದರ ಬೆಲೆ ಎಷ್ಟು ಹೇಳಿಬಿಡಿ, ನಾನು ಕೊಟ್ಟುಬಿಡುತ್ತೇನೆ ಎಂದು ಅವನ ತಾಯಿ ಹೇಳುತ್ತಿದ್ದಾಳೆ.

ಇದೇನು ಮಾತು? ಹುಡುಗರು ಸೇರಿ ನಡೆಸಿರುವ ವ್ಯವಹಾರ. ನೀವು ಸಮಾಧಾನ ವಾಗಿ, ಒಳ್ಳೆ ಮಾತಿನಿಂದ, ಅವನನ್ನು ಕೇಳಿ ನೋಡಿದ್ದೀರಾ? – ಎಂದು ನಾನು ಹೇಳಿದೆ.

ಘುನ್ನೂ ಜೋರಾಗಿ ತಲೆಯಾಡಿಸಿ ಮತ್ತೊಮ್ಮೆ ನಿರಾಕರಿಸಿ ಹೇಳಿದ: ಆಶುತೋಷನ ಕೈಯಲ್ಲಿಯೇ ಚೈನು ಇತ್ತು. ನಾನು ನೋಡಿದೆ. ಅವನು ಅದನ್ನು ಗಾಳಿಪಟ ಮಾರು ವವನಿಗೆ ಕೊಟ್ಟು ಬಂದಿದ್ದಾನೆ. ನಾನು ಚೆನ್ನಾಗಿ ನೋಡಿದ್ದೇನೆ. ಅದು ಬೆಳ್ಳಿ ಚೈನು.

ನಿನಗೆ ಚೆನ್ನಾಗಿ ಗೊತ್ತಿದೆಯೆ?

ಚೆನ್ನಾಗಿ ಗೊತ್ತು, ನೀನೂ ಬಾ ಹೋಗಿ ಗಾಳಿಪಟ ತರೋಣ ಎಂದು ಅವನು ನನ್ನನ್ನು ಕರೆದ.

ಚೈನು ಎಷ್ಟು ದೊಡ್ಡದಿತ್ತು, ತೋರಿಸು ನೋಡೋಣ.

ಘುನ್ನೂ ಅದರ ಆಕಾರದ ಅಂದಾಜು ತೋರಿಸಿದ. ಸರಿಯಾಗಿತ್ತು.

ನಾನು ಅವನ ತಾಯಿಯ ಕಡೆ ತಿರುಗಿ ಹೇಳಿದೆ: ನೋಡಿದಿರಾ, ನಾನು ನೋಡೇ ಇಲ್ಲ ಎಂದು ನಿಮ್ಮ ಮುಂದೆ ಹೇಳುತ್ತಿದ್ದ. ಈಗ ಹೇಳುತ್ತಾನೆ ನೋಡಿದೆ ಎಂದು.

ನನ್ನ ಮುಂದೆಯೇ ಅವನ ತಾಯಿ ಅವನನ್ನು ಹಿಡಿದು ಮುಖ ಮೂತಿ ನೋಡದೆ ಒಂದೇ ಸಮನೆ ಅವನನ್ನು ಬಡಿಯತೊಡಗಿದಳು. ಯಾಕೋ ಸುಳ್ಳು ಹೇಳ್ತೀಯೇನೋ? ನಿನ್ನ ಬೆನ್ನು ಸುಲೀದೇ ಹೋದರೆ ನಾನು ನಿನ್ನ ಅಮ್ಮನಲ್ಲ, ತಿಳಿ – ಎಂದು ಒಂದೇ ಸಮನೆ ಬಾರಿಸತೊಡಗಿದಳು.

ನಾನು ಮಧ್ಯೆ ಪ್ರವೇಶಿಸಿ ಆಕೆಯನ್ನು ತಡೆಯಬೇಕಾಯಿತು. ಅವನೋ ಒಬ್ಬ ಹುತಾತ್ಮನಂತೆ ನಿಂತಿದ್ದ. ಅವನ ಕಣ್ಣಲ್ಲಿ ಒಂದು ತೊಟ್ಟೂ ನೀರು ಕಾಣಲಿಲ್ಲ; ಸುಮ್ಮನೆ ಒಂದು ಮೂಲೆಯಲ್ಲಿ ನಿಂತು ದುರದುರನೆ ಆಶುತೋಷನ ಕಡೆ ನೋಡುತ್ತಿದ್ದ.

ಸರಿ, ನೀವೆಲ್ಲ ಈಗ ಹೋಗಿ ಎಂದೆ. ಛುನ್ನೂ ಪುಟ್ಟಾ, ಹೋಗಿ ಆಡು ಹೋಗು ಎಂದೆ. ಅವನನ್ನು ನೀವು ಹೊಡೆಯಬೇಡಿ. ಚೈನು ಅಂಥ ದೊಡ್ಡ ಆಭರಣವೇನೂ ಅಲ್ಲ, ಹೋಗಿ ಎಂದು ಅವನ ತಾಯಿಗೆ ಹೇಳಿದೆ.

ಛುನ್ನೂ ಹೋದಮೇಲೆ ಅವನ ತಾಯಿ ಕೇಳಿದಳು—ನೀವು ಅವನು ಅಪರಾಧಿಯೆಂದು ತಿಳಿಯುತ್ತೀರಾ?

ಅವನಿಗೆ ವಿಷಯ ತಿಳಿದಿದೆ ಎಂದು ಅನಿಸುತ್ತೆ. ಈ ವ್ಯವಹಾರದಲ್ಲಿ ಅವನೂ ಶಾಮೀಲಾಗಿದ್ದಾನೆ, ಎಂದು ಹೇಳಿದೆ.

ಇದನ್ನು ಕೇಳಿ ಛುನ್ನುವಿನ ತಾಯಿ ನನ್ನ ಹೆಂಡತಿಯ ಸಮೀಪಕ್ಕೆ ಬಂದು ಕುಳಿತು ಹೇಳಿದಳು: ನನ್ನ ಜೊತೆಗೆ ಸ್ವಲ್ಪ ಬನ್ನಿ. ಮನೆಯನ್ನೆಲ್ಲ ಹುಡುಕಾಡಿ ನೋಡಿಬಿಡಿ ಅಂತೆ. ಒಂದೊಂದೂ ಸಾಮಾನು ತೆಗೆದು ನೋಡಿಬಿಡೋಣವಂತೆ. ಚೈನು ಅಲ್ಲಿ ಇದೆ ಎಂದಾದರೆ ಅಲ್ಲಿಯೇ ಎಲ್ಲಾದರೂ ಇರಲೇಬೇಕು. ಎಲ್ಲಿ ಹೋದೀತು?

ನಾನು ಹೇಳಿದೆ: "ಬಿಡಿ ಆ ಮಾತು. ಸುಮ್ಮನೆ ಮಾತು ಬೆಳೆಸುವುದರಿಂದ ಏನು ಪ್ರಯೋಜನ?—ಹೇಗೆಲ್ಲ ಸಮಾಧಾನ ಹೇಳಬೇಕೋ ಹಾಗೆಲ್ಲ ಹೇಳಿದೆ. ಇಲ್ಲವಾದರೆ ತನ್ನ ಮಗನ ಗತಿ ಮುಗಿಸಲು ಅವಳು ಪಣ ತೊಟ್ಟಂತಿತ್ತು. ಕುಲಗೇಡಿ, ನಿನ್ನ ಉಸಿರು ಇಲ್ಲದಂತೆ ಮಾಡದೆ ಹೋದರೆ ನನ್ನ ಹೆಸರು ಬದಲಾಯಿಸು ಎಂದೆಲ್ಲ ಆಕೆ ಬೊಬ್ಬೆ ಹಾಕಿದ್ದಳು.

ಹೇಗೋ, ಅಂತೂ ಪರಿಸ್ಥಿತಿಯನ್ನು ಅಲ್ಲಿಗೇ ಬಿಟ್ಟದ್ದಾಯಿತು. ಈ ಗೊಂದಲದಲ್ಲಿ ನಾನು ಆ ದಿನ ಸಮಯಕ್ಕೆ ಸರಿಯಾಗಿ ಆಫೀಸಿಗೆ ಹೋಗಲೂ ಸಾಧ್ಯವಾಗಲಿಲ್ಲ. ಹೋಗುವಾಗ ನನ್ನ ಹೆಂಡತಿಗೆ ಎಚ್ಚರಿಕೆ ಕೊಟ್ಟು ಹೋದೆ: ನೋಡು, ಆಶುತೋಷನನ್ನು ಹೆದರಿಸುವುದು ಬೆದರಿಸುವುದು ಬೇಡ, ಏನಿದ್ದರೂ ಒಳ್ಳೆಯ ಮಾತಿನಿಂದ ಎಲ್ಲ ವಿಚಾರಿಸು. ಹೆದರಿಸುವುದರಿಂದ ಮಕ್ಕಳ ದಾರಿ ಕೆಡುತ್ತದೆ. ಏನೂ ಪ್ರಯೋಜನವಾಗುವುದಿಲ್ಲ. ತಿಳಿಯಿತೆ?

ಸಾಯಂಕಾಲ ನಾನು ಆಫೀಸಿನಿಂದ ಮನೆಗೆ ಬಂದಾಗ ಆಶುತೋಷ್ ಎಲ್ಲವನ್ನೂ ಸ್ಪಷ್ಟವಾಗಿ ಹೇಳಿಬಿಟ್ಟ ಎಂದು ನನ್ನ ಹೆಂಡತಿ ತಿಳಿಸಿದಳು. ಹನ್ನೊಂದು ಆಣೆ ಬೆಲೆಗೆ ಅವನು ಚೈನನ್ನು ಗಾಳಿಪಟ ಮಾರುವವನಿಗೆ ಕೊಟ್ಟಿದ್ದಾನೆ. ದುಡ್ಡನ್ನು ಒಂದೇ ಸಲ ಕೊಡದೆ ಸ್ವಲ್ಪ ಸ್ವಲ್ಪವಾಗಿ ಕೊಡು ಎಂದೂ ಹೇಳಿದ್ದಾನಂತೆ. ಅವನು ಕೊಟ್ಟ ಐದು ಆಣೆ ಅವನ ಬಳಿ ಇದೆಯಂತೆ. ಹೀಗೆ ಪ್ರತಿಯೊಂದು ಮಾತನ್ನೂ ಅವನು ತಿಳಿಸಿದ್ದಾನೆ.

ಒಳ್ಳೆ ಮಾತಿನಿಂದ ಅವನನ್ನು ಪುಸಲಾಯಿಸಿ ಅವನ ಬಾಯಿ ಬಿಡಿಸಿದ್ದೇನೆ ಎಂದಳು.

ಎರಡು ಮೂರು ಘಂಟೆ ಪುಸಲಾಯಿಸಬೇಕಾಯಿತು. ಅಬ್ಬ, ಹುಡುಗರ ಸ್ವಭಾವ ಕೂಡ ಅದೆಷ್ಟು ವಿಚಿತ್ರವಾಗುತ್ತೆ!

ಅದನ್ನು ಕೇಳಿ ನನಗೆ ಸಂತೋಷವಾಯಿತು. ಒಳ್ಳೆಯದೇ ಆಯಿತು ಬಿಡು, ಐದಾಣೆ ಕಳುಹಿಸಿ ಚೈನು ತರಿಸಿಕೊಂಡರಾಯಿತು. ಆದರೆ ಅಂಗಡಿಯವನಾದರೂ ಬದ್ಮಾಶ ನಿದ್ದಾನೆ! ಮಕ್ಕಳ ಕೈಯಿಂದ ಇಂತಹ ವಸ್ತುಗಳನ್ನು ತೆಗೆದುಕೊಳ್ಳುವುದೆಂದರೇನು? ಅವನನ್ನು ಪೋಲೀಸರಿಗೆ ಒಪ್ಪಿಸಬೇಕು. ತುಂಬಾ ಠಕ್ಕಿನ ಮನುಷ್ಯ ಇದ್ದಾನೆ.

ಆಶುತೋಷ್ ಈಗೆಲ್ಲಿದ್ದಾನೆ ಎಂದು ಕೇಳಿದೆ.

ಹೊರಗೆ ಎಲ್ಲೋ ಆಟ ಆಡ್ತಿದಾನೆ, ಎಂದಳು.

ಬನ್ಸೀ, ಹೋಗಿ ಅವನನ್ನು ಕರೆದುಕೊಂಡು ಬಾ – ಎಂದು ನೌಕರನಿಗೆ ಹೇಳಿದೆ.

ಬನ್ಸೀ ಹೋಗಿ ಬಂದು 'ಬರ್ತಾರಂತೆ' ಎಂದು ಹೇಳಿದ.

ಏನು ಮಾಡ್ತಿದಾನೆ?

ಧುನ್ನೂ ಜೊತೆ ಗಿಲ್ಲಿ-ದಾಂಡು ಆಡ್ತಾ ಇದ್ದಾರೆ.

ಸ್ವಲ್ಪ ಹೊತ್ತಿನ ಮೇಲೆ ಆಶುತೋಷನ ಸವಾರಿ ಬಂತು. ನಾನು ಅವನನ್ನು ಸಮೀಪಕ್ಕೆ ಕರೆದು ಕೂರಿಸಿಕೊಂಡು ಮುದ್ದಾಡಿದೆ. ಅವನು ಬರುವಾಗಲೇ ಅವನ ಮುಖಭಾವ ಒಂದು ರೀತಿ ಆಯಿತು. ಅವನನ್ನು ನನ್ನ ಮಡಿಲಿನಲ್ಲಿ ಕೂಡಿಸಿಕೊಂಡು ಮುದ್ದುಮಾಡಿ ದಾಗಲೂ ಅವನ ಮುಖಭಾವದಲ್ಲಿ ಬದಲಾವಣೆ ಉಂಟಾದಂತೆ ಕಾಣಲಿಲ್ಲ.

ಅವನ ತಾಯಿ ಮಾತ್ರ ಹಿಗ್ಗಿನಿಂದ ಹೇಳುತ್ತಿದ್ದಳು: ಆಶುತೋಷನು ಪ್ರತಿಯೊಂದು ವಿಚಾರವನ್ನೂ ತಾನಾಗಿಯೇ ಹೇಳಿಬಿಟ್ಟಿದ್ದಾನೆ. ನಮ್ಮ ಆಶುತೋಷ್ ಎಷ್ಟೇ ಆಗಲಿ ತುಂಬಾ ಒಳ್ಳೆಯ ಹುಡುಗ.

ಅವನು ನನ್ನ ಮಡಿಲಲ್ಲೇ ಕುಳಿತಿದ್ದ. ಆದರೆ ತನ್ನ ಪ್ರಶಂಸೆಯಿಂದಾಗಿ ಅವನಿಗೆ ಒಂದಿಷ್ಟಾದರೂ ಸಂತೋಷವಾಗುತ್ತಿತ್ತು ಎನ್ನುವ ಲಕ್ಷಣವೇ ಅವನ ಮುಖದಲ್ಲಿಲ್ಲ.

ನಾನು ಹೇಳಿದೆ: ಇನ್ನು ನಡಿ. ಯಾತಕ್ಕೆ ನಿಧಾನ? ಏನು ಮಿಸ್ಟರ್, ನಿನಗೆ ಅವನು ಕೊಟ್ಟಿರುವುದು ಐದು ಆಣೆ ತಾನೇ? ನನಗೆ ಕೇಳಿದ್ದರೆ ನಾನು ಕೊಡುತ್ತಿರಲಿಲ್ಲವೇನು? ನೋಡು, ಆಶು, ಇನ್ನುಮೇಲೆ ಇಂಥ ಕೆಲಸವನ್ನು ಮಾಡಬೇಡ, ತಿಳೀತಾ ಪುಟ್ಟಾ?

ಕೊಠಡಿಗೆ ಕರೆದುಕೊಂಡು ಹೋಗಿ ಮತ್ತೆ ಅವನಿಂದ ಎಲ್ಲ ವಿವರ ಕೇಳತೊಡಗಿದೆ.

ಏನು ಪುಟ್ಟಾ, ಅಂಗಡಿಯವನು ನಿನಗೆ ಐದು ಆಣೆ ತಾನೇ ಕೊಟ್ಟಿದ್ದು?

ಹೂಂ.

ಆ ದುಡ್ಡು ಧುನ್ನೂ ಹತ್ತಿರ ಇದೆಯಲ್ಲ?

ಹೂಂ.

ಈಗಲೂ ಅವನ ಹತ್ತಿರ ಇದೆಯಲ್ಲ?

ಇಲ್ಲ.

ಖರ್ಚಾಗಿ ಹೋಯಿತೇನು?

ಇಲ್ಲ.

ಖರ್ಚು ಮಾಡಿಲ್ಲ ಹಾಗಾದರೆ?

ಹೂಂ.

ಖರ್ಚು ಮಾಡಿದ್ದೀರೋ, ಇಲ್ಲವೋ?

ನನ್ನ ಕಡೆ ನೋಡುತ್ತಾ ನಿಂತನೇ ಹೊರತು ಉತ್ತರ ಕೊಡಲಿಲ್ಲ.

ಬಾಯಿ ಬಿಟ್ಟು ಹೇಳು, ಖರ್ಚಾಗಿ ಹೋಗಿದೆಯೋ ಇಲ್ಲವೊ?

ಅದಕ್ಕೆ ಉತ್ತರ ಒಂದು ಬಾರಿ 'ಹೂಂ' ಆದರೆ ಇನ್ನೊಂದು ಬಾರಿ 'ಊಹೂಂ.'

ನಿನಗೆ ಗೊತ್ತಿಲ್ಲ ಎಂದೇಕೆ ಹೇಳುವುದಿಲ್ಲ? ಹಾಗಾದರೆ? ಎಂದು ನನ್ನ ಪ್ರಶ್ನೆ.

ಹೂಂ.

ನೋಡು ಪುಟ್ಟಾ, ನಿನಗೆ ಗೊತ್ತಿದೆ ತಾನೇ?

ಹೂಂ.

ಅಂಗಡಿಯವನಿಂದ ಛುನ್ನು ದುಡ್ಡು ತೆಗೆದುಕೊಂಡಿದ್ದಾನೆ ಅಲ್ಲ?

ಹೂಂ.

ನೀನೇಕೆ ತೆಗೆದುಕೊಳ್ಳಲಿಲ್ಲ?

ಮತ್ತೆ ಮೌನ.

ಬಾಯಿ ಬಿಟ್ಟು ಹೇಳೋ.

ಮೌನ.

ಒಂದು ಆಣೆಯ ಎಷ್ಟು ನಾಣ್ಯ ಇತ್ತು ಹೇಳು.

ಎರಡು.

ಉಳಿದ ಚಿಲ್ಲರೆಯೂ ಇತ್ತಲ್ಲ?

ಹೂಂ.

ಎರಡಾಣೆ ನಾಣ್ಯ ಇರಲಿಲ್ಲ?

ಹೂಂ.

ಎರಡಾಣೆ ಇತ್ತು?

ಹೂಂ.

ಈಗಂತೂ ನನಗೆ ವಿಪರೀತ ಕೋಪ ಬಂತು. ನಿಜ ಏಕ್ಹೋ ಹೇಳೋದಿಲ್ಲ? – ಎಂದು ನಾನು ಗದರಿದೆ. ನಿಜ ಹೇಳು, ಎಷ್ಟು ಆಣೆ ನಾಣ್ಯಗಳಿದ್ದುವು, ಎಷ್ಟು ಚಿಲ್ಲರೆ ಇತ್ತು?

ಅವನು ಬಾಯಿ ಬಿಡದೆ ಸುಮ್ಮನೆ ನಿಂತಿದ್ದನೇ ಹೊರತು ಉತ್ತರ ಕೊಡಲಿಲ್ಲ.

ಹೇಳುವುದಿಲ್ಲವೊ?

ಅವನು ಹೇಳಲಿಲ್ಲ.

ಕೇಳಿಸಿತೇ ? ಹೇಳು ...ಇಲ್ಲವಾದರೆ

ನನ್ನ ಗರ್ಜನೆ ಕೇಳಿ ಆಶುತೋಷ್ ಬೆದರಿದ. ಆದರೂ ಬಾಯಿ ಬಿಡಲಿಲ್ಲ.

ಕೇಳಿಸ್ತಾ ಇಲ್ಲವೇ ? ...ನಾನ್ ಏನು ಹೇಳ್ತಿದೀನಿ ಅನ್ನೋದು ? ಮತ್ತೆ ಗುಡುಗಿದೆ.

ಈ ಸಲವೂ ಅವನು ಉತ್ತರ ಕೊಡದೆಹೋದುದನ್ನು ಕಂಡು ನಾನು ಅವನ ಕಿವಿ ಹಿಂಡಿ "ಈಗಲೂ ಹೇಳೋಲ್ಲವೇ ?" ಎಂದು ಕೇಳಿದೆ. ಅವನ ಕಣ್ಣಲ್ಲಿ ನೀರೂ ಬರಲಿಲ್ಲ, ಮೂಕನಾಗಿ ನಿಂತ.

ಅವನು ಭಯದಿಂದ ನಡುಗುತ್ತಿದ್ದ. ಆದರೆ ಉತ್ತರ ಕೊಡಲು ಸಿದ್ಧನಾಗಿರಲಿಲ್ಲ. ನಾನು ಜೋರಾಗಿ ಕೂಗಿದೆ: "ಬನ್ನೀ, ಇಲ್ಲಿ ಬಾ... ಇವನನ್ನು ಕೊಠಡಿಯಲ್ಲಿ ಕೂಡಿ ಹಾಕು."

ನೌಕರ ಬನಿ ಅವನನ್ನು ಕರೆದುಕೊಂಡು ಹೋಗಿ ಕೊಠಡಿಯಲ್ಲಿ ಕೂಡಿಹಾಕಿದ್ದೂ ಆಯಿತು.

ಕೆಲವು ನಿಮಿಷಗಳ ನಂತರ ನಾನು ಮತ್ತೆ ಅವನನ್ನು ಬರಹೇಳಿದೆ. ಅವನ ಮುಖ ಊದಿಕೊಂಡಿತ್ತು. ಅವನ ತುಟಿಗಳು ನಡುಗುತ್ತಿದ್ದುವು. ಕೊಠಡಿಯಲ್ಲಿ ಕೂಡಿ ಹಾಕಿದ್ದರೂ ಅವನು ಅತ್ತಿರಲಿಲ್ಲ.

ಏನೋ, ಈಗಲಾದರೂ ಬುದ್ಧಿ ಬಂತೇನು ? – ಎಂದು ಕೇಳಿದೆ.

ಅವನು ಅದನ್ನು ಕೇಳಿಸಿಕೊಂಡೂ ಸುಮ್ಮನೆ ನಿಂತಿದ್ದ.

ಯಾವ ಅಂಗಡಿಯವನು ಹೇಳು. ಬಲಗಡೆ ಆ ಚೌಕದಲ್ಲಿರುವ ಅಂಗಡಿತಾನೆ ? – ಅವನು ತುಟಿಗಳನ್ನಾಡಿಸಿ ಏನೋ ತೊದಲಿದ, ನನಗೊಂದೂ ಗೊತ್ತಾಗಲಿಲ್ಲ.

ಆ ಚೌಕದಲ್ಲಿರುವ ಅಂಗಡಿ ತಾನೇ ? – ಹೇಳು.

ಹೂಂ.

ನೋಡು ನಿನ್ನ ಚಿಕ್ಕಪ್ಪನನ್ನು ಜೊತೆಗೆ ಕರೆದುಕೊಂಡು ಹೋಗಿ ಅವನಿಗೆ ತೋರಿಸು. ಅವನು ಅವನನ್ನು ತರಾಟೆಗೆ ತೆಗೆದುಕೊಳ್ಳುತ್ತಾನೆ. ತೋರಿಸು ಹೋಗು.

ಇಷ್ಟು ಹೇಳಿ ನಾನು ನನ್ನ ತಮ್ಮನ ಹೆಸರು ಹಿಡಿದು ಕೂಗಿದೆ. ಅವನಿಗೆ ಎಲ್ಲ ವಿಚಾರ ಹೇಳಿ ನೋಡು, ಜೊತೆಗೆ ಐದಾಣೆ ತೆಗೆದುಕೊಂಡು ಹೋಗು. ಮೊದಲು ನೀನು ದೂರದಲ್ಲಿಯೇ ನಿಂತು ಇವನನ್ನು ಕಳುಹಿಸು. ಆಶುತೋಷ್ ಹೋಗಿ ಅವನಿಗೆ ದುಡ್ಡು ಕೊಟ್ಟು ಚೈನು ಕೇಳುತ್ತಾನೆ. ಅವನು ಹಿಂದಕ್ಕೆ ಕೊಡುತ್ತಾನೆ. ಅವನು ಕೊಡಲಿಲ್ಲ ಎಂದರೆ ನೀನು ಹೋಗಿ ಅವನನ್ನು ತರಾಟೆಗೆ ತೆಗೆದುಕೋ, ಪೊಲೀಸರಿಗೆ ತಿಳಿಸುತ್ತೇನೆ ಎಂದೂ ಹೇಳು. ಮಕ್ಕಳ ಕೈಯಿಂದ ತೆಗೆದುಕೊಂಡು ಮೋಸ ಮಾಡುತ್ತೀಯಾ ಎಂದು ಗದರಿಸು. ತಿಳೀತಾ ? ಮತ್ತಗಿರಬೇಕಾದ ಅಗತ್ಯವಿಲ್ಲ.

ಆಶುತೋಷ್, ಈಗ ಹೋಗು, ನಿನ್ನ ಚಿಕ್ಕಪ್ಪನ ಜೊತೆಗೆ ಹೋಗು. ಅವನು ಮಾತ್ರ ನಿಂತಲ್ಲೇ ನಿಂತಿದ್ದ. ಅಲ್ಲಿಂದ ಅವನು ಕದಲುವ ಸೂಚನೆಯೇ ಕಂಡುಬರಲಿಲ್ಲ.

ಹೋಗುವುದಿಲ್ಲವೇನು?

ಹೋಗುವುದಿಲ್ಲವೆಂದು ಅವನು ತಲೆ ಅಲ್ಲಾಡಿಸಿಬಿಟ್ಟ.

ಹತಾಶನಾಗಿ ನಾನು ಹೇಳಿದೆ: ನೋಡಯ್ಯಾ, ಮನೆ ಸಾಮಾನು. ಅದರ ಮೇಲೆ ಹಣ ಚೆಲ್ಲಿದ್ದಾಗಿದೆ. ಅಷ್ಟು ಹಣ ಚೆಲ್ಲಿರುವ ಒಡವೆಯನ್ನು ಹಾಗೆ ಬಿಟ್ಟುಬಿಡುವುದೇ? ಹೋಗು, ನಿನ್ನ ಚಿಕ್ಕಪ್ಪನ ಜೊತೇಗೆ ಹೋಗು. ಅವನಿಗೆ ನೀನೇನೂ ಹೇಳಬೇಕಾದ್ದೇ ಇಲ್ಲ. ಅವನ ದುಡ್ಡ ಕೊಟ್ಟು ನಿನ್ನ ಸಾಮಾನು ಪಡೆಯೋದು, ಅಷ್ಟೆ. ಅವನು ಕೊಟ್ಟರೆ ಸರಿ, ಇಲ್ಲವಾದರೆ ಬೇಡ. ನಿನಗೂ ಅದಕ್ಕೂ ಸಂಬಂಧವಿಲ್ಲ. ಹೋಗು, ಚಿಕ್ಕಪ್ಪನ ಜೊತೇಗೆ ಹೋಗು.

ಆದರೆ ಅವನು ಮಾತ್ರ ಹೊರಡುವ ಸಿದ್ಧತೆಯನ್ನೇ ಪ್ರದರ್ಶಿಸಲಿಲ್ಲ. ಹುಡುಗನ ಈ ಹಟಮಾರಿತನ ಕಂಡು ನನಗೆ ತುಂಬಾ ಬೇಸರವಾಯಿತು. ನಾನು ಮತ್ತೆ ಕೇಳಿದೆ: ಇದರಲ್ಲೇನಪ್ಪ ನಿನಗೆ ತೊಂದರೆ? ಏನು ವಿಚಾರ, ಬಾಯಿಬಿಟ್ಟು ಹೇಳು ಮತ್ತೆ. ಒಳ್ಳೆ ಮಾತಿನಿಂದ ಹೇಳುತ್ತಿದ್ದರೂ ನೀನು ಕೇಳುತ್ತಿಲ್ಲ. ಎಷ್ಟು ಸಮಜಾಯಿಸಿ ಹೇಳಿದರೂ ನಿನಗೆ ಅರ್ಥವಾಗುತ್ತಿಲ್ಲ.

ಏನೋ. ಹಾಗಾದರೆ ನೀನು ಹೋಗುವುದಿಲ್ಲವೇನು? ಎಂದು ಜೋರಾಗಿಯೇ ಕೇಳಿದೆ.

ಅವನು ತಲೆ ಅಲ್ಲಾಡಿಸಿ ಸ್ಪಷ್ಟವಾಗಿ ಹೇಳಿಬಿಟ್ಟ ನಾನು ಹೋಗುವುದಿಲ್ಲ ಎಂದು.

ನಾನು ನನ್ನ ತಮ್ಮ ಪ್ರಕಾಶನಿಗೆ ಕೂಗಿದೆ. ಮತ್ತು ಹೇಳಿದೆ. ಇವನನ್ನು ಎಳೆದು ಕೊಂಡು ಹೋಗು.

ಪ್ರಕಾಶನು ಅವನನ್ನು ಹಿಡಿದ; ಆಶುತೋಷ್ ಮಾತ್ರ ಕೈಕಾಲು ಬಡಿಯುತ್ತಾ ಪ್ರತಿಭಟಿಸಿದ. ಅವನ ಜೊತೆಗೆ ಹೋಗಲು ಅವನು ಒಪ್ಪುತ್ತಿರಲಿಲ್ಲ.

ನಾನು ಮನಸ್ಸು ತುಂಬಾ ಬಿಗಿಹಿಡಿದು ಆಶುತೋಷನನ್ನು ಮತ್ತೆ ಪುಸಲಾಯಿಸುವ ಸ್ವರದಲ್ಲಿ ಹತಾಶನಾಗಿ ಹೇಳಿದೆ: ಹೋಗು ಮರಿ, ಹೆದರಬೇಡ. ಮನೆ ಸಾಮಾನು ಮನೆಗೆ ಬರುತ್ತದೆ. ಇಷ್ಟು ನಿನಗೆ ತಿಳಿಯಬೇಡವೆ? ಪ್ರಕಾಶ್. ಇವನನ್ನು ಎತ್ತಿಕೊಂಡು ಹೋಗು. ಪೇಟೆಯಲ್ಲಿ ಏನು ಕೇಳುತ್ತಾನೋ ಅದನ್ನು ಕೊಡಿಸು. ಆಶುತೋಷ್, ಹೋಗು ಮರಿ, ಹೋಗು.

ಆದರೆ ಅವನ ಮುಖ ಊದಿಕೊಂಡೇ ಇತ್ತು. ಬಹಳ ಪುಸಲಾಯಿಸಿದ ಮೇಲೆ ಅಂತೂ ಪ್ರಕಾಶನ ಜೊತೆಗೆ ಹೊರಟು ಕಾಲು ಎತ್ತುವುದೇ ತುಂಬಾ ಕಷ್ಟವಾಗಿತ್ತು ಅವನಿಗೆ ಎನ್ನುವ ಹಾಗೆ ಭಾರವಾದ ಕಾಲುಗಳನ್ನು ಎಳೆಯುತ್ತಾ ಹೊರಟ. ಎಂಟು ವರ್ಷ ವಯಸ್ಸಿನ ಹುಡುಗ ಆಗಿದ್ದಾನೆ, ನೋಡಿ ಅವನಿಗೆ ಕಿಂಚಿತ್ತೂ ತಿಳಿವಳಿಕೆ ಬಂದ ಹಾಗಿಲ್ಲ. ನನಗಂತೂ ವಿಪರೀತ ಕೋಪ ಬಂದಿತ್ತು. ಆದರೆ ಏನು ಮಾಡಲಿ? ಹೇಗೆ ತೋರಿಸಿಕೊಳ್ಳಲಿ? ಕೋಪಗೊಂಡರೆ ಮಕ್ಕಳು ಸುಧಾರಿಸುವ ಬದಲು ಇನ್ನಷ್ಟು

ಕೆಡುತ್ತಾರೆ. ನನ್ನ ಕೋಪವನ್ನು ತಡೆಹಿಡಿದುಕೊಳ್ಳಬೇಕಾಯಿತು. ಕೊನೆಗೂ ಹೋದ ನಲ್ಲ. ನನಗೆ ಅಷ್ಟಕ್ಕೇ ಸಮಾಧಾನವಾಯಿತು. ಸದ್ಯ ಹೋದನಲ್ಲ ಎಂದುಕೊಂಡೆ.

ಆದರೆ ನೋಡುತ್ತೇನೆ, ಸ್ವಲ್ಪ ಹೊತ್ತಿನಲ್ಲೇ ಪ್ರಕಾಶ ಒಂದಿರುಗಿ ಬಂದ. ಏಕೆ ಬಂದೆ, ಎಂದು ಕೇಳಿದೆ.

ಆಶುತೋಷ್ ಓಡಿ ಬಂದಿದ್ದಾನೆ ಎಂದು ಹೇಳಿದ.

ಈಗ ಎಲ್ಲಿದ್ದಾನೆ ಎಂದು ಕೇಳಿದೆ.

ಮುನಿಸಿಕೊಂಡು ನಿಂತಿದ್ದಾನೆ, ಮನೆಗೆ ಬರುತ್ತಿಲ್ಲ.

ಹೋಗು, ಎಳೆದುಕೊಂಡು ಬಾ ಅವನನ್ನು, ಎಂದೆ.

ಅವನನ್ನು ಎಳೆದುಕೊಂಡು ಬರಬೇಕಾಯಿತು. ನಾನು ಹೇಳಿದೆ: ಯಾಕೋ ನಿನ್ನ ಹಟಮಾರಿತನ ಬಿಡುವುದಿಲ್ಲವೇನು? ಹೇಳು, ಹೋಗುತ್ತೀಯೋ ಇಲ್ಲವೊ?

ಅವನು ಬಾಯಿ ಬಿಡಲಿಲ್ಲ. ನಾನು ಎರಡು ಬಾರಿಸಿದೆ. ಏಟು ಬೀಳುವುದೇ ತಡ, ಅವನು ಚೀರಿದ. ಆದರೆ ಮರುಘಳಿಗೆಯಲ್ಲೇ ಸುಮ್ಮನಾಗಿಬಿಟ್ಟ. ಅವನು ಹಾಗೆಯೇ ನನ್ನ ಮುಂದೆ ನಿಂತುಬಿಟ್ಟಿದ್ದ.

ಅವನನ್ನು ಆ ರೀತಿ ನೋಡಿ ನನಗೆ ತುಂಬಾ ಸಿಟ್ಟುಬಂತು. ಇವನನ್ನು ನನ್ನ ಮುಂದಿನಿಂದ ಕರೆದುಕೊಂಡು ಹೋಗಿ, ಕರೆದುಕೊಂಡು ಹೋಗಿ ರೂಮಿನಲ್ಲಿ ಕೂಡಿಹಾಕಿ. ದುಷ್ಟ, ಎಲ್ಲೀದೋ – ಎಂದು ಕೂಗಿದೆ.

ಈ ಸಲ ಅವನನ್ನು ಸುಮಾರು ಒಂದು ಗಂಟೆ ಹೊತ್ತು ಕೂಡಿಹಾಕಲಾಯಿತು. ನಾನು ಸರಿಯಾಗಿ ವರ್ತಿಸುತ್ತಿಲ್ಲ ಎಂದು ಅನಿಸಿತು. ಆದರೆ ಬೇರೆ ಯಾವ ಮಾರ್ಗವೂ ತೋಚುತ್ತಿರಲಿಲ್ಲ. ಹೊಡೆಯುವುದು ಮತ್ತು ಬಡೆಯುವುದರ ಮೂಲಕ ಸಮಾಧಾನ ಪಟ್ಟುಕೊಳ್ಳುವುದಷ್ಟೇ ಅಭ್ಯಾಸವಾಗಿ ಹೋಗಿತ್ತು. ಉಳಿದ ಮಾರ್ಗವೇ ಗೊತ್ತಿರಲಿಲ್ಲ.

ನಾನು ಪ್ರಕಾಶನನ್ನು ಕರೆದು ನೀನು ಗಾಳಿಪಟ ಮಾರುವ ಆ ಎರಡೂ ಅಂಗಡಿಗಳಿಗೆ ಹೋಗಿ ಉಪಾಯವಾಗಿ ಚೈನು ಯಾರ ಬಳಿ ಇದೆ ಎಂಬುದನ್ನು ತಿಳಿದುಕೋ. ಉಪಾಯವಾಗಿ. ಅದು ತಿಳಿದ ಮೇಲೆ ನೀನು ಜೋರಾಗಿಯೇ ಇರಬಹುದು; ಆಗ ನಮ್ರತನ ಬೇಕಾಗಿಲ್ಲ. ತಿಳಿಯಿತೆ?

ಪ್ರಕಾಶ ಹೋದ. ಆದರೆ ಯಾರ ಬಳಿಯೂ ಚೈನು ಇಲ್ಲ ಎಂದು ಬಂದು ಹೇಳಿದ.

ಕೇಳಿ ನಾನು ಸಿಡುಕಾಡಿದೆ. ನಿನ್ನಿಂದ ಏನೊಂದೂ ಕೆಲಸ ಆಗುವುದಿಲ್ಲ ಎಂದು ಕೂಗಾಡಿದೆ. ಒಂದು ಸಣ್ಣ ಕೆಲಸ ನಿನ್ನಿಂದ ಆಗಲಿಲ್ಲ, ನೀನು ಏನು ತಾನೇ ಮಾಡೀಯೆ?

ಅವನು ವಿವರಣೆ ಕೊಡಲುದ್ಯುಕ್ತನಾದ. ಸಾಕು, ನೀನು ಹೋಗು, ಎಂದು ನಾನು ಅವನನ್ನು ಕಳುಹಿಸಿದೆ.

ನಾನೆಂದರೆ ಪ್ರಕಾಶನಿಗೆ ತುಂಬಾ ಗೌರವ. ಎದಿರು ನಿಂತು ಮಾತನಾಡುವುದಿಲ್ಲ. ಹೋಗಿ ಮರೆಯಲ್ಲಿ ನಿಂತುಕೊಂಡ. ಕೊಠಡಿ ಬಿಚ್ಚಿ ನೋಡಿದಾಗ ಆಶುತೋಷ್ ನೆಲದ

ಮೇಲೆ ಹಾಸಿರುವ ಜಮಖಾನೆಯ ಮೇಲೆ ಮಲಗಿದ್ದಾನೆ. ಅವನ ಮುಖದ ಮೇಲೆ ಈಗಲೂ ಕಣ್ಣೀರಿನ ಗುರುತು ಇಲ್ಲ. ನಿಜ ಹೇಳಬೇಕೆಂದರೆ, ಅವನನ್ನು ಕಂಡು ನನಗೆ ನಿಜಕ್ಕೂ ಕನಿಕರ ಉಂಟಾಯಿತು. ಆದರೆ ಮನುಷ್ಯನ ಮನಸ್ಸಿನಲ್ಲಿ ಒಂದೇ ಕಾಲಕ್ಕೆ ಏನೇನು ವಿರೋಧ ಭಾವನೆಗಳು ಹುಟ್ಟಲು ಸಾಧ್ಯವೋ ಏನೋ!

ನಾನೇ ಅವನನ್ನು ಎಬ್ಬಿಸಿದೆ. ಅವನು ತಡಬಡಿಸಿಕೊಂಡು ಎದ್ದ. ನಾನು ಕೇಳಿದೆ: ಹೂಂ, ಏನಂತಿ?

ಸ್ವಲ್ಪ ಹೊತ್ತು ಅವನಿಗೆ ಏನೂ ತೋಚಲಿಲ್ಲ. ಆಮೇಲೆ ಹಳೆಯದನ್ನು ನೆನಸಿ ಕೊಂಡನೋ ಏನೋ, ಇದ್ದಕ್ಕಿದ್ದಂತೆ ಅವನ ಮುಖದ ಮೇಲೆ ಮತ್ತೆ ಅದೇ ಹಳೆಯ ಜಿದ್ದು, ಹಟಮಾರಿತನ ಮತ್ತು ಪ್ರತಿಭಟನೆಯ ಚಿಹ್ನೆಗಳು ಕಂಡುಬರತೊಡಗಿದುವು.

ನೋಡು ಒಳ್ಳೆಯ ಮಾತಿನಿಂದ ಹೋಗು, ಇಲ್ಲವಾದರೆ ಮತ್ತೆ ಇದೇ ಕೊಠಡಿ ಯಲ್ಲಿ ಕೂಡಿಹಾಕಬೇಕಾಗುತ್ತೆ ಎಂದು ಹೇಳಿದೆ.

ಆದರೆ ಇದರಿಂದ ಅಂತಹ ವಿಶೇಷ ಪ್ರಭಾವವೇನೂ ಅವನ ಮೇಲೆ ಆದಂತೆ ಕಂಡು ಬರಲಿಲ್ಲ.

ನಾನು ಅವನನ್ನು ಕರೆದುಕೊಂಡು ಹೊರಗೆ ಬಂದೆ. ಮತ್ತೆ ಮತ್ತೆ ಅವನನ್ನು ಪುಸಲಾಯಿಸಲು ತೊಡಗಿದೆ. ಜೇಬಿನಿಂದ ಒಂದು ರೂಪಾಯಿ ತೆಗೆದು ಅವನಿಗೆ ಕೊಡುತ್ತಾ ನೋಡು ಪುಟ್ಟಾ. ಇದನ್ನು ಅಂಗಡಿಯವನಿಗೆ ಕೊಟ್ಟು ಅವನಿಂದ ಚೈನನ್ನು ಈಸಿಕೋ. ಹೆದರಬೇಕಾದ್ದೇನೂ ಇಲ್ಲ. ನೀನು ಎಷ್ಟೋ ಆಗಲಿ ಒಳ್ಳೇ ಬುದ್ಧಿವಂತ ಹುಡುಗ, ಎಂದೆ.

ಅದು ಅವನ ಹತ್ತಿರ ಇಲ್ಲದಿದ್ದರೆ ಅವನು ಹೇಗೆ ಕೊಟ್ಟಾನು. ಎಂದು ಅವನು ಹೇಳಿದ.

ಏನು ಹೇಳ್ತೀಯೋ ನೀನು? ಐದು ಆಣೆ ತೆಗೆದುಕೊಂಡು ಚೈನು ಕೊಟ್ಟಿರುವು ದಾಗಿ ನೀನು ಹೇಳಿಲ್ಲ? ಜೊತೆಗೆ ಘುನ್ನೂ ಕೂಡ ಬೇಕಾದರೆ ಬರಲಿ. ಕರೆದುಕೊಂಡು ಹೋಗು. ತಿಳೀತಾ?

ಅವನು ಸುಮ್ಮನಾಗಿಬಿಟ್ಟ. ಬಹಳ ಮಾಡಿ ಒಪ್ಪಿಸಿದ ಮೇಲೆ ಹೋಗಲು ಒಪ್ಪಿ ಕೊಂಡ. ಪ್ರಕಾಶನ ಜೊತೇಗೆ ಹೋಗು ಎಂದು ಅವನಿಗೆ ಒಳ್ಳೆಯ ಮಾತಿನಿಂದ ಹೇಳಿದೆ. ಅವನು ಮುಖ ಗಡಿಗೆಯ ಹಾಗೆ ಮಾಡಿಕೊಂಡಿದ್ದನ್ನು ಕಂಡು ಮತ್ತೆ ಅವನ ಮೇಲೆ ರೇಗುವುದರಲ್ಲಿದ್ದೆ. ಅಷ್ಟರಲ್ಲೇ ಅವನ ಅತ್ತೆ ಬಂದುದನ್ನು ನೋಡಿದೆ.

ಅವಳು ಅವನ ತಲೆಯ ಮೇಲೆ ಪ್ರೀತಿಯಿಂದ ಕೈ ಸವರುತ್ತಾ, ಎಲ್ಲಿಗೆ ಹೋಗು ತ್ತಿದ್ದೀಯೋ. ನಿನಗಾಗಿ ಮಿಠಾಯಿ ಬಾಳೆಹಣ್ಣು ಎಲ್ಲ ತಂದಿದ್ದೇನೆ, ಎಂದಳು.

ಆಶುತೋಷನ ಮುಖಮುದ್ರೆ ಹಿಂದಿನಂತೆಯೇ ಗಂಟಿಕ್ಕಿಕೊಂಡಿತ್ತು. ಅವನನ್ನು ನಿಲ್ಲಿಸಬೇಡ, ಅವನು ಹೋಗಲಿ ಬಿಡು ಎಂದು ನಾನು ಹೇಳಿದೆ.

ಆಶುತೋಷ್ ನಿಲ್ಲುವ ಪ್ರಯತ್ನದಲ್ಲಿದ್ದ. ಹೋಗಲು ಹಿಂದುಮುಂದು ನೋಡು ತ್ತಿದ್ದ.

ಏನು ವಿಚಾರ? ಎಂದು ಅವನ ಅತ್ತೆ ಕೇಳಿದಳು.

ಏನೂ ಇಲ್ಲ, ಅವನು ಹೋಗಲಿ ಬಿಡು, ಅವನನ್ನು ನಿಲ್ಲಿಸಬೇಡ, ಎಂದು ನಾನು ಹೇಳಿದೆ.

ಆದರೆ ಹೋಗುವುದಿಲ್ಲವೆಂದು ಹಟಹಿಡಿಯುವ ಹೊಂಚಿನಲ್ಲಿದ್ದ ಆಶುತೋಷನನ್ನು ಕಂಡು, ಪ್ರಕಾಶ್, ಇವನನ್ನೇಕೋ ಕರೆದುಕೊಂಡು ಹೋಗುತ್ತಿಲ್ಲ? ಎಂದು ಗದರಿಕೊಂಡೆ.

ಏನು ವಿಚಾರ? ಯಾಕೆ ಹಾಗೆ ಹೇಳ್ತಿದ್ದೀಯೆ? – ಎಂದು ಅವನ ಅತ್ತೆ ಕೇಳುತ್ತಿದ್ದಳು.

ನಾನು ಕೂಗುಹಾಕಿ, ಬನ್ನೀ, ನೀನೂ ಜೊತೆಗೇ ಹೋಗು. ಮಧ್ಯೆ ಬಿಡಿಸಿಕೊಂಡು ಅವನು ಬರದಂತೆ ನೋಡಿಕೊಳ್ಳಿ ಎಂದು ಹೇಳಿದೆ. ನನ್ನ ಆದೇಶದ ಮೇಲೆ ಇಬ್ಬರೂ ಸೇರಿ ಅವನನ್ನೂ ಎತ್ತಿಕೊಂಡು ನನ್ನ ಮುಂದಿನಿಂದಲೇ ಸಾಗಿಸಿಕೊಂಡು ಹೋದರು.

ಯಾಕೆ ಅವನನ್ನು ಹಿಂಸಿಸುತ್ತಿದ್ದೀರಿ? ಎಂದು ಅತ್ತೆ ಕೇಳಿದಳು.

ಏನೂ ಇಲ್ಲ ಸುಮ್ಮನಿರು, ಹೀಗೆಯೇ... ಎಂದು ಮಾತು ಬದಲಾಯಿಸಿ ಅವಳಿಗೆ ಸಮಾಧಾನ ಹೇಳಿದೆ.

ಆಮೇಲೆ ಅವಳೊಡನೆ ಅದೂ-ಇದೂ ಮಾತನಾಡುತ್ತಾ ಕುಳಿತೆ. ರಾಜನೀತಿ ರಾಷ್ಟ್ರದ ಮಟ್ಟಿಗಷ್ಟೇ ಅಲ್ಲ, ಬೀದಿ ಬೀದಿಯಲ್ಲೂ ಅದರ ಪ್ರಯೋಗ ನಡೆಯುತ್ತದೆ. ಇದರ ಹೊಣೆ ಸ್ತ್ರೀಯರ ಮೇಲೇ ವಿಶೇಷವಾಗಿ ಇರುತ್ತದೆ. ಎಲ್ಲಿ ಏನು ನಡೆಯಿತು. ಏನು ನಡೆಯಬೇಕು ಎಂಬುದನ್ನೆಲ್ಲ ಸ್ತ್ರೀಯರು ಬಣ್ಣ ಕಟ್ಟಿ ಹೇಳಬಲ್ಲರು. ಇಂಥದೇ ಹಲವು ಮಾತುಗಳು ಚರ್ಚೆಗೆ ಬಂದುವು. ಈ ಮಾತುಕತೆ ಮುಗಿದ ಮೇಲೆ ಅವಳು ಒಂದು ಸಣ್ಣ ಪೆಟ್ಟಿಗೆಯನ್ನು ಮುಂದೆ ಸರಿಸುತ್ತಾ ಹೇಳಿದಳು: ನೀನು ಆವೊತ್ತು ಕೇಳಿದ್ದೆಯಲ್ಲ, ಆ ಕಾಗದಗಳು ಇದರಲ್ಲಿವೆ, ಆ ಮೇಲೆ ಇಗೋ –

ಹಾಗೆ ಹೇಳಿ ಅವಳು ತನ್ನ ಬಾಸೆಟ್ಟಿನ ಒಂದು ಚೀಲಕ್ಕೆ ಕೈಹಾಕಿ ಚೈನು ತೆಗೆದು ಮುಂದೆ ಇಟ್ಟಳು. ಒಂದು ಚೇಳನ್ನು ನೋಡಿದರೆ ಭಯಪಡುವಂತೆ ನಾನು ಇದೇನು ಎಂದು ಕೇಳಿದೆ.

ಆವೊತ್ತು ಮರೆತು ಈ ಒಂದು ಚೈನನ್ನು ತೆಗೆದುಕೊಂಡುಹೋಗಿದ್ದೆ, ಎಂದಳು.

# ಪರಕೀಯ ಸುಖ

ಸೂರ್ಯೋದಯ ಆಗಿದೆಯೋ ಇಲ್ಲವೋ ಸರಿಯಾಗಿ ತಿಳಿಯುತ್ತಿರಲಿಲ್ಲ. ಕಪ್ಪು ಮೋಡಗಳು ಆಕಾಶವನ್ನು ಕವಿದಿದ್ದುವು. ಕುಳಿರ್ಗಾಳಿ ಬಲವಾಗಿ ಬೀಸುತ್ತಿತ್ತು. ಪಠಾಣ ಕೋಟಿನ ರೈಲ್ವೆ ನಿಲ್ದಾಣದ ಪ್ರಯಾಣಿಕರ ಕೋಣೆಯಲ್ಲಿ ಕುಳಿತಿದ್ದ ಜನ ಚಳಿಯಿಂದ ನಡುಗುತ್ತಿದ್ದು ಆಗಾಗ ಬಟ್ಟೆಯಿಂದ ಮೈ ಮುಚ್ಚಿಕೊಳ್ಳುತ್ತಿದ್ದರು ಮತ್ತು ಬೆಟ್ಟದ ಮೇಲಕ್ಕೆ ಹೋಗುವ ಲಾರಿಗಳ ಸಮಯ ಕಾಯುತ್ತಾ ಕುಳಿತಿದ್ದರು. ಲಾರಿಗಳ ಡ್ರೈವರು ಗಳು ಪ್ರಯಾಣಿಕರ ಬೇಟೆಯಲ್ಲಿ ತೊಡಗಿದ್ದು ಅಲ್ಲಿಂದಿಲ್ಲಿಗೆ ಓಡಾಡುತ್ತಿದ್ದರು. ಪ್ರಯಾಣ ವನ್ನು ಮುಂದುವರಿಸುವ ಚಿಂತೆ ಪ್ರಯಾಣಿಕರದ್ದಾಗಿದ್ದರೆ, ಅವರನ್ನು ಅವರ ಮನೆ ಮುಟ್ಟಿಸುವ ಚಿಂತೆ ಲಾರಿ ಚಾಲಕರದ್ದಾಗಿತ್ತು.

ಈ ಮೂಲೆಯಿಂದ ಆ ಮೂಲೆಯವರೆಗೂ ಬಿಕೋ ಅನ್ನುತ್ತಿದ್ದ ಆ ರೈಲ್ವೆ ಪ್ಲಾಟ್ ಫಾರಮ್ಮಿನ ಮೇಲೆ ಆಗೊಮ್ಮೆ ಈಗೊಮ್ಮೆ ಒಬ್ಬ ಕೂಲಿಯಾಳು ಕಾಣಿಸಿಕೊಂಡರೆ ಹೆಚ್ಚು. ಬೆಚ್ಚಗಿನ ದಪ್ಪ ಸೂಟು ಧರಿಸಿ ಅದು ಸಾಲದೆಂಬಂತೆ ಅದರ ಮೇಲೆ ಓವರ್ ಕೋಟ್ ಕೂಡ ಹಾಕಿಕೊಂಡಿದ್ದ ಮಿಸ್ಟರ್ ಸೇಠಿಯವರು ಪ್ಲಾಟ್ ಫಾರಮ್ಮಿನ ಅಂಚಿನಲ್ಲಿ ಉದ್ದಕ್ಕೂ ಹಾಕಿದ್ದ ಕಲ್ಲು ಚಪ್ಪಡಿಯ ಮೇಲೆ ಶತಪಥ ಹಾಕುತ್ತಿದ್ದರು. ಅವರ ಆ ಬೆಚ್ಚ ಗಿನ ಉಡುಪಿನ ಮೂಲಕ ದಾರಿ ಮಾಡಿಕೊಂಡು ಅವರ ಮೈ ಮುಟ್ಟುವ ಶಕ್ತಿ ಈ ಬೆಟ್ಟ ಪ್ರದೇಶದ ಶೀತಲ ಗಾಳಿಗೆ ಇರಲಿಲ್ಲ. ಅವರ ಮುಖ ಹಾಗೂ ಅವರ ತಲೆಗೂದ ಲನ್ನು ಮಾತ್ರ ಸ್ಪರ್ಶಿಸಿ ಸಮಾಧಾನಪಟ್ಟುಕೊಳ್ಳಬೇಕಾಗಿತ್ತು. ಪ್ರಯಾಣಿಕರ ಜೀವ ಹಿಂಡುತ್ತಿದ್ದ ಈ ಥಂಡಿ ಸೇಠಿಯವರ ಮಟ್ಟಿಗೆ ತುಂಬಾ ಸ್ಫೂರ್ತಿದಾಯಕವಾಗಿತ್ತು. ಸುತ್ತಲಿನ ಪ್ರಶಾಂತ ವಾತಾವರಣದಲ್ಲಿ ತಾವು ಸಂಪೂರ್ಣವಾಗಿ ತಲ್ಲೀನರಾಗುವ ಪ್ರಯತ್ನ ದಲ್ಲಿ ಅವರು ತೊಡಗಿದ್ದರು.

ಲಾರಿ ಡ್ರೈವರುಗಳು ಮಾತ್ರ ತಮ್ಮ ಪ್ರಯಾಣಿಕರ ಬೇಟೆಯಲ್ಲಿ ತೊಡಗಿದ್ದರು. ಕಾರಿನ ಡ್ರೈವರುಗಳು ವೇಟಿಂಗ್-ರೂಮಿನ ಜಾಲರವ ಮೂಲಕ ತಮಗೆ ದೊರಕಬಹು ದಾದ ಗಿರಾಕಿಗಳ ಅಂದಾಜು ಹಾಕುತ್ತಿದ್ದರು. ಇವರ ಪೈಕಿ ಒಬ್ಬ ಸೇಠಿಯವರ ಕಡೆಗೆ ಹೋಗಿ ತುಂಬಾ ಭರ್ಜರಿ ಸಲಾಮು ಹಾಕಿ, "ಹುಜೂರ್, ತುಂಬಾ ಕಂಫರ್ಟಬಲ್ ಗಾಡಿ ಇದೆ" ಎಂದು ಹೇಳಿದ.

ಸೇಠಿಯವರು ಅವನ ಮಾತಿಗೆ ಉತ್ತರ ಕೊಡಲಿಲ್ಲ. ಈ ಸಮಯದಲ್ಲಿ ಅವರು ತಂಪು ಗಾಳಿಯ ಆನಂದದಲ್ಲಿ ಮುಳುಗಿದ್ದರು. ಅವನ ಮಾತಿಗೆ ಜವಾಬು ಕೊಟ್ಟು ಆ ಶಾಂತಿಗೆ ಭಂಗತಂದುಕೊಳ್ಳುವ ಆವಶ್ಯಕತೆ ಅವರಿಗೆ ಇರಲಿಲ್ಲ. ಕಾರಿನಲ್ಲಿ ಸ್ಥಳ ಸಿಗದೆ

ಹೋಗಬಹುದಲ್ಲ ಎಂಬ ಚಿಂತೆಯಾಗಲಿ, ತಮಗಾಗಿ ಸ್ಥಳ ಹುಡುಕಾಡುವ ಯೋಚನೆಯಾಗಲಿ, ಅವರ ಮುಂದೆ ಇರಲಿಲ್ಲ. ಕಾರುಗಳೇ ಅವರನ್ನು ಹಿಂಬಾಲಿಸಿ ಬರುತ್ತಿದ್ದುವು. ಡ್ರೈವರ್ ದೂರದಲ್ಲಿ ನಿಂತು ಸಾಹೇಬರ ಹುಕುಮಿಗಾಗಿ ಕಾಯುತ್ತಿದ್ದ; ಸಾಹೇಬರ ದೃಷ್ಟಿ ಮಾತ್ರ ಅವನ ಕಡೆ ಹೊರಳುತ್ತಿರಲಿಲ್ಲ.

ಸೇಠಿಯವರು ನೋಡುತ್ತಿದ್ದಂತೆಯೇ ಮಹಿಳೆಯರ ವೇಟಿಂಗ್ ರೂಮಿನ ಬಾಗಿಲು ತೆರೆಯಿತು. ಬಿಳಿಯ ಸೀರೆ ಮತ್ತು ಅದರ ಮೇಲೆ ಉದ್ದನೆಯ ಕಪ್ಪು ಕೋಟು ಧರಿಸಿದ್ದ ಯುವತಿಯೊಬ್ಬಳು ಹೊರಗೆ ಬಂದುದು ಅವರಿಗೆ ಕಾಣಿಸಿತು. ಜೊತೆಗೆ ಆಕೆಯ ಕೈ ಬೆರಳನ್ನು ಹಿಡಿದುಕೊಂಡು ಒಬ್ಬ ಬಾಲಕನೂ ಬರುತ್ತಿದ್ದುದು ಕಾಣಿಸಿತು. ಅವನಿಗೆ ಒಂದೂವರೆ – ಎರಡು ವರ್ಷ ಇರಬಹುದು. ಯುವತಿ ಆ ಶೂನ್ಯವಾಗಿದ್ದ ಪ್ಲಾಟ್‌ಫಾರಮ್ಮಿನ ಮತ್ತೊಂದು ಕಡೆಗೆ ಹೋಗುತ್ತಿದ್ದಳು.

ಆ ಪ್ರಶಾಂತ ಸ್ಥಿತಿಯಲ್ಲಿ ಸೇಠಿಯವರ ಮನಸ್ಸಿನಲ್ಲಿ ಒಂದು ವಿಚಾರ ಹೊಳೆಯಿತು. ಮಗುವಿನ ಕೈ ಹಿಡಿದುಕೊಂಡು ಪೂರ್ವದ ಕಡೆ ಮುಖಮಾಡಿ ಹೋಗುತ್ತಿದ್ದ ಯುವತಿ ಸಫಲ ಜೀವನದ ಪ್ರತಿರೂಪವಾಗಿ ಕಂಡಳು. ಅವಳ ಮುಂದೆ ತಮ್ಮ ಜೀವನ ಎಷ್ಟು ನಿಷ್ಪ್ರಯೋಜಕ ಹಾಗೂ ಉದ್ದೇಶರಹಿತ ಎಂದು ಅವರಿಗೆ ಭಾಸವಾಗತೊಡಗಿತು. ಆಕಾಶದಲ್ಲಿ ಗಾಳಿಯ ವೇಗಕ್ಕೆ ತೂರಿಕೊಂಡು ಹೋಗುವ ನೀರಿಲ್ಲದ ಮೋಡದಂತೆ ತಮ್ಮ ಜೀವನ. ಅದು ಮಳೆಯ ಮೋಡವಲ್ಲ. ಅವಳದ್ದು ಹಾಗಲ್ಲ. ಪೈರು ನಿಂತಿರುವ ಶ್ಯಾಮಲ ವರ್ಣದ ಹೊಲದ ಮೇಲೆ ಹಾದುಹೋಗುತ್ತಾ ಮಳೆಯಾಗಿ ಪರಿವರ್ತನೆ ಹೊಂದಲು ಉದ್ಯುಕ್ತವಾಗಿರುವ, ತುಂಬಾ ಘನವಾದ ಮೋಡವಾಗಿ ಅವಳು ಕಂಡಳು. ಅದು ಪ್ರಯೋಜನಕಾರಿ. ತನ್ನಿಂದ ಯಾರಿಗೆ ಏನು ಪ್ರಯೋಜನ? ಆ ಬಾಲಕನ ಪುಟ್ಟ ಪುಟ್ಟ ಕಾಲುಗಳು ಅದೆಷ್ಟು ಚೆನ್ನಾಗಿವೆ! ತನ್ನ ತಾಯಿಯ ಕೈ ಬೆರಳನ್ನು ಬಲವಾಗಿ ಹಿಡಿದುಕೊಂಡು ನೇತಾಡುತ್ತಾ ನಡೆಯುತ್ತಿರುವ ಆ ಮೋಹಕ ರೀತಿ, ಅವಳ ಮುಖದ ಮೇಲೆ ಕಾಣುವ ಆ ಸಂತುಷ್ಟ ಗಂಭೀರ ಭಾವನೆ, – ಅದನ್ನು ನೋಡಿದಾಗ ಸಾಮಾನು ಸರಂಜಾಮು ತುಂಬಿದ ನೌಕೆ ನೀರಿನ ಮೇಲೆ ಅಲುಗಾಡದೆ ಗಂಭೀರವಾಗಿ ಮುಂದಕ್ಕೆ ಸಾಗುತ್ತಿರುವಂತೆ ಅವರಿಗೆ ಭಾಸವಾಯಿತು.

ಲೈಟಿನ ಕಂಭಕ್ಕೆ ಬೆನ್ನು ತಾಗಿಸಿ ನಿಂತು ಆ ತಾಯಿ-ಮಗುವಿನ ಜೋಡಿ ದೃಶ್ಯವನ್ನು ದೂರದಿಂದಲೆ ಸೇಠಿ ನೋಡುತ್ತಾ ನಿಂತರು. ಸ್ಟೇಷನ್ನಿನ ಆ ಭಾರಿ ಕಟ್ಟಡವನ್ನು ದಾಟಿಕೊಂಡು ಆ ಮೂಲೆಯವರೆಗೂ ಹೋಗಿ ಯುವತಿ ಹಿಂದಿರುಗುತ್ತಿದ್ದಳು. ಹಾಗೆ ಹಿಂದಿರುಗುವಾಗ ತನ್ನ ಬಲಗೈ ಬೆರಳನ್ನು ಬಿಡಿಸಿಕೊಂಡು ತನ್ನ ಎಡಗೈ ಬೆರಳನ್ನು ಹಿಡಿದುಕೊಳ್ಳುವಂತೆ ಮಗುವಿಗೆ ತಿಳಿಸಿ ಅವಳು ಸೇಠಿಯ ಕಡೆಗೇ ಬರುತ್ತಿದ್ದಳು. ಲತೆಯನ್ನು ಆಶ್ರಯಿಸಿರುವ ಫಲದಂತೆ ತಾಯಿಯ ಕೈಯನ್ನಾಶ್ರಯಿಸಿ ಬಾಲಕ ಬರುತ್ತಿದ್ದ. ಅವರು ಹತ್ತಿರ ಬರುತ್ತಿದ್ದಂತೆ ಅವರಿಬ್ಬರ ರೂಪವೂ ಸ್ಪಷ್ಟವಾಗಿ ಕಾಣತೊಡಗಿತು.

ಯುವತಿಯ ಗೌರಹಾಸ, ತೆಳ್ಳಗಿದ್ದ ಮೋಹಕ ದೇಹ, ಆ ಸುಂದರ ನಡಿಗೆ, ದೊಡ್ಡ ದೊಡ್ಡ ಬೊಗಸೆ ಕಣ್ಣುಗಳು, ಬಾಲಕನ ಚಿಕ್ಕ ಮೂಗು, ಸಣ್ಣ ಸಣ್ಣ ಗಾಜಿನ ಗೋಲಿಗಳಂತೆ ಮಿನುಗುತ್ತಿದ್ದ ಆ ಕಣ್ಣುಗಳು, ತುಂಬುಗೆನ್ನೆಗಳು, ರಕ್ತ ಹೊರ ಚಿಮ್ಮುತ್ತಿದೆಯೋ ಎನ್ನುವ ಆ ಕೆನ್ನೆಯ ಕೆಂಪು ಇವುಗಳ ಕಡೆಗೆ ಅವರ ದೃಷ್ಟಿ, ಅವರ ಕನ್ನಡಕದ ಗಾಜುಗಳ ಮೂಲಕ ಹೋಗಿ ನಾಟಿತ್ತು. ಚಳಿಗಾಳಿಯ ತಂಪನ್ನು ಆನಂದಿಸುವ ವಿಚಾರವನ್ನೇ ಸೇಠಿ ಮರೆ ತಂತಿತ್ತು.

ಕಾರಿನ ಡ್ರೈವರನು ಮೇಮ್ ಸಾಹೇಬಳಿಗೆ ಸಲಾಮು ಹಾಕಿ ಸಂಕ್ಷೇಪವಾಗಿ ಏನನ್ನೋ ಕೇಳಿದ. ಆ ನಂತರ ಒಬ್ಬ ಲಾರಿ ಡ್ರೈವರನು ಸಲಾಮು ಹಾಕಿ ಮಾತುಕತೆ ನಡೆಸಿದ.

ಸೇಠಿ ವ್ಯವಹಾರದಲ್ಲಿದ್ದ ಮನುಷ್ಯ. ಮೇಮ್‌ಸಾಹೇಬಳು ಕಡಿಮೆ ಖರ್ಚಿನಲ್ಲಿ ಒಳ್ಳೆಯ ಸವಾರಿ ಸೌಕರ್ಯ ಪಡೆಯುವ ಪ್ರಯತ್ನದಲ್ಲಿರುವಳೆಂದು ಅವರಿಗೆ ಕೂಡಲೇ ತಿಳಿಯಿತು. ಏಳು ಗಂಟೆಗೆ ಮುಂಚೆ ಯಾವುದೂ ಲಾರಿ ಹೊರಡುವ ಹಾಗಿಲ್ಲ. ಆದರೆ ಕಾರಿಗೆ ಗಿರಾಕಿಗಳಿಲ್ಲ. ದಾರಿ ತಮಗೆ ಇನ್ನೂ ಬಂದ್ ಆಗಿದೆಯೆನ್ನುವುದು ಲಾರಿ ಪ್ರಯಾಣಿಕರ ಚಿಂತೆ; ಲಾರಿಗಳಿಗಾಗಿ ದಾರಿ ತೆರೆಯುವ ತನಕ ಅವರು ಹಾಗೆ ಕಾಯಬೇಕು. ಕಾರಿನ ಪ್ರಯಾಣಿಕರೂ ಕಾಯುತ್ತಿದ್ದಾರೆ. ಆದರೆ ಅವರಿಗೆ ಅಂತಹ ಆತುರವಿಲ್ಲ. ಸೇಠಿಯ ಮನಸ್ಸಿಗೆ ಏನೋ ಹೊಳೆಯಿತು. ಲೈಟುಕಂಭದ ಆಶ್ರಯವನ್ನು ಬಿಟ್ಟು, ನೆಟ್ಟಗೆ ನಿಂತು, ಡ್ರೈವರನ ಕಡೆ ನೋಡಿದರು. ಡ್ರೈವರನು ಓಡಿ ಬಂದು ಹಾಜರಾಗಿ ಇನ್ನೊಮ್ಮೆ ಸಲಾಮು ಹಾಕಿದ. "ಗಾಡಿ ಸರಿಯಾಗಿದೆ ತಾನೆ?"

"ಹುಜೂರ್, ಹೊಸಾ ಗಾಡಿ; ಆಸ್ಟಿನ್ ಸೆಲೂನ್."

"ಅಚ್ಛಾ."

"ಹುಜೂರ್, ಬೇರೆ ಸವಾರಿಗೆ ಕಾಯಬೇಕಾಗಿಲ್ಲ ತಾನೇ?"

"ಇಲ್ಲ... ಈಗಲೇ ಹೊರಡಬೇಕು... ನಿನಗೆ ನಾಲ್ಕು ಕಾಸು ಹೆಚ್ಚು ಬರುವುದಾದರೆ ಯಾರಾದರೂ ಒಬ್ಬರನ್ನು ಕೂರಿಸಿಕೋ."

ಡ್ರೈವರು ಇನ್ನಷ್ಟು ದೊಡ್ಡ ಸಲಾಮು ಹಾಕಿದ. ವೇಟಿಂಗ್ ರೂಮಿನಿಂದ ಸೇಠಿಯ ಸಾಮಾನು ಹೊರ ಬಂತು; ಮೂರು ದೊಡ್ಡ ದೊಡ್ಡ ಸೂಟ್‌ಕೇಸುಗಳು, ಒಂದು ದೊಡ್ಡ ಹೋಲ್ಡಾಲು ಮತ್ತು ಚಿಕ್ಕ-ಪುಟ್ಟ ಅಲ್ಮಾಚಿಗಳು. ಡ್ರೈವರನು ಮತ್ತೆ ಮೇಮ್ ಸಾಹೇಬಳಿಗೆ ಒಂದು ಸಲಾಮು ಹಾಕಿದ ಮತ್ತು ಸುಲಭವಾಗಿ ತನ್ನ ಪಾಲಿಗೆ ಬಂದ ಇನ್ನೊಂದು ಸವಾರಿಯನ್ನೂ ಗೊತ್ತು ಮಾಡಿಕೊಂಡ.

ಸೇಠಿ ಇದನ್ನೆಲ್ಲ ನೋಡುತ್ತಿದ್ದರು. ಮೇಮ್‌ಸಾಹೇಬಳ ಸಣ್ಣ ಪುಟ್ಟ ಸಾಮಾನುಗಳೂ ಹೊರಗೆ ಬಂದುವು; ಕೇವಲ ಒಂದು ಸೂಟ್‌ಕೇಸು ಮತ್ತು ಒಂದು ಹೋಲ್ಡಾಲು. ಮಗುವನ್ನು ಕರೆದುಕೊಂಡು ಸೇಠಿಯವರನ್ನು ಹಿಂಬಾಲಿಸಿ ಅವಳೂ ಕಾರಿನ ಕಡೆಗೆ

ನಡೆದಳು. ಸೇಠಿಯವರು ಹಿಂಭಾಗದಲ್ಲಿ ಕೂರಲು ಹೋಗದೆ ಡ್ರೈವರನ ಪಕ್ಕದಲ್ಲಿ ಕುಳಿತರು. ಮೇಮ್‌ಸಾಹೇಬಳು ಮತ್ತು ಆಕೆಯ ಮಗು, ಹಿಂದಿನ ಸೀಟಿನಲ್ಲಿ ಕುಳಿತು ಕೊಂಡರು.

ಎದುರುಗಡೆಯಿಂದ ಬೀಸುತ್ತಿದ್ದ ಸುಳಿಗಾಳಿಯನ್ನು ಸೀಳಿಕೊಂಡು ಕಾರು ಮುಂದಕ್ಕೆ ಹೊರಟಿತು. ಸೇಠಿ ತಮ್ಮ ಸೀಟಿನ ಹಿಂದೆ ನಡೆಯುತ್ತಿದ್ದ ವಿದ್ಯಮಾನದಿಂದ ಸಂತೋಷ ಗೊಳ್ಳುತ್ತಿದ್ದರು. ಕಾರಿನ ಪೂರ್ತಿ ಬಾಡಿಗೆಯನ್ನು ಕೊಟ್ಟು, ತಾವು ಡ್ರೈವರನ ಪಕ್ಕದಲ್ಲಿ ಕುಳಿತುಕೊಳ್ಳಬೇಕಾಗಿದ್ದ ಈ ಪ್ರಸಂಗ ಕೆಟ್ಟದಾಗಿ ಕಾಣಿಸಲಿಲ್ಲ. ಕಣ್ಮುಂದೆ ಹಾದು ಹೋಗುತ್ತಿದ್ದ ಸಾಲುಮರಗಳನ್ನೂ, ಅಕ್ಕಪಕ್ಕದ ಕಟ್ಟಡಗಳನ್ನೂ ನೋಡಿ ಮೇಮ್ ಸಾಹೇಬಳ ಮಗ, ಮುಂದಿನ ಸೀಟು ಹಿಡಿದುಕೊಂಡು, ಸಂತೋಷದಿಂದ ಕುಣಿದಾಡು ತ್ತಿದ್ದ. ಅವನ ಈ ಉಪಟಳದಿಂದಾಗಿ ಆಗಾಗ ಸೇಠಿಯವರ ಟೋಪಿ ಸರಿಯುತ್ತಿತ್ತು; ಆಗಾಗ್ಗ ತನ್ನ ತಲೆಯಿಂದ ಅವರ ಭುಜಗಳಿಗೆ ಡಿಕ್ಕಿ ಹೊಡೆಯುತ್ತಲೂ ಇದ್ದ.

ಬಾಲಕನ ತುಂಟತನದಿಂದಾಗಿ ಅವನ ತಾಯಿಗೆ ಸಂಕೋಚವಾಗುತ್ತಿತ್ತು. ಹಾಗೆ ಗಲಾಟೆ ಮಾಡಬಾರದೆಂದು ಹಲವು ಬಾರಿ ಅವಳು ಅವನಿಗೆ ಹೇಳಿ ಲಘುವಾಗಿ ಗದರಿ ಕೊಳ್ಳುತ್ತಿದ್ದಳು. ಆದರೆ ಅದರಿಂದೇನೂ ಪ್ರಯೋಜನವಾಗದೆ ಆಕೆ ಮತ್ತು ಸೇಠಿ ಇಬ್ಬರೂ ನಕ್ಕು ಸುಮ್ಮನಾಗಬೇಕಾಗುತ್ತಿತ್ತು. ಬಾಲಕನು ಹಾರಿ ಮುಂದಿನ ಸೀಟಿಗೆ ಹೋಗಲು ಅಪೇಕ್ಷಿಸುತ್ತಿದ್ದ. ಆಗ ಸೇಠಿ ಹಿಂದಕ್ಕೆ ತಿರುಗಿ ಅವನನ್ನು ಎತ್ತಿಕೊಂಡು ತಮ್ಮ ತೊಡೆಯ ಮೇಲೆ ಕೂರಿಸಿಕೊಂಡರು. ಬಾಲಕನ ಆ ಕೋಮಲ ಶರೀರದ ಸ್ಪರ್ಶದಿಂದಾಗಿ ಅವರಿಗೊಂದು ಅದ್ಭುತ ಸ್ಫೂರ್ತಿ ಹಾಗೂ ಉತ್ಸಾಹದ ಅನುಭವವಾಯಿತು. ಅವರ ಮನಸ್ಸು ಒಂದು ರೀತಿಯ ವ್ಯಾಕುಲತೆಗೂ ಒಳಗಾಯಿತು. ಎಷ್ಟು ಪ್ರಯತ್ನಪಟ್ಟು ಪ್ರಯಾಸದಿಂದ ತಮ್ಮ ಜೀವನವನ್ನು ಎತ್ತರಿಸಿದ್ದರೋ ಅದೆಲ್ಲ ಈಗ ನಿಷ್ಪ್ರಯೋಜಕ ವೆನಿಸತೊಡಗಿತ್ತು. ಆ ಬಾಲಕನ ಮುಖ ನೋಡುತ್ತಿದ್ದ ಹಾಗೆಯೇ ತಮ್ಮ ಜೀವನ ಅದೆಷ್ಟು ಬರಡು ಎಂದು ಅವರಿಗೆ ಭಾಸವಾಗುತ್ತಿತ್ತು.

೦೦ ೦೦ ೦೦ ೦೦

ಮೋಟರಿನ ಮುಂಭಾಗದಲ್ಲಿ ಹಾದುಹೋಗುತ್ತಿದ್ದ ದೃಶ್ಯಾವಳಿ ಕಂಡು ಸೇಠಿಗೆ ತಮ್ಮ ಜೀವನದ ಕಥೆ ಕೂಡ ಒಂದು ಸಿನಿಮಾ ದೃಶ್ಯದ ರೀತಿಯಲ್ಲಿ ಕಾಣಿಸತೊಡಗಿತು. ತಂದೆಯ ಮರಣದಿಂದಾಗಿ ಎಫ್.ಎ. ಓದುತ್ತಿದ್ದಾಗಲೇ ಓದನ್ನು ನಿಲ್ಲಿಸಬೇಕಾಯಿತು. ಜೀವನದಲ್ಲಿ ಏನೊಂದೂ ದಾರಿ ಕಾಣದೆ ಕೊನೆಗೆ ಒಬ್ಬ ಕಂಟ್ರಾಕ್ಟರ್ ಬಳಿ ಅಸಹಾಯಕನಾಗಿ ಇಪ್ಪತ್ತು ರೂಪಾಯಿ ಸಂಬಳಕ್ಕೆ ಸೇರಿಕೊಳ್ಳಬೇಕಾಯಿತು. ದಿನದ ಇಪ್ಪತ್ತನಾಲ್ಕು ಗಂಟೆಯೂ ಮೂಳೆ ಮುರಿಯುವಷ್ಟು ಕೆಲಸ. ಕ್ರಮವಾಗಿ ಉಪ ಕಂಟ್ರಾಕ್ಟು ಕೆಲಸಗಳನ್ನು ತಾನೇ ಮಾಡುತ್ತಾ ಮುಂದೆ ತಾನೂ ಒಬ್ಬ ದೊಡ್ಡ ಕಂಟ್ರಾಕ್ಟರನಾಗಿದ್ದರು. ಹೀಗೆ ಒಂದು ಕಂಟ್ರಾಕ್ಟಿನಿಂದ ಇನ್ನೊಂದು ಕಂಟ್ರಾಕ್ಟು ಸಾಗಿತ್ತು. ಯಾವ ಹಣಕ್ಕಾಗಿ ಅವರು ಅಲೆಯ

ಬೇಕಾಗಿತ್ತೋ ಅದೇ ಹಣ ಈಗ ಅವರ ಕೈತುಂಬಾ ಸಾವಿರ, ಲಕ್ಷಗಳಂತೆ ಓಡಾಡುತ್ತಿತ್ತು. ರೈಲಿನ ಸೇತುವೆ ಕಟ್ಟುವ ಒಂದೇ ಒಂದು ಕಂಟ್ರಾಕ್ಟಿನಿಂದ ಎರಡೂವರೆ ಲಕ್ಷ ರೂ.ಗಳ ನಫೆ ಬಂದಿತ್ತು...!

ಜೀವನದಲ್ಲಿ ಹಣ ಏನು ಎಂಬ ವಿಚಾರ ಅವರಿಗೆ ಗೊತ್ತಾಗಿತ್ತು. ಅದನ್ನು ಗಳಿಸುವುದಕ್ಕಾಗಿ ಅವರು ಹಗಲು ರಾತ್ರಿಯೆನ್ನದೆ ದುಡಿದರು. ಇವೊತ್ತು ಅವರು ಲಕ್ಷಾಧಿಪತಿಯಾಗಿಯೂ ಆಗಿದ್ದರು. ತನ್ನ ವರಮಾನ ಹೆಚ್ಚಿ ದೊಡ್ಡ ದೊಡ್ಡ ಕಂಪೆನಿಗಳಲ್ಲಿಯೂ ಅವರು ಪಾಲುಗಾರರಾಗಿದ್ದಾರೆ. ಜೇಬಿನಲ್ಲಿರುವ ನಾಲ್ಕು ಅಂಗುಲ ಅಗಲದ ಇಂಪೀರಿಯಲ್ ಬ್ಯಾಂಕಿನ ಚೆಕ್‌ಬುಕ್ಕಿನಲ್ಲಿ ಒಂದೆರಡು ಅಕ್ಷರ ಬರೆದು ಸಹಿ ಹಾಕಿದರೆ ಸಾಕು ಅವರು ಏನು ಮಾಡಲೂ ಸಾಧ್ಯವಿತ್ತು. ಆದರೆ ನಿಜ ಹೇಳುವುದಾದರೆ ಹಣ ಸಂಪಾದನೆಯೊಂದನ್ನು ಬಿಟ್ಟರೆ ಬೇರೆ ಅವರು ಗಳಿಸಿದ್ದುದಾದರೂ ಏನು?... ಹಣದಿಂದ ಅವರು ಪಡೆಯಲು ಸಾಧ್ಯವಾಗದೆ ಹೋಗಿದ್ದ ವಸ್ತುಗಳೂ ಇದ್ದುವು?... ಅವರಿಗೆ ಪರಿಚಯವಿಲ್ಲದಿದ್ದ ನೆಂಟರಿಷ್ಟರನ್ನು ಪರಿಚಯಮಾಡಿಕೊಳ್ಳುವ ಆವಶ್ಯಕತೆ ಅವರಿಗೆ ಕಂಡುಬಂದಿರಲಿಲ್ಲ. ಅವರು ಮಾತ್ರ ಯಾರೊಡನೆಯೂ ತನ್ನ ಪರಿಚಯವನ್ನು ಅವರ ಹೆಸರು ಹೇಳಿಯೇ ಮಾಡಿಕೊಳ್ಳುತ್ತಿದ್ದರು. ಸ್ನೇಹಪೂರ್ಣ ನಡೆನುಡಿಯೊಡನೆ ಅವರ ಬಳಿಗೆ ಬರುತ್ತಿದ್ದರು. ಎಲ್ಲರೂ ಅವರನ್ನು ಆದರಿಸುತ್ತಿದ್ದರು; ಅದಾವುದರ ಕೊರತೆಯೂ ಅವರಿಗಿರಲಿಲ್ಲ. ರಾಜಕೀಯ ಹಾಗೂ ಸಾಮಾಜಿಕ ಸಂಘ ಸಂಸ್ಥೆಗಳು ಅವರನ್ನು ತಮ್ಮ ಪೋಷಕರನ್ನಾಗಿ ಅಥವಾ ಅಧ್ಯಕ್ಷರನ್ನಾಗಿ ಆರಿಸಿಕೊಳ್ಳಲು ಆಸಕ್ತಿಯಿಂದಿದ್ದುವು; ಆದರೆ ಅದರಿಂದೆಲ್ಲ ಅವರಿಗೇನು ಪ್ರಯೋಜನ...?

ಪ್ರಣಯ ಹಾಗೂ ಪ್ರೇಮದ ಸೋಗುಹಾಕಿ ಅವರ ಹಿಂದೆ ಬಿದ್ದವರೂ ಅನೇಕರಿದ್ದರು. ಆದರೆ ಕೇವಲ ಹಣದ ಆಸೆಯಿಂದಾಗಿ ಅವರು ಹಾಗೆ ಹಿಂದೆ ಬಿದ್ದಿದ್ದರೆಂಬುದು ಅವರಿಗೆ ಸ್ಪಷ್ಟವಾಗಿತ್ತು. ಅವರು ತನ್ನನ್ನು ತಮ್ಮ ಬಲೆಗೆ ಹಾಕಿಕೊಳ್ಳುವುದಕ್ಕಷ್ಟೇ ಪ್ರಯತ್ನಿಸುತ್ತಿದ್ದರು. ಅವರ ಕಣ್ಣುಗಳಿಂದಲೇ ಅದು ಸೇಠಿಗೆ ಗೊತ್ತಾಗುತ್ತಿತ್ತು. ಇದೆಲ್ಲ ಗೊತ್ತಿದ್ದೂ ಅವರೇಕೆ ಈ ಜನರಿಗೆ ಬಲಿಯಾದಾರು? ಹೀಗಾಗಿ ಯಾರೂ ಅವರನ್ನು ಆಕರ್ಷಿಸಲು ಸಮರ್ಥರಾಗಲಿಲ್ಲ. ಬೆಲ್ಲದ ಅಚ್ಚಿನ ಮೇಲೆ ಹಾರಾಡಲು ಬರುವ ನೊಣಗಳನ್ನು ಹಾರಿಸುವ ಹಾಗೆ ಅವರನ್ನೆಲ್ಲ ಸೇಠಿ ದೂರ ಮಾಡಿದ್ದರು. ಇನ್ನೂ ಹಣ ಸಂಪಾದಿಸುವುದೊಂದೇ ಅವರ ಗುರಿಯಾಗಿ ಉಳಿದಿತ್ತು.

ಅವರಿಗೆ ಹಣದ ಕೊರತೆಯೇನೂ ಇರಲಿಲ್ಲ; ಆದರೂ ಅದರ ಸಂಪಾದನೆ ಮಾತ್ರ ನಿರಂತರವಾಗಿ ಸಾಗುತ್ತಿದೆ. ಹೆಚ್ಚು ಹೆಚ್ಚು ಸಂಪಾದಿಸಬೇಕೆನ್ನುವುದೇ ಅವರ ಜೀವನದ ಉದ್ದೇಶವಾದಂತಿದೆ. ಮಳೆ ಬಂದಮೇಲೆ ಸಣ್ಣ ಪುಟ್ಟ ನೂರಾರು ನಾಲೆಗಳಾಗಿ ನೀರು ಹರಿದು ಬಂದು ನದಿಗೆ ಸೇರಿಕೊಳ್ಳುವ ಹಾಗೆ ಹಣ ನಾನಾ ರೀತಿಯಲ್ಲಿ ಬಂದು ಅವರ ಕೈ ಸೇರುತ್ತಿದೆ. ಅದರ ಫಲವಾಗಿ ನಾನಾ ಕಡೆ ಏರ್ಪಟ್ಟಿರುವ ಉದ್ಯೋಗ ವ್ಯವಸ್ಥೆ

ಗಳನ್ನು ಆಶ್ರಯಿಸಿ ಸಹಸ್ರಾರು ಜನ ದುಡಿಯುತ್ತಿದ್ದಾರೆ. ಅವರ ದುಡಿತದ ಫಲವಾಗಿ ಮತ್ತೆ ತನ್ನ ಪಾಲಿಗೆ ಬರುತ್ತಿರುವ ಹಣ ಕೊನೆಗೆ ಸೇರಿಯ ಲೆಕ್ಕಕ್ಕೆ ಬಂದು ಸೇರುತ್ತಿದೆ. ಹಣ ಹೊಸದಾಗಿ ತನ್ನ ಕಡೆಗೆ ಹರಿದು ಬರುವುದಕ್ಕೆ ಅನುಕೂಲವಾಗುವ ಹಾಗೆ ಹೊಸ ಹೊಸ ಮಾರ್ಗಗಳನ್ನು ನಿರ್ಮಿಸುವುದೇ ಅವರ ಕೆಲಸವಾಗಿದೆ.

ಖರ್ಚಿನ ಚಿಂತೆ ಅವರಿಗಿಲ್ಲ. ಅವರಿಗೆ ಯಾವ ಶೋಕಿಯೂ ಇಲ್ಲ. ಇರುವವರು ಒಬ್ಬರು. ಯಾರಿಗಾಗಿ ಅವರು ಹಣ ಖರ್ಚು ಮಾಡಬೇಕಾಗಿದೆ? ಅವರ ಖರ್ಚಿಗಾಗಿ ತಿಂಗಳಿಗೆ ಸಾವಿರ, ಸಾವಿರದಿನ್ನೂರು ರೂ. ಅದರೆ ಹೆಚ್ಚು. ಸುಖಲೋಲುಪತೆಯ ಜೀವನದ ಕಡೆ ಅವರ ಗಮನಹೇ ಈ ತನಕ ಹರಿದಿಲ್ಲ ಆದರೆ ಇಂದು ಇದ್ದಕ್ಕಿದ್ದಂತೆ ಈ ಪ್ರಶಾಂತ ವಾತಾವರಣದಲ್ಲಿ ಅವರ ಮನಸ್ಸಿನ ಶಾಂತಿ ಕದಡಿಹೋಗುತ್ತಿದೆ; ಯಾವುದೋ ಕೊರತೆಯ ಒಂದು ಹೊಸ ಅನುಭವಕ್ಕೆ ಅವರಿಂದು ಬಲಿಯಾಗಿ ದ್ದಾರೆ.

ಆ ಬಾಲಕನು ತನ್ನ ಕಾಲಿನ ಷೂಗಳಿಂದ ಅವರ ಭಾರಿ ಬೆಲೆಯ ಕೋಟನ್ನು ತುಳಿಯು ತ್ತಿದ್ದಾನೆ. ಐಸಿನಂತೆ ತಣ್ಣಗಿರುವ ಕಾರಿನ ಮುಂಭಾಗದ – ಗಾಜಿನ ಮೇಲೆ ತನ್ನ ಕೆನ್ನೆ ಗಳನ್ನು ಆಗಾಗ ಆನಂದದಿಂದ ಸವರುತ್ತಾ ಕುಣಿದಾಡುತ್ತಿದ್ದಾನೆ. ಅವನು ತನ್ನ ಕಾಲು ಗಳಿಂದ ತುಳಿಯುತ್ತಿರುವುದರಿಂದ ಸೇಠಿಗೆ ಏನೋ ಒಂದು ರೀತಿಯ ಸುಖಾನುಭವ ವಾಗುತ್ತಿದೆಯೆಂಬುದು ಅವರ ಕಣ್ಣುಗಳಲ್ಲಿ ಸ್ಪಷ್ಟವಾಗಿ ಕಾಣುತ್ತಿದೆ. ಕಣ್ಣುಗಳಲ್ಲಿ ಆನಂದಬಾಷ್ಪ ತುಂಬಿ ಬಂದು ಅವರು ಅದನ್ನು ಹತ್ತಿಕ್ಕುವ ಪ್ರಯತ್ನದಲ್ಲಿ ಕೆಳಗಿನ ತುಟಿಯನ್ನು ಕಚ್ಚಿಕೊಂಡು ಸೆಟ್ಟ ದೃಷ್ಟಿಯಿಂದ ಆ ಬಾಲಕನ ಆಟಪಾಟವನ್ನು ವೀಕ್ಷಿ ಸುತ್ತಾ ಕುಳಿತಿದ್ದಾರೆ. ಬೆನ್ನಿನ ಹಿಂದೆ ಅವನ ಕಿವಿಯ ಸಮೀಪದಲ್ಲಿಯೇ ಉಪಸ್ಥಿತ ವ್ಯಕ್ತಿಯ ವಾತ್ಸಲ್ಯಮಯ ಜೀವನ ಅದೆಷ್ಟು ತುಂಬುಜೀವನ ಎಂದು ಯೋಚಿಸು ತ್ತಿದ್ದಾರೆ. ಒಂದು ವೃಕ್ಷ ಹೇಗೆ ಆಸರೆ ಕೊಡುವ ವ್ಯಾಪ್ತಿಯನ್ನು ಹೊಂದಿರುತ್ತದೆಯೋ ಹಾಗೆ. ಮತ್ತು ಒಂದು ದೊಡ್ಡ ವೃಕ್ಷವಾಗುವ ಸಸಿಗೆ ಜನ್ಮ ಕೊಡುವ ಹೂವಿನಷ್ಟು ಅದು ಆಕರ್ಷಕವೂ ಹೌದು. ಮಕ್ಕಳ ತಲೆಯ ಮೇಲೆ ತನ್ನ ರಕ್ಷೆ ಹಾಗೂ ಧೈರ್ಯದ ಅಭಯಹಸ್ತವನ್ನು ಇಡಬಲ್ಲ ಅವಳು ಪುರುಷನ ಹೃದಯದಲ್ಲಿ ಅವನ ಇಚ್ಛೆಯನ್ನು ಕೆರಳಿಸಬಲ್ಲ ಬಾಣವನ್ನೂ ಬಿಡುವಷ್ಟು ಸಮರ್ಥಳೂ ಹೌದು. ಅವಳ ಒಂದು ಮುಗು ಳ್ನಗೆ ಕಾಮನಬಿಲ್ಲಿನ ಸಪ್ತವರ್ಣಗಳನ್ನು ಒಮ್ಮೆಲೆ ಸೃಜಿಸಬಲ್ಲುದು. ಅದರಲ್ಲಿ ಪ್ರೇಮ ಕಟಾಕ್ಷವೂ ಉಂಟು, ರಕ್ಷಣೆಯ ಆಶ್ವಾಸನೆ, ಆಶೀರ್ವಾದದ ಆಸರೆ, ಕಾಮಪಿಪಾಸೆಯ ಕಚಕುಳಿ – ಇವುಗಳಷ್ಟನ್ನೂ ಒಮ್ಮೆಲೆ ಅದು ಕೆರಳಿಸಬಲ್ಲುದು. ಇಂತಹ ಒಂದು ಆಕರ್ಷಣೆ ತನ್ನ ಬೆನ್ನಿನ ಹಿಂದೆ ಅತ್ಯಂತ ಸಮೀಪದಲ್ಲಿ; ಮತ್ತು ಕೆಳಗೆ ತನ್ನ ಮಡಿಲಲ್ಲಿ ಆ ಬಾಲಕನ ಆಕರ್ಷಣೆ – ಇವುಗಳ ಮಧ್ಯೆ ಸಿಕ್ಕಿಕೊಂಡಿದ್ದ ಅವರು ಯಾವುದೋ ಬೇರೊಂದು ಲೋಕದಲ್ಲಿ ವಿಹರಿಸುತ್ತಿರುವಂತೆ. ಏನೋ ಕಳೆದುಕೊಂಡು ಕುಳಿತಿರುವಂತೆ ಮತ್ತು

ತಾನು ಯಾವುದೋ ವಿದ್ಯುಚ್ಛಕ್ತಿಯ ಪ್ರಭಾವಕ್ಕೊಳಗಾಗಿ ಅದರಲ್ಲೇ ತನ್ಮಯನಾಗಿ ಹೋಗಿರುವಂತೆ ಭಾಸವಾಗುತ್ತಿತ್ತು.

ಕಾರು ಬೆಟ್ಟವನ್ನು ಹತ್ತುತ್ತಿರುವಂತೆ ಛಳಿ ಸಹ ತೀವ್ರವಾಗುತ್ತಿತ್ತು. ಆಕಾಶವನ್ನು ಕಪ್ಪು ಮೋಡಗಳು ಕವಿಯುತ್ತಿದ್ದುವು. ನೀರಿನಿಂದ ಭಾರವಾಗಿದ್ದ ಶೀತಲಗಾಳಿ ಬೀಸು ತ್ತಿತ್ತು. ಕಾರಿನ ಗಾಜಿನ ಮೇಲೆ ನೀರು ಸಂಗ್ರಹಿತವಾಗಿ ತೊಟ್ಟುತೊಟ್ಟಾಗಿ ಕೆಳಗೆ ಉರುಳುತ್ತಿತ್ತು. ಡ್ರೈವರನ ಮುಂಭಾಗದಲ್ಲಿ ಗಾಜಿನ ಮೇಲೆ ಸೇರುವ ನೀರನ್ನು ಒರೆಸಿ ಶುಭ್ರಮಾಡುವ ವೈಪರ್ ಆತ್ತಿಂದಿತ್ತ ಒಂದೇ ಸಮನೆ ಬಡಿಯುತ್ತಿದೆ ಮತ್ತು ಆ ಬಾಲಕ ಅದನ್ನು ಹಿಡಿದುಕೊಳ್ಳಲು ಪ್ರಯತ್ನಿಸುತ್ತಿದ್ದಾನೆ. ಸೇಠಿ ಅವನ ಆ ತುಂಬಿದ ಗುಂಡುಗುಂಡಾದ ಕೈಗಳನ್ನು ಬಿಡದೆ ಹಿಡಿದುಕೊಂಡಿದ್ದರು. ಅವುಗಳನ್ನು ಬಿಡಲು ಅವರಿಗೆ ಮನಸ್ಸೇ ಬಾರದು. ಈ ಪರಿಸ್ಥಿತಿಯಲ್ಲಿ ಬಾಲಕನು ಹಿಂದಿರುಗಿ ಸೇಠಿಯ ಮುಖ ನೋಡಿದ. ಆಗ ಸೇಠಿ ಧರಿಸಿದ್ದ ನೆಕ್‌ಟೈ ಪಿನ್ನು ಅವನಿಗೆ ಬಹಳ ಆಕರ್ಷಕವಾಗಿ ಕಾಣಿಸಿತು. ವಜ್ರದ ಹೊಳಪಿದ್ದ ಹರಳುಗಳನ್ನು ಅದರಲ್ಲಿ ಜೋಡಿಸಲಾಗಿತ್ತು. ಬಾಲಕನು ಎಳೆಯಲು ಕೈ ಹಾಕಿದ. ಸೇಠಿ ತಾನೇ ಅದನ್ನು ತೆಗೆದು ಅವನ ಕೋಟಿಗೆ ಹಾಕಿದರು. ಕಾರಿನಲ್ಲಿ ಕುಳಿತು ಹೋಗುವಾಗ ಹಾಕಿಕೊಳ್ಳುವ ಅಗಲವಾದ ಬಣ್ಣದ ಕನ್ನಡಕ ಕೂಡ ಬಾಲಕನ ಕಣ್ಣಿಗೆ ಬಂತು; ಅದರಿಂದ ಅವನ ಅರ್ಧದಷ್ಟು ಮುಖ ಮುಚ್ಚಿಹೋಯಿತು. ಅವರ ಪ್ರತಿಬಿಂಬ ಈ ಬಾಲಕನ ಕಣ್ಣುಗಳ ಮೇಲಿದ್ದ ಕನ್ನಡಕದ ಗಾಜುಗಳ ಮೇಲೆ ಕಾಣತೊಡಗಿತು. ಜೊತೆಗೆ ಹಿಂದಿನ ಸೀಟಿನಲ್ಲಿ ಕುಳಿತಿದ್ದ ತಾಯಿ ತುಟಿಗಳ ಮೇಲೆ ಕೈಬೆರಳನ್ನಿಟ್ಟುಕೊಂಡು ಹಾಗೆಲ್ಲ ಮಾಡದೆ ಸುಮ್ಮನೆ ಕುಳಿತಿರಬೇಕೆಂದು ಮಗನಿಗೆ ಸನ್ನೆ ಮಾಡುತ್ತಿದ್ದ ದೃಶ್ಯವೂ ಕಂಡುಬಂತು. ಅದನ್ನು ನೋಡಿದ ಸೇಠಿ ಹಿಂದಕ್ಕೆ ತಿರುಗಿ ತಾಯಿಯ ಕಡೆ ತಿರುಗಿ ಮಗನ ಪರವಾಗಿ ಶಿಫಾರಸು ಮಾಡುತ್ತಾ, "ಇಟ್ ಈಜ಼್ ಆಲ್ ರೈಟ್, ಏನೂ ಪರವಾಗಿಲ್ಲ," ಎಂದು ಹೇಳಿದರು. ಹೀಗೆ ಹೇಳುವಾಗ ಅವರ ಮುಖದ ಮೇಲೆ ಒಂದು ಕರುಣಾಜನಕ ಮುಗುಳ್ನಗೆಯನ್ನು ನೋಡಬಹುದಾಗಿತ್ತು; ಅದರಿಂದಾಗಿ ತಾಯಿಯ ಹೃದಯ ಕರಗಿತು.

ಡ್ರೈವರನು ಕಾರಿನ ವೇಗವನ್ನು ಕಡಿಮೆ ಮಾಡುತ್ತಾ ಮಾಫಿ ಕೇಳುವ ಧ್ವನಿಯಲ್ಲಿ ಹೇಳಿದನು: "ಹುಜೂರ್, ಮೇಲೆ ಬಹಳ ಜೋರಾದ ಮಳೆ ಬೀಳುತ್ತಿದೆ. ಎರಚಲು ಬಹಳ ಜೋರಾಗಿದೆ."

ಸೇಠಿಯು ಉತ್ತರ ಕೊಟ್ಟರು: "ಓ, ಇಟ್ ಈಜ಼್ ಆಲ್ ರೈಟ್."

ಬೆಟ್ಟದ ಮೇಲೆ ಬೀಳುತ್ತಿದ್ದ ಮಳೆಯ ನೀರು ಕೆಳಗೆ ಹರಿಯುತ್ತಾ ರಸ್ತೆಯ ಎರಡು ಬದಿಯಲ್ಲೂ ಸಣ್ಣ ಹೊಳೆ ಹರಿಯುವ ರೀತಿಯಲ್ಲಿ ಹರಿಯುತ್ತಿತ್ತು. ಪ್ರವಾಹವನ್ನು ಸೀಳಿಕೊಂಡು, ಎರಡು ಕಡೆಯೂ ಎತ್ತರಕ್ಕೆ ಫೌಂಟನ್ನಿನಂತೆ ನೀರನ್ನು ಹಾರಿಸುತ್ತಾ ಕಾರು ಬೆಟ್ಟ ಹತ್ತುತ್ತಿತ್ತು. ವಿಜ್ಞಾನದ ದೀವಿಗೆಯನ್ನು ಉಜ್ಜಿ ತನ್ನ ವಶಕ್ಕೆ ತಂದು

ಕೊಂಡಿದ್ದ ದೈತ್ಯನ ಪ್ರತಿರೂಪದಂತಿದ್ದ ಆ ಕಾರು ಬೆಟ್ಟದ ಆ ಕಡಿದಾದ ದಾರಿಯನ್ನು ಹತ್ತುತ್ತಾ ಆಕಾಶದಿಂದ ಬೀಳುತ್ತಿದ್ದ ಧಾರಾಕಾರವಾದ ನೀರಿನ ಪ್ರವಾಹ ಹಾಗೂ ಎರಚಲಿನ ಹೊಡೆತವನ್ನು ಎದುರಿಸಿಕೊಂಡು ಅದರ ಪರಿವೆಯೇ ಇಲ್ಲವೆನ್ನುವಂತೆ ಮುಂದುಮುಂದಕ್ಕೆ ಹತ್ತಿಕೊಂಡು ಹೋಗುತ್ತಲೇ ಇದೆ.

ಎರಡು ಗಂಟೆ ಹೀಗೆ ಪ್ರಯಾಣ ಮಾಡುತ್ತಿದ್ದು ಕೊನೆಗೆ ಕಾರು ಅರ್ಧ ಮಾರ್ಗದಲ್ಲಿದ್ದ ಡಾಕ್ ಬಂಗಲೆಗೆ ಹೋಗಿ ಪೋರ್ಟಿಕೋದಲ್ಲಿ ನಿಂತುಕೊಂಡಿತು. ಈ ಪ್ರವಾಸಿ ಮಂದಿರದ ಹೊರವಲಯದಲ್ಲಿ ಅನೇಕ ಪ್ರಯಾಣಿಕರು ಜಿಂಕ್ ಷೀಟಿನ ಅಥವಾ ಹುಲ್ಲಿನ ಛಾವಣಿಯ ಆಸರೆಯಲ್ಲಿ ಅರ್ಧ ನೆನೆಯುತ್ತಾ ಕುಳಿತಿದ್ದರು. ಬೆಟ್ಟ ಪ್ರದೇಶದಲ್ಲಿ ಸಾಮಾನು ಸಾಗಿಸಲು ಉಪಯೋಗಿಸುವ ಪ್ರಾಣಿಗಳು—ಖೈಲ್ ಮತ್ತು ಖಚ್ಚರ್—ನೀರಿನಲ್ಲಿ ನೆನೆಯುತ್ತಾ ನಿಂತಲ್ಲಿಂದಲೇ ಗಾಬರಿಗೊಂಡ ತಮ್ಮ ದೃಷ್ಟಿಯನ್ನು ಹೊರಳಿಸಿ ಸುಸ್ತಾಗಿ ಹೋಗಿರುವ ಜನರ ಚಲನವಲನಗಳನ್ನು ವೀಕ್ಷಿಸುತ್ತಿವೆ. ಜನ ಆಕಾಶದ ಕಡೆ ನೋಡುತ್ತಿದ್ದಾರೆ ಮತ್ತು ಮುಂದೆ ಹೋಗಲು ಅಧಿಕಾರಿಗಳ ಅನುಮತಿಗಾಗಿ ಕಾಯುತ್ತಿದ್ದಾರೆ; ಅವರ ಜಾನು ವಾರುಗಳು ಅವರ ನಿರ್ಣಯಕ್ಕಾಗಿ ಕಾಯುತ್ತಿವೆ. ರಾತ್ರಿಯೆಲ್ಲಾ ಭಾರಿ ಮಳೆ ಆಗಿದ್ದುದ ರಿಂದ ದಾರಿಯಲ್ಲಿ ಅಲ್ಲಲ್ಲೇ ಬೆಟ್ಟದ ಬಂಡೆಗಳು ಉರುಳಿ ರಸ್ತೆಗೆ ಅಡ್ಡಬಿದ್ದಿದ್ದುವು; ಇಲ್ಲವೇ ರಸ್ತೆ ಕಡಿದುಹೋಗಿತ್ತು. ಮುಂದೆ ಹೋಗಲು ಇದರಿಂದಾಗಿ ಪ್ರಯಾಣಿಕರಿಗೆ ಸಂಬಂಧ ಪಟ್ಟ ಅಧಿಕಾರಿಗಳ ಅನುಮತಿ ದೊರೆತಿರಲಿಲ್ಲ.

ಡ್ರೈವರ್ ಕಾರಿನ ಬಾಗಿಲು ತೆರೆದ. ಸೇಠಿ ಕೆಳಗಿಳಿದರು; ಬಾಲಕನು ಸೇಠಿಯ ಕೈ ಬೆರಳನ್ನು ಹಿಡಿದುಕೊಂಡಿದ್ದ. ಹಿಂದುಗಡೆಯಿಂದ ಮೇಮ್ ಸಾಹೇಬ್ ಇಳಿದಳು. ಪ್ರವಾಸಿ ಮಂದಿ ರದ ಆಳುಗಳು ಮತ್ತು ಮೋಟ ಕಾರು ನೋಡಿ ಮುಂದೆ ಬಂದು ಸಲಾಮು ಹಾಕಿದರು. ಬಟ್ಲರಿನ ಪೋಷಾಕು ಧರಿಸಿದ ಒಬ್ಬ ವ್ಯಕ್ತಿ ತುಂಬಾ ಶಿಸ್ತಿನಿಂದ ಬಂದು ನಿಂತು ಸಲಾಮು ಹಾಕಿ "ನಾಶ್ತಾ ರೆಡಿಮಾಡಲೇ ಹುಜೂರ್," ಎಂದು ಕೇಳಿದ. ಸೇಠಿ, "ಹಾಂ" ಎಂದಷ್ಟೇ ಹೇಳಿದರು.

ಮೇಮ ಸಾಹೇಬಳು ತನ್ನ ಮಗುವಿಗಾಗಿ ತನ್ನ ಬೆತ್ತದ ಪೆಟ್ಟಿಗೆಯಲ್ಲಿ ಹಾಲಿನ ಶೀಷೆ ಯನ್ನು ತಂದಿದ್ದಳು. ತನಗೆ ನಾಶ್ತಾದ ವಿಶಿಷ್ಟ ಅಗತ್ಯವೇನೂ ಇರಲಿಲ್ಲ. ತಿಂಗಳಿಗೆ ಅರವತ್ತು ರೂಪಾಯಿ ಸಂಬಳದ ಸ್ಕೂಲ್ ಮೇಡಂಗೆ ಡಾಕ್ ಬಂಗಲೆಯಲ್ಲಿ ನಾಶ್ತಾ ಮಾಡುವ ಅಭ್ಯಾಸವಿಲ್ಲ. ವರಾಂಡದಲ್ಲಿ ಒಂದು ಆರಾಮಕುರ್ಚಿಯಲ್ಲಿ ಕುಳಿತು ಸೇಠಿಯ ಕಡೆ ನೋಡದೆಯೇ ಮೇಮಸಾಹೇಬಳು "ಬಲ್ಲೂ, ಬಂದು ಹಾಲು ಕುಡ್ಕೋ" ಎಂದು ಕೂಗುಹಾಕಿ ಮಗುವನ್ನು ಕರೆದಳು.

"ಬಲ್ಲೂ ಬಿಸಿ ಮಾಡಿದ ಹಾಲು ಕುಡಿಯುತ್ತಾನೆ" ಎಂದು ಸೇಠಿ ಮೇಮಸಾಹೇಬಳ ಕಡೆಗೆ ನೋಡದೆಯೇ ಉತ್ತರ ಕೊಟ್ಟ.

ಬಟ್ಲರನು ಬಂದು ಮೇಜಿನ ಮೇಲೆ ನಾಶ್ತಾ ರೆಡಿಯಾಗಿದೆ ಎಂದು ಹೇಳಿದ. ಸೇಠಿ,

ಮೇಮಸಾಹೇಬ್ ಮತ್ತು ಮಗು ಮೂವರೂ ಒಂದೇ ಕುಟುಂಬವೆನ್ನುವಂತೆ ಅವನು ನಡೆದುಕೊಳ್ಳುತ್ತಿದ್ದ.

ಅವನ ಈ ನಡತೆ ಮೇಮಸಾಹೇಬಳಿಗೆ ಸ್ವಲ್ಪ ವಿಚಿತ್ರವಾಗಿ ಕಂಡುಬಂದಿತಾದರೂ ಅವನ ಊಹೆ ಅಸಮಂಜಸವೇನೂ ಆಗಿರಲಿಲ್ಲ. ಸೇಠಿಯ ಕಡೆ ನೋಡಿ ನಮ್ರತೆಯಿಂದ ಶಿಷ್ಟಾಚಾರಕ್ಕನುಸಾರವಾಗಿ ಇಂಗ್ಲೀಷಿನಲ್ಲಿ, "ನನಗೆ ಅದರ ಆವಶ್ಯಕತೆ ಇಲ್ಲ", ಎಂದು ಹೇಳಿದಳು.

ಶಿಷ್ಟಾಚಾರಕ್ಕನುಸಾರವಾಗಿಯೇ ಸೇಠಿ ಕೂಡ ಒತ್ತಾಯ ಹಾಕುತ್ತಾ ಅದೇ ಧ್ವನಿಯಲ್ಲಿ ಹೇಳಿದರು: "ಇಷ್ಟು ಚಳಿ ಇದೆ; ಈ ಥಂಡಿಯಲ್ಲಿ ಒಂದು ಕಪ್ ಚಹಾ ಕುಡಿಯುವುದು ಒಳ್ಳೆಯದೇ, ತೆಗೆದುಕೊಳ್ಳಿ."

ಉಪಾಹಾರ ಸ್ವೀಕರಿಸಲು ಒಳಗೆ ಹೋಗಿ ಕುಳಿತರು. ಬೇರೆ ಯಾರೂ ಇಲ್ಲದಿದ್ದ ಆ ಕೋಣೆಯಲ್ಲಿ ಆಗಾಗ ಬಂದು ಹೋಗುತ್ತಿದ್ದವನೆಂದರೆ ಆ ಬಟ್ಲರನು ಮಾತ್ರ. ಗೋಡೆಗಳ ಆಚೆಗಿದ್ದ ಹೊರಜಗತ್ತಿನ ದೃಷ್ಟಿಯಲ್ಲಿ ಅವರು ಗಂಡ-ಹೆಂಡತಿ ಮತ್ತು ಒಂದು ಮಗು ಇದ್ದ ಪುಟ್ಟ ಸಂಸಾರ. ಆ ಹೊರ ಜಗತ್ತಿನ ಪ್ರತಿನಿಧಿಯಾಗಿ ಅಥವಾ ಸಾಕ್ಷಿಯಾಗಿ ಇದ್ದ ಒಬ್ಬನೆಂದರೆ ಆ ಬಟ್ಲರ್. ಅವನ ಮುಂದೆ ಸಂಕೋಚಪಟ್ಟುಕೊಂಡು ಗಾಬರಿಗೊಳ್ಳುವುದಾಗಲಿ ಅಥವಾ ಅಪರಾಧಿಯಂತೆ ತೋರಿಸಿಕೊಳ್ಳುವುದಾಗಲಿ ಉಚಿತ ವರ್ತನೆಯಾಗಲಾರದು ಎಂದು ಮೇಮಸಾಬಳು ಭಾವಿಸಿದಳು. ಅಂತೆಯೇ ಅವಳು ಯಾವುದೇ ಸಂಕೋಚವನ್ನು ಹೊರಗೆ ಪ್ರಕಟಿಸಿಕೊಳ್ಳದೆ ತನ್ನ ಮುಂದಿಟ್ಟಿದ್ದ ಚಹಾವನ್ನು ಕಪ್ಪುಗಳಿಗೆ ಬಸಿಯಲು ಅಣಿಯಾದಳು. ಸೇಠಿ ಆಮ್ಲೆಟಿನ ಒಂದು ಚಿಕ್ಕ ಚೂರನ್ನು ತೆಗೆದು ಬಲ್ಲೂನ ಬಾಯಿಗೆ ಕೊಟ್ಟರು. ಬಾಯಿ ತುಂಬಿತು. ಅವನು ಅದನ್ನು ತಿನ್ನತೊಡಗಿದ.

ಬಟ್ಲರನು ಮೇಮಸಾಹೇಬಳ ಬೆನ್ನಿನ ಹಿಂದೆ ಹೋಗಿ ನಿಂತು: "ಒಂದಿಷ್ಟು ಬಿಸ್ಕತ್ತು, ಜ್ಯಾಮ್ ಅಥವಾ ಹಣ್ಣು ತರಲೇ ?"

"ತೆಗೆದುಕೊಂಡು ಬಾ" – ಎಂದು ಉತ್ತರ ಕೊಟ್ಟವರು ಸೇಠಿ.

ಯಾವ ಪದಾರ್ಥಗಳನ್ನು ಸುಲಭವಾಗಿ ಮಾರಲು ಸಾಧ್ಯವಾಗುತ್ತಿರಲಿಲ್ಲವೋ ಅವುಗಳೆಲ್ಲ ಪ್ಲೇಟುಗಳಲ್ಲಿ ಮತ್ತು ಅರ್ಧ ತೆರೆದ ಡಬ್ಬಗಳಲ್ಲಿ ಮೇಜಿನ ಮೇಲೆ ಬರತೊಡಗಿದ್ದುವು. ಮಧ್ಯೆ ಮಧ್ಯೆ ನಗುತ್ತಿದ್ದ ಸೇಠಿ ಒಂದೊಂದನ್ನಾಗಿ ಎತ್ತಿ ಮಗುವಿಗೆ ತಿನ್ನಿಸತೊಡಗಿದರು. ತನ್ನ ಮಗನ ಸಂತೋಷವನ್ನು ಕಂಡು, ತಾಯಿ ಪ್ರಫುಲ್ಲಗೊಳ್ಳುತ್ತಿದ್ದಳು. "ಇನ್ನು ಸಾಕುಮಾಡಿ, ಹೆಚ್ಚು ಕೊಡಬೇಡಿ, ಅವನಿಗೆ ಹೊಟ್ಟೆ ಹಸಿದಿಲ್ಲ," ಎಂದು ಮಧ್ಯೆ ಮಧ್ಯೆ ಸೇಠಿಗೆ ಹೇಳುತ್ತಿದ್ದಳು.

ಬಾಲಕನ ಕಾರಣದಿಂದಾಗಿ ತನ್ನ ಸಂಕೋಚವನ್ನು ದೂರಮಾಡಿಕೊಳ್ಳುತ್ತಾ ಸೇಠಿ ಕೇಳಿದರು: "ನೀವು ಡಾಲ್‌ಹೌಸಿಯಲ್ಲೇ ಇದ್ದೀರೇನು ?"

"ಹೌದು, ನನ್ನ ಹೆಸರು ಮಿಸೆಸ್ ಮದನ್, ಮಿಸ್ಟರ್ ಮದನ್ ಮಿಲಿಟರಿ ಅಕೌಂಟ್ಸ್‌ನಲ್ಲಿ ಕೆಲಸ ಮಾಡುತ್ತಾರೆ. ನಾನು ಸ್ಕೂಲ್ ಮಿಸ್ಟ್ರೆಸ್ ಕೆಲಸ ಮಾಡುತ್ತಿದ್ದೇನೆ. ನನ್ನ ಸೋದರಿ ಅಮೃತಸರದಲ್ಲಿದ್ದಾಳೆ. ನೋಡಿಕೊಂಡು ಬರಲು ಹೋಗಿದ್ದೆ."

ಪರಿಚಯದ ರೂಪದಲ್ಲಿ ಸೇಠಿ ಏನು ಹೇಳಿಕೊಳ್ಳಬೇಕು? "ಒಳ್ಳೇದು", ಎಂದಷ್ಟೇ ಮೊಟಕಾಗಿ ಹೇಳಿದರು. ತನ್ನ ವಿಷಯವಾಗಿ ಹೇಳಿಕೊಳ್ಳುವ ಯಾವ ವಿಚಾರವೂ ಅವರ ತಲೆಗೆ ಹೊಳೆಯಲಿಲ್ಲ. ತನ್ನ ಜೀವನಕ್ಕೆ ಆಧಾರಶಿಲೆಯೆಂಬುದೇ ಇಲ್ಲ, ಅದಕ್ಕೊಂದು ನಿರ್ದಿಷ್ಟ ರೂಪವೇ ಇಲ್ಲ ಎಂದು ಅವರಿಗೆ ಭಾಸವಾಗತೊಡಗಿತು.

"ನೀವು ಪ್ರಾಯಶಃ ಬೇಸಿಗೆಗಾಗಿ ಡಾಲ್‌ಹೌಸಿಗೆ ಬರುತ್ತಿರಬೇಕು," ಎಂದು ಮಿಸೆಸ್ ಮದನ್ ಕೇಳಿದಳು.

"ಇಲ್ಲ, ಹೀಗೆ ನನ್ನ ವ್ಯವಹಾರ ಸಂಬಂಧವಾಗಿ ನಾಲ್ಕು ದಿನ ಅಲ್ಲಿ ಇರಬೇಕಾಗಿದೆ. ಡಾಲ್‌ಹೌಸಿ ಒಳ್ಳೆಯ ಸ್ಥಳ. ತುಂಬಾ ಒಳ್ಳೆಯ ಸ್ಥಳ. ತುಂಬಾ ಸುಂದರ ದೃಶ್ಯಗಳಿವೆ."

"ಮನೆಯವರನ್ನು ಜೊತೆಗೆ ಕರೆದುಕೊಂಡು ಬಂದಿಲ್ಲವೇನು?" ಎಂದು ಆತ್ಮೀಯ ಸ್ವರದಲ್ಲಿ ಮಿಸೆಸ್ ಮದನ್ ಕೇಳಿದಳು.

"ಇಲ್ಲ... ಇದ್ದರೆ ತಾನೆ... ನಾನಿನ್ನೂ ಮದುವೆಯಾಗಿಲ್ಲ. ನನ್ನ ಹೆಸರು ಆರ್. ಎಲ್. ಸೇಠಿ ಅಂತ. ಕಂಟ್ರಾಕ್ಟರ್ ಕೆಲಸ ಮಾಡುತ್ತೇನೆ. ಅಮೃತಸರದ ಹೊಸ ಚರ್ಚನ್ನು ಕಟ್ಟಿಸುವ ಕಂಟ್ರಾಕ್ಟನ್ನು ನಾನೇ ತೆಗೆದುಕೊಂಡಿದ್ದೆ", ಗೋಡೆಯ ಕಡೆ ನೋಡುತ್ತಾ, ಚಹಾದ ಕಪ್ಪಿನಲ್ಲಿ ಸ್ಪೂನನ್ನು ಆಡಿಸುತ್ತಾ, ಅವರು ಹೇಳಿದರು, "ನಾನು ಇದೇ ರೀತಿ ಬದುಕಿದ್ದೇನೆ."

ಸೇಠಿಯ ಮಾತಿನಲ್ಲಿ ಇದ್ದ ನೋವು ಅದೆಷ್ಟು ಭಾರವಾಗಿತ್ತು ಮತ್ತು ಕರುಣಾಜನಕವಾಗಿತ್ತು ಎಂಬುದರ ಅರಿವು ಮಿಸೆಸ್ ಮದನ್‌ಳ ಮನಸ್ಸಿಗಾಯಿತು. ಎಂದೇ ಅವಳು ಅಂದುಕೊಂಡಳು: "ಎಂತಹ ಒಳ್ಳೆಯ ಮನುಷ್ಯ... ಎಂತಹ ದೊಡ್ಡ ಮನುಷ್ಯ!"

ಸೇಠಿಯ ಕೈಯಲ್ಲಿದ್ದ ಚರ್ಮದ ಸ್ಟ್ರ್ಯಾಪಿನ ಚಿನ್ನದ ಗಡಿಯಾರವನ್ನು ಮೇಜಿನ ಮೇಲೆ ಕುಳಿತಿದ್ದ ಬಲ್ಲೂ ಕೇಳುತ್ತಿದ್ದ.

ಅದನ್ನು ಕಂಡ ಮಿಸೆಸ್ ಮದನ್ ಕೈ ಬೆರಳಿನಿಂದ ಹಾಗೆ ಕೇಳಬೇಡ ಎಂದು ಸೂಚಿಸುತ್ತಾ, ಸೇಠಿಯ ಕಡೆ ತಿರುಗಿ ತನ್ನ ಮಗನ ಮೇಲೆ ದೂರು ಕೊಡುವ ರೀತಿಯಲ್ಲಿ, "ತುಂಬಾ ತುಂಟನಾಗಿ ಬಿಟ್ಟಿದ್ದಾನೆ", ಎಂದು ನಕ್ಕು ಹೇಳಿದಳು.

ಸೇಠಿ ಮತ್ತೆ ಮತ್ತೆ ತನ್ನ ಕ್ರಾಪಿನಲ್ಲಿ ಕೈಬೆರಳುಗಳನ್ನು ಆಡಿಸುತ್ತಾ ಇದ್ದುದನ್ನು ನೋಡಿದರೆ ಅವನು ಯಾವುದೋ ವಿಚಾರಗೊಂದಲಕ್ಕೆ ಒಳಗಾಗಿರುವಂತೆ ಭಾಸವಾಗುತ್ತಿತ್ತು. ತನ್ನ ಜೀವನದಲ್ಲಿ ಅವನು ಎಷ್ಟೋ ಸಾಧಿಸಿದ್ದರೂ ತನ್ನ ಬಾಳು ಆಧಾರರಹಿತವೆಂದು ಅವನಿಗೆ ಅನಿಸತೊಡಗಿತ್ತು. ಇದೆಂಥ ಕುಂಟು ಬಾಳು? ತನ್ನ ಮುಂದೆ ಕುಳಿತಿದ್ದ ಮಿಸೆಸ್ ಮದನ್ ಅದೆಷ್ಟು ಅಭಿಮಾನದಿಂದ ತನ್ನ ಮಗನ ಕಡೆಗೆ ನೋಡುತ್ತಿದ್ದಾಳೆ! ಅವಳ ಆ ಮಂದಸ್ಮಿತ, ಅರಳಿದ ಮುಖಕಮಲ, ದೊಡ್ಡ ದೊಡ್ಡ ಬೊಗಸೆ ಕಣ್ಣುಗಳು

ಅದೆಷ್ಟು ರಸಪೂರ್ಣವಾಗಿವೆ! ಮುಸುಕುಹಾಕಿರುವ ಸೆರಗು ಜಾರಿದಾಗ ಎದ್ದು ಕಾಣುವ ಆ ಸೊಂಪಾದ ತಲೆಗೂದಲು. ಆ ಕೆಂಪು ತುಟಿಗಳು, ಕೋಟಿನ ಕಾಲರಿನ ತ್ರಿಕೋಣಾಕಾರಕ್ಕೆ ಹೊಂದಿಕೊಂಡು ಕಾಣುವ ಅವಳ ಸುಂದರ ಕತ್ತಿನ ಭಾಗ – ಇವುಗಳೆಲ್ಲ ತನಗೆ ಎಟುಕಲಾರದ ಒಂದು ಜಗತ್ತಿನ ಪ್ರತೀಕವಾಗಿ ಕಾಣತೊಡಗಿದುವು.

ಮಿಸೆಸ್ ಮದನ್‌ಳ ದೃಷ್ಟಿ ಅವರ ಕಣ್ಣುಗಳ ಕಡೆಗೆ ಹೋಯಿತು. ಅವರ ದೃಷ್ಟಿ ತನ್ನ ಅಂಗಾಂಗಗಳ ಮೇಲೆಲ್ಲ ಪರಿದಾಡುತ್ತಿದೆ ಎಂದು ಅವಳಿಗೆ ತಿಳಿಯಿತು. ಇದರಿಂದ ಅವಳಿಗೆ ಒಂದು ರೀತಿಯ ಭಯವಾಯಿತಾದರೂ ಆ ಭಯದ ಕಂಪನ ದುಃಖದಾಯಕವಾಗಿರಲಿಲ್ಲ. ಅದಕ್ಕೆ ಬದಲಾಗಿ ಅವರ ಮೇಲೆ ತನ್ನದೇನೋ ಅಧಿಕಾರವಿರುವ ರೀತಿಯಲ್ಲಿ ಅವಳ ವರ್ತನೆ ವ್ಯಕ್ತವಾಯಿತು. ತನ್ನ ಎರಡೂ ಕೈಗಳನ್ನು ಮೇಜಿನ ಮೇಲೆ ಇಡುತ್ತಾ, ಸೇಠರವಾಗಿ ಅವರ ಕಡೆ ತನ್ನ ಹೊಳೆವ ಕಣ್ಣುಗಳನ್ನು ಹೊರಳಿಸಿ ಕೇಳಿದಳು –

"ಎಂಥ ಭಾರಿ ಮಳೆ, ನಾವು ಹೋಗಿ ತಲಪುವುದಾದರೂ ಹೇಗೆ?"

ಸೇಠಿಯು ತನ್ನ ಜೇಬಿನಿಂದ ಚಿನ್ನದ ಸಿಗರೇಟ್ ಕೇಸನ್ನು ಹೊರಕ್ಕೆ ತೆಗೆದು ಅದರಿಂದ ಒಂದು ಸಿಗರೇಟ್ ತೆಗೆದು ತುಟಿಗಳ ಮಧ್ಯೆ ಇಟ್ಟು ಹಚ್ಚಿಕೊಂಡು ನಿಸ್ಸಂಕೋಚವಾಗಿ ಹೊಗೆಯನ್ನು ಬಿಡುತ್ತಾ ಹೇಳಿದರು –

"ಮಳೆ ಬಿಡದೆ ನಾವು ಇವೊತ್ತು ಹೋಗುವುದಕ್ಕೆ ಆಗುವುದೇ ಇಲ್ಲ ಎಂದು ಇಟ್ಟುಕೊಳ್ಳೋಣ. ಏನಾಯಿತು?"

ಮಿಸೆಸ್ ಮದನ್ ತನ್ನ ಕೈಗಳ ಬೆರಳುಗಳನ್ನು ಪರಸ್ಪರ ಹೆಣೆಯುತ್ತಾ, ಚಿಂತೆಗೊಳಗಾಗಿರುವ ಧ್ವನಿಯಲ್ಲಿ, ಆದರೆ ಸೇಠಿಯ ಕಡೆಗೇ ನೋಡಿ ತನ್ನ ಮುಗುಳ್ನಗೆಯೊಡನೆ ಹೇಳಿದಳು: "ಜೀ, ನಾನಂತೂ ನಾಳೆ ಸ್ಕೂಲಿನಲ್ಲಿ ಹಾಜರಿರಲೇಬೇಕು. ನೀವೂ ವ್ಯವಹಾರದ ಮೇಲೆ ಹೋಗುತ್ತಿದ್ದೀರಿ, ನಿಮಗೂ ಅದರಿಂದ ನಷ್ಟವೇ ಆದೀತು."

"ಅದು ನಿಜ, ನಾನು ಯಾವ ಕೆಲಸದ ಮೇಲೆ ಬಂದಿದ್ದೇನೆಯೋ ಆ ಕೆಲಸ ಆಗದೆ ಹೋಗಬಹುದು," ಎಂದು ಸೇಠಿ ಹೇಳಿ ಅಲ್ಲಿಯೇ ಸಮೀಪದಲ್ಲಿ ನಿಂತಿದ್ದ ಬಟ್ಲರನ ಕಡೆ ನೋಡಿ ಅವನನ್ನು ಕರೆದರು... "ದೇಖೋ."

ಬಟ್ಲರನು ಕೂಡಲೇ ಬಿಲ್ಲನ್ನು ಒಂದು ಸಣ್ಣ ತಟ್ಟೆಯಲ್ಲಿಟ್ಟು ಅವರ ಮುಂದೆ ಹಾಜರುಪಡಿಸಿದ. ಬಿಲ್ಲಿನ ಕಡೆ ನೋಡದೆ ಮಿಸೆಸ್ ಮದನ್ ಹೇಳಿದಳು: "ಡ್ರೈವರನನ್ನು ಕೇಳು ಇಲ್ಲಿಂದ ಎಷ್ಟು ಹೊತ್ತಿಗೆ ಹೊರಡಬೇಕು, ಎಂದು."

ಬಿಲ್ಲನ್ನು ತನ್ನ ಕಡೆಗೆ ತೆಗೆದುಕೊಳ್ಳುತ್ತಾ ಸೇಠಿ ಹೇಳಿದ: "ನಾನಂತೂ ಓದುತ್ತಿದ್ದಾಗ ಸ್ಕೂಲ್‌ಗೆ ಯಾವಾಗ ರಜೆ ಬರುತ್ತೆ, ಯಾವಾಗ ಒಂದಲ್ಲ ಒಂದು ಕಾರಣದಿಂದ ಸ್ಕೂಲಿಗೆ ಚಕ್ಕರ್ ಹೊಡೆಯಬಹುದು ಎಂದೇ ಯೋಚಿಸುತ್ತಿದ್ದೆ; ನಿಮಗೆ ಸ್ಕೂಲ್ ಎಂದರೆ ಬಹಳ ಇಷ್ಟವೆಂದು ಕಾಣುತ್ತೆ."

ಮಿಸೆಸ್ ಮದನ್ ಹೇಳಿದಳು: "ಪ್ರಾಯಶಃ ನೀವು ಸ್ಕೂಲಿಗೆ ಚಕ್ಕರ್ ಹೊಡೆಯುವ

ಹುಡುಗರ ಗುಂಪಿಗೆ ಸೇರಿದ್ದಿರಬೇಕು. ಅದೇ ಚಾಳಿ. ಇವೊತ್ತು ಕೆಲಸವನ್ನೂ ಮರೆತು ಹೀಗೇ ಮಳೆ ಬರುತ್ತಿರಲಿ ಎಂದು ಹಾಯಾಗಿ ಸಿಗರೇಟ್ ಸೇದುತ್ತಾ ಕುಳಿತಿರಲು ಯೋಚಿಸುತ್ತಿದ್ದೀರಿ." ಹೀಗೆ ಹೇಳಿ ನಕ್ಕುಬಿಟ್ಟಳು.

"ಹಾಂ, ಖಂಡಿತಾ ನಾನೇನೋ ಅದೇ ರೀತಿ ಅಪೇಕ್ಷಿಸುತ್ತೇನೆ."

"ಯಾಕೆ ನಿಮ್ಮ ಮನಸ್ಸು ನಿಮ್ಮ ಬಿಸಿನೆಸ್ ಕಡೆಗೆ ಇರುವುದಿಲ್ಲವೆ?"

"ಇದರ ವಿಚಾರವಾಗಿ ನಾನು ಯಾವತ್ತೂ ಯೋಚಿಸಲೇ ಇಲ್ಲ. ಜೀವನದ ರಥವನ್ನು ಇದು ಬದಿಯಿರುವ ಕಡೆಗೇ ಎಳೆದುಕೊಂಡು ಹೋಗುತ್ತಿದೆಯಲ್ಲ ಎಂದು ಆಗಾಗ ಅನಿಸುತ್ತದೆ."

ಅಷ್ಟರಲ್ಲೇ ಡ್ರೈವರನು ಬಂದು ರಸ್ತೆ ಇನ್ನೂ ಸಂಚಾರಕ್ಕೆ ಅನುಕೂಲವಾಗಿಲ್ಲ ಎಂದು ತಿಳಿಸಿದನು. ಸೇಠಿಯು ಪೊಲೀಸ್ ಸ್ಟೇಷನ್ನಿಗೆ ಫೋನ್ ಮಾಡಿ ಕೇಳಿದಾಗ ಇನ್ನೂ ಆರು ಗಂಟೆಗೆ ಮೊದಲು ರಸ್ತೆ ಸಂಚಾರಕ್ಕೆ ತೆರೆಯುವ ಸಂಭವ ಇಲ್ಲ ಎಂದು ತಿಳಿಯಿತು.

ಈ ಸುದ್ದಿ ಕೇಳಿ ಗಾಬರಿಗೊಂಡ ಮಿಸೆಸ್ ಮದನ್‌ಳ ಕಡೆಗೆ ನೋಡಿ ಸೇಠಿ ಹೇಳಿದರು: "ರಸ್ತೆಯನ್ನು ಪ್ರಯಾಣಕ್ಕೆ ಸಿದ್ಧಮಾಡಿಕೊಳ್ಳುವುದು ನಿಮ್ಮ ಕೈಯಲ್ಲಿಲ್ಲವೆಂಬುದನ್ನು ನಿಮ್ಮ ಸ್ಕೂಲಿನವರು ತಿಳಿಯುತ್ತಾರೆ, ಯೋಚಿಸಬೇಡಿ."

ಮಿಸೆಸ್ ಮದನಳ ಹಾಸಿಗೆಯನ್ನು ಒಂದು ಕೋಣೆಯಲ್ಲಿ ಬಿಚ್ಚಲಾಯಿತು, ಅವಳು ಕೋಣೆಯೊಳಕ್ಕೆ ಹೊರಟು ಹೋದಳು. ಬಾಲಕನು ಮಾತ್ರ ಆಗಾಗ ಕೋಣೆಯೊಳಕ್ಕೆ ಹೋಗುತ್ತಿದ್ದ ಮತ್ತು ಹೊರಬರುತ್ತಿದ್ದ. ಮಿಸೆಸ್ ಮದನ್ ಅಲ್ಲಿಂದೆದ್ದು ಹೊರಟು ಹೋದಮೇಲೆ ಸೇಠಿಗೆ ಒಂದು ವಿಚಿತ್ರ ಅನುಭವವಾಯಿತು. ಹೆಚ್ಚು ತಿನ್ನುವುದರಿಂದ ಅಜೀರ್ಣವಾಗುತ್ತದೆಯೆಂಬ ಕಾರಣದಿಂದ ತಾನು ತಿನ್ನುತ್ತಿದ್ದ ತಟ್ಟೆಯನ್ನು ಅರ್ಧಕ್ಕೇ ಕೈಯಿಂದ ಕಿತ್ತುಕೊಂಡ ಹಾಗಾಯಿತು. ಅವರ ಹಸಿವು ಮಾತ್ರ ಇನ್ನೂ ಹಾಗೆಯೇ ಇತ್ತು. ಈ ಪರಿಸ್ಥಿತಿಯಲ್ಲಿ ಅವರು ಆರಾಮಕುರ್ಚಿಯಲ್ಲಿ ಮಲಗಿಕೊಂಡು ಆಕಾಶದಲ್ಲಿ ಕವಿದಿದ್ದ ಮೋಡಗಳ ಕಡೆಗೆ ನೋಡುತ್ತಿದ್ದರು, ಇಲ್ಲವೇ ಅಲ್ಲಿಂದೆದ್ದು ಅಲ್ಲೇ ವರಾಂಡದಲ್ಲಿ ಶಥಪಥ ತಿರುಗುತ್ತಿದ್ದರು, ಮತ್ತೆ ಕುರ್ಚಿಯಲ್ಲಿ ಕುಸಿಯುತ್ತಿದ್ದರು. ಯಾವಾಗಲೂ ವ್ಯವಹಾರದಲ್ಲಿ ಮುಳುಗುತ್ತಿದ್ದ ಅವರ ಮನಸ್ಸು ಇವೊತ್ತು ಕಲ್ಪನಾ ಸಾಮ್ರಾಜ್ಯದಲ್ಲಿ ವಿಹರಿಸುತ್ತಿತ್ತು. ಅವರ ಕಣ್ಣುಗಳ ಮುಂದೆ ಅವರದೇ ಜೀವನದ ಒಂದು ಚಿತ್ರ ಮೂಡಿಬರುತ್ತಿತ್ತು. ಈಗವರು ಹಣದ ಹಿಂದೆ ಅಲ್ಲ, ಬೇರೊಂದು ವಸ್ತುವಿನ ಹಿಂದೆ ಬಿದ್ದು ಅವರು ಓಡುತ್ತಿದ್ದಾರೆ. ಒಬ್ಬ ಹೆಂಗಸಿನ ಬೆನ್ನಿಗೆ ಬಿದ್ದು ಅವರು ಹತ್ತಲು ಅಸಾಧ್ಯವಾದ ಒಂದು ಬೆಟ್ಟವನ್ನು ಹತ್ತಿಹೋಗಲು, ಪ್ರಯತ್ನಿಸುತ್ತಿದ್ದಾರೆ. ಹೋಗಿ ಅವಳನ್ನು ಹಿಡಿಯುವ ಪ್ರಯತ್ನ ಅವರದು. ಅವರು ಹಾಗೆ ಹೋಗಿ ಇನ್ನೇನು ಅವಳ ಕಾಲು ಹಿಡಿದುಕೊಳ್ಳಬೇಕು, ಅನ್ನುವ ಹೊತ್ತಿಗೆ ಅವಳ ಶರೀರ ಅವರಿಂದ ದೂರವಾಗುತ್ತದೆ. ಹೆಂಗಸಿನ ಆ ದೇಹ ಬೇರೆ ಯಾರ ದೇಹವೂ ಆಗಿರದೆ ಮಿಸೆಸ್ ಮದನ್ ಅವಳದೇ ಆಗಿತ್ತು.

ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಅವರು ಶಥಪಥ ತಿರುಗಾಡಿ ಕೊನೆಗೆ ಒಂದು ಕುರ್ಚಿಯಲ್ಲಿ ಕುಸಿದು ಕುಳಿತರು. ಅದೇ ಸಮಯಕ್ಕೆ ತೇವದಿಂದ ಒದ್ದೆಯಾಗಿದ್ದ ಹಸಿರು ಹುಲ್ಲಿನ ಮೇಲೆ ಮತ್ತು ಸುತ್ತಲಿನ ವೃಕ್ಷಗಳ ಮೇಲೆ ಸಂಜೆಯ ಬಿಸಿಲು ಕಾಣಿಸಿಕೊಂಡಿತು. ಸೂರ್ಯ ರಶ್ಮಿಗಳು ಸುತ್ತಲೂ ಹರಡಿಕೊಂಡಿದ್ದುವು. ಓಗೆ ಸೂರ್ಯರಶ್ಮಿ ಒಮ್ಮೆಲೆ ಕಾಣಿಸಿಕೊಂಡು ಆ ಪ್ರಕಾಶಕ್ಕೇ ಕಣ್ಣು ಮುಚ್ಚಿಕೊಳ್ಳುವ ಹಾಗಾಯಿತು. ತಾನೆಷ್ಟು ಅಸಮರ್ಥನೆಂಬುದು ಅವರಿಗೆ ಗೋಚರವಾಯಿತು. ಅವರು ಎದ್ದು ಮಿಸೆಸ್ ಮದನ್ ಇದ್ದ ಕೊಠಡಿಯೊಳಕ್ಕೆ ಹೋಗಲಾರರು. ಪ್ರಾಯಶಃ ಅವಳು ಮಲಗಿರಬೇಕು. ಎದ್ದಿರಲೂಬಹುದು, ಅದಕ್ಕೆ ಬದಲು ಇಬ್ಬರೂ ಒಟ್ಟಿಗೆ ಕುಳಿತುಕೊಂಡಿರುವ ಹಾಗಿದ್ದರೆ!

ಹೆಂಗಸರು ಹಾಕಿಕೊಳ್ಳುವ ಪಾದರಕ್ಷೆಗಳ ಸದ್ದು ಕೇಳಿ ಸೇಠಿ ಆ ಕಡೆಗೆ ತಿರುಗಿ ನೋಡಿದರು. ಕೋಟಿನ ಎರಡೂ ಜೇಬುಗಳಲ್ಲಿ ಕೈಗಳನ್ನು ಹಾಕಿಕೊಂಡು ಹೊರಗೆ ಬಂದಿದ್ದ ಮಿಸೆಸ್ ಮದನ್ ಹೇಳಿದಳು: "ಬಿಸಿಲು ಬಂದಿದೆ. ಆರು ಗಂಟೆ ಕೂಡ ಆಗಿದೆ. ಈಗ ನಾವು ಹೊರಡಬಹುದು ಅಲ್ಲವೇ?... ಎಷ್ಟು ಗಂಟೆ ಈಗ?"

ಗಡಿಯಾರ ಬಲ್ಲೂ ಕೈಯಲ್ಲಿತ್ತು. ಅವನು ಅದರ ಗಾಜು ಒಡೆದಿದ್ದ. ಗಂಟೆ ತೋರಿ ಸುವ ಮುಳ್ಳುಗಳೂ ಮುರಿದಿದ್ದುವು. ಇದರಿಂದಾಗಿ ಡ್ರೈವರನನ್ನು ಕೇಳಿಯೇ ಗಂಟೆ ತಿಳಿಯಬೇಕಾಗಿತ್ತು.

ಖಂಡಿತಾ ಆರು ಗಂಟೆ ಕಳೆದಿತ್ತು. ಆದರೆ ರಸ್ತೆ ಇನ್ನೂ ಪ್ರಯಾಣಕ್ಕೆ ಸಿದ್ಧವಾಗಿರ ಲಿಲ್ಲ. ವಾಹನಗಳು ಮುಂದಕ್ಕೆ ಹೋಗಲು ಇನ್ನೂ ಅನುಮತಿ ದೊರೆತಿರಲಿಲ್ಲ.

ಬಟ್ಲರನು ಮತ್ತೆ ಬಂದು ಸಲಾಮು ಹಾಕಿ, "ಊಟಕ್ಕೆ ವ್ಯವಸ್ಥೆ ಮಾಡಬಹುದೇ?" ಎಂದು ಕೇಳಿದ.

"ಮೇಮಸಾಹೇಬರಲ್ಲಿ ವಿಚಾರಿಸು", ಎಂದು ಉತ್ತರ ಹೇಳಿ ಸೇಠಿ ಬಾಲಕನ ಕೈ ಬೆರಳನ್ನು ಹಿಡಿದುಕೊಂಡು ಬಿಸಿಲಿನಲ್ಲಿ ತಿರುಗಾಡಲು ಹೊರಟು ಹೋದರು.

ಬಟ್ಲರನು ಮನಸ್ಸಿನಲ್ಲಿ ಏನು ತಿಳಿಯುತ್ತಿರಬಹುದು ಎಂದು ಯೋಚಿಸುತ್ತಾ ಅವಳಿಗೆ ಮನಸ್ಸಿನಲ್ಲಿ ಸಂಕೋಚವಾಗುತ್ತಿತ್ತು. ಆದರೆ ಅದನ್ನು ಹೊರಗಡೆಗೆ ಪ್ರಕಟಿಸು ವುದರಿಂದ ಬೆಳಿಗ್ಗೆಯ ವ್ಯವಹಾರ ಮತ್ತು ಈಗಿನ ಸಂಕೋಚಗಳಿಂದಾಗಿ ತುಂಬಾ ಆಭಾಸದ ಪರಿಸ್ಥಿತಿಯೇ ಉಂಟಾಗಬಹುದೆಂದು ಅವಳು ಭಾವಿಸಿ: "ಸರಿ, ತಯಾರು ಮಾಡು... ಆದರೆ ತಡಮಾಡುವುದು ಬೇಡ," ಎಂದು ಹೇಳಿದಳು.

ಮಿಸೆಸ್ ಮದನ್ ಸಮೀಪದಲ್ಲಿಯೇ, ಅವಳ ಆಕ್ಷೇಪಣೆ ಇಲ್ಲದಿದ್ದರೆ – ಕುಳಿತು ಕೊಳ್ಳಬೇಕೆಂಬುದು ಸೇಠಿಯ ಅಪೇಕ್ಷೆ. ಮಧ್ಯಾಹ್ನದ ಊಟಕ್ಕೆ ಅವರು ಮತ್ತೆ ಒಟ್ಟಿಗೆ ಕುಳಿತುಕೊಂಡರು. ಈಗೇನು ಮಾತನಾಡಬೇಕು? ಗಿರಿಧಾಮಗಳ ದಾರಿಗಳ ಕಥೆಯೇ ಹೀಗೆ, ಆಗಾಗ ರಸ್ತೆಗಳು ಕೊಚ್ಚಿ ಹೋಗುತ್ತವೆ ಎಂದು ಹೇಳಿದರು. ಹಿಂದೊಮ್ಮೆ ಬಂದಾಗ

ಕೂಡ ಹೀಗೆಯೇ ರಸ್ತೆ ಕಡಿದುಹೋಗಿ ಮೂರು ಗಂಟೆಗಳ ನಂತರ ಸರಿಹೋಗಿತ್ತು. ಕೆಲಸ ಮುಗಿಸಿ ಆ ದಿನವೇ ಹಿಂದಿರುಗಲೂ ಸಾಧ್ಯವಾಗಿತ್ತು.

"ಡಾಲ್ ಹೌಸಿಯಲ್ಲಿ ಎಲ್ಲಿ ನಿಮ್ಮ ವಾಸ?"

ಮಿಸೆಸ್ ಮದನ್ ತನ್ನ ವಿಳಾಸ ತಿಳಿಸಿ ಕೇಳಿದಳು:

"ನೀವು ಅಲ್ಲಿ ಎಷ್ಟು ದಿನ ಇರುತ್ತೀರಿ?"

ಸೇಠಿ ಬಂದಿದ್ದುದು ಕೆಲಸದ ಮೇಲೆ. ಒಂದು ದಿನ ಆಗಬಹುದು, ಎರಡು ದಿನ ಆಗಬಹುದು ಅಥವಾ ಮೂರು ದಿನ. ಕೆಲಸ ಆಗಲು ಎಷ್ಟು ದಿನ ಬೇಕಾಗಿತ್ತೋ ಅಷ್ಟು ದಿನ ಅವರು ಅಲ್ಲಿ ಇರಬೇಕಾಗಿತ್ತು. ಡಾಲ್‌ಹೌಸಿಯಲ್ಲಿ ಚುಡೇಲ್‌ಡಂಡಾ ಬೆಟ್ಟದ ಮೇಲೆ ಸೈನ್ಯಕ್ಕಾಗಿ ಹೊಸ ಕಟ್ಟಡವೊಂದು ನಿರ್ಮಾಣವಾಗಬೇಕಾಗಿತ್ತು. ಅದರ ಕಂಟ್ರಾಕ್ಟ್ ಪಡೆಯುವ ದೃಷ್ಟಿಯಿಂದ ಅವರು ಅಲ್ಲಿಗೆ ಹೋಗುತ್ತಿದ್ದರು. ಹಿಂದೆ ಅವರು ಬಂದಿದ್ದಾಗ 'ಹಿಲ್‌ಕೆಸ್ಟ್' ಹೋಟಲಿನಲ್ಲಿ ಅವರು ಇಳಿದುಕೊಂಡಿದ್ದರು. ಈ ಸಲವೂ ಅವರು ಅಲ್ಲಿಯೇ ಉಳಿಯುವ ಯೋಚನೆ ಮಾಡಿದ್ದರು.

ಮಾತುಮಾತಿನಲ್ಲಿ ತನ್ನ ಕಥೆಯನ್ನೂ ಸಹ ಮಿಸೆಸ್ ಮದನ್ ತಿಳಿಸಿದಳು. ಗಂಡನಿಗೆ ತಿಂಗಳಿಗೆ ನೂರು ರೂ. ಸಂಬಳ. ತನಗೆ ಸ್ಕೂಲಿನಲ್ಲಿ ಸಿಗುವ ಸಂಬಳ ಅರವತ್ತು ರೂಪಾಯಿ. ನೌಕರಿ ಮಾಡದೆ ವಿಧಿಯಿಲ್ಲ. ಅವರದೇ ಆದ ಒಂದು ಬಂಗಲೆ ಇದೆ. ಆದರೆ ಗಂಡನ ಖಾಯಿಲೆ ವೆಚ್ಚದಿಂದಾಗಿ 4,500 ರೂ.ಗಳಿಗೆ ಅದನ್ನು ಆಧಾರ ಮಾಡಲಾಗಿದೆ. ಆ ಬಂಗಲೆಯ ಬಾಡಿಗೆ ಸೀಜನ್ನಿನಲ್ಲಿ 200–250 ರೂ. ಬರುತ್ತದೆ. ಆದರೆ ಅದರಿಂದೇನೂ ಪ್ರಯೋಜನವಿಲ್ಲ. ತಾವು ಪಡೆದಿರುವ ಸಾಲದ ಬಡ್ಡಿಗೇ ಅದು ಸಾಕಾಗುವುದಿಲ್ಲ; 50–60 ರೂ. ಕೈಯಿಂದ ಹೋಗುತ್ತದೆ.

4500 ರೂ. ಸೇಠಿಗೆ ಹೆಚ್ಚಲ್ಲ; ಆದರೆ ಅವರು ಏನು ತಾನೇ ಮಾಡಬಲ್ಲರು. ಊಟ ಮಾಡುವಾಗ ಬಲ್ಲೂನ ಆಟಪಾಟಗಳನ್ನು ಇಬ್ಬರೂ ತುಂಬುಕಣ್ಣಿನಿಂದ ನೋಡಿ ಸಂತೋಷಪಡುತ್ತಿದ್ದರು. ಇನ್ನೂ ತಿನ್ನಿಸಲು ಸೇಠಿ ಅಪೇಕ್ಷಿಸುತ್ತಿದ್ದರು; ಆದರೆ ಮಿಸೆಸ್ ಮದನ್ ಹೆಚ್ಚು ತಿನ್ನಿಸುವುದು ಬೇಡ ಎಂದು ಅವರನ್ನು ಕೇಳಿಕೊಳ್ಳುತ್ತಿದ್ದಳು. ಅನ್ಯಾಯ ವಾಗಿ ನಿಮ್ಮ ಗಡಿಯಾರವನ್ನು ಮುರಿದುಹಾಕಿದ ಎಂದು ಅವಳು ತನ್ನ ಮನಸ್ಸಿಗಾದ ಬೇಸರವನ್ನೂ ತೋಡಿಕೊಂಡಳು. ಆದರೆ ಅದಕ್ಕೆ ಕಿವಿಗೊಡಲು ಸೇಠಿ ಒಪ್ಪಲಿಲ್ಲ. ಊಟ ಮುಗಿಯಿತು. ಮಿಸೆಸ್ ಮದನ್ ಅಲ್ಲಿಂದೆದ್ದು ತನ್ನ ಕೊಠಡಿಯ ಕಡೆಗೆ ಹೋಗಲು ಉದ್ಯುಕ್ತಳಾದಳು. ಅದನ್ನು ಕಂಡ ಸೇಠಿ ಅವಳನ್ನು ಕೇಳುವ ಸಾಹಸ ಮಾಡಿದರು:

"ಏನು, ಮತ್ತೆ ಮಲಗಿಬಿಡುತ್ತೀರೇನು?"

"ಇಲ್ಲ, ಆದರೆ ಕೂತೇನು ಮಾಡಬೇಕು? ಸಂಜೆಯ ಹೊತ್ತಿಗಾದರೂ ನಾವು ಹೋಗಿ ತಲಪಲು ಆಗುವುದಿಲ್ಲವೆನ್ನುತ್ತೀರಾ?"

"ಆ ಭರವಸೆಯೇ ಇಲ್ಲ. ಯಾಕೆ ಗಾಬರಿಯಾಗುತ್ತೀರಿ ? ನೀವು ನಾಳೆ ಸ್ಕೂಲಿಗೆ ಹೋಗುವುದಕ್ಕೆ ಆಗದೆಹೋದರೆ ,ನಿಮ್ಮ ಸಂಬಳ ಎರಡು ರೂಪಾಯಿ ಕಟ್ ಆಗಬಹುದು, ಅಷ್ಟೆ ತಾನೇ ? ನನ್ನ ಕೆಲಸ ಆಗದೆ ಹೋದರೆ ಎಷ್ಟು ಹಣ ನಷ್ಟ ಆಗುತ್ತದೆ ಗೊತ್ತೆ ?... 60–65 ಸಾವಿರ!" ಎಂದು ಸೇಠಿ ಹೇಳಿ ನಕ್ಕುಬಿಟ್ಟು ಮುಂದುವರಿಸಿದರು – "ನೀವು ನಿಮ್ಮ ಬಂಗಲೆಯನ್ನೇಕೆ ಬಿಡಿಸಿಕೊಳ್ಳಬಾರದು ? ಹಾಗೆ ಮಾಡಿದರೆ ನೀವು ನೌಕರಿಗೆ ಹೋಗುವ ಆವಶ್ಯಕತೆಯೇ ಇರುವುದಿಲ್ಲ ?

"ಆದರೆ ಬಿಡಿಸಿಕೊಳ್ಳುವುದಾದರೂ ಹೇಗೆ ? ಇಲ್ಲಿಯ ತನಕ ಕಷ್ಟಪಟ್ಟು ಒಂದು ಸಾವಿರ ತುಂಬಲು ಸಾಧ್ಯವಾಗಿದೆ."

"ಅದೇನು ದೊಡ್ಡ ವಿಚಾರ, ನೀವು ಬಿಡಿಸಿಕೊಳ್ಳಿ. ಹಣ ನಾನು ಕೊಡುತ್ತೇನೆ. ಅದನ್ನು ನೀವು ವಾಪಸ್ಸು ಕೊಡಲೇ ಬೇಕೆಂಬ ಚಿಂತೆಯೂ ನನಗಿಲ್ಲ. ನನಗದು ಬೇಕಾಗಿಲ್ಲ."

ಮಿಸೆಸ್ ಮದನ್‌ಳ ಕಣ್ಣುಗಳು ಕಾಂತಿಯುತವಾದುವು, ಮುಖ ಕೆಂಪಾಯಿತು. ತನ್ನ ಮಾನಸಿಕ ಸ್ಥಿತಿಯನ್ನು ಸ್ವಾಧೀನಕ್ಕೆ ತಂದುಕೊಳ್ಳುವ ದೃಷ್ಟಿಯಿಂದ ತನ್ನ ಮಗುವನ್ನು ಎತ್ತಿ ತನ್ನ ಮಡಲಲ್ಲಿ ಕೂರಿಸಿಕೊಂಡು ಅವನ ಕೈಯಿಂದ ಗಡಿಯಾರವನ್ನು ಕಿತ್ತು ಕೊಡುತ್ತಾ ಸೇಠಿಗೆ ಹೇಳಿದಳು: "ಇದನ್ನು ನಿಮ್ಮಲ್ಲಿಟ್ಟುಕೊಳ್ಳಿ, ಇಲ್ಲವಾದರೆ ಇದನ್ನು ಅವನು ಕಳೆದುಹಾಕಲೂಬಹುದು".

ಬಲ್ಲೂ ಇದರಿಂದ ಅಸಂತುಷ್ಟನಾದಾಗ ಮಿಸೆಸ್ ಮದನ್ ತನ್ನ ಕೈ ಬೆರಳಿನ ಸನ್ನೆಯಿಂದ ಸುಮ್ಮನಿರುವಂತೆ ಸೂಚನೆ ಕೊಟ್ಟು ಹೇಳಿದಳು: "ನೋಡು, ಸುಮ್ಮನಿರಬೇಕು. ಇಲ್ಲವಾದರೆ ಮಾವ ಹೊಡೀತಾರೆ." ಮಾವ ಎಂಬ ಒಂದು ಶಬ್ದ ಹೇಳಿ ಸೇಠಿಯ ಮೇಲಿನ ತನ್ನ ಅಧಿಕಾರವನ್ನು ಪ್ರಕಟಿಸಿದಳು. ಮತ್ತು, ಈಗ ತನ್ನ ತವರಿನ ವಿಚಾರವನ್ನು ಅವನಿಗೆ ತಿಳಿಸಲು ಶುರುಮಾಡಿ ತವರಿನ ತನ್ನ ಹೆಸರು ಊರ್ಮಿಳಾ ಎಂದೂ ತಿಳಿಸಿದಳು.

ಹೀಗೆ ಅವರು ಕುಳಿತು ಮಾತನಾಡುತ್ತಿರುವಹಾಗೆಯೇ ಸಂಜೆಯಾಗಿಹೋಯಿತು. ರಾತ್ರಿಯೂ ಆಯಿತು. ಆಕಾಶದಲ್ಲಿ ಚಂದ್ರನು ಕಾಣಿಸುತ್ತಿದ್ದನು. ಸಮೀಪದ ವೃಕ್ಷದ ಮಧ್ಯದಿಂದ ಹಾದು ಚಂದ್ರನ ಬೆಳಕು ಅವರ ಮೇಲೆ ಬೀಳುತ್ತಿತ್ತು. ಬಲ್ಲೂ ಒಳಗೆ ಹೋಗಿ ಮಲಗಿಬಿಟ್ಟನು. ಈ ಏಕಾಂತ ರಾತ್ರಿಯಲ್ಲಿ ತಾನು ಮತ್ತು ಸೇಠಿ ಇಬ್ಬರೇ ಕುಳಿತಿರುವುದು ಮತ್ತು ಹೀಗೆ ಬೆಳುದಿಂಗಳು ಬೀಳುತ್ತಿರುವುದರ ಬಗ್ಗೆ ಊರ್ಮಿಳಾ ಯೋಚಿಸುತ್ತಿದ್ದಳು. ಹೀಗೆ ಯೋಚಿಸುತ್ತಿರುವ ಸಮಯದಲ್ಲಿ ಅವಳ ಮುಖದ ಮೇಲೆ ಭಯ ಹಾಗೂ ಕಾತರತೆಯ ಕಿಡಿಗಳು ಕಾಣಿಸಿಕೊಂಡು ಅವಳ ಮೈ ಕಂಪಿತವಾಗುತ್ತಿತ್ತು.

ಹೊರಗಡೆ ಚಳಿ ಇತ್ತು ಮತ್ತು ತಂಗಾಳಿ ಬೀಸುತ್ತಿತ್ತು. ಒಳಗೆ ಹೋಗಲು ಕೊಠಡಿಗಳಿದ್ದುವು. ಆದರೆ ಆ ಬಟ್ಲರನು ತನ್ನ ಬುದ್ಧಿಗೆ ತೋಚಿದ ರೀತಿಯಲ್ಲಿ ಇಬ್ಬರ ಸಾಮಾನುಗಳನ್ನು ಒಂದೇ ಕೊಠಡಿಯಲ್ಲಿ ಹಾಕಿದ್ದನು. ಹಾಗೆ ಮಾಡುವುದು ಬೇಡ ಎಂದು ಅವನಿಗೆ ಹೇಳಿಯೂ ಇರಲಿಲ್ಲ. ಒಳಗೆ ಇರುವ ಎರಡು ಮಂಚಗಳ ಮೇಲೆ ಒಬ್ಬೊಬ್ಬರು ಮಲಗಿ

ಕೊಂಡರಾಯಿತು ಎನಿಸಿದಾಗ ಇದು ಎಂತಹ ಸಮಸ್ಯೆ ಬಂತು ಎಂದು ಅವಳು ಯೋಚಿಸಿ ಹಾಗೆಯೇ ಅವಳ ಕಣ್ಣು ಮುಚ್ಚುತ್ತಿತ್ತು. ಇದು ಹೇಗೆ ಸಾಧ್ಯ, ಆಗದು ಎಂದುಕೊಳ್ಳು ತ್ತಿದ್ದಳು.

ಬಹಳ ರಾತ್ರಿಯಾಗಿಹೋಗಿತ್ತು. "ನಿಮಗೆ ಥಂಡಿಯಿಂದಾಗಿ ಮೈ ಕೆಡಬಹುದು, ಹೋಗಿ ಮಲಗಿಕೊಳ್ಳಿ", ಎಂದು ಸೇಠಿ ಹೇಳಿದನು.

"...ನೀವು?"

"...ನನಗಿನ್ನೂ ನಿದ್ರೆ ಬರುತ್ತಿಲ್ಲ."

ಅವರು ರಾತ್ರಿಯನ್ನೆಲ್ಲ, ಅದೂ ತನ್ನ ಕಾರಣದಿಂದಾಗಿ, ಇಲ್ಲಿಯೇ ಕುಳಿತು ಕಳೆದಾರು ಎಂದು ಮಿಸೆಸ್ ಮದನ್‌ಳಿಗೆ ಗೊತ್ತಿತ್ತು. ...ನಿಜಕ್ಕೂ ಇವರಂತಹ ಸಜ್ಜನರಿದ್ದಾರೆ, ಎಂದು ಯೋಚಿಸಿದಳು.

ತನ್ನ ನೆಂಟಸ್ಥನದಲ್ಲಿ ಚೆನ್ನಾಗಿ ಕಲಿತಿದ್ದ ಒಬ್ಬ ಹುಡುಗಿಯ ವಿಚಾರವನ್ನು ತಿಳಿಸುತ್ತಾ ಮಿಸೆಸ್ ಮದನ್ "ನೀವೇಕೆ ಮದುವೆ ಮಾಡಿಕೊಳ್ಳಬಾರದು?" ಎಂದು ಕೇಳಿದಳು.

'ಆಯುಸ್ಸಿನ ನಲವತ್ತೆಂಟು ವರ್ಷಗಳು ಹೀಗೇ ಕಳೆದುಹೋಗಿವೆ, ಉಳಿದ ವರ್ಷ ಗಳೂ ಹೀಗೆಯೇ ಕಳೆದುಹೋಗುತ್ತವೆ" ಎಂದು ಉದ್ಗಾರ ತೆಗೆದ ಸೇಠಿ ಹೇಳಿದರು: "ಇನ್ನು ಮದುವೆಯ ಮಾತು, ಅದು ಟಾಸ್ ಹಾಕಿದ ಹಾಗೆ; ಈ ಮುಖವಾಗಿಯೂ ಬೀಳಬಹುದು, ಆ ಮುಖವಾಗಿಯೂ ಬೀಳಬಹುದು."

ಒಳಗೆ ಹೋಗಿ ಮಲಗಿಕೊಳ್ಳುವಂತೆ ಇನ್ನೊಮ್ಮೆ ಊರ್ಮಿಳಾಗೆ ಸೇಠಿ ಹೇಳಿದರು. "ಬೆಳದಿಂಗಳು ಚೆನ್ನಾಗಿದೆ, ಅಂಥ ಚಳಿಯೂ ಇಲ್ಲ", ಎಂದವಳು ಉತ್ತರ ಕೊಟ್ಟಳು. ಇಬ್ಬರಲ್ಲಿ ಒಬ್ಬರೂ ಒಳಗೆ ಹೋಗಲಿಲ್ಲ; ಇಬ್ಬರೂ ಅಲ್ಲಿಯೇ ಕುಳಿತಿದ್ದರು. ಸೇಠಿ ಏನಾದರೂ ಹೇಳುತ್ತಿದ್ದರು, ಊರ್ಮಿಳಾ ಕೇಳುತ್ತಿದ್ದಳು; ಆಗಾಗ ಊರ್ಮಿಳಾ ಕೂಡ ಏನಾದರೂ ಹೇಳುತ್ತಿದ್ದಳು, ಅವರು ಕೇಳುತ್ತಿದ್ದರು.

ನವಮಿಯ ಚಂದ್ರನು ಬೆಟ್ಟದ ಆ ಕಡೆಗೆ ಇಳಿದಿದ್ದನು. ಗಂಟೆ ಎಷ್ಟಾಗಿದೆಯೆಂದು ಗೊತ್ತಾಗುವಂತಿರಲಿಲ್ಲ. ಆದರೆ ನಡುರಾತ್ರಿಯಾಗಿಹೋಗಿತ್ತೆಂಬುದು ಸ್ಪಷ್ಟವಾಗಿತ್ತು. ಚಳಿಯಿಂದ ಇಬ್ಬರೂ ಕುಳಿತಲ್ಲೇ ನಡುಗುತ್ತಿದ್ದರು. ತನ್ನಿಂದಾಗಿ ಚಳಿಯಲ್ಲಿ ಈ ರೀತಿ ಅವರು ನಡುಗುವ ಸ್ಥಿತಿ ಬಂತಲ್ಲ ಎಂದು ಅವಳು ಯೋಚಿಸುತ್ತಿದ್ದಳು. ಕಾಯಿಲೆ ಬಿದ್ದರೇನು ಗತಿ? ಎದ್ದು ನಿಂತು ಅವಳು ಹೇಳಿದಳು; "ಬನ್ನಿ ಒಳಗೆ ಹೋಗೋಣ, ಮನೆಯಲ್ಲಾದರೆ ಒಂದೇ ಕೋಣೆಯಲ್ಲಿ ಎಲ್ಲರೂ ಮಲಗುವುದಿಲ್ಲವೆ?" ಇಬ್ಬರೂ ಒಳಗೆ ಹೋಗುತ್ತಿರುವಂತೆ ಸೇಠಿ ಆತ್ಮೀಯತೆಯಿಂದ ಊರ್ಮಿಳಾಳ ಬೆನ್ನಿನ ಮೇಲೆ ಕೈ ಇಟ್ಟು ನಡೆದರು. ಹೀಗೆ ಒಳಗೆ ಹೋದ ಇಬ್ಬರೂ ತಮ್ಮ ತಮ್ಮ ಹಾಸಿಗೆಯಲ್ಲಿ ಕಂಬಳಿ ಹೊದ್ದುಕೊಂಡು ಮಲಗಿಕೊಂಡರು.

೦೦ ೦೦ ೦೦ ೦೦

ಬೆಳಿಗ್ಗೆ ಅವರು ಎದ್ದಾಗ ಸಂಚಾರಕ್ಕೆ ರಸ್ತೆ ತೆರೆದಿರುವುದಾಗಿ ತಿಳಿಯಿತು. ಚಹಾ ತೆಗೆದುಕೊಂಡಾದ ಮೇಲೆಯೇ ಹೊರಡುವುದೆಂದು ತೀರ್ಮಾನಿಸಿದರು. "ರಾತ್ರಿ ನಿಮಗೆ ನಿದ್ದೆ ಬಂತೆ?" ಎಂದು ಕೇಳಿ ಸೇಠಿ ನಕ್ಕುಬಿಟ್ಟರು.

"ನಿಮಗಂತೂ ಖಂಡಿತಾ ಬಂದಿರಬೇಕು" ಎಂದು ಅವಳು ಮಗುಳ್ನಕ್ಕು ಹೇಳಿದಳು.

ಇಬ್ಬರಿಗೂ ನಿದ್ದೆ ಬಂದಿರಲಿಲ್ಲವೆಂಬುದು ಸ್ಪಷ್ಟವಾಗಿತ್ತು. ಆದರೆ ಇಬ್ಬರೂ ರಾತ್ರಿ ನಿದ್ದೆ ಮಾಡದೇ ಹೋಗಿದ್ದರೂ ತುಂಬಾ ಸ್ಫೂರ್ತಿಯಿಂದಲೇ ಇದ್ದರು.

"ಈ ಬಂಗಲೆ ಬಿಟ್ಟು ಹೋಗಲು ನಿಮಗೆ ಮನಸ್ಸಾಗುತ್ತಿಲ್ಲವೆಂದು ತೋರುತ್ತೆ!" ಎಂದು ಸೇಠಿ ಹೇಳಿದರು.

ಊರ್ಮಿಳಾ ಕರುಣಾಪೂರ್ಣ ದೃಷ್ಟಿಯಿಂದ ಸೇಠಿಯ ಕಡೆ ನೋಡಿ ತಲೆ ತಗ್ಗಿಸಿ ಕೊಂಡಳು. ಉತ್ತರ ಕೊಡಲು ಅವಳಲ್ಲಿ ಶಬ್ದಗಳೇ ಇರಲಿಲ್ಲ. ತನಗೊಬ್ಬ ಪತಿ ಇದ್ದ. ಆದರೆ ಅವಳು ಸೇಠಿಯಲ್ಲಿ ಕಂಡಿದ್ದ ಔದಾರ್ಯವನ್ನಾಗಲಿ ಸಂಯಮ ಹಾಗೂ ಅನುರಾಗಗಳ ನ್ನಾಗಲಿ ಅವನಲ್ಲಿ ಕಂಡಿರಲಿಲ್ಲ. ಅವಳ ಒಂದೊಂದು ರೋಮವೂ ಕೂಗಿ ಹೇಳುತ್ತಿತ್ತು: ನೀನು ನಿಜಕ್ಕೂ ದೊಡ್ಡ ಮನುಷ್ಯ, ತುಂಬಾ ದೊಡ್ಡ ಮನುಷ್ಯ. ಅವಳ ಬಾಯಿ ಕಟ್ಟಿಹೋಗಿತ್ತು. ಯಾವತ್ತೂ ಹೆಂಗಸಿನದೇ ಸೋಲು. ಆಕ್ರಮಣ ನಡೆದಾಗಲೂ ಅಷ್ಟೆ, ರಕ್ಷಣೆ ಪಡೆದಾಗಲೂ ಅಷ್ಟೆ.

ಅಲ್ಲಿಂದ ಹೊರಡುವ ಮೊದಲು ಸೇಠಿ ಹೇಳಿದರು: "ನಿಮ್ಮ ಆಕ್ಷೇಪ ಇಲ್ಲವಾದರೆ, ಈ ಬಂಗಲೆಯಲ್ಲಿ ನಿಮ್ಮ ಒಂದು ಫೋಟೋ ತೆಗೆದುಕೊಳ್ಳುತ್ತೇನೆ."

ಆಕ್ಷೇಪಣೆ? ಊರ್ಮಿಳಾ ಯಾತಕ್ಕೆ ಆಕ್ಷೇಪಣೆ ಮಾಡಿಯಾಳು? ಕೃತಜ್ಞತೆಯ ತುಂಬು ದೃಷ್ಟಿಯನ್ನಷ್ಟೇ ಸೇಠಿಯ ಕಡೆಗವಳು ಬೀರಿದಳು. ಊರ್ಮಿಳಾ ತಲೆಯನ್ನು ಓರೆಮಾಡಿಕೊಂಡು ಕಂಬಕ್ಕೆ ಒರಗಿ ನಿಂತಳು. ಸೇಠಿ ಅವಳ ಹಲವು ಫೋಟೋಗಳನ್ನು ತೆಗೆದುಕೊಂಡರು.

oo oo oo oo

ಎರಡು ತಿಂಗಳು ಕೇವಲ ಏಳು ದಿನಗಳಂತೆ ಕಳೆದುಹೋದುವು. ಆದರೆ ಈ ಅಲ್ಪಾವಧಿ ಯಲ್ಲಿ ಅದೆಷ್ಟು ಪರಿವರ್ತನೆ ನಡೆದುಹೋಯಿತು! ಮದನ್ ಮಿಲಿಟರಿ ಅಕೌಂಟೆಂಟ್ ಕಚೇರಿಯಲ್ಲಿ ತನ್ನ ನೂರು ರೂ. ಸಂಬಳದ ಕೆಲಸ ಬಿಟ್ಟು ಸೇಠಿ ಅಂಡ್ ಕಂಪನಿಯಲ್ಲಿ ಅಕೌಂಟೆಂಟನಾಗಿದ್ದ. ಅವನಿಗೆ ಈಗ ತಿಂಗಳಿಗೆ ಮುನ್ನೂರು ರೂ. ಸಂಬಳ ದೊರಕತೊಡ ಗಿದೆ. ಊರ್ಮಿಳಾ ಈಗ ತಿಂಗಳಿಗೆ ಅರವತ್ತು ರೂಪಾಯಿ ಸಂಬಳದ ಉಪಾಧ್ಯಾಯಿನಿ ಆಗಿರಲಿಲ್ಲ. ಈಗವಳು ತನ್ನ ಚಿಕ್ಕ ಬಂಗಲೆಯ ಎದುರು ದೊಡ್ಡ ಛತ್ರಿಯ ಕೆಳಗೆ ಬಿಸಿಲು ಕಾಯುತ್ತಾ ಕುಳಿತು ಬಲ್ಲೂಗಾಗಿ ಸ್ವೆಟರ್ ಹಾಕುತ್ತಿದ್ದಳು; ಗಾಂಡೆ ಜಿಲ್ಲೆಯ ಕಠ್ರಗಿದ್ದ ಆಯಾ ಒಬ್ಬಳು ಈಗ ಬಲ್ಲೂನನ್ನು ತಿರುಗಾಡಿಸಿಕೊಂಡು ಬರಲು ಹೋಗುತ್ತಿದ್ದಳು.

ಸೇಠಿ ಈಗ ಡಾಲ್‌ಹೌಸಿಗೆ ಆಗಿಂದಾಗ್ಗೆ ಬರುವ ಆವಶ್ಯಕತೆ ವಿಶೇಷವಾಗಿತ್ತು. ಕಾರಣ ಮಿಲಿಟರಿ ಕ್ಯಾಂಟಿನ್ ಕಟ್ಟುವ ಕಂಟ್ರಾಕ್ಟ್ ಅವನಿಗೇ ದೊರಕಿತ್ತು. ತನ್ನ ಸಂಬಂಧದ ಸೋದರಿಯನ್ನು ಮದುವೆಯಾಗಲು ಸೇಠಿ ಏಕೆ ಒಪ್ಪುತ್ತಿಲ್ಲ ಎಂಬ ವಿಚಾರ ಈಗ ಊರ್ಮಿಳಾಳನ್ನು ಕಾಡುತ್ತಿದೆ.

ಎಲ್ಲ ವಿಚಾರವೂ ಊರ್ಮಿಳಾಗೆ ತಿಳಿದಿತ್ತು. ಆದರೂ ಅವಳು ಇದ್ದ ವಿಚಾರ ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಹಿಂದಿನ ಸಲ ಸೇಠಿ ಅಲ್ಲಿಗೆ ಬಂದಿದ್ದಾಗ ಸ್ಪಷ್ಟವಾಗಿ ತಿಳಿಸಿದ್ದರು: ಹೊಟ್ಟೆ ತುಂಬಾ ಕುಂಬಳಕಾಯಿ ತಿಂದು ಜೀವಿಸುವ ಬದಲು, ಕಿತ್ತಳೆಹಣ್ಣಿನ ವಾಸನೆಯಿಂದಲೇ ಆನಂದಪಡುತ್ತಿರುವುದು ಹೆಚ್ಚು ಅಪೇಕ್ಷಣೀಯ." ಸ್ವೆಟರ್ ಹಾಕುತ್ತಾ ಅವಳು ಯೋಚಿಸಿದಾಗ ತನ್ನನ್ನು ಅವರು ಕಿತ್ತಳೆ ಹಣ್ಣಿಗೆ ಹೋಲಿಸಿ ಮಾತನಾಡಿದ್ದುದಾಗಿ ಅವಳಿಗೆ ಸ್ಪಷ್ಟವಾಗದಿರಲಿಲ್ಲ. ಸೇಠಿಯ ಒಂದೊಂದು ವ್ಯವಹಾರವೂ ಅವಳ ಕಣ್ಮುಂದೆ ಬರುತ್ತಿತ್ತು. ತಲೆಗೂದಲಲ್ಲಿ ಕೈ ಬೆರಳುಗಳನ್ನು ಆಡಿಸುತ್ತಾ ಕುಳಿತುಕೊಂಡಿರುವುದು ಅವರಿಗೆ ತುಂಬಾ ಪ್ರಿಯವಾಗಿತ್ತು. ಸೇಠಿ ತಂದುಕೊಡುವ ಬಟ್ಟೆಬರೆಗಳನ್ನು ಉಟ್ಟು ಅವರ ಮುಂದೆ ಕುಳಿತಿರಬೇಕು. ಅವರ ಒಂದು ಮಾತನ್ನೂ ಅವಳು ತಳ್ಳಿಹಾಕುವ ಹಾಗಿಲ್ಲ. ಸೇಠಿ ಅಪೇಕ್ಷಿಸಿದಾಗ ಅವರ ಅಪೇಕ್ಷೆಯಂತೆಯೇ ಅವಳು ತೋಳುಗಳಿಲ್ಲದ ಮತ್ತು ಬೆನ್ನು ಎದ್ದು ಕಾಣುವ ಬ್ಲೌಜನ್ನೇ ತೊಟ್ಟುಕೊಳ್ಳಬೇಕು. ಸೇಠಿಯ ಮನ ವೊಪ್ಪುವ ಉಡುಪನ್ನೇ ಧರಿಸುವುದು ಅವಳಿಗೂ ಸಂತೋಷವೇ! ಆದರೆ ಇದರಿಂದ ಅವಳ ವ್ಯಕ್ತಿತ್ವವೆಂಬುದೇನು ಉಳಿಯಿತು; ತನ್ನದೆಂಬ ಅಸ್ತಿತ್ವವೆಂಬುದೆಲ್ಲಿ ಉಳಿಯಿತು?

ಹೋದ ಬುಧವಾರ ರಾತ್ರಿ ಬಹಳ ಹೊತ್ತಿನ ವರೆಗೂ ಸೇಠಿ ಅಲ್ಲಿಯೇ ಇದ್ದಾಗ ಅವರೇನು ಹೇಳಿದರು?... ಅವರು ಅವಳ ಮೇಲೆ ಕೈಹಾಕಲಿಲ್ಲ, ಅವಳನ್ನು ಮುಟ್ಟಲಿಲ್ಲ, ದೂರದಲ್ಲಿಯೇ ಕುಳಿತು ಮಾತನಾಡಿದ್ದರು. ಅವರು ಹೇಳಿದ್ದರು: "ನಾನು ನಿನ್ನನ್ನು ಪ್ರೀತಿಸುತ್ತೇನೆ. ನನ್ನ ಪ್ರೇಮಕ್ಕೆ ಯಾವುದೇ ಖಚಿತ ಉದ್ದೇಶವಿಲ್ಲ. ನಿನ್ನನ್ನು ನೋಡಿದಾಗ ನನ್ನ ಹೃದಯದ ಬಯಕೆ ಪ್ರತಿಧ್ವನಿಸುತ್ತದೆ... ನಿನ್ನನ್ನು ನನ್ನವಳೆಂದು ಭಾವಿಸುವ ಮನಸ್ಸಾಗುತ್ತದೆ." ಇನ್ನು ಉಳಿದದ್ದಾದರೂ ಏನು?

ಊರ್ಮಿಳಾಳಿಗೆ ಇದು ಸಹಿಸದಾಯಿತು. ಅವಳು ಅಳತೊಡಗಿದ್ದಳು. "ಕ್ಷಮಿಸು", ಎಂದು ಹೇಳಿ ಅವರು ಎದ್ದು ಸುಮ್ಮನೆ ಹೊರಟು ಹೋಗಿದ್ದರು.

ಸ್ವೆಟರನ್ನು ಹೆಣೆಯುತ್ತಾ ಅದರ ಕಡೆ ಅವಳ ದೃಷ್ಟಿ ನಾಟಿದ್ದಾಗ ಅವಳ ಕಣ್ಮುಂದೆ ಹಿಂದಿನ ರಾತ್ರಿಯ ಇಡೀ ದೃಶ್ಯ ಹಾದು ಬಂದಿತ್ತು. ರಾತ್ರಿ ಅವರು ಆ ರೀತಿ ಮಾಡಿದ್ದು ಸರಿಯೆ?

ಯಾವ ಹಂಗನ್ನೂ ತೋರಿಸಿಕೊಳ್ಳದೆ ತನ್ನ ಜೀವಮಾನದ ಎಲ್ಲ ಐಶ್ವರ್ಯವನ್ನು ಅವಳ ಸುಖಕ್ಕಾಗಿ ಧಾರೆಯೆರೆದಿದ್ದ ಅವರು ತಮಗಾಗಿ ಏನನ್ನೂ ಅಪೇಕ್ಷಿಸಿರಲಿಲ್ಲ; ಅವರ ಮಾತು ಏನೇ ಇರಲಿ, ಅದು ಬೇರೆ... ಅವರನ್ನು ನಿರಾಶಗೊಳಿಸುವುದಾದರೂ..."

ತನ್ನ ಎಲ್ಲ ಐಶ್ವರ್ಯವನ್ನು ಬಲ್ಲೂ ಹೆಸರಿಗೆ ಬರೆದುಬಿಡಲು ಅವರು ಸಿದ್ಧ; ಆದರೆ ಬಲ್ಲೂ ಈ ಆಸ್ತಿಯಲ್ಲಿ ಬೇರೆ ಯಾರೂ ಭಾಗಸ್ಥರಾಗುವುದು ಅವರಿಗೆ ಬೇಕಾಗಿರಲಿಲ್ಲ. ಇದರ ಅರ್ಥ ಸ್ಪಷ್ಟವಾಗಿತ್ತು. ಅವರು ಅವಳನ್ನು ಮುಟ್ಟಲಿ ಬಿಡಲಿ. ಆ ಮಾತು ಬೇರೆ. ಅವರು ಆ ನಿರ್ಬಂಧ ಹಾಕಿ ಅವಳ ಗರ್ಭಕೋಶಕ್ಕೆ ಬೀಗ ಹಾಕಿ ಅವಳ ಮೇಲೆ ತನ್ನ ಸಂಪೂರ್ಣ ಅಧಿಕಾರವನ್ನು ಸ್ಥಾಪಿಸಿಕೊಂಡಿದ್ದರು. ಸೇಠಿಯ ದೃಷ್ಟಿಯಲ್ಲಿ ಬಲ್ಲೂ ಕೂಡ ಅವರವನೇ ಆಗಿದ್ದ, ಮದನ್ ಕೂಡ. ತಾನಂತೂ ಅವರಿಗಿಂತ ಮೊದಲೇ ಅವರವಳಾಗಿದ್ದಳು.

ಸೇಠಿ ಅದೆಷ್ಟು ಸಂಯಮಿ, ಅದೆಷ್ಟು ಉದಾರ ಸ್ವಭಾವದವರಾಗಿದ್ದರು, ಅವರ ಹೃದಯ ಅದೆಷ್ಟು ವಿಶಾಲ! ತನ್ನದೆಲ್ಲವನ್ನೂ ಅವರು ಹೇಗೆ ಕೊಟ್ಟುಬಿಟ್ಟಿದ್ದರು!... ಊರ್ಮಿಳಾ ಮಾತ್ರ ಅವರಿಗೆ ಏನನ್ನೂ ಕೊಟ್ಟಿರಲಿಲ್ಲ... ಕೊಡುವ ಅವಕಾಶವೇ ಬಂದಿರಲಿಲ್ಲ. ಸೇಠಿ ತನ್ನ ಸ್ವಪ್ನ ಸಾಮ್ರಾಜ್ಯದಲ್ಲಿಯೇ ಎಲ್ಲ ವಸ್ತುಗಳ ಮೇಲೆ ಅಧಿಕಾರವನ್ನು ಸ್ಥಾಪಿಸಿಕೊಂಡುಬಿಟ್ಟಿದ್ದರು. ಅದೂ ಅದೆಷ್ಟು ಸರಳವಾಗಿ! ಎಲ್ಲ ವಸ್ತುಗಳ ಬೀಗದ ಕೈ ಅವರ ಬಳಿಯೇ ಇದ್ದಂತೆ, ಅವರದನ್ನು ಸುಲಭವಾಗಿ ತನ್ನ ಜೇಬಿನಲ್ಲಿ ಬಿಟ್ಟುಕೊಂಡಿದ್ದರು. ಅವರ ಜಾಲದಿಂದ ಹೊರಗೆ ಹೋಗಲು ಊರ್ಮಿಳಾಳಿಗೆ ದಾರಿಯೇ ಇರಲಿಲ್ಲ; ಬಲ್ಲೂವಿಗೂ ಅಷ್ಟೇ. ಮದನ್‌ಗೂ ಅಷ್ಟೇ. ಅವರೆಲ್ಲರೂ ತಮ್ಮನ್ನು ಅವರಿಗೆ ಮಾರಿಕೊಂಡಂತಾಗಿತ್ತು.

...ನಾಳೆ ಸೇಠಿ ಮತ್ತೆ ಬಂದು ಅದೇ ರೀತಿ ಮಾತನಾಡಿದರೆ? ಬಂದು ಕೂತು... "ನಾನು ನಿನ್ನನ್ನು ಪ್ರೀತಿಸುತ್ತೇನೆ" ಎಂದು ಹೇಳಿದರೆ ಈಗಲೂ ಅವಳು ನಿರಾಕರಿಸಲು ಸಮರ್ಥಳೇ? ಒಮ್ಮೆ ನಿರಾಕರಿಸಿ ಅವಳು ಪಶ್ಚಾತ್ತಾಪಪಟ್ಟುಕೊಂಡಿದ್ದಾಗಿದೆ.

ಅದೇನು ಮಹಾ, ಮತ್ತೊಮ್ಮೆ ಮಾತು ಬಂದರೂ ನಿರಾಕರಿಸಿದರೆ ಆಯಿತು ಎಂದುಕೊಂಡಳು. ಆದರೆ ತನಗೆ ಹೀಗೆ ನಿರಾಕರಿಸಲು ಇರುವ ಹಕ್ಕಾದರೂ ಏನು? ಎಲ್ಲರಿಗೂ ಇರಬಹುದಾದ ಆ ಹಕ್ಕು ಅವಳಿಗೆ ಈಗ ಇರಲಿಲ್ಲ. ಅವಳ ಆತ್ಮವನ್ನವಳು ಮಾರಿಕೊಂಡಿದ್ದಳು... ವೇಶ್ಯೆಯರ ಜೀವನವಾದರೂ ಹೀಗೆಯೇ ಅಲ್ಲವೇ?" ಊರ್ಮಿಳಾಳ ಕಣ್ಣುಗಳಿಂದ ಪಟಪಟನೆ ನೀರು ಹರಿಯತೊಡಗಿತು.

ಹಳೆಯ ನೆನಪುಗಳೂ ಜೊತೆಗೆ ಬರತೊಡಗಿದುವು. ಎರಡು ತಿಂಗಳ ಹಿಂದೆ ಎರಡು ಚಿಕ್ಕ ಕೊಠಡಿಗಳ ಮನೆಯಲ್ಲಿ ವಾಸಮಾಡುತ್ತಿದ್ದಾಗ ಊರ್ಮಿಳಾ ಸ್ಕೂಲಿನಿಂದ ಆಯಾಸಗೊಂಡು ಬಂದು ಮಗುವನ್ನೆತ್ತಿಕೊಂಡು ನೌಕರಳ ದಡ್ಡತನಕ್ಕೆ ಅವಳ ಮೇಲೆ ಸಿಡುಕಾಡುತ್ತಿದ್ದಳು. ಅವಳ ಎಷ್ಟೋ ಆಸೆಗಳು ಈಡೇರದೆ ಹೋಗುತ್ತಿದ್ದುವು. ಆದರೆ ಆ ಸಮಯದಲ್ಲಿ ಯಾವುದನ್ನೇ ಆಗಲಿ ಒಪ್ಪುವ, ಬಿಡುವ ಸ್ವಾತಂತ್ರ್ಯ ಅವಳಿಗೆ ಇತ್ತು. ತನ್ನ ಇಚ್ಛೆಯಂತೆ ಹೇಗೆಂದರೆ ಹಾಗೆ ಅವಳು ನಡೆದುಕೊಳ್ಳಬಹುದಾಗಿತ್ತು... ಸಿಗರೇಟ್ ಕಂಪೆನಿಯ ನಗುಮುಖದ ಆ ಬಾಬು ಹೇಗೆ ಅವಳ ಹಿಂದೆ ಬಿದ್ದಿದ್ದ. ಅವನು ಅದೆಷ್ಟು ಸಜ್ಜನನಾಗಿದ್ದ. ಆದರೆ ಅವನನ್ನು ಅವಳು ಸದಾ ನಿರಾಕರಿಸಿದ್ದಳು.

ಹೀಗೆ ಯೋಚಿಸುತ್ತಿದ್ದಂತೆ ಅವಳಿಗನ್ನಿಸಿತು. ಇವೊತ್ತು ಸೇಠಿ ಬಂದರೂ ಬರಬಹುದು. ಅಳು ಒತ್ತಿ ಬರುತ್ತಿದ್ದ ಅವಳ ಕಣ್ಣುಗಳನ್ನು ಬಾಗಿಲ ಕಡೆಗೆ ಹೊರಳಿಸಿ ನೋಡಿದಳು. ಅವಳ ಕಣ್ಣುಗಳಲ್ಲಿ ಆತುರವಿರಲಿಲ್ಲ, ಕಾತರತೆ ಇತ್ತು.

# ಗದಲ್

ಹೊರಗಡೆ ಗದ್ದಲ ಆರಂಭವಾಯಿತು. ಯಾರೋ ಅದು? — ಡಾಂಡಿ ಕೂಗು ಹಾಕಿದ. ಯಾವ ಉತ್ತರವೂ ಬರಲಿಲ್ಲ. ಕೇಳಿಸಿತು, ಅಷ್ಟೆ — ಕೊಲೆಪಾತಕಿ, ನಿನ್ನ ಮುಗಿಸಿ ಬಿಡ್ತೀನಿ ನೋಡು.

ಹೆಂಗಸಿನ ಧ್ವನಿ ಕೇಳಿತು — ಮುಗಿಸಿ ನೋಡು ಮಾಡ್ತೀನಿ, ದೆವ್ವ ಆಗ ನಿನ್ನ ಮನೆ ತೊಳೀದಿದ್ರೆ ಕೇಳುವಂತೆ, ಷಂಡ ನನ್ಮಗನೇ.

ಇನ್ನು ಕುಳಿತಿರಲು ಡಾಂಡಿಯಿಂದ ಆಗಲಿಲ್ಲ. ಹೊರಗೆ ಬಂದ.

...ಏನೋ ಅದು, ಏನು ಮಾಡ್ತಿದ್ದೀಯೋ ನಿಹಾಲ್? ಸ್ವಲ್ಪ ಮುಂದೆ ಬಂದು ಕೂಗು ಹಾಕಿದ — ಏನೇ ಆಗಲಿ, ನಿನ್ನ ಅವ್ವ ಕಣೋ.

— ನನ್ನವ್ವ! ಎಂದು ಹೇಳಿಕೊಂಡು ನಿಹಾಲ್ ಹಿಂದಕ್ಕೆ ಸರಿದು ನಿಂತ.

— ನೀನು ಕೈಯೆತ್ತಿ ನೋಡೋ ಏನು ಮಾಡ್ತೀನಿ! ಹೆಂಗಸು ಕೆಂಡ ಕಾರಿದಳು. ಭೂತ ಬಿಡಿಸ್ಬಿಟ್ಟೇನು, ಏನಂದ್ಕೊಂಡೀ — ಆಮೇಲೆ ಜನುಮ ಜನುಮಕ್ಕೂ ಮರೀಬಾರದು, ತಿಳ್ಕೋ, ನಾನೇನೂ ನಿನ್‌ಕೂಳಿಗೆ ಬಿದ್ದಿಲ್ಲ.

— ಅತ್ತಿಗೆ! ...ಡಾಂಡಿ ಹೇಳಿದ... ಏನ್ ಒದರ್ತಿದೀಯಾ... ಹುಚ್ಚಿದ್ದವಳಂತೆ? ಸಮಾಧಾನ ತಂದುಕೊ.

ಅವನು ಮುಂದೆ ಬಂದು ಉಳಿದವರ ಕಡೆಗೆ ತಿರುಗಿ ಹೇಳಿದ: ನೀವು ಹೋಗಿ ಈಗ, ನೀವೆಲ್ಲರೂ ಹೊರಟ್ಹೋಗಿ.

ನಿಹಾಲ್ ಹೊರಟುಹೋದ. ಅವನ ಜೊತೆಗಿದ್ದ ಇತರರೂ ತಮ್ಮ ತಮ್ಮ ದಾರಿ ಹಿಡಿದು ಹೋದರು.

ಡಾಂಡಿ ಮನೆಯ ಛಾವಣಿಯ ಕೆಳಗೆ ಇದ್ದ ಕಂಭವನ್ನು ಹಿಡಿದು ನಿಂತಿದ್ದ. ಹೆಂಗಸು ಅಲ್ಲಿಯೇ ಖಿನ್ನಳಾಗಿ ಕುಳಿತುಕೊಂಡಿದ್ದಳು. ಅವಳ ಕಣ್ಣುಗಳು ಬೆಂಕಿಯಾಗಿದ್ದುವು.

ಅವಳು ಹೇಳಿದಳು — ನನಗ್ಗೊತ್ತೈತೆ. ನಿಹಾಲ್‌ನಿಗೆ ಅಷ್ಟು ಧೈರ್ಯ ಎಲ್ಲಿ ಬರಬೇಕು? ನೀನು ಎತ್ತಿಕಟ್ಟಿದ್ದೀ ಅವನ್ನ.

— ಹೌದು. ಗದಲ್! — ಅವಳ ಮೈದುನ ಡಾಂಡಿ ಹೇಳಿದ — ನಾನೇ ಇದೆಲ್ಲ ಮಾಡಿದೆ.

ಗದಲ್ ಸಿಡಿದೆದ್ದು ಕೇಳಿದಳು — ಯಾಕೆ? ನಿನಗೇನು ಅದರ ಜರೂರತ್ತು ಇತ್ತು? ಡಾಂಡಿ ಉತ್ತರ ಕೊಡಲಾರದೆ ಕೆಳಗಿಂದ ಮೇಲಿನ ವರೆಗೆ ಉದ್ವೇಗಗೊಂಡ. ಐವತ್ತು ವರ್ಷ ವಯಸ್ಸಿನ ಎತ್ತರದ ಆಳು. ಖಾರಿ ಗುಡ್ಡಗಾಡಿನ ಗೊಲ್ಲರ ಜಾತಿಗೆ ಸೇರಿದ ಅವನು ನಿಂತನೆಂದರೆ ಅಷ್ಟು ಎತ್ತರಕ್ಕೆ ಸೂರು ಮುಟ್ಟುವಂತೆ ಕಾಣುತ್ತಿದ್ದ. ಅವನ ಅಗಲವಾದ

ಭುಜಗಳ ಮೂಳೆಗಳ ಮೇಲೆ ದೀಪದ ಪ್ರಕಾಶ ಬೀಳುತ್ತಿತ್ತು. ಅವನ ಮೀಸೆ ಕಪ್ಪು ಬಿಳುಪು ಕೂದಲುಗಳಿಂದ ಕೂಡಿತ್ತು. ಅವನು ಒಂದು ಮೇಲುಕೋಟನ್ನುಟ್ಟಿದ್ದ. ಅವನು ಉಟ್ಟಿದ್ದ ಪಂಚೆ ಮೊಣಕಾಲಿನಷ್ಟಕ್ಕೇ ಇದ್ದು ಮುಂಡಿಯ ಕೆಳಭಾಗವನ್ನು ಮುಟ್ಟಿ ಮುಟ್ಟಿ ಮೇಲಕ್ಕೆ ಹಾರುತ್ತಿತ್ತು. ಅವನ ಕೈಗಳು ಒರಟು ಒರಟಾಗಿದ್ದುವು. ಆ ಸಮಯ ದಲ್ಲಿ ಅವನು ಹಾಗೆಯೇ ನಿಂತುಬಿಟ್ಟಿದ್ದನು.

ಹೆಂಗಸು ಎದ್ದಳು. ಅವಳ ವಯಸ್ಸು ಸುಮಾರು ನಲವತ್ತೈದು ಇರಬಹುದು. ನೋಡುವುದಕ್ಕೆ ಬೆಳ್ಳಗಿದ್ದರೂ ವಯಸ್ಸಿನ ಕಾರಣದಿಂದಾಗಿ ಅದು ಮಲಿನವಾಗಿತ್ತು. ಅವಳನ್ನು ನೋಡಿದರೆ ಹಿಂದೆ ಅವಳು ಸುಂದರಿಯಾಗಿದ್ದಳು ಎಂಬುದು ಗೊತ್ತಾಗು ತ್ತದೆ. ಇಡೀ ಜೀವನದಲ್ಲಿ ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದ್ದುದರ ಪರಿಣಾಮವಾಗಿ ಅವಳ ಅಂಗಾಂಗಗಳು ಶಿಥಿಲಗೊಂಡಿದ್ದುವು. ಆದರೂ ಈಗ ಕೂಡ ಅವಳು ಮೋಹಕ ಳಾಗಿಯೇ ಇದ್ದಳು.

– ನಿನಗೆ ನಾಚಿಕೆಯಾಗುವುದಿಲ್ಲವೇ ಗದಲ್ ? – ಡಾಂಡಿ ಕೇಳಿದ.

– ಯಾಕೆ, ನಾಚಿಕೆ ಯಾಕಾಗಬೇಕು ? – ಗದಲ್ ಕೇಳಿದಳು.

ಕ್ಷಣಕಾಲ ಡಾಂಡಿಗೆ ಏನೂ ತೋಚದಂತಾಯಿತು. ಒಳಗಿನ ಅಂಗಳದಿಂದ ಒಂದು ಧ್ವನಿ ಬಂತು – ಅವಳಿಗೆ ಯಾಕೆ ನಾಚಿಕೆಯಾದೀತು ? ಮರ್ಯಾದೆ ಅನ್ನೋದು ಒಂದಿಷ್ಟು ಉಳಿಕೊಂಡಿದ್ದರೆ ತಾನೆ ನಾಚಿಕೆ – ಹೇಸಿಗೆ ಅನ್ನೋದು.

ನಿಹಾಲ್ ! – ಡಾಂಡಿ ಕೂಗು ಹಾಕಿದ – ನೀನು ಸುಮ್ಮನಿರು.

ಒಳಗಿನಿಂದ ಬೇರೆ ಯಾವ ಮಾತೂ ಮತ್ತೆ ಬರಲಿಲ್ಲ.

ಗದಲ್ ಕೇಳಿದಳು – "ನನ್ನನ್ನೇಕೆ ಬರಹೇಳಿದೆ ನೀನು ?"

ಡಾಂಡಿ ಈ ಮಾತಿಗೆ ಉತ್ತರ ಕೊಡಲಿಲ್ಲ. ಕೇಳಿದ – ರೊಟ್ಟಿ ಉಂಡ್ಯೇನು ?

– ಎಲ್ಲಿಂತು ? ...ಗದಲ್ ಹೇಳಿದಳು... ಯಾವಾಗ ಉಣ್ಬೇಕಿತ್ತು ? ಮುಂಡೇ ಮಕ್ಳು ಹಾದೀಲೇ ಸಿಕ್ಬಿಟ್ರು, ಹೊಲಕ್ಹೋಗ್ ವಾಪಸ್ ಬರ್ತಾ ಹಂಗೇ ಪುಳ್ಳೆ ಆರಿಸ್ ಕೊಂಡು ಬರ್ತಿದ್ದೆ."

ಡಾಂಡಿ ಕೂಗಿ ಹೇಳಿದ – ನಿಹಾಲ್, ನಿನ್ ಎಂಡ್ತೀಗೆ ಹೇಳು ಅವಳ ಅತ್ತೇಗೆ ರೊಟ್ಟಿ ಕೊಡಲಿ.

ಒಳಗಿನಿಂದ ಯಾವಳೋ ಹೆಂಗಸು ಕುಹಕದ ಮಾತನ್ನಾಡಿದಳು – ಅರೇ, ಈಗ ಲೋಹಾರರ ಮನೆ ಯಜಮಾನಿತಿಯಾಗಿ ಬಂದಿರೋಳು, ನಮ್ಮಂಥ ಬಡ ಖಾರಿ ಜನರ ಮನೆಯ ರೊಟ್ಟಿ ತಿಂತಾಳೇನು ? – ಅವಳ ಆ ಮಾತಿಗೆ ಮತ್ತೆ ಕೆಲವು ಹೆಂಗಸರು ಪುಷ್ಟಿ ಕೊಟ್ಟರು.

ನಿಹಾಲ್ ಅರಚಿದ – ಕೇಳ್ಕೋ ಮಹಾರಾಯಿತಿ, ಜನ ನಗೋ ಹಾಗಾಗಿದೆ. ಖಾರಿಗಳು ಇನ್ನು ತಲೆ ಎತ್ತಿಕೊಂಡು ತಿರುಗೋ ಹಾಗಿಲ್ಲ, ಹಾಗ್ಮಾಡಿದೆ.

(೨)

ಗುನ್ನಾ ಸತ್ತಾಗ ಅವನಿಗೆ ಐವತ್ತೈದು ವರ್ಷ. ಅವನು ಸತ್ತು ಗದಲ್ ವಿಧವೆಯಾದಳು. ನಿಹಾಲನ ವಯಸ್ಸು ಆಗ ಹತ್ತಿರ ಹತ್ತಿರ ಮೂವತ್ತು. ಅವಳ ಸೊಸೆ ದುಲ್ಲೋನ ದೊಡ್ಡ ಮಗನಿಗೆ ಏಳು ವರ್ಷ, ಎರಡನೆಯವನಿಗೆ ನಾಲ್ಕು ವರ್ಷ, ಮೂರನೆಯದು ಹೆಣ್ಣು – ಅವಳಿನ್ನೂ ಕೈಗೂಸು. ನಿಹಾಲನಿಗೆ ಇಬ್ಬರು ಸೋದರಿಯರು – ಚಂಪಾ ಮತ್ತು ಚಮೇಲಿ. ಇಬ್ಬರಿಗೂ ಕ್ರಮವಾಗಿ ಝೂಜ್ ಮತ್ತು ಬಿಸ್ವಾರಾ – ಈ ಗ್ರಾಮಗಳಲ್ಲಿ ಮದುವೆಯಾಗಿತ್ತು. ಅವರಿಗೂ ಈಗ ಮಕ್ಕಳಾಗಿದ್ದು ಅವು ಅಂಬೆಗಾಲು ಹಾಕಿ ಮಣ್ಣಿನಲ್ಲಿ ಆಟವಾಡುತ್ತಿವೆ. ಕೊನೆಯ ಹುಡುಗ ನಾರಾಯಣ ಈಗ ಇಪ್ಪತ್ತೆರಡು ವರ್ಷ ವಯಸ್ಸಿನವನಾಗಿದ್ದಾನೆ. ಅವನ ಹೆಂಡತಿ ಈಗ ಎರಡನೆಯ ಮಗುವಿನ ತಾಯಿ ಆಗುವುದರಲ್ಲಿದ್ದಾಳೆ. ಇಷ್ಟು ದೊಡ್ಡ ಪರಿವಾರ ಬಿಟ್ಟು ಈಗ ಗದಲ್ ಹೊರಟು ಹೋಗಿದ್ದಾಳೆ. ಹೋಗಿ ಮೂವತ್ತೆರಡು ವರ್ಷ ವಯಸ್ಸಿನ ಒಬ್ಬ ಲೋಹಾರಾ ಬುಡಕಟ್ಟಿಗೆ ಸೇರಿದ ಗೊಲ್ಲರವನ ಮನೆಯಲ್ಲಿದ್ದಾಳೆ.

ಡಾಂಡಿ ಅವಳ ಪತಿ ಗುನ್ನಾನ ಸ್ವಂತ ತಮ್ಮ. ಅವನಿಗೂ ಹೆಂಡತಿ ಇದ್ದಳು. ಮಕ್ಕಳೂ ಆದರು. ಆದರೆ ಎಲ್ಲ ಸತ್ತುಹೋದರು. ಒಬ್ಬಂಟಿಗನಾಗಿ ಉಳಿದುಹೋದ. ಗುನ್ನಾ ಎಷ್ಟು ಹೇಳಿದರೂ ಕೇಳಲಿಲ್ಲ. ಮದುವೆ ಆಗಲಿಲ್ಲ. ಒಂಟಿಯಾಗಿಯೇ ಇದ್ದ. ಗದಲ್ ಮಾಡಿ ಹಾಕಿದ್ದನ್ನೇ ತಿಂದು ಹೊಟ್ಟೆ ತುಂಬಿಕೊಳ್ಳುತ್ತಿದ್ದ. ಸಂಪಾದನೆ ಮಾಡಿ ತರುತ್ತಿದ್ದ. ತಂದಿದ್ದನ್ನು ಅವಳ ಕೈಗೇ ಹಾಕುತ್ತಿದ್ದ. ಅವಳ ಮಕ್ಕಳನ್ನೇ ತನ್ನ ಮಕ್ಕಳೆಂದು ತಿಳಿದಿದ್ದ. ತನ್ನ ಚಿಕ್ಕಪ್ಪ ಎಂದರೆ ನಿಹಾಲನಿಗೆ ಪ್ರಾಣ. ಖಾರಿ ಬುಡಕಟ್ಟಿನ ಗೊಲ್ಲರು ಲೋಹಾರರಿಗಿಂತ ಉಚ್ಚ ವರ್ಗಕ್ಕೆ ಸೇರಿದವರೆಂಬ ನಂಬಿಕೆ ಬೇರೆ.

ಗದಲ್ ಯಾರ ಮನೆಗೆ ಹೋಗಿ ಸೇರಿಕೊಂಡಿದ್ದಳೋ ಅವನ ಸಂಸಾರ ಇತ್ತು. ಅವನು ಗದಲ್‌ನ ವಯಸ್ಸಿನ ಕಡೆ ಗಮನ ಕೊಡಲಿಲ್ಲ. ಖಾರಿ ಬುಡಕಟ್ಟಿಗೆ ಸೇರಿದ ಹೆಂಗಸು, ಬಿದ್ದಿರುತ್ತಾಳೆ. ಒಲೆಮುಂದೆ ಕುಳಿತುಕೊಳ್ಳಲು ಒಬ್ಬಳು ಆದ ಹಾಗೂ ಆಯಿತು, ಎಂದಿಷ್ಟೇ ಯೋಚಿಸಿದ.

ಇವೊತ್ತು ಬೆಳಿಗ್ಗೆ ತಾನೇ ಗದಲ್ ಅವನ ಮನೆಗೆ ಹೋಗಿದ್ದಳು. ಸಂಜೆಯ ಹೊತ್ತಿಗೆ ಅವಳ ಮಕ್ಕಳು ಅವಳನ್ನು ಹಿಡಿದು ತಂದಿದ್ದರು. ಅವಳ ಹೊಸ ಪತಿ ಮೋನಿಗೆ ಅದು ಇನ್ನೂ ಗೊತ್ತಾಗಿಯೇ ಇರಲಾರದು. ಮೋನಿಯ ಹೆಂಡತಿ ಸತ್ತಿದ್ದಳು. ಮಜ್ಜಿಗೆ ಕಡೆಯಲು ಕುಳಿತಾಗ ತನ್ನ ಎರಡೂ ಕಾಲುಗಳನ್ನು ಪಸರಿಸಿಕೊಂಡು, ಕುಳಿತಲ್ಲೇ ತುಂಡು ತುಂಡಾಗುತ್ತಿದ್ದ ಅವನ ಅತ್ತಿಗೆ ದುಲ್ಲೋ ಕಿವಿಗೆ ಈ ಸಮಾಚಾರ ಬಿದ್ದರೆ ಅವಳೇನು ಹೇಳಬಹುದು ?

ಗದಲ್ ಮನಸ್ಸು ತಿರಸ್ಕಾರದಿಂದ ಕೂಡಿತ್ತು.

(೩)

ಅರ್ಧ ರಾತ್ರಿಯಾಗಿಹೋಗಿತ್ತು. ಗದಲ್ ಅಲ್ಲಿಯೇ ಬಿದ್ದುಕೊಂಡಿದ್ದಳು. ಡಾಂಡಿ ಅಲ್ಲಿಯೇ ಕುಳಿತು ಚಿಲಮು ಎಳೆಯುತ್ತಿದ್ದ.

ಸುತ್ತಲೂ ನಿಶ್ಶಬ್ದ. ಡಾಂಡಿ ನಿಧಾನವಾಗಿ ಹೇಳಿದ – ಗದಲ್!

– ಏನು? – ಗದಲ್ ಕಾತರದಿಂದ ಕೇಳಿದಳು.

– ನೀನು ಹೊರಟುಹೋಗ್ತೀಯೇನು?

ಗದಲ್ ಏನೂ ಹೇಳಲಿಲ್ಲ. ಡಾಂಡಿ ಮತ್ತೆ ಹೇಳಿದ – ಎಲ್ಲರೂ ಒಂದಲ್ಲ ಒಂದು ದಿನ ಹೋಗಬೇಕು. ಒಂದು ದಿನ ನಿನ್ನ ವಾರಗಿತ್ತಿ ಹೋದಳು. ಆಮೇಲೆ ಒಬ್ಬೊಬ್ಬರಾಗಿ ಅವಳ ಮಕ್ಕಳೆಲ್ಲ ಹೋದರು. ನನ್ನ ಅಣ್ಣನೂ ಹೋದ. ಆದರೆ ನೀನು ಹೋಗಿರುವ ಹಾಗೆ ಯಾರೂ ಹೋಗಿಲ್ಲ. ಜನ ನಗುತ್ತಾರೆ, ಅದಾದರೂ ನಿನಗೆ ಗೊತ್ತೆ?

ಗದಲ್ ಪ್ರತಿಭಟಿಸಿದಳು – ಜನ ನಗುತ್ತಾರೆಂದು ನಾನು ಹೆದರುವುದಿಲ್ಲ, ತಿಳೀ ತೇನು? ನಾನು ಹದಿನಾಲ್ಕು ವರ್ಷದವಳಿದ್ದಾಗ ನಿಮ್ಮ ಅಣ್ಣ ಬಂದು ನೋಡಿಕೊಂಡು ಹೋಗಿದ್ದ. ನೀನು ಅವನ ಜೊತೇಲಿ ಆಗ ಬಂದಿದ್ದೆ – ನನ್ನನ್ನು ಕರೆದುಕೊಂಡು ಹೋಗ ಲಿಕ್ಕೆ. ಆಗ ನಾನು ಬಂದಿದ್ದೆನೋ ಇಲ್ಲವೋ? ಗದಲ್‌ನ ವಯಸ್ಸು ಕಳೆಯಿತು, ಈಗ ಅವಳಿಗೆ ಪತಿಯ ಅಗತ್ಯವೇನು ಎಂದು ನೀನು ತಿಳಿದಿರಬೇಕು. ಆದರೆ ನಾನು ಏಕೆ ಹೋದೆ, ಎಂಬುದು ಗೊತ್ತೇ ನಿನಗೆ?

– ಗೊತ್ತಿಲ್ಲ.

–ಗದಲ್ ಹೊರಟುಹೋದಳು. ಈಗ ರೊಟ್ಟಿ ಮಾಡಿ ಹಾಕುವವರು ಯಾರು ಎಂದು ನೀನು ಯೋಚಿಸಿರಬೇಕು. ಸೊಸೆಯರು ನಿನ್ನ ಚಾಕರಿ ಮಾಡ್ತಾರೆ ಅಂತ ತಿಳ್ಕೊಂಡೇನು ನೀನು? ನೀನು ನಿನ್ನ ಅಣ್ಣನನ್ನು ನೋಡಿಕೊಂಡೆ, ನನ್ನನ್ನು ನೋಡಿ ಕೊಂಡೆ, ನಾನೂ ನಿನ್ನನ್ನು ನನ್ನವನೆಂದೇ ತಿಳಿದೆ. ಸುಳ್ಳೆಂದು ಹೇಳುತ್ತೀಯಾ, ಕೇಳು.

– ಇಲ್ಲ ಗದಲ್, ನಾನು ಯಾವತ್ತು ಆ ರೀತಿ ಹೇಳಿದೆ?

– ನೋಡು ಇಷ್ಟೇ ಮಾತು. ನನ್ನವರೆಂದು ಇಲ್ಲಿ ಯಾರೂ ಇಲ್ಲ. ನನ್ನ ಗಂಡ ಅಂತೂ ಸತ್ತುಹೋದ. ಅವನು ಇರುವ ತನಕ ನಾನು ಅವನ ಚಾಕರಿ ಮಾಡಿದೆ. ಅವನಿಗೆ ಸಂಬಂಧ ಪಟ್ಟವರೆಲ್ಲರ ಚಾಕರಿ ಮಾಡಿದೆ. ಆದರೆ ಈಗ ನನಗೆ ಮಾಲಿಕರೆನ್ನುವವರೇ ಇಲ್ಲ. ಯಾಕೆ ಒದ್ದಾಡಲಿ? ಈ ಮಕ್ಕಳು, ಈ ಸೊಸೆಯರು. ನಾನು ಇವರ ಜೀತಕ್ಕಿಲ್ಲ – ಆ ಮಾತು ಆಗೋಲ್ಲ, ತಿಳೀತಾ?

– ಹೀಗ್ಯಾಕೆ ಹೇಳ್ತೀಯೇ ಹುಚ್ಚಿ? ಇವರೆಲ್ಲ ನಿನ್ನ ಮಕ್ಕಳೇ ಅಲ್ಲವೇ? ಬೆಕ್ಕು ತನ್ನ ಮಕ್ಕಳಿಗಾಗಿ ಹತ್ತು ಮನೆ ಸುತ್ತಬಹುದಂತೆ, ನೀನು ಮನುಷ್ಯನ ಜನ್ಮದಲ್ಲಿ ಹುಟ್ಟಿ ಹೀಗೆ ಮಾಡೋದಾ? ನಿನ್ನ ಮಮತೆ ಅನ್ನೋದು ಎಲ್ಲಿ ಹೋಯಿತು?

– ಅದು ಸರಿ, ನಿನ್ನ ಬುದ್ಧಿ ಎಲ್ಲಿ ಹೋಗಿತ್ತು. ಬೇರೆ ಮದುವೆ ಮಾಡಿಕೊಳ್ಳದೆ ಇದ್ದು ಬಿಟ್ಟೆಲ್ಲ?

– ನನಗೆ ನಿನ್ನ ಆಸರೆ ಇತ್ತು, ಗದಲ್.

– ಹೇಡಿ ಎಲ್ಲೀದೋ! ನಿನ್ನ ಅಣ್ಣ ಸತ್ತ, ಅವನ ಕ್ರಿಯೆ ಮಾಡಲಿಕ್ಕೆ ಅವನ ಮಗ ಇದ್ದ. ಎಲ್ಲ ಮುಗಿದ ಮೇಲೆ ನೀನು ನನ್ನನ್ನೇ ಇಟ್ಟುಕೊಂಡು ಮನೆ ತುಂಬಿಕೊಂಡಿದ್ದರೆ ಏನಾಗ್ತಿತ್ತು? ನನ್ನ ಹೊಟ್ಟೆ ತುಂಬಿಕೊಳ್ಳೋದಕ್ಕೆ ನಾನು ಹೊರಗೆ ಹೋಗುವ ಹಾಗೆ ಮಾಡಿದೆ. ನನ್ನವನು ಅಂತ ಒಬ್ಬ ಇದ್ದರೆ ನಾನೂ ಒಲೆ ಮುಂದೆ ಕೂರುತ್ತೇನೆ. ಇತರರ ಜೀತಕ್ಕಾಗಿ ನಿಲ್ಲುವ 'ಬಾಂದಿ'ಯಾಗುವುದು ಮಾತ್ರ ನನ್ನಿಂದ ಆಗುವುದಿಲ್ಲ. ನಾನು ದುಡಿಯೋದು, ಬೇರೆಯವರು ಮಜಾ ಮಾಡೋದು – ಇದು ಸಾಧ್ಯ ಇಲ್ಲ. ನನ್ನ ಹೊಟ್ಟೆಗೆ ಕೊಡಬೇಕಾದ ಬೆಲೆ ಕೊಟ್ಟರೇನೇ ನಾನು ಊಟ ಮಾಡಿಯೇನು, ತಿಳೀತೆ? ಈಗ ಮನೆ ಮರ್ಯಾದೆಗೆ ಏಟು ಬಿತ್ತು ಅಂತ ಇದೆಲ್ಲ ಯೋಚಿಸ್ತಾ ಇದ್ದೀಯ. ನಿನ್ನ ಗದಲ್‌ಗೆ ಸೊಸೆಯರು ಸರಿಯಾಗಿ ನೋಡಿಕೊಳ್ಳದೆ ಇದ್ದಾಗ ಎಲ್ಲಿ ಹೋಗಿತ್ತೋ ನಿನ್ನ ಈ ಯೋಚ್ನೆ? ಯಾರು ಯಾರಿಗೆ ಆಗ್ತಾರೆ ಒಟ್ಟನಲ್ಲಿ? ಬಿಡು, ಅವರವರ ಪಾಡು ಅವರವರಿಗೆ.

– ಗದಲ್?...ಡಾಂಡಿ ತುಂಬಿಬಂದ ಕಂಠದಿಂದ ಹೇಳಿದ... ನಾನು ಹೆದರ್ತಾ ಇದ್ದೆ.

– ಯಾತಕ್ಕೆ ಅಂತ?

– ಗದಲ್, ನಾನು ಮುದುಕ ಆಗಿದೀನಿ. ಆ ರೀತಿ ಮಾಡಿದರೆ ಜನ ನಗುತ್ತಾರೆ ಎಂದು ಹೆದರಿದ್ದೆ. ಅಮ್ಮನ ಜೊತೇಗೆ ಚಿಕ್ಕಪ್ಪನ ಸಂಬಂಧ ಮೊದಲಿಂದಲೂ ಇತ್ತು ಎಂದು ಮಕ್ಕಳು ಭಾವಿಸಿಯಾರು ಎಂದೂ ಯೋಚಿಸಿದೆ. ಅದಕ್ಕೇ ನಾನು ಬೇರೆ ಮದುವೆ ಮಾಡಿ ಕೊಂಡಿರಲಿಲ್ಲ ಎಂದುಕೊಳ್ಳಲೂ ಬಹುದು ಎಂದು ತಿಳಿದೆ. ಗದಲ್, ಇದರಿಂದ ಅಣ್ಣನ ಅಪಖ್ಯಾತಿಗೂ ದಾರಿಯಾಗುತ್ತಿತ್ತು.

– ಅರೇ, ಇರಲಿ ಬಿಡು ಗೊತ್ತಿದೆ – ಗದಲ್ ಉತ್ತರ ಕೊಟ್ಟಳು – ಅಣ್ಣನ ಮರ್ಯಾದೆ ಬಹಳ ಗೊತ್ತಿರೋದು ನಿನಗೆ – ಅವನ ತಿಥಿ ಮಾಡಿದಾಗ ನೀನೂ ಇದ್ದೆಲ್ಲಾ – ಅದೇ ನನ್ನ ಮಾವ ತೀರಿಕೊಂಡಾಗ ನಿನ್ನ ಅಣ್ಣ ಊರಿನ ಜನಕ್ಕೆಲ್ಲ ಊಟ ಹಾಕಿದ... ತಾನೇ ನಿಂತು ಎಲ್ಲರಿಗೂ ಹೊಟ್ಟೆ ತುಂಬಾ ಊಟ ಮಾಡಿಸಿದ... ನೀವೆಲ್ಲ ಸೇರಿ ಅವನ ಕಾರ್ಯಕ್ಕೆ ಎಷ್ಟು ಜನಾನ ಕರೆದಿದ್ರಿ? ತಮ್ಮ ಆದ ನೀನು, ಇಬ್ಬರು ಮಕ್ಕಳು... ಇದೇನ ತಮ್ಮನ ಸಂಬಂಧ, ಮಕ್ಕಳ ಸಂಬಂಧ? ನೀವೆಲ್ಲ ಸೇರಿ ಕರೆದದ್ದು ಒಟ್ಟು ಇಪ್ಪತ್ತೈದು ಜನಾನ! ಸಾಕಾ? ಕೇಳಿದರೆ ಹೇಳಿದಿರಿ, ಯುದ್ಧ ನಡೀತಾ ಇದೆ, ಹೆಚ್ಚು ಜನಾನ ಕರೀ ಬಾರದು ಅಂತ ಕಾನೂನಿದೆ, ಹೆಚ್ಚು ಜನ ಇದ್ದರೆ ಪೋಲೀಸರು ಹಿಡಿಕೊಂಡು ಹೋಕ್ತಾರೆ ಅಂತ. ಅಂಜುಬುರುಕರು ಎಲ್ಲೀದೋ! ಇಂಥವರ ಜೊತೇಗೆ ನಾನು ಇರಬೇಕು, ನಾನು ಇರೋಲ್ಲ.

ಡಾಂಡಿಯ ಧ್ವನಿ ಇದ್ದಕ್ಕಿದ್ದಂತೆ ಬದಲಾಯಿತು. ನಾನು ಇನ್ನೂ ಬದುಕಿದ್ದೇನೆ, ಹಾಗಿರುವಾಗ ನೀನು ಬೇರೆ ಗಂಡನ ಜೊತೆ ಹೋಗಿ ಇರ್ತೀಯೇನು?

– ಹೂಂ.

– ಇನ್ನೊಮ್ಮೆ ಹೇಳು, ಎಂದುಕೊಂಡು ಅವನು ಎದ್ದು ಅವಳ ಕಡೆ ಹೋದ.

– ನೂರು ಸಲ ಹೇಳ್ತೀನೆ, ಬೇಕಾದರೆ – ಗದಲ್ ಬಿದ್ದುಕೊಂಡೇ ಹೇಳಿದಳು. ಡಾಂಡಿ ಇನ್ನೂ ಮುಂದಕ್ಕೆ ಹೋದ.

– ಏನು ಮಾಡ್ತೀಯೋ ನೋಡಿಯೇ ಬಿಡ್ತೀನಿ – ಗದಲ್ ಗರ್ಜಿಸಿದಳು.

ಡಾಂಡಿ ನಿಂತುಬಿಟ್ಟುದನ್ನು ಗದಲ್ ನೋಡಿದಳು. ಡಾಂಡಿ ಹೋಗಿ ಕುಳಿತುಬಿಟ್ಟ. ಗದಲ್ ನೋಡುತ್ತಲೇ ಇದ್ದಳು. ಅವಳಿಗೆ ನಗು ಬಂತು. ನಕ್ಕುಬಿಟ್ಟಳು. ಮತ್ತು ಹೇಳಿದಳು – ನೀನು ನನಗೆ ಮಾಡ್ತೀಯಾ? ನಿನಗೆಲ್ಲಿ ಬರಬೇಕು ಆ ಧೈರ್ಯ? ನನ್ನ ಹೊಸ ಗಂಡ ಇದ್ದಾನಲ್ಲ, ಅವನು ನಿಜಕ್ಕೂ ಗಂಡು! ಕಿವಿಯಿಂದಲಾದರೂ ಕೇಳಿಕೋ. ನಿನ್ನ ಅಣ್ಣಾನೇ ನನಗೆ ಮತ್ತೆ ಸಿಕ್ಕಿದ್ದಾಗೆ ಎನಿಸುತ್ತೆ ನನಗೆ. ನೀನು? ...ಸ್ವಲ್ಪ ನಿಂತು ಹೇಳಿದಳು... ನೀನು ಗಂಡಸೇ? ಯಾರಾದರೂ ತನ್ನ ಮೈದುನನ ಮುಂದೆ ಬೇಡಿಕೊಳ್ಳುತ್ತಾಳೆಯೇ? ನೀನು ಮುಂದೆ ಬಂದು ನನ್ನನ್ನು ಹೊಡೆದಿದ್ದರೂ ನಿನ್ನದು ಅಂತ ಒಂದು ವ್ಯಕ್ತಿತ್ವ ಇದೆ ಅಂತ ತಿಳೀತಿದ್ದೆ. ಇಂಥ ಮನೇಲಿ ನಾನು ಇರ್ತೀನೇನು?

ಡಾಂಡಿ ನೋಡುತ್ತಾ ಇದ್ದುಬಿಟ್ಟ. ಬಹಳ ರಾತ್ರಿಯಾಗಿ ಹೋಗಿತ್ತು. ಗದಲ್ ತನ್ನ ಲಂಗದ ನೆರಿಗೆಯನ್ನು ಹರಡಿ ಮೈ ಮುದುಡಿಕೊಂಡು ಮಲಗಿದಳು. ಡಾಂಡಿ ತೂಕಡಿಸಲು ತೊಡಗಿದ.

(೪)

ಅಂಗಳದಲ್ಲಿ ಕುಳಿತಿದ್ದ ದುಲ್ಲೋ ಅವಳನ್ನು ಕಂಡು ಮೈ ಮುರಿಯುತ್ತಾ ಕೇಳಿದಳು – ಬಂದುಬಿಟ್ಟಿರಾ ವಾರಗಿತ್ತಿಯರೇ? ರಾತ್ರೆ ಎಲ್ಲಿ ಇದ್ದಿರಿ?

ಬೆಳಗಾಗಿತ್ತು. ಆಕಾಶದಲ್ಲಿ ಬೆಳಕು ಹರಡುತ್ತಿತ್ತು. ಎತ್ತುಗಳು ಈಗ ಎದ್ದು ನಿಂತಿದ್ದುವು. ತಂಪಾದ ಗಾಳಿ ಬೀಸುತ್ತಿತ್ತು.

ಗದಲ್ ಅಷ್ಟೇ ಬಿರುಸಾಗಿ ಉತ್ತರ ಕೊಟ್ಟಳು – ಏನು ಯಜಮಾನಿತಿ? ನನ್ನಮೇಲೆ ನಿನ್ನ ಹುಕುಮ್ ನಡೆಸಹೋಗಬೇಡ, ತಿಳೀತಾ? ನಿನ್ನ ವಯಸ್ಸಿನ ನನ್ನ ಮಕ್ಕಳಿದ್ದಾರೆ, ಮೈದುನನ ಸಂಬಂಧದಲ್ಲಿ ನೋಡಿದರೆ ನಾನು ನಿನ್ನ ವಾರಗಿತ್ತಿಯಾಗಬೇಕು. ನಿನ್ನ ಸೇವಕಿಯೇನೂ ಅಲ್ಲ, ತಿಳಿದುಕೋ.

ದುಲ್ಲೋ ಕಕ್ಕಾಬಿಕ್ಕಿಯಾದಳು. ಅಷ್ಟು ಹೊತ್ತಿಗೆ ಮೋನಿ ಕೂಡ ಎದ್ದಿದ್ದ. ಬಿಗುಮಾನದಿಂದ ಬಂದು, ಎಲ್ಲಿಗೆ ಹೋಗಿದ್ದೆ? ಎಂದು ಕೇಳಿದ.

ಗದಲ್ ಮುಸುಕೆಳೆದುಕೊಂಡಳು. ಧ್ವನಿ ಮಾತ್ರ ಬದಲಾಗಲಿಲ್ಲ. ಮತ್ತೆಲ್ಲಿಗೆ? – ನನ್ನನ್ನು ಮತ್ತೆ ಎಳೆದುಕೊಂಡು ಹೋಗಿದ್ದರು – ಸಮಯ ನೋಡಿ ಈ ಕಡೆ ಬಂದುಬಿಟ್ಟೆ.

ಮೋನಿ ಸುಮ್ಮನಿದ್ದುಬಿಟ್ಟ. ಮೋನಿಯ ಅಪ್ಪ ಹೊರಗಿನಿಂದಲೇ ಇಣಿಕಿ ನೋಡಿಕೊಂಡು ಹೊರಟು ಹೋದ. ಮೋನಿಯೂ ಹೋಗಲು ಹೊರಟ.

– ಎಲ್ಲಿಗೆ ಹೋಗುತ್ತಿ? ಗದಲ್ ಕೇಳಿದಳು.

– ಹೊಲದ ಕಡೆ.

– ಮೊದಲು ನನ್ನ ತೀರ್ಮಾನ ಮಾಡಿ ಹೋಗು.

ದುಲ್ಲೋ ಆ ಪ್ರಚಂಡ ಸ್ತ್ರೀಯ ವರ್ತನೆ ಕಂಡು ಆಶ್ಚರ್ಯಗೊಂಡು ನಿಂತುಬಿಟ್ಟಳು.

– ಎಂಥ ತೀರ್ಮಾನ? ...ಮೋನಿ ಕೇಳಿದ. ಅವನು ಆ ಹೆಂಗಸಿನ ಅಧಿಕಾರಕ್ಕೆ ಶರಣು ಹೊಡೆದಿದ್ದ.

– ನಿನ್ನ ಮನೆಯ ಜೀತಕ್ಕೆ ಅಂತ ನಾನೇನೂ ಬಂದಿಲ್ಲ... ಗದಲ್ ಹೇಳಿದಳು... ಇರುವುದು ನಾವಿಬ್ಬರು... ಪ್ರತ್ಯೇಕ ಮಾಡುವುದು. ತಿನ್ನುವುದು. ಅವನ ಉತ್ತರದ ನಿರೀಕ್ಷೆ ಇಟ್ಟುಕೊಳ್ಳದೆಯೇ ಅವಳು ಹೇಳುತ್ತಲೇ ಇದ್ದಳು... ನಿನ್ನ ಸಂಪಾದನೆಯಲ್ಲಿ ಬೇಕಾದರೆ ಕೊಟ್ಟುಕೋ, ನಾನು ಅಡ್ಡಿ ಬರುವುದಿಲ್ಲ, ಆದರೆ ಒಳಗೆ ಮಾತ್ರ ನಾವು ನಾವು ಪ್ರತ್ಯೇಕ ಇರಬೇಕು.

ಮೋನಿ ಸ್ವಲ್ಪ ಹೊತ್ತು ಸ್ತಬ್ಧನಾಗಿ ನಿಂತುಬಿಟ್ಟಿದ್ದ. ದುಲ್ಲೋ ಒಳಗಿನಿಂದ ಬಂದಳು. ಬಂದು ಹೇಳಿದಳು... ಯಾಕೆ ಸುಮ್ಮನಾಗಿಬಿಟ್ಟೆ? ಯಾಕೆ ಏನೂ ಹೇಳೋದಿಲ್ಲ... ಏನು ವಾರಗಿತ್ತೀನ ತಂದಿದ್ದೀಯೋ ಅತ್ತೆಯನ್ನು ತಂದಿದ್ದೀಯೋ? ನಾನ್ ಸುಮ್ಮನಿರೋಳಲ್ಲ. ಹೆಚ್ಚು-ಕಡ್ಮೆ ಮಾತಾಡಿದ್ರೆ ಕೇಳೋಳಲ್ಲ. ತಿಳೀತಾ? ನನ್ನ ಅವ್ವಾ ಏನೂ ನನ್ನ ಬಿಟ್ಟೀ ಹೆತ್ತಿಲ್ಲ... ಹಾಂ, ತಿಳ್ಕೋ.

– ಹೌದು, ಹೌದೇ ನನ್ ಸವತಿ! ...ಗದಲ್ ಗುಡುಗಿದಳು – ನಿನ್ನವ್ವ ಎಲ್ಲರ್ಹಂಗೆ ನಿನ್ನ ಜನ್ಮ ಕೊಟ್ಟವ್ಳಾ? ಮಾರಿ ಹಾಂಗೆ ಹುಟ್ಟವ್ಳೆ – ಸಂಸಾರಾನ ತೂಳೀಲಿಕ್ಕೆ... ಹೋಗ್ ಹೋಗ್ ನೋಡಿವ್ನಿ. ನಿನ್ನ ಕೈಯಾಗಿನ ಬೆಲ್ಲ ಇಲ್ದಿದ್ರೆ ನಮ್ಮ ಗಂಟಲಲ್ಲಿ ರೊಟ್ಟಿ ಇಳಿಯೋದೇ ಇಲ್ವೇನೋ ನೋಡ್ತೀನಿ.

ಮೋನಿ ಮಾತನಾಡಲಿಲ್ಲ. ಹೊರಗೆ ಹೋದ. ಮಧ್ಯಾಹ್ನ ಆಯಿತು. ದುಲ್ಲೋ ಚರಕಾ ಮುಂದೆ ಕುಳಿತು ದಾರ ತೆಗೆಯುತ್ತಿದ್ದಳು. ನಾರಾಯಣ ಬಂದು ಕೂಗಿದನು – ಮನೇಲಿ ಯಾರಿದ್ದಾರೆ?

ದುಲ್ಲೋ ತನ್ನ ತಲೆಯ ಮೇಲಿನ ಸೆರಗು ಸರಿ ಮಾಡಿಕೊಂಡು ಕೇಳಿದಳು — ಯಾರಪ್ಪಾ?

ನಾರಾಯಣ ಕಷ್ಟದಿಂದ ಉಗುಳು ನುಂಗಿಕೊಂಡು ಹೇಳಿದ: ಗದಲ್‌ನ ಮಗ.

ದುಲ್ಲೋ ತನ್ನ 'ಘೂಂಘಟಿ'ನೊಳಗೇ ನಕ್ಕು ಕೇಳಿದಳು – ದೊಡ್ಡವನೋ ಚಿಕ್ಕವನೋ?

– ಚಿಕ್ಕವನು.

– ಇನ್ನೆಷ್ಟು ಜನ ಮಕ್ಕಳು?

ಎಷ್ಟಾದರೆ ನಿನಗೇನು? – ಗದಲ್ ಒಳಗಿನಿಂದ ಬರುತ್ತಾ ಕೇಳಿದಳು.

– ಅರೇ, ಬಂದುಬಿಟ್ಳು, ಎಂದುಕೊಂಡು ದುಲ್ಲೋ ಒಳಗೆ ಹೋದಳು.

– ಇವೊತ್ತು ಅವನು ಮನೇಗೆ ಬರ್ಲಿ. ನಿನಗೆ ತೋರಿಸ್ತೇನೆ, ನಿನಗೇನು ಅದೆಲ್ಲ ಕಟ್ಕೊಂಡು? – ಗದಲ್ ತಲೆ ಕುಣಿಸುತ್ತಾ ಗುಡುಗಿದಳು.

– ಅವ್ವಾ, ನಾರಾಯಣ ಕೇಳಿದ – ಇವಳು ನಿನ್ನ ವಾರಗಿತ್ತೀನಾ?

– ನೀನು ಯಾಕ್ ಇಲ್ಲೀಗ್ ಬಂದೆ ಅದನ್ನ ಹೇಳು ಮೊದಲು, ಗದಲ್ ಅರಚಿದಳು.

– ದಂಡ ವಸೂಲಿಗಾಗಿ ಬಂದಿವ್ನಿ ಅವ್ವಾ ಎಂದು ಹೇಳಿ ಮುಂದೆ ಕುಳಿತುಕೊಳ್ಳಲು ಹೋದ.

– ಅಲ್ಲೇ ಇರು, ಗದಲ್ ಹೇಳಿದಳು.

ಅಷ್ಟರಲ್ಲೇ ಹೊಲದ ಕಡೆ ಹೋಗಿದ್ದ ಮೋನಿ ಕೂಡ ಮನೆಗೆ ಬಂದ. ಅವನು ನೋಡುತ್ತಿದ್ದ ಹಾಗೆಯೇ ಗದಲ್ ತನ್ನ ಮೈಮೇಲಿನ ಒಡವೆಗಳನ್ನು ತೆಗೆದು ನಾರಾಯಣನ ಕಡೆ ಬಿಸಾಡುತ್ತಾ ಹೇಳಿದಳು – ನಿನ್ನ ದಂಡ ತುಂಬಿತೇನು? ಇನ್ನು ಇಲ್ಲಿ ಯಾರೂ ಬರಬೇಡಿ. ತಿಳೀತೇ? ನನ್ನ ಮಕ್ಕಳು ಹೆಂಡ್ತೀರ ಮಾತ್ ಕೇಳ್ಕೊಂಡ್ ನನ್ನ ಗಂಡ ಮಾಡಿಸಿಕೊಟ್ಟಿದ್ದ ಒಡವೇನೆಲ್ಲ ಕಿತ್ಕೊಂಡ್ ನನ್ನ ಮನೆ ಬಿಟ್ಟು ಓಡಿಸವ್ರೆ ಅಂತ ಪೊಲೀಸರಿಗೆ ಹೋಗಿ ರಿಪೋರ್ಟ್ ಮಾಡಿಬರ್ತೀನಿ, ತಿಳ್ಕೋ.

ನಾರಾಯಣನ ಮುಖ ಬಿಳುಚಿಕೊಂಡಿತು. ಒಡವೆಗಳನ್ನು ಎತ್ತಿಕೊಂಡು ಅವನು ಹೊರಟುಹೋದ. ಮೋನಿ ಮನಸ್ಸಿನಲ್ಲೇ ಏನನ್ನೋ ಸಂದೇಹಪಟ್ಟುಕೊಂಡು ಒಳಗೆ ಹೋದ.

ಮಲ್ಲೋ ದೂರು ಕೊಟ್ಟಳು – ಕೇಳಿದೆಯಾ! ನಿನ್ನ ಹೆಂಡ್ತಿ ಒಡವೇನೆಲ್ಲ ತೆಗೆದು ಕೊಟ್ಟು ಕಳಿಸಿದ್ಳು. ಮೊಣಕಾಲು ಹೋಗಿ ಕೊನೇಗೆ ಹೊಟ್ಟೇಗೇ ತಗಲ್ತು. ಹೀಗೆ ನಾಲ್ಕು ಮನೆ ಹಿಡಿದರೆ ಅವಳ ಮಕ್ಳು ಮಹಡಿ ಮನೇನೇ ಕಟ್ಟಬಹುದು. ನೋಡು, ನಿನಗೆ ಸ್ಪಷ್ಟವಾಗಿ ಹೇಳ್ತೇನೆ. ನಿನಗೆ ಇದೊಂದೂ ಗೊತ್ತಾಗೋಲ್ಲ. ಅವಳ ಆಟ ನಿನಗೆ ಗೊತ್ತಾಗ್ತಾ ಇಲ್ಲ. ಅವಳಿಗೆ ಹೊಟ್ಟೇ ತುಂಬಿಕೊಳ್ಳೋಕೆ ಒಂದು ನಾಟಕ ಆಡಬೇಕಾಗಿತ್ತು. ಆಡ್ತಾ ಇದಾಳೆ. ಈಗ ಹೇಳ್ತಾಳೆ ನೋಡು, ನನಗೆ ಒಡವೆ ಮಾಡ್ಸು ಅಂತಾ.

ಗದಲ್ ವ್ಯಂಗ್ಯವಾಗಿ ನಕ್ಕು ಹೇಳಿದಳು – ವಾಹ್, ಏನ್ ಮಾತ್ ಹೇಳ್ದೇ ಕಣೆ, ವಾರಗಿತ್ತಿಯಾಗಿ, ಹಳೆ ಗಂಡನ ರುಣಾನ ಹೊಸ ಗಂಡನಿಂದ ತೀರ್ಸೋದು ನೀನು ಬಂದ

ಮನೆ ರಿವಾಜಿರಬಹುದು. ಗದಲ್ ಏನಿದ್ದರೂ ಮನೆ ಒಡತಿ ಆಗಿರ್ತಾಳೆ, ತಿಳೀತೇನು? ಜೀತದ 'ಬಾಂದಿ'ಯಾಗಿ ಅಲ್ಲ. ಮಾಡಿದರೆ ನನ್ನ ಗಂಡನ ಚಾಕರಿ ಮಾಡ್ತೀನಿ, ಇಲ್ಲ ಅಂದ್ರೆ ಮುಂಡೆಯಾಗೇ ಇರ್ತೀನಿ, ತಿಳೀತಾ. ನೀನ್ಯಾರು ಮಧ್ಯೆ ಮಾತಾಡ್ಲಿಕ್ಕೆ?

ದುಲ್ಹೋ ರೋಷದಿಂದ ಒಮ್ಮೆ ಅವಳ ಕಡೆ ನೋಡಿ, ಕಾಲು ಸಪ್ಪಳಿಸಿಕೊಂಡು ಹೊರಟು ಹೋದಳು.

ಮೋನಿ ಗದಲ್ ಕಡೆ ನೋಡಿ ಹೇಳಿದ – ನಿನ್ನ ನಾಲಿಗೆ ದೊಡ್ಡದಾಯಿತು. ಮನೇಲಿ ಇರ್ಬೇಕು ಅಂತಿದ್ರೆ ಹೆಂಡ್ತಿ ಆಗಿ ಬಾಲ ಮುದಿರ್ಕೊಂಡು ಬಿದ್ದಿರು.

– ಆಂ! ಏನ್ ಹೇಳ್ದೆ ನನ್ನೊಡೆಯಾ? – ನನಗೆ ನೀನು ಕಲ್ಸೋಕ್ ಹೊಂಟೇನು? ನೀನು ಇನ್ನೂ ಹುಟ್ಟೇ ಇರಲಿಲ್ಲ. ನಂಗೆಲ್ಲ ಗೊತ್ತಿದೆ ಏನ್ ಮಾಡ್ಬೇಕು, ಏನ್ ಮಾಡ್ ಬಾರದು ಅನ್ನೋದು – ಗದಲ್ ಮುಗುಳ್ನಗುತ್ತಾ ಹೇಳಿದಳು – ಸಮಾಜದ ನೇಮ ಮುರಿಯೋ ಅಂಥಾದನ್ನ ನಾನೇನ್ ಮಾಡಿವ್ನಿ? ಅಂಥ ಕೆಲಸ ಏನಾದರೂ ಮಾಡಿದಾಗ ಕೇಳೂವಂತೆ... ಆದ್ರೆ ನಾನು ಸೌತೀ ಗೀತೀಗೆ ಹೆದ್ರೋಳಲ್ಲ.

– ಇರು ನಿನಗೆ ಮಾಡ್ತೀನಿ, ಎಂದು ತಲೆ ಕುಣಿಸಿ ಅವನು ಹೇಳಿದ.

ಗದಲ್ ನಗುತ್ತಾ ಮನೆಯೊಳಕ್ಕೆ ಹೋಗಿ ತನ್ನ ಕೆಲಸದಲ್ಲಿ ನಿರತಳಾದಳು.

(೫)

ತಂಗಾಳಿ ಬಲವಾಗಿ ಬೀಸುತ್ತಿತ್ತು. ಡಾಂಡಿ ಹೊರಗಡೆ ಪಡಸಾಲೆಯ ಮೇಲೆ ಕುಳಿತು ಮೌನವಾಗಿ ಹುಕ್ಕಾ ಎಳೆಯುತ್ತಿದ್ದ. ಹುಕ್ಕಾ ಎಳೆದು ಎಳೆದು ಸಾಕಾಗಿ ಅದನ್ನು ಬದಿಗಿಟ್ಟು ಹಾಗೇ ಕುಳಿತುಬಿಟ್ಟ.

ಹೊಲದಿಂದ ಬಂದ ನಿಹಾಲ್ ಎತ್ತನ್ನು ಕೊಟ್ಟಿಗೆಯಲ್ಲಿ ಕಟ್ಟಿ ಹುಲ್ಲು ಹಾಕಿ ಬಂದು ಸ್ವಲ್ಪ ಜೋರಾಗಿಯೇ ಕೇಳಿದ.

ಕಕ್ಕಾ...

– ಹಾಂ... ಡಾಂಡಿ ಎಚ್ಚತ್ತು ಕೇಳಿದ – ಏನಂದೆ, ನನಗೆ ಏನಾದರೂ ಹೇಳಿದೆಯೊ?

– ನಿನಗೆ ಹೇಳದೆ ಇನ್ಯಾರಿಗೆ ಹೇಳಲಿ ಕಕ್ಕಾ? ಬೆಳಗ್ಗೆಯಿಂದ ಹೇಳ್ಬೇಕು ಅಂತ. ನೀನು ಸಿಗಲೇ ಇಲ್ಲ. ಚಿಮ್ಮನ್ ಹೇಳ್ತಿದ್ದ: ನೀನು ಮನಮೌಜಿ ಬಾಬಾ ಬಳಿ ಹೋಗಿ ಕೂತಿದ್ದೆ ಅಂತ. ಹೌದೇನು, ಕಕ್ಕಾ?

– ಹೌದೋ, ಹಾಗೇ ಹೋಗಿ ಬಂದೆ.

– ಯಾಕ್ ಹೋಗಿದ್ದೆ?

– ಹೀಗೇ ಬೇಜಾರಾಯಿತು, ಹೊರಟು ಹೋದೆ, ಅಷ್ಟೇ ಕಣೊ.

– 'ಕಸಬೆ'ಯಿಂದ ಸಾಹುಕಾರನ ಮನುಷ್ಯ ಬಂದಿದ್ದ. ಕಟಾವು ಆಯಿತಾ ಅಂತ ಕೇಳಿದ. ಇನ್ನೂ ಆಗಿಲ್ಲ ಅಂದೇ. ನಾನು ತಕೊಂಡು ಹೋಗೋಕೆ ಬಂದಿದೀನಿ ಅಂದ. ಮಾತು ಮಾತಿನಲ್ಲಿ ಜಗಳ ಆಗೋದರಲ್ಲಿತ್ತು.

– ಪಾಗಾಲ್ಮಾಡ್ಬಾರದು ಕಣೋ – ಡಾಂಡಿ ಹೇಳಿದ – ಸಾಹುಕಾರರ ಕಡೆಯವರ ಜೊತೇಗೆ ಹಾಗೆ ಜಗಳ ಮಾಡಿಕೊಂಡ್ರೆ ಆಗುತ್ತೇನೊ?

ನಿಹಾಲ್ ಕೈಗೆ ಚಿಲಮು ತೆಗೆದುಕೊಂಡ. ಒಂದು ಕೆಂಡ ತಂದು ಹಾಕಿ, ಊದಿ ಎಳೆಯತೊಡಗಿದ. ಮತ್ತು ಹೇಳಿದ – ನಾನು ಹೋಗ್ಲಿಲ್ಲ, ತಲೇ ಸಿಡೀತಾ ಇತ್ತು, ನಾರಾಯಣನಿಗೆ ಕಳ್ಸಿದ್ದೆ.

– ಎಲ್ಲಿಗೆ? ಡಾಂಡಿ ಬೆಚ್ಚಿಬಿದ್ದವನಂತೆ ಕೇಳಿದ.

– ಅದೇ ಮನೆಹಾಳ್ ಮುಂಡೆ ಇದ್ದಾಳಲ್ಲಾ, ಅವಳಲ್ಲಿಗೆ.

– ನಿನ್ನವ್ವನ ಬಳೀಗಾ?

– ನಿನ್ನ ವಿಚಾರಾನೇ ಗೊತ್ತಾಗೋಲ್ಲ ಕಕ್ಕಾ, ಆ ಕುಲಪಾತಕಿ ಇಷ್ಟೆಲ್ಲ ಮಾಡಿದಾಳೆ. ಆದರೂ ನೀನು ರೇಗ್ತಾನೇ ಇಲ್ಲ, ನಾನು ಅವಳ್ನ ಅವ್ವ ಅಂತ ಕರೀಬೇಕು ಅಂತೀಯಾ?

– ಆದ್ರೆ ನೋಡು ಮಗ, ನೀನನ್ನೋಲ್ಲಾ ಅಂದ್ರೂ, ಜನ ಕೇಳ್ತಾರಾ... ನಿನ್ನವ್ವ ಅಂತಾನೇ ಅಂತಾರೆ. ಗಂಡಾ ಇರೋ ತನಕ ಇಂಥವರ ಹೆಂಡ್ತಿ ಅಂತಾ ಕರೀತಾರೆ. ಗಂಡ ಹೋದ್ಮೇಲೆ ಇಂಥವರ ತಾಯಿ ಅಂತ ಕರೀತಾರೆ. ಇದೇ ನಿಯಮ. ಇದರಲ್ಲಿ ಹೊಸದೇನಿದೆ?

ನಿಹಾಲ್ ಗೊಣಗಿಕೊಂಡ. ಸರಿ ಕಾಕಾ. ಸರಿ. ಆದ್ರೆ ಯಾಕೆ ನಾರಾಯಣನ್ನ ಕಳ್ಸಿದ್ದೆ ಎಂದು ನೀನು ಈ ತನಕ ಕೇಳಿಲ್ಲ.

– ಹೌದಲ್ಲ ಮಗ, – ಡಾಂಡಿ ಎಚ್ಚೆತ್ತುಕೊಂಡವನಂತೆ ಕೇಳಿದ – ಯಾಕೆ ಅಂತ ನೀನು ಹೇಳ್ಲೇ ಇಲ್ಲ... ಹೇಳು ಯಾಕ್ ಕಳ್ಸಿದ್ದೆ?

– ದಂಡ ಕೊಡಬೇಕು ಅಂತ ಹೇಳ್‌ಕಳ್ಸಿದ್ದೆ. ಪಂಚಾಯತಿ ಸೇರ್ಸೋಕ್ಕೆ ಮೊದಲೇನೇ ಅವಳು ಒಡವೇನೆಲ್ಲ ತೆಗೆದು ಬಿಸಾಕವ್ಳೆ.

ಡಾಂಡಿ ಮುಗುಳ್ನಕ್ಕು ಹೇಳಿದ – ಓಹ್. ಹಾಗಾದರೆ ಮನೆಯವರು ಪಂಚಾಯತಿ ಕೂಡ ಕರೀದೇ ಇರೋಹಂಗ್ ಮಾಡಿದ್ದಾಳೆ ಅಂತ ಆಯ್ತು. ನಾವೇ ಅವಳನ್ನು ಮನೆ ಬಿಟ್ಟು ಓಡಿಸಿದ್ದೀವಿ ಅನ್ನೋ ಹಾಗೆ ಮಾಡವೆ ಅಂತ ಆಯಿತು. ನಾರಾಯಣ ಅವನ್ನ ತಗೊಂಡು ಬಂದ್ನಾ?

– ಹಾಂ.

ಡಾಂಡಿ ಯೋಚಿಸುತ್ತಾ ಇದ್ದ.

– ನಾನು ತಗೊಂಡ್ ಹೋಗಿ ವಾಪಸ್ ಕೊಟ್ ಬರ್ಲೇನು? – ನಿಹಾಲ್ ಕೇಳಿದ.

— ಬೇಡ ಮಗ... ಡಾಂಡಿ ಹೇಳಿದ... ಅವಳು ನಿಜಕ್ಕೂ ಮುನಿಸ್‌ಕೊಂಡೇ ಹೋಗಿಪ್ಪೆ. ಮತ್ತೇನೂ ಇಲ್ಲ. ನೀನು ಉಂಡಾಯ್ತೇನು?

— ಇಲ್ಲ.

— ಹೋಗು, ಹೋಗಿ ಉಂಡ್ಕೋ ಮೊದಲು.

ನಿಹಾಲ್ ಅಲ್ಲಿಂದೆದ್ದ. ಡಾಂಡಿ ಮಾತ್ರ ಅಲ್ಲಿಯೇ ಕುಳಿತಿದ್ದ. ಸಾಯಂಕಾಲದ ಹಿಂದೆಯೇ ಕತ್ತಲೆ ಕವಿಯುತ್ತಾ ಬಂದಿತ್ತು, ಹೊದಿಕೆ ಮುಚ್ಚಿದ ಹಾಗೆ.

ದೂರದಲ್ಲಿ ಢೋಲಾ ಶಬ್ದ ಕೇಳಿ ಡಾಂಡಿ ಕೂಡ ಅಲ್ಲಿಂದೆದ್ದು ಹೊರಟುಬಿಟ್ಟ.

ನಿಹಾಲ್ ಹೆಂಡತಿಯನ್ನು ಕೇಳಿದ — ಕಕ್ಕಾ ಉಂಡಾಯಿತಾ?

— ಇಲ್ಲ.

ನಿಹಾಲ್ ಹೊರಗೆ ಬಂದು ನೋಡಿದ. ಅಲ್ಲಿ ಅವನ ಕಾಕಾ ಇರಲಿಲ್ಲ.

— ಕಕ್ಕಾ... ಅವನು ಕೂಗಿದ.

ಚಿರಂಜಿ ಪೂಜಾರಿ ಆಗತಾನೆ ಹನುಮಂತನ ಗುಡಿ ಬಾಗಿಲು ಹಾಕಿ ಮನೆಗೆ ಹೋಗುತ್ತಿದ್ದರು. ನಿಹಾಲನನ್ನು ಕಂಡು ಅವರು ಏನೋ? ಎಂದು ಕೇಳಿದರು.

— ನಮಸ್ಕಾರ ಪೂಜಾರಪ್ಪನವರೇ — ನಿಹಾಲ್ ಹೇಳಿದ — ಕಕ್ಕಾ ಇಲ್ಲೇ ಕುಳಿತಿದ್ರು —

ಚಿರಂಜಿ ಪೂಜಾರಪ್ಪ ಹೇಳಿದರು — ಅವನು ಅಲ್ಲಿ ಬಯಲಾಟ ಕೇಳ್ತಿದಾನೆ. ಈಗ ತಾನೇ ನಾನು ಬರುವಾಗ ನೋಡಿ ಬಂದೆ.

ಚಿರಂಜಿ ಪೂಜಾರಪ್ಪ ಹೊರಟುಹೋದ. ನಿಹಾಲ್ ಒಂದೂ ತೋಚದೆ ಸುಮ್ಮನೆ ನಿಂತುಬಿಟ್ಟಿದ್ದ. ಅವನ ಹೆಂಡತಿ ತಲೆಹಾಕಿ ಕೇಳಿದಳು,

— ಏನ್ ಆಯಿತು?

— ಕಕ್ಕಾ ಬಯಲಾಟ ಕೇಳಲಿಕ್ಕೆ ಹೋಗಿದ್ದಾರೆ... ನಿಹಾಲ್ ನಂಬುವಂತಿರಲಿಲ್ಲ... ಅವರು ಹಾಗೆ ಹೋಗ್ತಾ ಇರಲಿಲ್ಲ.

— ರಾತ್ರಿಯಾಗಿ ಹೋಗಿದೆ. ಹೋಗಿ ಕರ್ಕೊಂಡ್ ಬನ್ನಿ ಹೋಗಿ — ಅವನ ಹೆಂಡತಿ ಹೇಳಿದಳು.

ಹಾಗೆ ಹೇಳಿ ಅಳುತ್ತಿದ್ದ ಮಗುವಿಗೆ ಹಾಲು ಕುಡಿಸತೊಡಗಿದಳು.

ನಿಹಾಲ್ ತನ್ನ ಚಿಕ್ಕಪ್ಪನನ್ನು ಕರೆದುಕೊಂಡು ವಾಪಸ್ಸು ಬಂದಾಗ ಡಾಂಡಿಯ ದೇಹ ಜ್ವರದಿಂದ ಸುಡುತ್ತಿತ್ತು.

— ಸ್ವಲ್ಪ ಥಂಡಿ ಆಗಿದೆ, ಅಷ್ಟೆ. ಇನ್ನೇನೂ ಇಲ್ಲ. ಚಿಕ್ಕ ಖಟಿಯಾ ಮೇಲೆ ಕಾಲು ಮುರುಟಿಕೊಂಡು ಹಾಗೆಯೇ ಡಾಂಡಿ ಮಲಗಿದ. ರೊಟ್ಟಿ ಬೇಡ, ಇವೊತ್ತೇನೋ ಹಸಿವೇ ಇಲ್ಲ ಎಂದು ಮಲಗುತ್ತಾ ಹೇಳಿದ.

ನಿಹಾಲ್ ನಿಂತೇ ಇದ್ದ. ಡಾಂಡಿ ಹೇಳಿದ — ಅರೆ, ಯೋಚಿಸಿ ನೋಡು ಬೇಗ.

ನಾನು ಢೋಲಾ ಕೇಳಿ ಎಷ್ಟು ವರ್ಷ ಆಯ್ತು. ಆವೊತ್ತು ನಿನ್ನ ತಾಯಿಯ ಮದುವೆ ದಿನ ರಾತ್ರಿ ಕೇಳಿದ್ದು, ಇವೊತ್ತು ಕೇಳ್ತಾ ಇದೀನಿ...

ನಿಹಾಲ್ ಹಾಗೆಯೇ ನಿಂತು ನೋಡಿದ, ಕೇಳಿದ. ಡಾಂಡಿ ಕಣ್ಣು ಮುಚ್ಚಿಕೊಂಡು ಯಾವುದೋ ಹಾಡನ್ನು ಗುನುಗುನಾಯಿಸುತ್ತಾ ಮಲಗಿದ್ದ.

(೬)

ಸಾಯಂಕಾಲವಾಗಿತ್ತು. ಮೋನಿ ಹೊರಗೆ ಕುಳಿತಿದ್ದ. ಗದಲ್ ಬಿಸಿ ಬಿಸಿ ರೊಟ್ಟಿ ಮತ್ತು ಮಾವಿನಕಾಯಿಯ ಚಟ್ನಿ ತಂದು ಅವನ ಮುಂದೆ ತಿನ್ನಲು ಇಟ್ಟಳು.

– ತುಂಬಾ ಚೆನ್ನಾಗಿ ಆಗಿದೆ... ಮೋನಿ ತಿನ್ನುತ್ತಾ ಹೇಳಿದ... ತುಂಬಾ ಚೆನ್ನಾಗಿದೆ.

ಗದಲ್ ಕುಳಿತುಕೊಂಡಳು. ಹೇಳಿದಳು – ನೀನು ಇನ್ನೊಂದು ಮದುವೆ ಯಾಕೆ ಮಾಡಿಕೊಳ್ಳೋದಿಲ್ಲ, ವಯಸ್ಸಿಗೆ ಸರಿಹೋಗೋ ಹಾಗೆ?

ಮೋನಿ ಅವಾಕ್ಕಾಗಿ ಹೇಳಿದ – ಒಬ್ಬಳಿಗೆ ಸಾಕೋದೇ ಸಾಕಲ್ಲವೆ?

ಇಲ್ಲ, ಹಾಗಲ್ಲ – ಗದಲ್ ಹೇಳಿದಳು – ನೀನು ತಿಳ್ಕೊಂಡಿರಬಹುದು ಸವತಿ ಮತ್ಸರ ಬರಬಹುದು ಅಂತ. ಹಾಗೇನೂ ಇಲ್ಲ. ನನ್ನದಂತೂ ವಯಸ್ಸಾಗ್ತಾ ಇದೆ. ಬದುಕಿರೋ ಹಾಗೆ ಕಣ್ಣಿಂದ ನೋಡ್ಕೊಂಡಾದರೂ ಹೋಗ್ತೀನಿ. ಅದೂ ಇಲ್ಲ, ಹುಕುಮತ್ ನಡೆಸಲಾದರೂ ಒಬ್ಬಳು ಸಿಕ್ಕಿದ ಹಾಗಾಗುತ್ತೆ!

ಮೋನಿ ನಕ್ಕುಬಿಟ್ಟ. ಹಾಂ – ಹಾಗೆ ಹೇಳು. ಜಗಳಕ್ಕೆ ನಿನಗೆ ಯಾರಾದರೂ ಬೇಕು, ಅನ್ನು – ಚಟ ತೀರಿಸ್ಕೊಳ್ಳೋಕೆ.

ಅವನು ಊಟ ಮಾಡಿ ಏಳುತ್ತಿದ್ದಂತೆ ಗದಲ್ ಹುಕ್ಕಾ ತುಂಬಿಕೊಟ್ಟು ಹೋದಳು. ಮತ್ತು ಗೋಡೆಯ ಮರೆಗೆ ಕುಳಿತು ಊಟ ಮಾಡತೊಡಗಿದಳು.

ಅರೇ, ಇಷ್ಟು ಹೊತ್ತಿಗೆ ಎಲ್ಲೋ ಹೋಗ್ತಿದ್ದಿ? – ಎಂದು ಕೇಳಿದ ಶಬ್ದ ಅವಳ ಕಿವಿಗೆ ಬಿತ್ತು.

ಮೋನಿ ಗಿರಾಜನನ್ನು ಕೇಳ್ತಿದ್ದ. ಅದಕ್ಕೆ ದೊರೆತ ಉತ್ತರ–

– ಜರೂರು ಕೆಲ್ಸ ಐತೆ, ಮೋನಿ. ಪೇಶಕಾರ ಸಾಹೇಬರು ಹೇಳಿ ಕಳಿಸಿದ್ದಾರೆ.

ಗದಲ್ ಲೆಕ್ಕ ಹಾಕತೊಡಗಿದಳು. ಗಿರಾಜ ದನ ಮೇಯಿಸಿಕೊಂಡು ಬದುಕುವ ಗೊಲ್ಲ. ತನ್ನ ಮನೆ ಹಸೂನ ದಿನಾ ಮೇಯಿಸಿಕೊಂಡು ಬರೋ ಸಲುವಾಗಿ ಪೇಶಕಾರ ಕರೆದಿರಬೇಕು.

ರಾತ್ರೆ ಹೊತ್ನಲ್ಲಿ ಹೋಗ್ತಿದೀಯಾ, ಒಂದೆರಡು ದಂ ಚಿಲಮ್ ಆದರೂ ತೆಕೊಂಡು ಹೋಗು – ಮೋನಿ ಹೇಳಿದ.

ಅದೂ ಸರಿಯೇ ಎಂದು ಗಿರಾಜ್ ಕುಳಿತ. ಗದಲ್ ತನ್ನ ಎರಡನೆಯ ರೊಟ್ಟಿಗೆ ಕೈ ಹಾಕಿದಳು.

– ಒಂದು ದಮ್ಮು ಎಳೆಯುತ್ತಾ ಗಿರಾಜ ಕೇಳಿದ – ಸುದ್ದಿ ಕೇಳ್ದೇನೊ?

– ಏನು? ಮೋನಿ ಕೇಳಿದ.

– ನಿನ್ನ ಗದಲಿನ ಮೈದುನ ಡಾಂಡಿ ತೀರಿಕ್ಕೊಂಡ.

ಅದನ್ನು ಕೇಳಿದ ಗದಲ್‌ನ ಬಾಯಿ ರೊಟ್ಟಿ ಅಗಿಯುವುದನ್ನು ನಿಲ್ಲಿಸಿತು. ಒಂದು ಗುಟುಕು ನೀರಿನ ಸಹಾಯದಿಂದ ಬಾಯಲ್ಲಿದ್ದ ತುತ್ತನ್ನು ನುಂಗಿಕೊಂಡು ಮುಂದಿನ ಮಾತುಕತೆಯನ್ನು ಕೇಳತೊಡಗಿದಳು. ಕರುಳು ಕಿತ್ತುಕೊಂಡು ಬಂದಂತಾಯಿತು.

– ಹ್ಯಾಗ್ ಸತ್ತನಂತೆ?... ಮೋನಿ ಕೇಳಿದ... ಚನ್ನಾಗಿ ಕಟ್ಟುಮಸ್ತಾಗೇ ಇದ್ದ.

– ಸೀತ ತಗಲಿ ರಾತ್ರೆ ತೀರಿಕೊಂಡನಂತೆ.

ಹೊಸ್ತಿಲ ಬಳಿ ನಿಂತು ಗದಲ್ ಕೇಳಿದಳು – ಗಿರಾಜ್.

ಕಕ್ಕೀ... ಗಿರಾಜ್ ಹೇಳಿದ ...ನಿಜ ಕಕ್ಕೀ, ಸಾಯೋ ಕಾಲಕ್ಕೆ ನಿನ್ನ ಹೆಸರನ್ನೇ ಹೇಳಿ ಕೊಂಡು ಸತ್ತನಂತೆ... ಪಾಪ, ಬೋ ಒಳ್ಳೆ ಮನ್ಸ.

ಗದಲ್ ಸ್ತಬ್ಧಳಾಗಿ ನಿಂತಿದ್ದಳು.

ಗಿರಾಜ್ ಹೊರಟುಹೋದ.

ಗದಲ್ ಹೇಳಿದಳು – ಕೇಳ್ತಿದೀಯೇನು?

– ಏನೇ ಅದು?

– ನಾನು ಹೋಗಿ ಬರ್ತೀನಿ ಒಸಿ.

– ಎಲ್ಲಿಗೆ? ಅವನು ಆತಂಕಗೊಂಡು ಕೇಳಿದ.

– ಅಲ್ಲಿಗೆ.

– ಯಾಕೆ?

– ನನ್ನ ಮೈದುನ ತೀರಿಕೊಂಡಿದ್ದಾನೆ, ಹೋಗಿ ಬರ್ತೀನಿ.

– ಮೈದುನ? ಈಗ ನಿನ್ನ ಮೈದುನ ಹ್ಯಾಗಾಗ್ತಾನೆ ಅವನು?

ಗದಲ್ ನಕ್ಕು – ಜೋರಾಗಿ ಅರ್ಥಪೂರ್ಣವಾಗಿ ನಕ್ಕು – ಹೇಳಿದಳು – ನನ್ನ ಮೈದುನ ಮುಂದಿನ ಜನ್ಮದಲ್ಲಿ ಕೂಡ ನನ್ನ ಮೈದುನಾನೇ ಆಗಿರ್ತಾನೆ. ಅವನೇನಾದರೂ ನನ್ನ ವಿಷಯದಲ್ಲಿ ಕಠೋರವಾಗಿ ನಡೆದುಕೊಂಡಿದ್ದರೆ ಆ ಹೊಸಲು ದಾಟಿ ಬರೋವಾಗ ಕಾಲು ಮುರ್ಕೊಂಡ್ ಬರ್ಬೇಕಾಗಿತ್ತು. ಅವನು ಆ ಕಡೆ ಮನಸ್ಸು ಕೊಡಲಿಲ್ಲ. ಅದರಿಂದ ನಾನೂ ಕೊಡಲಿಲ್ಲ. ಅಷ್ಟೆ, ಆದರೆ ಈ ರೀತಿ ಅವನ ಮೇಲೆ ನಾನು ಸೇಡು ತೀರಿಸಿ ಕೊಂಡೆ.

ಹೇಳುತ್ತಾ, ಹೇಳುತ್ತಾ, ಅವಳು ಕಠೋರಗೊಂಡಳು.

—ನೀನು ಅಲ್ಲಿಗೆ ಹೋಗೋದಕ್ಕಾಗೊಲ್ಲ, ಮೋನಿ ಹೇಳಿದ.

—ಯಾಕೆ?... ಗದಲ್ ಕೇಳಿದಳು.... ನೀನು ತಡೀತೀಯೇನು, ಹಾಗಾದರೆ? ಇಷ್ಟು ತಿಳಿ, ನನ್ನ ಹೊಟ್ಟೇಲಿ ಹುಟ್ಟಿದ ನನ್ನ ಮಕ್ಕಳಿಂದ ನನ್ನನ್ನು ತಡೀಲಿಕ್ಕಾಗಲಿಲ್ಲ. ಈಗೇನಿದೆ? ಯಾರಿಗೆ ಮುಖಭಂಗ ಮಾಡಬೇಕು ಅಂದ್ಕೊಂಡಿದ್ನೋ ಅವನೇ ಇಲ್ಲ. ಇನ್ನು ನೀನ್ಯಾರು ನನ್ನನ್ನು ತಡೀಲಿಕ್ಕೆ? ನನ್ನ ಮನಸ್ಸಿಂದ ನಾನ್ ಬಂದಿದ್ದೆ, ಇಷ್ಟ ವಾದರೆ ಇರ್ತೇನೆ, ಇಲ್ಲ ಅಂದ್ರೆ ಇರೋಲ್ಲ. ನೀನೇನು ನನಗೆ ದುಡ್ಡು ಸುರಿದು ತಂದಿದ್ದೀ ಯೇನು? ನೀನೇ ಆ ಮನೇಲಿದ್ದು ಏನಾದರೂ ಹೀಗೆ ಹೇಳಿದ್ದಿದ್ದರೆ, ನಿನ್ನ ನಾಲಿಗೆ ಸೀಳಿ ಬಿಡ್ತಿದ್ದೆ...

—ಹೋಗ್ ಹೋಗೆ ನೋಡಿವ್ನಿ.

ಮೋನಿ ಅವಳ ಕೈ ಹಿಡಿದು ಒಳಗೆ ತಳ್ಳಿ, ಬಾಗಿಲಿಗೆ ಅಡ್ಡಲಾಗಿ 'ಮಂಚ' ಹಾಕಿ ಕೊಂಡು ಮಲಗಿ ಹುಕ್ಕಾ ಸೇದತೊಡಗಿದ.

ಗದಲ್ ಒಳಗೆ ಅಳತೊಡಗಿದಳು. ಆದರೆ ಒಂದಿಷ್ಟೂ ಮೋನಿಯ ಕಿವಿಗೆ ಬೀಳದಂತೆ ಒಳಗೇ ಅಳುತ್ತಿದ್ದಳು. ಇವೊತ್ತು ಗದಲ್‌ಳ ಹೃದಯ ಕರಗಿ ನೀರಾಗಿತ್ತು.

ರಾತ್ರಿಯ ಮೂರನೆಯ ಝಾವ ಕಳೆದಿರಬೇಕು. ಮೋನಿ ಚೆನ್ನಾಗಿ ನಿದ್ದೆ ಮಾಡು ತ್ತಿದ್ದನೆಂದು ಅವನ ಗೊರಕೆಯಿಂದ ಗೊತ್ತಾಯಿತು. ಗದಲ್ ತನ್ನ ಪೂರ್ತಿ ಶಕ್ತಿ ಬಿಟ್ಟು ಮನೆಯ ಛಾವಣಿಯ ಮೂಲೆಯನ್ನು ಎತ್ತಿದಳು. ಮತ್ತು ಹಾವಿನಂತೆ ಅದರ ಕೆಳಗಿ ನಿಂದ ತೂರಿಕೊಂಡು ಹೋಗಿ ಹೊರಗಡೆಗೆ ಧುಮುಕಿದಳು.

ಮೋನಿ ಏನು ಮಾಡಬೇಕೆಂದು ತೋಚದೆ ತಡಪಡಾಯಿಸಿದ. ಊರಿನೊಳಗೆ ಹೋಗಿ ಗಲಾಟೆ ಮಾಡಿ ದೊಣ್ಣೆಯಿಂದ ಎರಡು ಬಿಟ್ಟು ಅವಳನ್ನು ಎತ್ತಿಕೊಂಡು ಬರುವಷ್ಟು ಧೈರ್ಯ ಅವನಲ್ಲಿರಲಿಲ್ಲ. ಅವಳ ಮನೆಗೆ ಹೋಗಿ ಎಲ್ಲರ ಕಾಲು ಮುರಿದು ಬರಲೋ ಎಂದು ಮನಸ್ಸಾಗುತ್ತಿತ್ತು. ಈ ಮಧ್ಯೆ ಅವನ ಅತ್ತಿಗೆ ದುಲ್ಹೋ ಬೇರೆ ವ್ಯಂಗ್ಯವಾಗಿ ಮಾತನಾಡಿ ಅವನನ್ನು ಎತ್ತಿಕಟ್ಟುತ್ತಿದ್ದಳು. ನಿನ್ನ ಹೆಂಡತಿ ಮನೆ ಬಿಟ್ಟು ಓಡಿ ಹೋಗಿ ತಲೆ ತಗ್ಗಿಸೋ ಹಾಗೆ ಮಾಡಿದ್ದಾಳೆ ಎಂದು ಹೇಳುತ್ತಿದ್ದಳು. ಇದೆಲ್ಲ ಅವನಿಗೆ ನುಂಗಲಾಗದ ತುತ್ತಾಗಿತ್ತು. ತನ್ನ ಜಾತಿಯವರ ಕಿವಿಗೆ ಈ ಮಾತು ಬಿದ್ದಾಗ ಅವರು ಹೇಳಿದರು—ಒಬ್ಬ ಮುದುಕಿಗಾಗಿ ಮಾರಾಮಾರಿ ಆಗೋದು ಸರಿಯಲ್ಲ. ಅವಳಿಗಾಗಿ ನೀನಾದರೂ ಏನು ಖರ್ಚು ಮಾಡಿದೀಯಾ? ಎರಡು ದಿನ ನಿನ್ನ ಅನ್ನ ತಿಂದು ಹೋಗಿದ್ದಾಳೆ, ಆದರೆ ಇದ್ದಷ್ಟು ದಿನ ಮಾಡಿ ಹಾಕಿ ತಿನ್ನಿಸಿ ಹೋಗಿದ್ದಾಳೆ.

ಏನು ಮಾಡಬೇಕೆಂದು ತೋಚದೆ ಮೋನಿ ಕ್ರೋಧದಿಂದ ಚಡಪಡಿಸುತ್ತಿದ್ದ.

ಗದಲ್‌ನ ಗ್ರಾಮವಾದ ಘೋಟ್ಯಾದ ಗಿರಾಜ್ ಇಷ್ಟು ಸುದ್ದಿ ಕೊಟ್ಟು ಹೋಗಿದ್ದ:

ಅವಳು ತನ್ನ ಗ್ರಾಮವನ್ನು ತಲುಪಿದಾಗ ಪಟೇಲ ಕುಳಿತಿದ್ದ. ನಿಹಾಲ್ ಅವಳು

ಬಂದುದನ್ನು ಕಂಡು ಹೇಳಿದ್ದ – ಖಬರ್‌ದಾರ್, ಒಳಗೆ ಕಾಲಿಟ್ಟೀಯೋ! ಯಾಕ್ ವಾಪಸ್ಸು ಬಂದೆ?

ಪಟೇಲ ಕೂಡ ಅವಳನ್ನು ಕಂಡು ಅವಾಕ್ಕಾಗಿ ಕೇಳಿದ್ದ – ಈಗ ಏನ್ ತಗೊಂಡ್ ಹೋಗೋಕ್ ಬಂದಿದೀಯಮ್ಮಾ?

ಗದಲ್ ಅಲ್ಲಿಯೇ ಕುಳಿತು ಹೇಳಿದಳು – ನಾನಿನ್ನೂ ಚಿಕ್ಕವಳಾಗಿದ್ದಾಗ ನನ್ನನ್ನು ನೋಡೋದಕ್ಕೆ ನನ್ನ ಗಂಡ ಬಂದಿದ್ದಾಗ ಅವನ ಜೊತೇಲಿ ಬಂದಿದ್ದ. ದೊಣ್ಣೆ ಹಿಡಿದು ಬಂದಿದ್ದ ಅವನ ಕೈಯನ್ನೆ ನೋಡ್ತಾ ಇದ್ಬಿಟ್ಟೆ. ಒಳ್ಳೆ ಗಂಡಿದ್ದಾನೆ, ಕೊನೆಯ ದಿನಗಳಲ್ಲಿ ಇವನ ಆಸರೆಯಲ್ಲೇ ಇದ್ದುಬಿಟ್ಟರಾಯಿತು ಎಂದುಕೊಂಡಿದ್ದೆ. ನನ್ನ ಗಂಡ ಸತ್ತಮೇಲೆ ನಾನು ಅವನ ಕಡೆ ನೋಡಿ ಸಾಕಾದೆ, ಅವನು ಇಟ್ಟುಕೊಳ್ಳಲಾರದೆ ಹೋದ. ಆಗ ನಾನು ತಾನೇ ಏನ್ಮಾಡಬಹುದಿತ್ತು ಹೇಳಿ ಪಟೇಲರೇ? ನಾನಿಲ್ಲಿಲ್ಲವಲ್ಲ, ಇವರೇನು ಮಾಡಿದರು? ಎಂಟು ದಿನ ಕೂಡ ಅವನನ್ನು ಇಟ್ಟುಕೊಳ್ಳಲಿಕ್ಕೆ ಇವರಿಂದಾಗಲಿಲ್ಲ! ಇವರನ್ನು ನಂಬಿಕೊಂಡು ನಾನು ಇದ್ದೆ ಅಂದ್ಕೊಳ್ಳಿ, ಆಗ ಏನೇನು ಆಗ್ತಿತ್ತೊ!

ಪಟೇಲ ಹೇಳಿದ – ಆದರೂ ನೀನು ಮಕ್ಕಳು – ಮರಿ ಇರುವಾಗ ನಿನ್ನ ವಯಸ್ಸಿಗೆ ತಕ್ಕ ಹಾಗೆ ನಡೆದುಕೊಳ್ಳಲಿಲ್ಲ.

ಅದೂ ಸರಿಯೇ. ಗದಲ್ ಹೇಳಿದಳು, ನಾನು ವಯಸ್ಸಿನ ಕಡೆ ನೋಡಬೇಕಾಗಿತ್ತೋ ಈ ಮನೇಲಿ ನನ್ನ ಮರ್ಯಾದೆ ಕಡೇನೂ ನೋಡಬೇಕಾಗಿತ್ತೋ ನೀವೇ ಹೇಳಿ. ನನ್ನ ಮೈದುನನ ಜೊತೆಗೆ ನನ್ನ ಜಗಳ ಇತ್ತು ಅದು ಮುಗಿದುಹೋಯಿತು. ಇನ್ನು ಈ ಮಕ್ಕಳಿದ್ದಾರೆ. ನಾನು ಸಮಾಜ ಧರ್ಮಕ್ಕೆ ಹೊರಗಾದ ಮಾತನಾಡಿದ್ದರೆ ನನ್ನನ್ನು ಕೇಳಿ. ಪಂಚಾಯಿತಿ ಮುಂದೆ ಬೇಕಾದರೆ ಜವಾಬು ಕೊಡ್ತೇನೆ. ನನ್ನ ಮಕ್ಕಳು ಎನಿಸಿಕೊಂಡವರು ಸಮಾಜದ ನಿಯಮ ಮುರಿದರು. ಆವಾಗ ನೀವೆಲ್ಲ ಎಲ್ಲಿದ್ದಿರಿ ಅಂತ ಕೇಳ್ತೀನಿ.

– ಯಾವಾಗ? ...ಪಟೇಲ ಆಶ್ಚರ್ಯದಿಂದ ಕೇಳಿದ.

– ಪಟೇಲ ಹೇಳದೆ ಇದ್ದರೆ, ಇನ್ಯಾರು ಹೇಳಬೇಕು? ನನ್ನ ಗಂಡನ ಕ್ರಿಯೆ ನಡೆಸಿದಾಗ ಇಪ್ಪತ್ತೈದು ಜನಕ್ಕೆ ಕರೆದು ಊಟ ಹಾಕಿ ಕೈ ತೊಳೆದುಕೊಂಡುಬಿಟ್ಟ.

– ಅಯ್ಯೋ ಹುಚ್ಚಿ. ಇದು ಸರಕಾರದ ಕಾನೂನು. ಯಾರೇನು ಮಾಡೋಕಾಗುತ್ತೆ?

– ಕಾನೂನು ಇತ್ತೆ? ...ಗದಲ್ ನಕ್ಕು ಹೇಳಿದಳು... ಇಡೀ ಜಗತ್ತಿಗೆ ಇಲ್ಲದ ಕಾನೂನು ಇಲ್ಲಿಗೆ ಬಂತೆ ಪಟೇಲರೆ? ಕಾನೂನಿನಿಂದಲೇ ಎಲ್ಲ ನಡೆಯುತ್ತಿದೆಯೇನು? ಬೆಳಗಿನ ಹೊತ್ತಿನಲ್ಲೇ ಎಮ್ಮೆ ಬಿಟ್ಟುಕೊಂಡು ಬರೋಕೆ ಕಾನೂನಿಲ್ಲವೇನೋ! ನನ್ನ ಗಂಡನಿಗೇ ಕಾನೂನು ಬಂದಿತ್ತೇನೋ! ನಮ್ಮ ಅಪ್ಪ ಇನ್ನೇನು ಇಟ್ಟು ಹೋಗಿದ್ದಾನೆ, ಸುಮ್ಮನೆ ದುಡ್ಯಾಕೆ ಹಾಳುಮಾಡಬೇಕು ಎಂದು ಈ ಮಕ್ಕಳು ಯೋಚಿಸಿದರು ಅಂತ ಯಾಕೆ ಹೇಳೋದಿಲ್ಲ? ಹೇಡಿಗಳು ಎಲ್ಲೀವ್ರೋ!

ನಿಹಾಲ್ ಗುಡುಗಿದ – ಹೇಡಿಗಳು? ನಾವು ಹೇಡಿಗಳೇ? ನೀನು ಸಿಂಹಿಣಿ ಇರಬೇಕು, ಅಲ್ಲವೇ?

– ಹೌದೋ ನಾನು ಸಿಂಹಿಣಿನೇ!... ಗದಲ್ ಕೆಂಡಕಾರಿದಳು... ನಿನಗೆ ಆ ಧೈರ್ಯ ಇದೆಯೇನೋ, ಹೇಳು.

– ಹೇಳು, ಏನು ಹೇಳ್ತೀಯೋ, ಅವನೂ ಗುಡುಗಿದ.

– ಹೋಗು ಹಾಗಾದರೆ, ಹೋಗಿ ಊರಿನ ಜನಕ್ಕೆಲ್ಲ ಊಟಕ್ಕೆ ಹೇಳಿ ಬಾ, ಚಿಕ್ಕಪ್ಪನ ಕಾರ್ಯ ನಡೆಯುತ್ತೆ ಬನ್ನಿ ಅಂತ ಹೇಳು" – ಗದಲ್ ಹೇಳಿದಳು.

ನಿಹಾಲ್ ಕಕ್ಕಾಬಿಕ್ಕಿಯಾಗಿ ನೋಡುತ್ತಾ ಹೇಳಿದ – ಪೋಲೀಸ್‌ನವರು...

ಗದಲ್ ಎದೆ ತಟ್ಟಿಕೊಂಡು ಕೇಳಿದಳು – ಆಯಿತಾ?

– ಹೆಂಗಸು, ಬಾಯಿಗೆ ಬಂದಹಾಗೆ ಮಾತಾಡಬಹುದು... ಪಟೇಲ ಹೇಳಿದ... ಆದರೆ ಗುಂಡು ಹಾರಿಸುತ್ತಾರೆ ಬಂದು... ಆಗೇನ್ಮಾಡ್ಬೇಕೋ?

ಗದಲ್ ಪ್ರಲಾಪಿಸಿದಳು – ಧರ್ಮಧುರಂಧರರು ಎಲ್ಲಾ ಪಾಲಿಸುತ್ತಿರುವ ಧರ್ಮ ಇದು. ಗೂಜರರ ಸಂಪ್ರದಾಯಾನೇ ಹಾಳು ಮಾಡಲು ಹೊರಟಿದ್ದಾರೆ. ಯಾರದೂ ಆಸರೆ ಇಲ್ಲ. ಈಗ, ಹೇಡಿಗಳು ಎಲ್ಲಿಂದೋ, ಹೇಡಿಗಳು ಎಲ್ಲಾ.

ಸ್ವಲ್ಪ ಹೊತ್ತಿನ ಮೇಲೆ ಆವೇಶ ಬಂದಂತೆ ಹೇಳಿದಳು – ನಾನೇ ಹಾಗಾದರೆ ಮಾಡ ಲೇನು ಎಲ್ಲ ವ್ಯವಸ್ಥೆ?

– ನೀನು?... ನಿಹಾಲ್ ಕೇಳಿದ.

– ಹಾಂ, ನಾನು... ಅವಳ ಕಣ್ಣುಗಳಲ್ಲಿ ನೀರು ಉಕ್ಕಿ ಬಂತು. ಸಾಯುವಾಗ ನನ್ನ ಹೆಸರು ಹೇಳಿಕೊಂಡು ಸತ್ತಿದ್ದಾನಲ್ಲ, ಸರಿ ನಾನೇ ನಿಂತು ಎಲ್ಲಾ ಮಾಡ್ತೀನಿ.

ಮೋನಿ ಇದೆಲ್ಲವನ್ನೂ ಆಶ್ಚರ್ಯದಿಂದ ಕೇಳಿದ್ದ. ಗಿರಾಜ್ ಹೇಳಿದ್ದ, ಕರ್ಮ ಕಾಯಕದ ವ್ಯವಸ್ಥೆ ಬಹಳ ಜೋರಾಗಿ ನಡೆದಿದೆ ಅಂತ. ಗದಲ್ ದರೋಗಾಗೆ ಇದಕ್ಕಾಗಿ ಲಂಚ ಕೊಟ್ಟಿದ್ದಾಳೆ. ಅವನು ಅಲ್ಲಿಗೆ ಬರೋದೇ ಇಲ್ಲ. ಗದಲ್ ತಾನೇ ನಿಂತು ಎಲ್ಲ ವ್ಯವಸ್ಥೆ ಮಾಡ್ತಾ ಇದ್ದಾಳೆ. ಜನ ಹೇಳ್ತಿದಾರೆ, ತನ್ನ ಗಂಡ ಸತ್ತಾಗಲೂ ಅವಳು ಇಷ್ಟು ಆಸಕ್ತಿ ಯಿಂದ ನಿಂತು ಮಾಡಿರಲಿಲ್ಲ ಅಂತ.

ಗಿರಾಜ್ ಇದ್ದ ಸಮಾಚಾರ ಹೇಳಿ ಹೊರಟು ಹೋಗಿದ್ದ. ಆದರೆ ಮೋನಿಯ ಮನಸ್ಸಿ ನಲ್ಲಿ ವಿಷ ತುಂಬಿ ಹೋಗಿತ್ತು. ಕುಳಿತಲ್ಲಿಂದ ಏಳುತ್ತಾ ಅವನು ಹೇಳಿದ – ಗದಲ್, ಸರಿ, ನಿನ್ನ ಮನಸ್ಸಿನ ಆಸೆಯನ್ನು ಹೇಗೆ ತೀರಿಸಿಕೊಳ್ಳುತ್ತೀಯೋ ನೋಡಿಯೇಬಿಡುತ್ತೇನೆ. ನೀನು ದರೋಗಾನ ಕೈ ಬೆಚ್ಚಗೆ ಮಾಡಿ ಅವನ ಬಾಯಿ ಮುಚ್ಚಿಸಬೇಕು, ಆದರೆ ಅವನ ಮೇಲೂ ಸರ್ಕಾರ ಅನ್ನೋದು ಒಂದಿದೆ. ನಾನು ಕಸಬೆಗೆ ಹೋಗಿ ದೊಡ್ಡ ದರೋಗಾಜಿ ಸಾಹೇಬರ ಹತ್ತಿರ ಫಿರ್ಯಾದು ತೆಗೆದುಕೊಂಡು ಹೋಗ್ತೇನೆ.

(೮)

ಕರ್ಮ ಕಾರ್ಯಗಳು ನಡೆಯುತ್ತಿದ್ದುವು. ಪಂಕ್ತಿಗಳನ್ನು ಹಾಕುತ್ತಿದ್ದರು, ಊಟ ಮುಗಿಯುತ್ತಿತ್ತು. ಮತ್ತೆ ಹೊಸ ಪಂಕ್ತಿ ಬೀಳುತ್ತಿತ್ತು. ಬಾಂಡ್ಲಿಯಿಂದ ಭಕ್ಷ್ಯಗಳು ಇಳಿಯುತ್ತಿದ್ದುವು. ಹೊರಗಡೆ ಗಂಡಸರು ಎಲ್ಲ ವ್ಯವಸ್ಥೆಯಲ್ಲಿ ತೊಡಗಿದ್ದರು. ಜನರನ್ನು ಕೂರಿಸಿ ಕೂರಿಸಿ ಊಟ ಮಾಡಿಸಿ ಕಳುಹಿಸುತ್ತಿದ್ದರು. ಯುದ್ಧದ ಕಾಲದಲ್ಲಿ ಧಾನ್ಯವನ್ನು ಕೂಡಿಟ್ಟು ಕೂಡಿಟ್ಟು ಮಾರಿ ಬಂದ ನೋಟುಗಳನ್ನೆಲ್ಲ ಬೆಳ್ಳಿಯನ್ನಾಗಿ ಮಾಡಿ ಕೊಡಗಳಲ್ಲಿ ತುಂಬಿಟ್ಟಿದ್ದ ನಿಹಾಲ್ ಮತ್ತು ನಾರಾಯಣ – ಈಗ ಅದನ್ನು ಹೊರಕ್ಕೆ ತೆಗೆದಿದ್ದರು. ಸಾಹುಕಾರನ ಸಾಲ ಮಾತ್ರ ಏರಿಯೇ ಇತ್ತು. ಜನ ಮಾತ್ರ ಹೇಳ್ತಿದ್ರು – ಅಂತೂ ಗದಲ್ ಕೊನೆಗೂ ತನ್ನ ಹಠ ಸಾಧಿಸಿದ್ದಳು. ಅವಳ ಮಕ್ಕಳು ಅವಳ ಮುಂದೆ ಕೊನೆಗೂ ಸೋತಿದ್ದಾರೆ. ಕಾನೂನು ಇರಬಹುದು. ಆದರೆ ಸಮಾಜದ ಸಂಪ್ರದಾಯಕ್ಕೆ ಅದು ಮೀರಿ ಹೋಗಲು ಸಾಧ್ಯವೇ?

ಗದಲ್ ತುಂಬಾ ಆಯಾಸಗೊಂಡು ಹೆಂಗಸರ ಮಧ್ಯೆ ಕುಳಿತಿದ್ದಳು. ಇದ್ದಕ್ಕಿದ್ದಂತೆ ಬಾಗಿಲಲ್ಲಿ ಪೊಲೀಸರು ಕಾಣಿಸಿಕೊಂಡಂತಾಯಿತು. ಅದನ್ನು ಕಂಡು ಹೊರಕ್ಕೆ ಬಂದಳು. ನಿಹಾಲ್ ತಲೆ ತಗ್ಗಿಸಿ ನಿಂತಿದ್ದನು.

– ಏನು ಸಮಾಚಾರ ದಿವಾನ್‌ಜಿ?... ಗದಲ್ ಮುಂದಕ್ಕೆ ಹೋಗಿ ಕೇಳಿದಳು.

ಹೀಗೆ ಹೆಂಗಸೊಬ್ಬಳು ಮುಂದೆ ಬಂದು ಕೇಳಿದುದನ್ನು ಕಂಡು ದಿವಾನ್‌ಜಿ ಸ್ವಲ್ಪ ಕಕ್ಕಾಬಿಕ್ಕಿಯಾದರು.

ನಿಹಾಲ್ ಹೇಳಿದ – ಕಾರ್ಯ ನಿಲ್ಲಿಸಿ ಅಂತ ಹೇಳ್ತಿದಾರೆ.

– ಅದು ಹೇಗಾಗುತ್ತೆ?... ಗದಲ್ ಗಾಬರಿಗೊಂಡು ಕೇಳಿದಳು.

– ದರೋಗಾಜಿ ಹೇಳಿದ್ದಾರೆ – ದಿವಾನ್‌ಜಿ ಹೇಳಿದರು, ನಮ್ರತೆಯಿಂದ.

– ಯಾಕೆ? ಅವರನ್ನು ಕೇಳಿಯೇ ಇದೆಲ್ಲಾ ಮಾಡ್ತಿದ್ದೀವಿ ಅಲ್ಲವೇ?... ಇದರ ಸ್ಪಷ್ಟ ಸೂಚನೆ ಲಂಚ ಕೊಟ್ಟಿದ್ದೇವಲ್ಲ ಎಂಬುದೇ ಆಗಿತ್ತು.

ದಿವಾನ್‌ಜಿ ಹೇಳಿದರು – ಅದು ಗೊತ್ತಿದೆ. ದರೋಗಾಜಿ ಹೀಗೆ ಜನ ಒಂದು ಕಡೆ ಸೇರಿ ಕಾರ್ಯ ನಡೆಸುವುದನ್ನು ಒಪ್ಪುತ್ತಾರೆ, ಆದರೆ ಯಾರೋ ಹೋಗಿ ದೊಡ್ಡ ಸಾಹೇಬರ ಹತ್ತಿರ ಫಿರ್ಯಾದು ಕೊಟ್ಟಿದ್ದಾರೆ. ಅದಕ್ಕಾಗಿ ದರೋಗಾಜಿ ಹೇಳಿ ಕಳುಹಿಸಿದ್ದಾರೆ. ಜನರನ್ನು ಚದುರಿಸಿಬಿಡಿ. ಇಲ್ಲವಾದರೆ ಕಾನೂನಿನ ಕ್ರಮ ಅವಶ್ಯಕವಾಗುತ್ತೆ ಎಂದಿದ್ದಾರೆ.

ಕ್ಷಣಕಾಲ ಗದಲ್ ಯೋಚಿಸಿದಳು. ಫಿರ್ಯಾದು ಕೊಟ್ಟಿರುವವರು ಯಾರಿರಬಹುದು ಎಂದು ಯೋಚಿಸಿದಳು. ಅವಳಿಗೆ ಯಾರೆಂಬುದು ತೋಚದೆ ಹೋಯಿತು. ಹೇಳಿದಳು – ದರೋಗಾಜಿಯವರಿಗೆ ಮೊದಲು ಇದೆಲ್ಲ ಗೊತ್ತಾಗಿರಲಿಲ್ಲವೇ? ಈಗ

ಕುಲದ ಜನ ಬಂದು ಸೇರಿರುವಾಗ ಅವರನ್ನು ಚದುರಿಸಿ ಅಂತ ಹೇಳ್ತಿದಾರಲ್ಲ, ಹೇಗೆ ಸಾಧ್ಯ? ದಿವಾನ್‌ಜಿ, ನೀವೂ ಬಂದು ಊಟಕ್ಕೆ ಕುಳಿತುಕೊಳ್ಳಿ. ಏನಾಗುತ್ತೋ ಆಗಲಿ, ನೋಡೋಣವಂತೆ. ನಾವು ಹೇಳಿ ಕಳುಹಿಸುತ್ತೇವೆ. ದರೋಗಾಜಿ ಯಾಕೆ ಇಲ್ಲಿಗೆ ಬರ ಬೇಕು ಅದಕ್ಕಂತ? ಅವರು ಎಷ್ಟೇ ಆಗಲಿ, ರಾಜರು – ಧಣಿಗಳು.

ದಿವಾನ್‌ಜಿ ಹೇಳಿದರು – ಸರ್ಕಾರಿ ನೌಕರಿ ಇದೆ. ನೌಕರಿ ಹೋಗೋದಿಲ್ವೆ ಬರ್ದೆ ಇದ್ರೆ? ಅವರು ಬರಲೇ ಬೇಕಾಗುತ್ತೆ.

– ಬರ್ಲಿ ಬಿಡಿ ಹಾಗಾದರೆ – ಚುಚ್ಚುವ ರೀತಿಯಲ್ಲಿ ಗದಲ್ ಹೇಳಿದಳು – ಮನುಷ್ಯ ಸಾಯೋದು ಒಂದೇ ಸಲ. ಎಲೆ ಮುಂದೆ ಕುಳಿತಿರುವ ಅವರನ್ನು ನಾವು ಏಳಿಸಿ ಕಳುಹಿ ಸುವುದಕ್ಕೆ ಆಗುವುದಿಲ್ಲ.

ನಾರಾಯಣನಿಗೆ ಹೆದರಿಕೆಯಾಯಿತು. ದಿವಾನ್‌ಜಿ ಹೇಳಿದರು – ಎದ್ದು ಹೋಗ ಲಿಲ್ಲ ಅಂದ್ರೆ, ಎಲ್ಲರನ್ನೂ ದಸ್ತಗಿರಿ ಮಾಡಿ ಕರ್ಕೊಂಡು ಹೋಗ್ಬೇಕಾಗುತ್ತೆ, ತಿಳೀತೇನು? ಸರ್ಕಾರಾನ ಎದುರಿಸೋ ಸಾಹಸ ಮಾಡಬೇಡಿ.

...ಅರೆ, ಸರ್ಕಾರ ಅಂದ್ರೇನು ಸಮಾಜದ ಸಂಪ್ರದಾಯಕ್ಕೂ ಹೆಚ್ಚೇನು? ಸರ್ಕಾರಕ್ಕೆ ಹೆದರಿಕೊಂಡು ನಮ್ಮ ಧರ್ಮ ಕರ್ಮ ನಾವು ಬಿಡೋಕಾಗೋಲ್ಲ. ನಮ್ಮ ಧರ್ಮ ಕರ್ಮ ನೀವು ಕಿತ್ತುಕೊಂಡ ಮೇಲೆ ನಾವು ಯಾಕೆ ಬದುಕಬೇಕು?

ಥಪಾಥಪ್ ಕಾಲಿಡುತ್ತಾ, ಗದ್ಲ್ ಹೊರಟುಹೋದಳು.

ಇನ್ನೂ ಮೂರು ಪಂಕ್ತಿಗಳು ಮುಗಿದಿದ್ದುವು, ಕೊನೆಯ ಪಂಕ್ತಿ ಕೂತಿತ್ತು.

ನಿಹಾಲ್ ಮರೆಯಲ್ಲಿ ಹೇಳಿದ – ನಾರಾಯಣ್, ಬೇಗ ಮಾಡು, ಒಂದೇ ಪಂಕ್ತಿ ತಾನೇ ಮಿಕ್ಕಿರೋದು?

ಗದಲ್ ಛಾವಣಿಯ ಮರೆಯಿಂದ ಕರೆದಳು – ನಿಹಾಲ್.

ನಿಹಾಲ್ ಹೋದ.

– ಹೆದರ್ತೀಯೇನೊ? – ಗದಲ್ ಕೇಳಿದಳು.

ಒಣಗಿದ ತುಟಿಗಳ ಮೇಲೆ ನಾಲಿಗೆ ಆಡಿಸುತ್ತ ಹೇಳಿದ – ಇಲ್ಲ.

– ನನ್ನ ಹೊಟ್ಟೇಲಿ ಹುಟ್ಟಿದ್ದೀಯೆ, ಆ ಕೆಚ್ಚು ನಿನಗಿರಬೇಕು... ಗದಲ್ ಹೇಳಿದಳು... ನಿನ್ನನ್ನೇ ಮಗ ಅಂತ ತಿಳ್ಕೊಂಡು ಇನ್ನೊಂದು ಮದುವೆ ಆಗಲು ನಿನ್ನ ಚಿಕ್ಕಪ್ಪ ನಿರಾಕರಿ ಸಿದ್ದ. ಮರೀಬೇಡ, ಅವನ ಮಕ್ಕಳು ಅಂತಾ ಬೇರೆ ಯಾರೂ ಇಲ್ಲ.

ನಿಹಾಲ್ ತಲೆ ತಗ್ಗಿಸಿಕೊಂಡ.

ಒಬ್ಬ ಹುಡುಗ ಓಡಿ ಬಂದ.

– ಅಜ್ಜೀ... ಅವನು ಕೂಗಿದ.

– ಏನೋ ಅದು? ...ಅನುಮಾನಪಟ್ಟುಕೊಂಡು ಗದಲ್ ಕೇಳಿದಳು.

– ಪೋಲೀಸರು ಬಂದೂಕು ತಕೊಂಡು ಬರ್ತಿದ್ದಾರೆ.

ನಿಹಾಲ್ ಗದಲ್ ಕಡೆಗೆ ರಹಸ್ಯಮಯ ದೃಷ್ಟಿಯಿಂದ ನೋಡಿದ.

ಗದಲ್ ಹೇಳಿದಳು – ಪಂಕ್ತಿ ಏಳುವುದಕ್ಕೆ ಇನ್ನು ಹೆಚ್ಚು ಹೊತ್ತು ಬೇಕಾಗುವುದಿಲ್ಲ, ಮುಗಿಯುತ್ತಾ ಬಂದಿದೆ.

– ಆದರೆ ಅವರು ಒಪ್ಪಬೇಕಲ್ಲ ?

– ಅವರನ್ನು ತಡೆಯಬೇಕು.

– ಅವರ ಬಳಿ ಬಂದೂಕುಗಳಿವೆ.

– ಬಂದೂಕುಗಳು ನಮ್ಮ ಹತ್ತಿರಾನೂ ಇವೆ, ನಿಹಾಲ್ – ಗದಲ್ ಹೇಳಿದಳು... ಡಾಂಗ್ ಜಿಲ್ಲೆಯಲ್ಲಿ ಬಂದೂಕುಗಳಿಗೇನು ಕೊರತೆ ?

– ಆಮೇಲೆ ನಾವು ಹೊಟ್ಟೆಗೇನು ತಿನ್ಬೇಕು ?

– ಭಗವಂತ ಕೊಡೋದನ್ನು.

ಹೊರಗಡೆ ಪೊಲೀಸರ ವಾಹನದ ಹಾರನ್ ಕೇಳಿಸಿತು. ನಿಹಾಲ್ ಮುಂದೆ ಬಂದ. ವಾಹನದಿಂದ ಇಳಿದ ದರೋಗಾಜಿ ಕೇಳಿದ – ಸಮಾರಾಧನೆ ನಡೀತಿರೋದು ಇಲ್ಲೇ ಏನು ?

ನಿಹಾಲ್ ಮೌನವಾಗಿದ್ದ. ಯಾವ ಮನುಷ್ಯ ಲಂಚ ತೆಗೆದುಕೊಂಡಿದ್ದನೋ ಅವನಿಗೀಗ ಜನರ ಗುರುತೇ ಸಿಗುತ್ತಿರಲಿಲ್ಲ.

– ಹಾಂ, ಆಗುತ್ತಿರೋದು ಇಲ್ಲೇನೆ – ಅವನು ಒರಟು ಸ್ವರದಲ್ಲಿ ಉತ್ತರ ಕೊಟ್ಟ.

– ಇಪ್ಪತ್ತೈದು ಜನಕ್ಕಿಂತ ಹೆಚ್ಚು ಇದ್ದಾರೇನು ?

– ತಲೆ ಎಣಿಸಿ ನಾವು ಊಟ ಹಾಕೋಲ್ಲ ದರೋಗಾಜಿ.

– ಹಾಗಂತ ನೀವು ಕಾನೂನು ಮುರಿಯುವುದಕ್ಕೆ ಸಾಧ್ಯವಿಲ್ಲ.

– ಸರಕಾರದ ಕಾನೂನು ನಿನ್ನೆ ಮೊನ್ನೆಯದು, ಆದರೆ ಸಮಾಜ ಸಂಪ್ರದಾಯದ ಕಾನೂನು ಯಾವತ್ತೂ ಇರೋದು. ಸರಕಾರ ಕಟ್ಟಿಕೊಂಡು ನಮಗೇನು ? ನಮಗೆ ಬೇಕಾಗಿರುವುದು ನಮ್ಮ ಕುಲದ ಸಂಪ್ರದಾಯ.

– ಹಾಗಾದರೆ ನಾನು ದಸ್ತಗಿರಿ ಮಾಡಬೇಕಾಗುತ್ತದೆ.

ಗದಲ್ ಕೂಗಿದಳು – ನಿಹಾಲ್.

ನಿಹಾಲ್ ಒಳಗೆ ಹೋದ.

ಗದಲ್ ಹೇಳಿದಳು – ಪಂಕ್ತಿ ಏಳುವ ತನಕ ಅವರನ್ನು ತಡೆಯಲೇಬೇಕು.

– ಆಮೇಲೆ ?

– ಆಮೇಲೆ ಎಲ್ಲರನ್ನೂ ಹಿಂದಿನ ಬಾಗಿಲಿಂದ ಕಳುಹಿಸಿಬಿಡೋಣ. ಯಾರಾದರೂ ದಸ್ತಗಿರಿಯಾದರೆ, ಜನ ಏನೆಂದಾರು ?

– ಆದರೆ ಇವರು ಹಾಗೇ ನಿಲ್ಲುವವರಲ್ಲ. ಗುಂಡು ಹಾರಿಸುತ್ತಾರೆ.

– ನೀನು ಹೆದರಬೇಡ. ಮಾಡಿನ ಮೇಲೆ ನಾರಾಯಣ ಇನ್ನೂ ನಾಲ್ಕು ಜನರ ಜೊತೆ ಬಂದೂಕು ಹಿಡಿದು ಕುಳಿತಿದ್ದಾನೆ.

ನಿಹಾಲ್ ನಡುಗಿದ. ಗಾಬರಿಗೊಂಡ ಧ್ವನಿಯಲ್ಲಿ ಸಮಜಾಯಿಸಿಕೊಡಲು ಯತ್ನಿಸಿದ... ನಮ್ಮ ಹತ್ತಿರ ಇರೋದು ಸಾಧಾರಣ ಬಂದೂಕುಗಳು, ಅವರ ಹತ್ತಿರ ರೈಫಲ್‌ಗಳಿವೆ.

– ಏನಾದರೂ ಇರಲಿ. ಅಷ್ಟು ಹೊತ್ತಿಗೆ ಪಂಕ್ತಿ ಎದ್ದಿರುತ್ತೆ.

– ಆಮೇಲೆ.

– ನೀವೆಲ್ಲ ಓಡಬೇಕು.

ಹಠಾತ್ತನೆ ಲಾಟೀನು ಆರಿತು.

ಹೊರಗೆ ಢೈಂ, ಢೈಂ ಶಬ್ದ ಬರತೊಡಗಿತು. ಕತ್ತಲೆಯಲ್ಲಿ ಗುಂಡುಗಳು ಹಾರುತ್ತಿದ್ದುವು.

ಗದಲ್ ಕೂಗಿ ಹೇಳಿದಳು – ನನ್ನಾಣೆ, ಎಲ್ಲರೂ ಊಟಮಾಡಿ ಏಳಬೇಕು.

ಆದರೆ ಎಲ್ಲರಿಗೂ ಬೇಗ ಏಳುವ ಯೋಚನೆ.

ಹೊರಗಡೆ ಢೈಂ ಢೈಂ ಶಬ್ದ ಕೇಳುತ್ತಿತ್ತು. ಯಾರೋ ಚೀರಿಕೊಂಡು ಕೆಳಗೆ ಬಿದ್ದ.

ಪಂಕ್ತಿ ಕುಳಿತಿದ್ದವರು ಎದ್ದು ಹಿಂದುಗಡೆಯಿಂದ ಹೋಗತೊಡಗಿದರು.

ಎಲ್ಲರೂ ಹೋದಮೇಲೆ ಗದಲ್ ಮೇಲೆ ಹತ್ತಿದಳು. ಮತ್ತು ನಿಹಾಲನನ್ನು ಉದ್ದೇಶಿಸಿ ಹೇಳಿದಳು – ಬೇಟಾ.

ಅವಳ ಸ್ವರದಲ್ಲಿ ಮೂಡಿಬಂದ ತಾಯಿಯ ಅಖಂಡ ಮಮತೆಯನ್ನು ಗಮನಿಸಿ ನಿಹಾಲನ ಮೈ ನಿಮಿರೆದ್ದಿತು, ಆ ಕೋಲಾಹಲದ ಸನ್ನಿವೇಶದಲ್ಲಿ ಕೂಡ, ಗದಲ್ ಹೇಳಿದಳು – ನಿನಗೆ ನನ್ನ ಮೇಲಿನ ಆಣೆ. ಈಗ ನೀನು ನಾರಾಯಣ್ ಮತ್ತು ಹೆಂಡ್ತಿ ಮಕ್ಕಳನ್ನು ಕರ್ಕೊಂಡು ಹಿಂದಿನಿಂದ ಹೊರಟುಹೋಗು.

– ನೀನು ?

– ನನ್ನ ಯೋಚನೆ ಮಾಡಬೇಡ. ನಿನ್ನ ಚಿಕ್ಕಪ್ಪ ನನ್ನನ್ನು ಕರೀತಿದಾನೆ.

ನಿಹಾಲ್ ತರ್ಕಕ್ಕೆ ನಿಲ್ಲಲಿಲ್ಲ. ಗದಲ್ ಬಂದೂಕ ಹಿಡಿದಿದ್ದ ಒಬ್ಬನಿಂದ ಮದ್ದು ತುಂಬಿದ ಬಂದೂಕನ್ನು ಕಸಿದುಕೊಂಡು ಹೇಳಿದಳು – ಎಲ್ಲರೂ ಹೊರಟುಹೋಗಿ, ಹೊರಟು ಹೋಗಿ.

ಮಡದಿ ಮಕ್ಕಳ ಮೋಹದಲ್ಲಿ ಸಿಕ್ಕಿದ್ದ ಹುಡುಗರಿಗೆ ಆಪತ್ತಿನ ಈ ಸ್ಥಿತಿ ಅಂಧಕಾರದಲ್ಲಿ ಹಾಕಿಬಿಟ್ಟಿತು.

ಗದಲ್ ಬಂದೂಕಿನ ಕುದುರೆಯನ್ನು ಎಳೆದಳು. ಯಾರೋ ಕಿರುಚಿಕೊಂಡು ಬಿದ್ದರು. ಅವಳು ನಗುತ್ತಿದ್ದಳು. ಅಂಧಕಾರದಲ್ಲಿ ಕರಾಳ ಹಾಸ್ಯ ಕಿವಿಗೆ ಬಿದ್ದಿತು.

ಅದನ್ನು ಕೇಳಿದ ದರೋಗಾ ಅವಾಕ್ಕಾದನು. ಹೆಂಗಸಿನ ಧ್ವನಿ. ಗಂಡಸರೆಲ್ಲ ಎಲ್ಲಿ ಹೋದರು ? ಅವನ ಪ್ಯಾದೆಗಳು ಮನೆಯ ಘೇರಾವ್ ಹಾಕಿದರು. ಕೆಲವರು ಮೇಲೆ ಹತ್ತಿದರು. ಮತ್ತು ಗುಂಡು ಹಾರಿಸಿದರು. ಗುಂಡು ಗದಲ್‌ನ ಹೊಟ್ಟೆಗೆ ತಗಲಿತು.

(೯)

ಯುದ್ಧ ಸಮಾಪ್ತಿಯಾಗಿತ್ತು. ಗದಲ್ ರಕ್ತದಲ್ಲಿ ತೊಯ್ದುಹೋಗಿ ಬಿದ್ದಿದ್ದಳು. ಪೊಲೀಸರ ಗುಂಪು ಸೇರಿತ್ತು.

ದರೋಗಾ ಕೇಳಿದ – ಇಲ್ಲಿ ಯಾರೂ ಕಾಣುತ್ತಿಲ್ಲ!

– ಹುಜೂರ್... ಒಬ್ಬ ಪ್ಯಾದೆ ಹೇಳಿದ... ಈ ಹೆಂಗಸಿದ್ದಾಳೆ.

ದರೋಗಾ ಮುಂದೆ ಬಂದು ನೋಡಿ ಕೇಳಿದ – ಯಾರು ನೀನು?

ಗದಲ್ ಮುಗುಳ್ನಕ್ಕು ನಿಧಾನವಾಗಿ ಹೇಳಿದಳು – ಕಾರ್ಯ ಮುಗಿದು ಹೋಯಿತು, ದರೋಗಾಜಿ. ಆತ್ಮಕ್ಕೆ ಶಾಂತಿ ಸಿಕ್ಕಿತು.

ದರೋಗಾ ಗರ್ಜಿಸಿದ – ಅದು ಸರಿ, ನೀನ್ಯಾರು?

ಗದಲ್ ಇನ್ನೂ ತೀಕ್ಷ್ಣ ಸ್ವರದಲ್ಲಿ ಕೇಳಿದಳು – ಯಾರು ಒಂದು ದಿನ ಒಬ್ಬಂಟಿಗನಾಗಿ ಇರಲಾರದೆ ಹೋದನೋ, ಅವನವಳು...

ಅಷ್ಟು ಹೇಳಿ ತಲೆ ಕೊಡವಿದಳು. ಅವಳ ತುಟಿಗಳ ಮೇಲೆ ಮುಗುಳ್ನಗೆ ಅದೇ ರೀತಿಯಲ್ಲಿ ಇನ್ನೂ ಇತ್ತು... ಅಂಧಕಾರದಲ್ಲಿ ಹೊತ್ತಿಸಿಕೊಂಡು ಬಂದಿದ್ದಂತಹ... ಅದೇ ಹಳೆಯ, ಆರಿಹೋಗಿದ್ದ, ಲಾಟೀನಿನಂತೆ...

# ಮೂರನೆಯ ಶಪಥ

ಗಾಡಿ ಚಾಲಕ ಹಿರಾಮನ್ ಇವೊತ್ತು ತುಂಬಾ ಸಂತೋಷದಿಂದಿದ್ದಾನೆ; ಅವನ ಬೆನ್ನಿನ ಮೇಲೆ ಕಚಕುಳಿ ಇಟ್ಟಂತಾಗುತ್ತಿದೆ.

ಕಳೆದ ಇಪ್ಪತ್ತು ವರ್ಷಗಳಿಂದಲೂ ಅವನು ಎತ್ತಿನ ಗಾಡಿ ಓಡಿಸುತ್ತಿದ್ದಾನೆ. ಗಡಿಯ ಆಚೆ ಮೋರಂಗರಾಜ್ಯ ನೇಪಾಲದಿಂದ ಭತ್ತ ಹಾಗೂ ಮರದ ದಿಮ್ಮಿಗಳನ್ನು ಸಾಗಿಸಿ ಕೊಂಡಿರುವ ಪ್ರಸಂಗಗಳೂ ಇವೆ. ಕಂಟ್ರೋಲ್ ಕಾಲದಲ್ಲಿ ಒಂದು ಕಡೆಯಿಂದ ಇನ್ನೊಂದು ಕಡೆಗೆ ಕಳ್ಳತನದಲ್ಲಿ ದಿನಸಿ ಸಾಗಿಸಿರುವ ಪ್ರಸಂಗಗಳೂ ಇವೆ. ಕಳ್ಳಪೇಟೆಯ ಮಾಲು. ಯಾವತ್ತೂ ಹೀಗೆ ಕಚಕುಳಿ ಇಟ್ಟಂತೆ ಆಗಿರಲಿಲ್ಲ...

ಕಂಟ್ರೋಲಿನ ಕಾಲ. ಅದನ್ನು ಅವನು ಮರೆಯಲು ಸಾಧ್ಯವೇ? ಒಮ್ಮೆ ಸಿಮೆಂಟ್ ಮತ್ತು ಬಟ್ಟೆ ಗಂಟುಗಳಿಂದ ಕೂಡಿದ ಅವನ ಗಾಡಿ ಜೋಗಮನಿಯಿಂದ ಬಿರಾಲ್ ನಗರಕ್ಕೆ ಹೋಗಿ ತಲಪಿದಾಗ ಗುಂಡಿಗೆ ಹಾರಿಹೋದಂತಾಗಿತ್ತು. ಫಾರಬಿಸ್‌ಗಂಜಿನ ಪ್ರತಿಯೊಬ್ಬ ಕಳ್ಳಪೇಟೆ ವ್ಯಾಪಾರಿಗೂ ಗೊತ್ತಿತ್ತು ಅವನೆಷ್ಟು ದಕ್ಷ ಗಾಡಿಕಾರನೆಂದು. ಅವನ ಗಾಡಿಯ ಎತ್ತುಗಳನ್ನು ಮೆಚ್ಚಿಕೊಂಡ ಅನೇಕರ ಪೈಕಿ ದೊಡ್ಡ ದೊಡ್ಡ ಸೇಠ್‌ಜೀ ಗಳೂ ಇದ್ದರು. ದೊಡ್ಡ ಗದ್ದಿಯ ಸೇಠಜಿ ಬಿಚ್ಚುಮನಸ್ಸಿನಿಂದ ತಮ್ಮದೇ ಭಾಷೆಯಲ್ಲಿ ಅವನ ಎತ್ತುಗಳನ್ನು ಪ್ರಶಂಸಿಸುತ್ತಿದ್ದುದನ್ನು ಅವನೇ ಕೇಳಿದ್ದಾನೆ...!

ಗಡಿಯ ಈಚೆ ಇರುವ ಬೆಟ್ಟದ ತಪ್ಪಲಿನ ಪ್ರದೇಶದಲ್ಲಿ ಗಾಡಿ ಆದಿನ ಬರುವಾಗ ಐದನೆಯ ಬಾರಿಗೆ ಅದನ್ನು ಹಿಡಿಯಲಾಗಿತ್ತು.

ಕಳ್ಳಪೇಟೆಯ ದಳ್ಳಾಳಿಯ ಮುನೀಮ್‌ಜಿ ಮೂಟೆಗಳ ಮಧ್ಯೆ ಅವನದೇ ಗಾಡಿಯಲ್ಲಿ ಅವಿತುಕೊಂಡು ಕುಳಿತಿದ್ದನು. ದರೋಗಾ ಸಾಹೇಬರ ಒಂದೂವರೆ ಮೊಳದುದ್ದದ ಚೋರ್‌ಬತ್ತಿ–ಟಾರ್ಚ್–ಬೆಳಕು ಎಷ್ಟು ತೀವ್ರವಾಗಿರುತ್ತದೆ ಎಂದು ಹಿರಾಮನ್‌ಗೆ ಗೊತ್ತು. ಅದರ ಪ್ರಕಾಶಕ್ಕೆ ಸಿಕ್ಕಿಬೀಳುವ ಕಣ್ಣುಗಳು ಒಂದು ಗಂಟೆಯಷ್ಟು ಹೊತ್ತಾದರೂ ಕಾಣದಾಗುತ್ತವೆ. ಅಂತಹ ಕಣ್ಣು ಕುಕ್ಕುವ ಬೆಳಕು ಬೀಳುವ ಜೊತೆಗೆ ದರೋಗಾಜಿಯ ಗರ್ಜನೆ ಏನು ಕಡಿಮೆಯೇ? – "ಏಯ್, ಯಾರೋ ಅದು? ಗಾಡಿ ನಿಲ್ಲಿಸು – ಇಲ್ಲ ಎಂದಾದರೆ ಬಂದೂಕೆತ್ತಿಕೊಳ್ಳಬೇಕಾಗುತ್ತದೆ" ಎಂದು ಗುಡುಗಿದರೆ ಸಾಕು. ಬರುತ್ತಿದ್ದ ಇಪ್ಪತ್ತು ಗಾಡಿಗಳೂ ಒಂದೇ ಸಮಯಕ್ಕೆ ಕಟ-ಕಟ ಎಂದು ನಿಂತುಬಿಟ್ಟುವು. ದರೋಗಾಜಿ ಅವನ ಗಾಡಿಯ ಮೇಲೆ ಟಾರ್ಚ್ ಬಿಟ್ಟು ನೋಡಿದಾಗ ಮೂಟೆಗಳ ಮಧ್ಯೆ ಹುದುಗಿ ಕೊಂಡು ಕುಳಿತಿದ್ದ ಮುನೀಮ್‌ಜಿಯ ಮೇಲೆಯೇ ಟಾರ್ಚಿನ ಬೆಳಕು ಬೀಳಬೇಕೆ? ದರೋಗಾಜಿ ಒಂದು ಪೈಶಾಚಿಕ ನಗುವನ್ನು ನಗುತ್ತಾ ಹಾ...ಹಾ...ಹಾ ಎಂದರು.

ಮುನೀಮ್‌ಜಿ ಒಳಗಿಂದಲೇ ಹಿ–ಹಿ–ಹಿ, ಹೀ–ಹೀ–ಹೀ ಎಂದು ಹಲ್ಲುಕಿರಿದರು... "ಏಯ್ ಗಾಡಿ, ಏನೋ ಮುಖ ನೋಡ್ತಾ ಇದೀಯಾ?... ಬಾರೋ ಇಲ್ಲಿ, ಆ ಮೂಟೆಯ ಮೇಲಿರುವ ಕಂಬಳಿ ತೆಗಿ" ಎಂದು ಹೇಳಿ ದರೋಗಾಜಿ ಕೈಯಲ್ಲಿದ್ದ ಕೋಲಿನಿಂದ ಮುನೀಮ್‌ಜಿಯವರ ಹೊಟ್ಟೆಯನ್ನು ತಿವಿಯುತ್ತಾ ಹೇಳಿದರು... ಈ ಮೂಟೆ, ಬೊಡ್ಡಿ ಮಗನೇ...

ದರೋಗಾ ಸಾಹೇಬರು ಮತ್ತು ಮುನೀಮ್‌ಜಿ ಇವರ ಸಂಬಂಧ ತುಂಬಾ ಹಳೆಯದೇ ಇರಬೇಕು. ಎಂದೇ ಚೌಕಾಶಿ ಆರಂಭವಾಗಿತ್ತು. ಮುನೀಮ್‌ಜಿ ಗಾಡಿಯಲ್ಲಿ ಕುಳಿತೇ ನಾಲ್ಕು ಸಾವಿರ ರೂಪಾಯಿ ಕೊಡಲು ಸಿದ್ಧನಾಗಿದ್ದ. ಆದರೆ ದರೋಗಾಜ ಕೇಳಬೇಕಲ್ಲ. ಎರಡನೆಯ ಬಾರಿಗೆ ಲಾಠಿ ತಿವಿದು ಐದು ಸಾವಿರ ಎಂದರು. ಮತ್ತೊಮ್ಮೆ ಅದೇ ರೀತಿ ತಿವಿದು 'ಇಳಿ ಕೆಳಗೆ ಮೊದಲು' ಎಂದರು.

ಮುನೀಮ್‌ಜಿಯನ್ನು ಗಾಡಿಯಿಂದ ಕೆಳಗೆ ಇಳಿಸಿ ಒಮ್ಮೆ ಅವನ ಕಣ್ಣುಗಳ ಮೇಲೆ ತಮ್ಮ ಟಾರ್ಚಿನ ಬೆಳಕನ್ನು ಚೆಲ್ಲಿದರು. ಆಮೇಲೆ ಇಬ್ಬರು ಸಿಪಾಯಿಗಳ ಜೊತೆಗೆ ರಸ್ತೆಯಿಂದ ಸ್ವಲ್ಪ ದೂರದಲ್ಲಿದ್ದ ಮರದ ಕೆಳಗಡೆಗೆ ಅವನನ್ನು ಕರೆದುಕೊಂಡು ಹೋದರು. ಗಾಡಿಗಳು ಮತ್ತು ಅವುಗಳ ಚಾಲಕರ ಮೇಲೆ ಪಹರೆಗೆ ಐದು ಜನ ಸಶಸ್ತ್ರ ಪ್ಯಾದೆಗಳು... ಹಿರಾಮನ್‌ಗೆ ತಿಳಿದುಹೋಯಿತು, ಈ ಸಲ ಶಿಕ್ಷೆ ತಪ್ಪಿಸಿಕೊಳ್ಳುವ ಹಾಗಿಲ್ಲ ಎಂದು... ಜೈಲು? ಹಿರಾಮನ್‌ಗೆ ಜೈಲಿಗೆ ಹೋಗಬೇಕಲ್ಲ ಎಂಬ ಹೆದರಿಕೆಯೇನೂ ಇಲ್ಲ. ಆದರೆ ಅವನ ಎತ್ತುಗಳ ಗತಿ? ಹುಲ್ಲು-ನೀರು ಇಲ್ಲದೆ ಸರ್ಕಾರಿ ಕಚೇರಿಯ ಮುಂದೆ ಎಷ್ಟು ದಿನ ಬಿದ್ದಿರಬೇಕಾಗುತ್ತದೆಯೋ ಏನೋ! ಆಮೇಲೆ ಅವು ಹರಾಜಾಗುತ್ತವೆ. ಹೀಗಾದರೆ ಅಣ್ಣ-ಅತ್ತಿಗೆಗೆ ಮುಖ ತೋರಿಸುವುದಾದರೂ ಹೇಗೆ?... ಅವನ ಕಿವಿಗಳಲ್ಲಿ ಹರಾಜಿನ ಧಾಟಿ ಮೊಳಗಿತು – ಒಂದು ಸಲ, ಎರಡು ಸಲ, ಮೂರನೆಯ ಸಲ. ಮುನೀಮ್‌ಜಿ ಮತ್ತು ದರೋಗಾಜಿ ಇವರ ಮಧ್ಯೆ ಯಾಕೋ ಒಡಂಬಡಿಕೆ ಸಾಧ್ಯವಾದಂತೆ ಕಾಣುತ್ತಿಲ್ಲ.

ಹಿರಾಮನ್ ತನ್ನ ಗಾಡಿಯ ಬಳಿ ಪಹರೆಗೆ ನಿಯುಕ್ತರಾಗಿದ್ದ ಪ್ಯಾದೆ ತನ್ನ ಭಾಷೆಯಲ್ಲಿ ಹಾಗೂ ತಗ್ಗಿದ ಧ್ವನಿಯಲ್ಲಿ ಇನ್ನೊಬ್ಬ ಪ್ಯಾದೆಗೆ ಕೇಳುತ್ತಿದ್ದ – "ಏನಾಯಿತೋ? ...ವ್ಯವಹಾರ ಕುದುರಲಿಲ್ಲ ಅಂತ ಕಾಣುತ್ತಲ್ಲ?" ಆಮೇಲೆ ಹೊಗೆಸೊಪ್ಪು ಕೊಡುವ ನೆಪದಲ್ಲಿ ಅವನ ಕಡೆಗೆ ಹೋದ.

ಒಂದು–ಎರಡು–ಮೂರು. ಮೂರು ನಾಲ್ಕು ಗಾಡಿಗಳು ಅವನ ಗಾಡಿಗೆ ಅಡ್ಡವಾಗಿ ನಿಂತಿದ್ದುವು. ಹಿರಾಮನ್ ಮನಸ್ಸಿನಲ್ಲಿಯೇ ಒಂದು ತೀರ್ಮಾನಕ್ಕೆ ಬಂದ. ಅವನು ಮೆಲ್ಲನೆ ತನ್ನ ಎತ್ತುಗಳ ಕತ್ತಿನ ಹಗ್ಗ ಬಿಚ್ಚಿಬಿಟ್ಟನು. ಮತ್ತು ಅಲ್ಲಿ ಗಾಡಿಯ ಮೇಲೆಯೇ ಸಾವರಿಸಿ ಕುಳಿತು ಎರಡೂ ಎತ್ತುಗಳ ಹಗ್ಗಗಳನ್ನು ಜೊತೆಮಾಡಿ ಕಟ್ಟಿದನು. ಇದರಿಂದ ತಾವು ಮುಂದೆ ಏನು ಮಾಡಬೇಕೆಂದು ಎತ್ತುಗಳಿಗೆ ಗೊತ್ತಾಗಿಹೋಯಿತು. ಹಿರಾಮನ್

ಗಾಡಿಯಿಂದ ಇಳಿದು ಗಾಡಿಯ ಮೂಕಿಯನ್ನು ಹಾಗೆಯೇ ಕೆಳಗೆ ಇಳಿಸಿ ಎತ್ತುಗಳನ್ನು ಒಂದು ಪಕ್ಕಕ್ಕೆ ತೆಗೆದುಕೊಂಡನು. ಮತ್ತು ಎತ್ತುಗಳ ಕಿವಿಗಳ ಹತ್ತಿರ ಕೈಯಾಡಿಸಿ, ಕಚಕುಳಿ ಇಟ್ಟು, ಅವರಿಗನ್ನ್ವಯಿಸಿ ಮನಸ್ಸಿನಲ್ಲೇ ಹೇಳಿಕೊಂಡ – ನಡೀರಿ ಇನ್ನು, ಪ್ರಾಣ ಉಳಿದರೆ ಇಂತಹ ಎಷ್ಟು ಗಾಡಿಗಳನ್ನಾದರೂ ಮಾಡಿಸಬಹುದು? – ಏಕ್...ದೋ... ತೀನ್! ಒಂಭತ್ತು–ಎರಡು–ಹನ್ನೊಂದು!...

ಗಾಡಿಗಳ ಮರೆಯಲ್ಲಿ ರಸ್ತೆಯ ಅಂಚಿಗೆ ಹೊಂದಿಕೊಂಡು ಉದ್ದಕ್ಕೂ ದೊಡ್ಡ ದೊಡ್ಡ ಮರಗಳು ಬಹುದೂರದ ವರೆಗೂ ಇದ್ದುವು. ಉಸಿರು ಹಿಡಿದುಕೊಂಡು ಮೂರು ಪ್ರಾಣಿಗಳೂ ಮರಗಳ ಮರೆಯಲ್ಲಿ ಸದ್ದಿಲ್ಲದೆ ಸಾಗಿ ಪಾರಾದುವು. ಹುಂ–ಕುದುರೆ ಹೋದ ಹಾಗೆ ಹೋಗಬೇಕು. ಎರಡು ಎತ್ತುಗಳೂ ಮುಂದೆ ಬೆಟ್ಟದ ತಪ್ಪಲಿನ ಅರಣ್ಯಗಳ ಮಾರ್ಗವಾಗಿ ಓಡಿದುವು. ದಾರಿ ಮೂಸಿ ಮೂಸಿ ನೋಡಿಕೊಂಡು, ಹಳ್ಳಕೊಳ್ಳಗಳನ್ನು ದಾಟಿಕೊಂಡು, ಬಾಲ ಎತ್ತಿಕೊಂಡು ಓಡುತ್ತಿದ್ದುವು. ಅವುಗಳ ಹಿಂದೆಯೇ ಹಿರಾಮನ್ ಕೂಡ ಓಡುತ್ತಿದ್ದ. ಹೀಗೆ ಇಡೀ ರಾತ್ರಿ ಮೂವರೂ ಸದ್ಯ ಇಲ್ಲಿಂದ ಪಾರಾದರೆ ಸಾಕು, ಎಂದು ಹೀಗೆ ಓಡುತ್ತಾ...

ಮನೆ ತಲಪಿದ ಮೇಲೆ ಎರಡು ದಿನ ಏನೂ ತೋಚದಂತಾಗಿ ಹಿರಾಮನ್ ಬಿದ್ದು ಕೊಂಡಿದ್ದ. ಚೇತರಿಸಿಕೊಂಡು ಎದ್ದಮೇಲೆ ತಪ್ಪಿತಸ್ಥನಂಬಂತೆ ಕಿವಿ ಹಿಡಿದುಕೊಂಡು ಶಪಥ ಮಾಡಿಕೊಂಡ, ಇನ್ನುಮೇಲೆ ಇಂತಹ ಕಳ್ಳಪೇಟೆ ಮಾಲನ್ನು ಸಾಗಿಸುವ ತಪ್ಪು ಮಾಡುವುದಿಲ್ಲವೆಂದು. ತಪ್ಪಾಯಿತು–ತಪ್ಪಾಯಿತು. ಮುನೀಮ್‌ಜಿಯ ಕಥೆ ಏನಾ ಯಿತೋ ತಿಳಿಯದು. ಅವನ ಅಂತಹ ಒಳ್ಳೆ ಗಾಡಿ ಕೂಡ ಏನಾಯಿತೋ ಭಗವಂತನಿಗೇ ಗೊತ್ತು. ಅಪ್ಪಟ ಕಬ್ಬಿಣದ ಪಟ್ಟಿಗಳನ್ನು ಚಕ್ರಕ್ಕೆ ಹಾಕಿಸಿದ್ದ. ಎರಡು ಚಕ್ರಗಳ ಪೈಕಿ ಒಂದಂತೂ ಹೊಸಾಹೊಸದು. ಗಾಡಿಯಲ್ಲಿ ಅಲಂಕಾರಕ್ಕೆಂದು ಅಲ್ಲಲ್ಲೇ ಬಣ್ಣಬಣ್ಣದ ಹುರಿಗಳನ್ನೂ ಕಟ್ಟಿ ಗಂಟುಹಾಕಲಾಗಿತ್ತು...

ಅವನು ಎರಡು ಶಪಥ ಮಾಡಿದ್ದಾನೆ. ಒಂದು ಕಳ್ಳಪೇಟೆ ಮಾಲನ್ನು ತನ್ನ ಗಾಡಿಯಲ್ಲಿ ಇನ್ನು ಸಾಗಿಸುವುದಿಲ್ಲ ಎಂದು, ಇನ್ನೊಂದು ಗಾಡಿಯಲ್ಲಿ ಗಳ ಬೊಂಬು ಇತ್ಯಾದಿಗಳನ್ನು ಸಾಗಿಸುವುದಿಲ್ಲ ಎಂದು. ಏನು ಸಾಮಾನು ಸಾಗಿಸಬೇಕು ಎಂದು ಸ್ಪಷ್ಟವಾಗಿ, ಬಾಡಿಗೆಗೆ ಒಪ್ಪಿಕೊಳ್ಳುವಾಗಲೇ, ಕೇಳಿಕೊಂಡಿರುತ್ತಾನೆ. ಕಳ್ಳತನದ ಮಾಲು ಯಾವುದೂ ಇಲ್ಲ ತಾನೇ? ಮತ್ತು ಗಳಗಿಳ ಸಾಗಿಸುವುದಿಲ್ಲ ತಾನೇ? ಐವತ್ತು ರೂಪಾಯಿ ಜಾಸ್ತಿ ಕೊಡು ತ್ತೇವೆ ಎಂದರೂ ಅವನು ಗಳ ಹಾಕುವುದಿಲ್ಲ. ನನ್ನ ಗಾಡಿಯಲ್ಲಿ ಹಾಕುವುದಿಲ್ಲ, ಬೇರೆ ಯಾವುದಾದರೂ ನೋಡಿ ಎಂದುಬಿಡುತ್ತಾನೆ.

ಗಳ ತುಂಬಿರುವ ಗಾಡಿ. ಅದರ ಅನುಭವ ಕೂಡ ಅವನಿಗೆ ಆಗಿದೆ. ನಾಲ್ಕು ಕೈ ಉದ್ದದಷ್ಟು ಮುಂಭಾಗದಲ್ಲಿ, ನಾಲ್ಕು ಕೈ ಉದ್ದದಷ್ಟು ಹಿಂಭಾಗದಲ್ಲಿ ಗಳಗಳು ಚಾಚಿರು ತ್ತವೆ. ಇದರಿಂದಾಗಿ ಗಾಡಿ ಸ್ವಾಧೀನ ತಪ್ಪುವ ಸಂಭವವೇ ಹೆಚ್ಚು. ಆದುದರಿಂದ ಗಾಡಿ

ಯನ್ನು ತನ್ನ ಹತೋಟಿಯಿಂದ ತಪ್ಪಿಸುವ ಹೊರೆ ಸಾಗಿಸುವುದೇ ಬೇಡ; ಮತ್ತು ಪಟ್ಟಣದಲ್ಲಿ ಇಂತಹ ಹೊರೆಯ ಗಾಡಿಗಳನ್ನು ನೋಡಿ ಎಷ್ಟು ಜನ ಬೈಯುವುದಿಲ್ಲ. ಆ ಬೈಗುಳಗಳೂ ಬೇಡ. ಒಮ್ಮೆ ಹೀಗೆ ಬೊಂಬುಗಳನ್ನು ತುಂಬಿಕೊಂಡು ಹೋಗುತ್ತಿದ್ದಾಗ ಬಾಡಿಗೆಗೆ ಗಾಡಿಯನ್ನು ತೆಗೆದುಕೊಂಡಿದ್ದವನ ನೌಕರ ಗಾಡಿಯ ಹಿಂದೆ ನಾಲ್ಕು ಮಾರು ಹಿಂದಕ್ಕೆ ಚಾಚಿದ್ದ ಗಳಗಳನ್ನು ಹಿಡಿದುಕೊಂಡು ನಡೆದುಬರುತ್ತಿದ್ದ. ಸರಿಯಾದ ಸಮಯಕ್ಕೆ ಅವನು ಬೇರೆಲ್ಲೋ ನೋಡುತ್ತಾ ಬರುತ್ತಿದ್ದ. ಎತ್ತಿನ ಗಾಡಿ ಒಂದು ಕುದುರೆ ಗಾಡಿಗೆ ಡಿಕ್ಕಿ ಹೊಡೆಯುವ ಪ್ರಸಂಗ ಬಂತು. ಹಿರಾಮನ್ ಗಾಡಿ ನಿಲ್ಲಿಸುವ ಸಲುವಾಗಿ ಎತ್ತುಗಳ ಮೂಗಿನ ದಾರ ಎಳೆದಿದ್ದ. ಗಾಡಿಯ ಮುಂದೆ ನಾಲ್ಕು ಮಾರಿನಷ್ಟು ಜಾರಿದ್ದ ಗಳಗಳು ಹೋಗಿ ಕುದುರೆಗಾಡಿಯ ಮೇಲ್ಭಾಗದಲ್ಲಿ ಸಿಕ್ಕಿಕೊಂಡುವು. ಕುದುರೆಗಾಡಿಯವನು ತನ್ನ ಚಾಟಿಯಿಂದಲೇ ನಾಲ್ಕು ಬಾರಿಸಿ ಬಾಯಿಗೆ ಬಂದಹಾಗೆ ಬೈದಿದ್ದುದು ಇನ್ನೂ ಹಿರಾಮನ್‌ನ ನೆನಪಿನಲ್ಲಿ ನಿಂತುಹೋಗಿದೆ.

ಗಳಗಳನ್ನು ಸಾಗಿಸುವುದಿರಲಿ ಪೇಟೆಯಲ್ಲಿ ಗಾಡಿಯನ್ನು ಬಾಡಿಗೆಗೆ ಹೊಡೆಯುವುದನ್ನೇ ಹಿರಾಮನ್ ಬಿಟ್ಟುಬಿಟ್ಟಿದ್ದ. ಇದಾದಮೇಲೆ ಫಾರಬಿಸ್‌ಗಂಜಿನ ಬಾಡಿಗೆ ಹೊಡೆಯುವಾಗ ಕಳ್ಳಪೇಟೆ ಮಾಲಿನ ಪ್ರಸಂಗ ನಡೆದು ಈಗ ಅವನ ಪಾಲಿಗೆ ಗಾಡಿಯೇ ಇಲ್ಲದಂತಾಗಿತ್ತು... ಇದಾದ ಮೇಲೆ ಕೆಲವು ವರ್ಷ ಬಾಡಿಗೆಗೆ ಗಾಡಿ ತೆಗೆದುಕೊಂಡೇ ಕಾಲ ಹಾಕಿದ. ಅರ್ಧ ಬಾಡಿಗೆ ಅವನಿಗೆ ಇನ್ನರ್ಧ ಬಾಡಿಗೆ ಗಾಡಿ ಮಾಲಿಕನಿಗೆ. ಇಬ್ಬರಿಗೂ ಸಮಪಾಲು. ಬರುವ ಅರ್ಧ ಬಾಡಿಗೆಯಲ್ಲಿ ಎತ್ತುಗಳಿಗೆ ಏನು ಉಣಿಸಬೇಕು. ತಾನೇನು ತೆಗೆದುಕೊಳ್ಳಬೇಕು? ತಾನು ಮುಫತ್ತಿಗೆ ಗಾಡಿ ಹೊಡೆಯುತ್ತಿದ್ದಾನೆ! ಇದಕ್ಕಾಗಿಯೇ ಅವನು ಹೋದ ವರ್ಷ ತನ್ನ ಸ್ವಂತ ಗಾಡಿಯನ್ನು ಹೊಸದಾಗಿ ಮಾಡಿಸಿದ್ದ.

ಆ ಸರ್ಕಸ್ ಕಂಪೆನಿಯ ಬಾಡಿಗೆ ಬಂತು. ಭಗವತಿದೇವಿ ಆ ಸರ್ಕಸ್ ಕಂಪೆನಿಯ ಹುಲಿಗೆ ಒಳ್ಳೆಯದು ಮಾಡಲಿ. ಹೋದ ವರ್ಷ ಹಂಸಿ ಮೇಳದಲ್ಲಿ ಸರ್ಕಸ್ಸಿನ ಹುಲಿಯ ಗಾಡಿ ಎಳೆಯುತ್ತಿದ್ದ ಎರಡು ಕುದುರೆಗಳೂ ಸತ್ತಿದ್ದುವು. ಚಂಪಾನಗರದಿಂದ ಫಾರಸಿಮ್ ಗಂಜ್ ಮೇಳಕ್ಕೆ ಹೋಗುವ ಸಮಯದಲ್ಲಿ ಸರ್ಕಸ್ ಕಂಪೆನಿಯ ಮೆನೇಜರ್ ಎತ್ತಿನ ಗಾಡಿಗಳ ಕಟ್ಟೆಯಲ್ಲಿ ಬಾಡಿಗೆ ನೂರು ರೂಪಾಯಿ ಕೊಡುವುದಾಗಿ ಜಾಹೀರು ಮಾಡಿದ್ದ. ಒಬ್ಬಿಬ್ಬರು ಗಾಡಿಯವರು ಅದಕ್ಕೊಪ್ಪಿದರು. ಆದರೆ ಅವರ ಎತ್ತುಗಳು ಹುಲಿಯ ಗಾಡಿಯಿಂದ ಹತ್ತು ಮಾರು ದೂರ ಇರುವಾಗ 'ಅಂಬಾ' ಎಂದು ಚೀರಿಕೊಂಡು ಹೆದರಿ ಓಡಿ ಬಂದುವು. ಅಷ್ಟೇ ಅಲ್ಲ, ಹಗ್ಗ ಕಿತ್ತುಕೊಂಡು ಓಡಿದುವು. ಹಿರಾಮನ್ ತನ್ನ ಎತ್ತುಗಳ ಬೆನ್ನು ತಟ್ಟುತ್ತಾ ಹೇಳಿದ – "ನೋಡ್ರೊಪ್ಪೊ, ಇಂಥ ಒಂದು ಅವಕಾಸ ಇನ್ನೊಮ್ಮೆ ಸಿಗೋದಿಲ್ಲ. ಮತ್ತೆ ಸ್ವಂತ ಗಾಡಿಯನ್ನು ಮಾಡಿಸಲು ಇದೊಂದು ಒಳ್ಳೆ ಅವಕಾಸ. ಇದನ್ನು ಕಳೆದುಕೊಂಡರೆ ಮತ್ತೆ ಅದೇ ಅರ್ಧ ಬಾಡಿಗೆ ಬದುಕು... ಪಂಜರದಲ್ಲಿರುವ ಹುಲಿ ಏನು ಮಾಡೀತು? ಮೋರಂಗಿನ ಬೆಟ್ಟದ ತಪ್ಪಲುಗಳಲ್ಲಿ ನಿಮ್ಮ

ಮುಂದೆಯೇ ಹುಲಿಗಳು ಹಾದು ಹೋಗಿಲ್ಲವೇ? ಹೆದರಬೇಡಿ... ನಾನು ನಿಮ್ಮ ಬೆನ್ನಿನ ಮೇಲೆ ಹಾಜರಿರುತ್ತೇನಲ್ಲ!..."

ಗಾಡಿ ಹೊಡೆಯುವವರ ಗುಂಪಿನಲ್ಲಿ ಎಲ್ಲರೂ ಚಪ್ಪಾಳೆ ಹಾಕಿ ಕುಣಿದರು. ಹಿರಾಮನ್‌ನ ಎತ್ತುಗಳು ಅವರ ಮರ್ಯಾದೆ ಉಳಿಸಿದ್ದುವು. ಹುಂಕರಿಸಿ ಅವು ಮುಂದೆ ಹೋಗಿ ಒಂದೊಂದಾಗಿ ಹುಲಿಯ ಗಾಡಿಗೆ ಬೆನ್ನು ಕೊಟ್ಟಿದ್ದುವು. ಬಲಗಡೆಯ ಎತ್ತು ಗಾಡಿಗೆ ಬೆನ್ನು ಕೊಟ್ಟು ನಿಂತಮೇಲೆ ಹೆದರಿ ಒಂದು ರಾಶಿ ಗಂಜಳ ಹಾಕಿತ್ತು. ಅದರ ವಾಸನೆಗೆ ಹಿರಾಮನ್ ಎರಡು ದಿನ ಮೂಗಿನ ತಟ್ಟೆ ಬಿಚ್ಚಿರಲಿಲ್ಲ. ಗಂಜಳದ ವಾಸನೆಗಲ್ಲ, ಹುಲಿಯ ಮಲ-ಮೂತ್ರದ ವಾಸನೆಗೆ. ದೊಡ್ಡ ಗದ್ದಿಯ ದೊಡ್ಡ ಶೇಠರಂತೆ ಮೂಗಿಗೆ ಬಟ್ಟೆ ಕಟ್ಟಿಕೊಳ್ಳದೆ ಹೋದರೆ ಅದನ್ನು ತಡೆದುಕೊಳ್ಳುವುದು ದುಃಸ್ಸಾಧ್ಯ.

...ಹುಲಿಯ ಗಾಡಿಯನ್ನು ಹೊಡೆಯುವ ಕೆಲಸವನ್ನೂ ಹಿರಾಮನ್ ಹೀಗೆ ಮಾಡಬೇಕಾಗಿ ಬಂದಿತ್ತು. ಆದರೆ ಇವೊತ್ತು ಅವನಿಗೆ ಕಚಕುಳಿಯಾಗುತ್ತಿರುವಷ್ಟು ಹಿಂದೆಂದೂ ಆಗಿರಲಿಲ್ಲ. ಇವೊತ್ತು ಅವನ ಗಾಡಿಯಲ್ಲಿ ಆಗಾಗ ಸಂಪಿಗೆ ಹೂವಿನ ಸುವಾಸನೆ ಬರುತ್ತಿದೆ. ಬೆನ್ನಿನ ಭಾಗದಲ್ಲಿ ಹಿಂದಿನಿಂದ ಆಗುತ್ತಿದ್ದ ಈ ಕಚಕುಳಿಯಿಂದಾಗಿ ಅವನು ಆಗಾಗ ತನ್ನ ಕೈಯಿಂದ ಬೆನ್ನನ್ನು ಝಾಡಿಸಿಕೊಳ್ಳುತ್ತಿದ್ದಾನೆ.

ಎರಡು ವರ್ಷಗಳಿಂದ ಚಂಪಾನಗರದ ಮೇಳದ ಭಗವತಿಮಾತೆಯು ಅವನ ಬಗ್ಗೆ ಪ್ರಸನ್ನಳಾಗಿರುವುದಾಗಿ ಅವನಿಗೆ ಭಾಸವಾಗುತ್ತಿದೆ. ಹೋದವರ್ಷ ಹುಲಿಯ ಗಾಡಿಯನ್ನು ಓಡಿಸುವ ಕೆಲಸ ಸಿಕ್ಕಿ ಒಂದುನೂರು ರೂ. ಬಾಡಿಗೆಯ ಜೊತೆಗೆ ಮುಫತ್ತಿನಲ್ಲಿ ಚಹಾ-ಬಿಸ್ಕತ್ತು, ದಾರಿಯುದ್ದಕ್ಕೂ ಸರ್ಕಸ್ಸಿನ ತಮಾಷೆ ಇತ್ಯಾದಿ ದೊರಕಿದ್ದುವು. ಮತ್ತು ಈ ಸಲ ಈ 'ಜನಾನಿ-ಸವಾರಿ' – ಹೆಂಗಸು ತನ್ನ ಗಾಡಿಯಲ್ಲಿ ಕುಳಿತು ಪ್ರಯಾಣ ಮಾಡುತ್ತಿರುವುದು. ಹೆಂಗಸೆಂದಾರೂ ತಿಳಿದುಕೊಳ್ಳಿ, ಸಂಪಿಗೆಯ ಹೂವು ಎಂದಾದರೂ ತಿಳಿಯಿರಿ. ಅವಳು ಗಾಡಿಯಲ್ಲಿ ಕುಳಿತ ಸಮಯದಿಂದಲೂ ಗಾಡಿ ಸುವಾಸನೆಯಿಂದ ಕೂಡಿ ಘಮಘಮ ಎನ್ನುತ್ತಿದೆ.

ಕಚ್ಚಾ ರಸ್ತೆಯ ಒಂದು ಸಣ್ಣ ಹಳ್ಳಕ್ಕೆ ಗಾಡಿಯ ಬಲಗಡೆ ಚಕ್ರ ಧುಮುಕಿದ ಫಲವಾಗಿ ಗಾಡಿಯೊಳಗಿಂದ ಮೃದುವಾಗಿಯೇ 'ಸ್' ಎಂಬ ಸಣ್ಣ ಉದ್ಗಾರ ಬಂತು. ಅಷ್ಟೇ ಸಾಕು – ಹಿರಾಮನ್ ಬಲಗಡೆಯ ತನ್ನ ಎತ್ತಿಗೆ ಚಾಟಿ-ಕೋಲಿನಿಂದ ನಾಲ್ಕು ಬಾರಿ ಸುತ್ತಾ ಹೇಳಿದ – "ಮುಂಡೇದೆ, ಏನನ್‌ಕೊಂಡಿ? ಏನು ಮೂಟೆ ಹೊತ್ಕೊಂಡ್ ಓಡ್ತಿದೀನಿ ಅನ್‌ಕೊಂಡ್ಯಾ?"

– ಛೇ, ಹಾಗ್ಯಾಕ್ ಹೊಡೀತಿ, ಹೊಡೀಬೇಡ.

ಅಪರಿಚಿತ ಹೆಂಗಸಿನ ಈ ಮಾತಿನಿಂದ ಹಿರಾಮನ್ ತುಂಬಾ ಆಶ್ಚರ್ಯಪಟ್ಟ. ಮಕ್ಕಳ ತೊದಲುನುಡಿಯಂತೆ ಅದೆಷ್ಟು ಮಧುರ!

ಮಥುರಾ ಮೋಹನ್ ನೌಟಂಕಿ ಕಂಪೆನಿಯ ನಾಟಕದಲ್ಲಿ ಲೈಲಾ ಪಾತ್ರ ವಹಿಸುವ ಹೀರಾಬಾಯಿಯ ಹೆಸರು ಆ ಪ್ರಾಂತ್ಯದಲ್ಲಿ ಯಾರು ತಾನೇ ಕೇಳಿಲ್ಲ? ಆದರೆ ಎತ್ತಿನ ಗಾಡಿ ಓಡಿಸುವ ಹಿರಾಮನ್‌ಗೆ ಏನು ಗೊತ್ತು, ಪಾಪ. ಅವನಾಯಿತು ಅವನ ಬಾಡಿಗೆ ಯಾಯಿತು. ಬಾಡಿಗೆ ಹೊಡೆಯುವುದರಲ್ಲೇ ಅವನ ಸಮಯ ಕಳೆದುಹೋಗುತ್ತಿತ್ತು. ನೌಟಂಕಿ ಥಿಯೇಟರ್ ಹಾಗೂ ಬಯಾಸ್ಕೋಪ್ – ಸಿನಿಮಾಗಳಿಗೆ ಹೋಗುವ ಅವಕಾಶ ವಾದರೂ ಎಲ್ಲಿ ಬರಬೇಕು. ಲೈಲಾ ಹೆಸರಾಗಲಿ ಹೀರಾಬಾಯಿಯ ಹೆಸರಾಗಲಿ ಅವನ ಕಿವಿಗೆ ಬಿದ್ದಿರಲಿಲ್ಲ. ಇನ್ನು ನೋಡುವ ಮಾತೆಲ್ಲಿ? ಮೇಳ ಮುಗಿಯುವುದಕ್ಕೆ ಇನ್ನೂ ಹದಿನೈದು ದಿನ ಇದೆ ಎನ್ನುವಾಗ ಅರ್ಧ ರಾತ್ರಿ ಸಮಯದಲ್ಲಿ ಒಂದು ಕಪ್ಪು ಬಟ್ಟೆ ಯನ್ನು ಹೊದ್ದುಕೊಂಡು ತನಗೆ ಕಾಣಿಸಿಕೊಂಡ ಹೆಂಗಸೊಬ್ಬಳನ್ನು ನೋಡಿದಾಗ ಅವನ ಮನಸ್ಸಿನಲ್ಲಿ ಒಂದು ರೀತಿಯ ಭಯ ಉಂಟಾಗಿತ್ತು, ನಿಜ. ಅವಳ ಹಿಂದೆ ಪೆಟ್ಟಿಗೆ ಹೊತ್ತು ತಂದಿದ್ದ ಮನುಷ್ಯ ಬಾಡಿಗೆಯ ಚೌಕಾಶಿ ನಡೆಸಲು ತೊಡಗಿದ್ದ. ಆದರೆ ದಾವಣಿ ಯನ್ನು ಹೊದ್ದುಕೊಂಡಿದ್ದ ಹೆಂಗಸು ಚೌಕಾಶಿಗೆ ಅವಕಾಶ ಕೊಡದೆ ಅವನು ಹೇಳಿದ ಬಾಡಿಗೆಗೆ ಸಮ್ಮತಿ ನೀಡಿದ್ದಳು. ಹಿರಾಮನ್ ಗಾಡಿಯನ್ನು ಕಟ್ಟುತ್ತಾ ಆ ನೌಕರನನ್ನು ಕೇಳಿದ್ದ – "ಏನ್ ತಮ್ಮಾ, ಕಳ್ಳತನದ ಮಾಲು ಏನೂ ಇಲ್ಲ ತಾನೇ? ಇನ್ನೊಂದು ಆಶ್ಚರ್ಯದ ಸಂಗತಿಯೆಂದರೆ ಪೆಟ್ಟಿಗೆ ಹೊತ್ತು ತಂದಿದ್ದ ಮನುಷ್ಯ ಕೈಸನ್ನೆಯಿಂದಲೇ ಗಾಡಿಯನ್ನು ಬಿಡುವಂತೆ ಸೂಚಿಸಿ ಹಿಂದೆಯೇ ಆ ಅಂಧಕಾರದಲ್ಲಿ ಎಲ್ಲಿಯೋ ಮಾಯ ವಾಗಿ ಹೋದ. ಹಿರಾಮನ್‌ಗೆ ಹೆಂಗಸನ್ನು ಕಂಡು ಮೇಳದಲ್ಲಿ ತಂಬಾಕು ಮಾರುವ ಮುದುಕಿಯ ಕಪ್ಪು ಸೀರೆ ನೆನಪಿಗೆ ಬಂದಿತ್ತು...

ಇಂತಹ ಪರಿಸ್ಥಿತಿಯಲ್ಲಿ ಗಾಡಿಯನ್ನಾದರೂ ಹೇಗೆ ಓಡಿಸುವುದು?

ಒಂದು ಕಡೆ ಅವನ ಬೆನ್ನಿನಲ್ಲಿ ಕಚಕುಳಿ ಇಟ್ಟಂತಾಗುತ್ತಿದೆ. ಇನ್ನೊಂದು ಕಡೆ ಆಗಾಗ ತನ್ನ ಗಾಡಿಯಲ್ಲಿ ಸಂಪಿಗೆ ಹೂವು ಅರಳುತ್ತಿರುವುದು. ಎತ್ತುಗಳ ಮೇಲೆ ಗದರಿಕೊಳ್ಳುವ ಹಾಗೂ ಇಲ್ಲ – ಒಳಗಿನಿಂದ ಇಸ್‌ಬಿಸ್ ಆಕ್ಷೇಪಣೆ ಆರಂಭವಾಗುತ್ತದೆ, ಅವನ ಸವಾರಿ ಯಿಂದ... ಅವನ ಸವಾರಿ! ಒಬ್ಬಳೇ ಒಬ್ಬಳು ಹೆಂಗಸು, ಹೊಗೆಸೊಪ್ಪು ಮಾರುವ ಮುದುಕಿಯಲ್ಲ. ಧ್ವನಿ ಕಿವಿಗೆ ಬಿದ್ದಮೇಲೆ ಅವನು ಪದೇ ಪದೇ ಹಿಂದಕ್ಕೆ ತಿರುಗಿ ನೋಡಿ ತನ್ನ ಗಾಡಿಯೊಳಕ್ಕೆ ದೃಷ್ಟಿ ಹಾಯಿಸಿದ್ದಾನೆ. ಮತ್ತು ತನ್ನ ಅಂಗವಸ್ತ್ರದಿಂದ ಬೆನ್ನನ್ನು ಒದರಿಕೊಂಡಿದ್ದಾನೆ... ಈ ಸಲ ಅವನ ಅದೃಷ್ಟದಲ್ಲಿ ಏನು ಬರೆದಿದೆಯೋ ಭಗವಂತ ನಿಗೇ ಗೊತ್ತು. ಗಾಡಿ ಈಗ ಪೂರ್ವದ ಕಡೆಗೆ ತಿರುಗಿತು. ಬೆಳುದಿಂಗಳ ಒಂದು ಚೂರು ಅವನ ಗಾಡಿಯೊಳಕ್ಕೂ ಬೀಳತೊಡಗಿತು. ಸವಾರಿಯ ಮೂಗಿನ ಮೇಲೆ ಒಂದು ನಕ್ಷತ್ರ ಮಿನುಗಿತು, ಆ ಬೆಳಕಿಗೆ. ಹಿರಾಮನ್‌ಗೆ ಒಂದೂ ಅರ್ಥವಾಗುತ್ತಿಲ್ಲ. ಎಲ್ಲವೂ ರಹಸ್ಯಮಯವಾಗಿ ಕಾಣುತ್ತಿದೆ. ಮುಂಭಾಗದಲ್ಲಿ ಚಂಪಾನಗರದಿಂದ ಹಿಡಿದು ಸಿಂಧಿಯಾ

ಗ್ರಾಮದ ವರೆಗೆ ಮೈಚಾಚಿ ಹರಡಿರುವ ಮೈದಾನ... ಭೂತ, ಪ್ರೇತ ಯಾವುದೂ ತನ್ನ ಹಿಂದೆ ಬಿದ್ದಿಲ್ಲ ತಾನೆ?

ಹಿರಾಮನ್‌ನ ಸವಾರಿ ಬೇರೆ ಪಕ್ಕಕ್ಕೆ ಹೊರಳಿದ್ದಾಳೆ. ಚಂದ್ರನ ಬೆಳಕು ಈಗ ಅವಳ ಪೂರ್ತಿ ಮುಖದ ಮೇಲೆ ಬಿದ್ದಿದೆ. ಬಾಪರೇ, ಇವಳೊಬ್ಬ ಗಂಧರ್ವಕನ್ಯೆಯೇ ಸರಿ, ಎಂದು ಉದ್ಗಾರ ತೆಗೆದು, ಗಾಬರಿಗೊಂಡು, ಗಾಡಿಯನ್ನು ನಿಲ್ಲಿಸಿಬಿಡುತ್ತಾನೆ.

ಗಂಧರ್ವಕನ್ಯೆ ಕಣ್ಣು ಬಿಚ್ಚಿದಳು. ಹಿರಾಮನ್ ರಸ್ತೆಯ ಕಡೆಗೆ ಮುಖಮಾಡಿಕೊಂಡಿದ್ದಾನೆ. ಮತ್ತು ಎತ್ತುಗಳಿಗೆ ಮುಂದೆ ನಡೆಯಲು ಹೇಳುತ್ತಿದ್ದಾನೆ. ನಾಲಿಗೆಯನ್ನು ತಾರಕಕ್ಕೆ ಒತ್ತಿ ಹಿಡಿದು 'ಟ್ರ್ ಟ್ರ್' ಮಧ್ಯೆ ಮಧ್ಯೆ ಲೊಚಗುಟ್ಟುತ್ತಿದ್ದಾನೆ. ನಾಲಿಗ ಒಣಗಿಕೊಂಡಿದೆ.

– ಏನಮ್ಮಾ, ನಿಮ್ಮ ಹೆಸರೇನು?

ಆಕಳಿಸಿಕೊಂಡು ಏನೋ ತೊದಲುತ್ತಾಳೆ ಒಂದೊಂದೇ ಅಕ್ಷರ... ಹಿರಾಮನ್‌ನ ಜಂಘಾಬಲವೇ ಉಡುಗಿಹೋದಂತಾಗುತ್ತದೆ. ಬಾಯಿಂದ ಮಾತೇ ಹೊರಡುತ್ತಿಲ್ಲ. ಅವನ ಎತ್ತುಗಳೂ ಕಿವಿ ನಿಮಿರಿಸಿ ಆ ಭಾಷೆಯನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸುತ್ತವೆ.

– ನನ್ನ ಹೆಸರು... ನನ್ನ ಹೆಸರು ಹಿರಾಮನ್.

ಅದನ್ನು ಕೇಳಿ ಅವನ ಸವಾರಿ ಮುಗುಳ್ನಗುತ್ತದೆ... ಅವಳ ಆ ಮುಗುಳ್ನಗೆಯಲ್ಲಿ ಘಮ ಘಮ ವಾಸನೆ ಇದೆ.

– ಹಾಗಾದರೆ ನಾನು ನಿನ್ನನ್ನು ಮಿತಾ ಎಂದು ಕರೆಯುತ್ತೇನೆ, 'ಭೈಯಾ' ಅಲ್ಲ... ನನ್ನ ಹೆಸರೂ ಹೀರಾ.

– ಸ್‌ಸ್! ಗಂಡಸರು ಮತ್ತು ಹೆಂಗಸರ ಹೆಸರಿನಲ್ಲಿ ವ್ಯತ್ಯಾಸವಿರುತ್ತದೆಯೆಂಬುದೂ ತನಗೆ ಗೊತ್ತಿಲ್ಲವೇ?

– ಹಾಂ ಜೀ, ನನ್ನ ಹೆಸರೂನೂ ಹೀರಾಬಾಯಿಯೇ.

ಹಿರಾಮನ್ ಎಲ್ಲಿ, ಹೀರಾಬಾಯಿ ಎಲ್ಲಿ? – ಬಹಳ ವ್ಯತ್ಯಾಸವಿದೆ.

ತನ್ನ ಎತ್ತುಗಳ ಮೇಲೊಮ್ಮೆ ಅವನು ಗದರಿಕೊಂಡ... "ಕಿವಿ ನೆಟ್ಟಗೆ ಮಾಡಿ ಕಥೆ ಕೇಳ್ತಿದ್ದರೆ ಮೂವತ್ತು ಕೋಸಿನ ದಾರಿ ಮುಗಿಯೋದು ಹೇಗೆ? ಈ ಎಡಗಡೆದಿದೇಲ್ಲಾ, ಮೊಂಡುಬೀಳುತ್ತೆ," ಎಂದು ತನ್ನ ಚಾಟಿಯಿಂದ ಮೃದುವಾಗಿ, ಅದರ ಮೇಲೆ, ಎರಡು ಬಾರಿಸಿದ.

– "ಹೊಡಿಯೋದು ಬೇಡ, ನಿಧಾನವಾಗಿ ಹೋಗಲಿ, ಆತುರ ಏನು?"

ಹಿರಾಮನ್‌ನ ಮನಸ್ಸಿನಲ್ಲಿ ಈಗೊಂದು ಸವಾಲು ಹುಟ್ಟಿತು. ಹೀರಾಬಾಯಿ ಜೊತೆಗೆ ಯಾವ ರೀತಿ ತಾನು ಹರಟೆ ಕೊಚ್ಚುವುದು? ಏಕವಚನದಲ್ಲೋ ಬಹುವಚನದಲ್ಲೋ? ಅವನ ಭಾಷೆಯಲ್ಲಿ ದೊಡ್ಡವರನ್ನು 'ಆಪ್' ಎಂದು ಸಂಬೋಧಿಸುತ್ತಾರೆ.

ಹಳ್ಳಿ ಭಾಷೆಯಲ್ಲಿ ಅದು ಸ್ವಲ್ಪ ಬೇರೆಯಾಗುತ್ತದೆ. ಪುಸ್ತಕದ ಭಾಷೆಯಲ್ಲಿ ಮಿತವಾಗಿ ಒಂದೆರಡು ಮಾತಾಡಬಹುದು. ಮನಸ್ಸು ಬಿಚ್ಚಿ ಹರಟೆಹೊಡೆಯಬೇಕಾದರೆ ತನ್ನ ಗ್ರಾಮ್ಯ ಭಾಷೆಯೇ ಸರಿ.

ಆಶ್ವೀಜಮಾಸದ ಆಕಾಶದಲ್ಲಿ ಆವರಿಸುವ ಹಿಮದ ಬಗ್ಗೆ ಹಿರಾಮನ್‌ಗೆ ಯಾವಾಗಲೂ ಕೋಪ. ಅದರ ಕಾರಣದಿಂದಾಗಿ ಅವನು ಹಲವು ಬಾರಿ ದಾರಿ ತಪ್ಪಿರುವುದುಂಟು. ಇವೊತ್ತು ಆಕಾಶದಲ್ಲಿ ಅದೇ ರೀತಿಯ ಹಿಮ ಇದೆ. ಆದರೂ ಇವೊತ್ತು ಅವನು ತನ್ನಲ್ಲೇ ತಾನು ಮಗ್ನನಾಗಿಬಿಟ್ಟಿದ್ದಾನೆ. ಹೊಳೆಯ ಪಕ್ಕದ ಜಮೀನಿನಲ್ಲಿ ಘನವಾಗಿ ಬೆಳೆದಿರುವ ಭತ್ತದ ಫಸಲು ಇವೊತ್ತು ಅವನಿಗೆ ತುಂಬಾ ಆಹ್ಲಾದಕರವಾಗಿದ್ದು ಆ ಕಡೆ ಯಿಂದ ಗಾಳಿ ಬೀಸಿ ಬಂದಾಗ ಫಸಲಿನ ಸುವಾಸನೆಯನ್ನು ಹೊತ್ತು ತರುತ್ತಿದೆ. ಅವನ ಗಾಡಿಯಲ್ಲಿ ಮತ್ತೆ, ಸಂಪಿಗೆಯ ಹೂವು ಅರಳುತ್ತದೆ. ಆ ಹೂವಿನಲ್ಲಿ ಒಬ್ಬ ಗಂಧರ್ವ ಕನ್ಯೆ ಕುಳಿತಿದ್ದಾಳೆ... ಜೈ ಭಗವತಿ!

ಹಿರಾಮನ್ ತನ್ನ ಓರೆಗಣ್ಣಿನಿಂದ ಅವನ ಸವಾರಿಯ ಕಡೆಗೆ ದೃಷ್ಟಿ ಹಾಯಿಸಿ ನೋಡು ತ್ತಾನೆ... ಮಿೂತಾ. ಹೀರಾಬಾಯಿ ತನ್ನ ತೀಕ್ಷ್ಣ ದೃಷ್ಟಿಯಿಂದ ಅವನ ಕಡೆಗೇ ಆಗಾಗ ಕದ್ದು ನೋಡುತ್ತಿದ್ದಾಳೆ. ಅವನ ಹೃದಯದಲ್ಲಿ ತಂತಿ ಮಿೂಟಿದಂತಾಯಿತು. ಇಡೀ ದೇಹ ಪುಳಕಿತಗೊಂಡಿದೆ. ಎತ್ತಿಗೆ ಹೊಡೆದರೆ ನಿಮಗೆ ತುಂಬಾ ಬೇಸರವಾಗುತ್ತದೆಯೇನು?

ಹಿರಾಮನ್ ನಿಜಕ್ಕೂ 'ಹೀರಾ'–ಅಮೂಲ್ಯ ವಜ್ರ–ಎಂದು ಅವಳೀಗ ತಿಳಿದು ಕೊಂಡಿದ್ದಾಳೆ.

ನಲವತ್ತು ವರ್ಷ ವಯಸ್ಸಿನ ಕಪ್ಪು ದೃಢಕಾಯದ ಹಳ್ಳಿಗಾಡಿನ ಯುವಕ ತನ್ನ ಗಾಡಿ ಮತ್ತು ಎತ್ತುಗಳನ್ನು ಬಿಟ್ಟು ಬೇರೆ ಯಾವ ವಿಷಯದಲ್ಲಿ ತಾನೇ ಅಭಿರುಚಿ ತೋರಿಸಲು ಸಾಧ್ಯವಾದೀತು? ಮನೆಯಲ್ಲಿ ಇರುವ ಅವನ ಅಣ್ಣ ಹೊಲ-ಗದ್ದೆ ಕೆಲಸ ನೋಡಿಕೊಳ್ಳುತ್ತಾನೆ–ಅವನೊಬ್ಬ ಗೃಹಸ್ಥ. ಮಕ್ಕಳು-ಮರಿ ಎಲ್ಲ ಇದ್ದಾರೆ. ತನ್ನ ಅಣ್ಣನಿಗೆ ಕೊಡುವ ಗೌರವಕ್ಕಿಂತಲೂ ಅತ್ತಿಗೆಗೆ ಹಿರಾಮನ್ ಹೆಚ್ಚಿನ ಗೌರವ ಕೊಡು ತ್ತಾನೆ. ಅತ್ತಿಗೆಗೇ ಹೆಚ್ಚು ಹೆದರುತ್ತಾನೆ. ಹಿರಾಮನ್ ಮದುವೆ ಬಾಲ್ಯದಲ್ಲಿಯೇ ಆಗಿತ್ತು. ಆದರೆ ಮನೆಗೆ ಬಂದು ಸಂಸಾರ ಮಾಡುವ ಮೊದಲೇ ಅವನ ಹೆಂಡತಿ ತೀರಿಕೊಂಡಿದ್ದಳು. ಹಿರಾಮನ್‌ಗೆ ಅವನ ಹೆಂಡತಿಯ ಮುಖ ಕೂಡ ಜ್ಞಾಪಕವಿಲ್ಲ... ಎರಡನೆಯ ಮದುವೆ? ಎರಡನೆಯ ಮದುವೆ ಮಾಡಿಕೊಳ್ಳದಿರಲು ಅನೇಕ ಕಾರಣಗಳಿವೆ. ಒಬ್ಬ ಕುಮಾರಿ-ಕನ್ಯೆಯನ್ನೇ ಹುಡುಕಿ ಮೈದುನನಿಗೆ ಮದುವೆ ಮಾಡಬೇಕೆಂದು ಅತ್ತಿಗೆಯ ಹಠ. ಅವಳ ಲೆಕ್ಕದಲ್ಲಿ ಕುಮಾರಿ-ಕನ್ಯೆ ಎಂದರೆ ಆರೇಳು ವರ್ಷದ ಹುಡುಗಿ. ಶಾರದಾ-ಕಾನೂನನ್ನು ಯಾರು ಮಾನ್ಯ ಮಾಡುತ್ತಾರೆ? ಎರಡನೆಯ ಸಂಬಂಧಕ್ಕೆ ಹೆಣ್ಣು ಕೊಡಲು ಯಾವ ತಂದೆ ಒಪ್ಪುತ್ತಾನೆ?–ವಿಧಿಯಿಲ್ಲದೆ ಒಪ್ಪಬೇಕಾದ ಸಂದರ್ಭ ಇದ್ದರೆ ಮಾತ್ರ ಒಪ್ಪಬಹುದು. ಅವನ ಅತ್ತಿಗೆ ಮಾತ್ರ ತನ್ನ ಹಠ ಬಿಡಲಿಲ್ಲ–ಹಠಹಿಡಿದೇ

ಕೂತಿದ್ದಾಳೆ. ಅವಳ ಮಾತಿನ ಮುಂದೆ ಅಣ್ಣನ ಬೇಳೆ ಬೇಯುವುದಿಲ್ಲ... ಇಂತಹ ಪೇಚಿನ ಪರಿಸ್ಥಿತಿಯಲ್ಲಿ ಹಿರಾಮನ್ ಮದುವೆಯೇ ಬೇಡ ಎಂದು ತೀರ್ಮಾನ ಮಾಡಿಕೊಂಡಿದ್ದ. ಅದೊಂದು ಹೊಸ ತಲೆನೋವು. ಬೇಡವೇ ಬೇಡ. ಮದುವೆ ಮಾಡಿಕೊಂಡು ಗಾಡಿ ಬಾಡಿಗೆ ಧಂಧೆ ನಡೆಸುವುದಾದರೂ ಹೇಗೆ? ಬೇರೆ ಏನನ್ನಾದರೂ ಅವನು ಬಿಟ್ಟಾನು, ಆದರೆ ಗಾಡಿಬಾಡಿಗೆ ಕೆಲಸ ಬಿಡಲಾರ.

ಹೀರಾಬಾಯಿಯಂತೂ ಹಿರಾಮನ್‌ನಂತಹ ನಿಶ್ಚಲ ಮನಸ್ಸಿನ ಜನರನ್ನು ತುಂಬಾ ಕಡಿಮೆ ನೋಡಿದ್ದಾಳೆ. ನಿಮ್ಮ ಊರು ಯಾವ ಜಿಲ್ಲೆಯಲ್ಲಿ ಬರುತ್ತದೆ – ಎಂದು ಕೇಳಿದಳು. ಕಾನ್‌ಪುರ್ ಹೆಸರು ಕಿವಿಗೆ ಬೀಳುತ್ತಲೇ ಅವಳು ಜೋರಾಗಿ ನಕ್ಕುಬಿಟ್ಟಳು – ಅದನ್ನು ಕೇಳಿ ಎತ್ತುಗಳೂ ಬೆಚ್ಚಿಬಿದ್ದವು. ಹಿರಾಮನ್‌ಗೂ ನಗುಬಂದಿತ್ತು – ಅಂತಹ ಸಮಯದಲ್ಲಿ ಅವನು ತಲೆ ತಗ್ಗಿಸಿಕೊಳ್ಳುತ್ತಾನೆ. ನಗು ನಿಂತ ಮೇಲೆ ಹೇಳಿದ–ಕಾನ್ಪುರ್ ಜಿಲ್ಲೆ ಅಂತ ಇಲ್ಲವೇನು? ಹಾಗಾದರೆ ನಾಕಪುರ್ ಇರಬಹುದೋ ಏನೋ! ನಾಕ್‌ಪುರ್ ಕೂಡ ಇದೆ – ಎಂದು ಅವಳು ಹೇಳಿದಾಗ ಮತ್ತೆ ನಗುವಿನ ದೊಡ್ಡ ಲಹರಿಯೇ ಹರಿಯಿತು.

– ಏನು ಪ್ರಪಂಚವೋ ಏನೋ! ಏನೇನು ಹೆಸರುಗಳು. ಕಾನ್‌ಪುರ್, ನಾಕ್‌ಪುರ್! ಹಿರಾಮನ್ ತಿರುಗಿ ಹೀರಾಬಾಯಿಯ ಕಿವಿಯಲ್ಲಿದ್ದ ಆಭರಣ ನೋಡಿದ – ಕಣ್ಣಲ್ಲಿ ಕಣ್ಣಿಟ್ಟು ತದೇಕಚಿತ್ತನಾಗಿ, ಆಮೇಲೆ ಅವಳ ಮೂಗಿನ ಕಡೆ ದೃಷ್ಟಿಹೋಯಿತು – ಅದರ ಮೇಲಿನ ಆಭರಣ ಬೇರೆ. ಅವನ ಮನಸ್ಸು ಉದ್ಗರಿಸಿತು – ಎಷ್ಟು ಕೆಂಪು ರಕ್ತ ಚಿಮ್ಮುತ್ತಿದೆ!

ಹಿರಾಮನ್ ಹೀರಾಬಾಯಿಯ ಹೆಸರನ್ನು ಹಿಂದೆಂದೂ ಕೇಳಿರಲಿಲ್ಲ. ನೌಟಂಕಿ ಕಂಪೆನಿಯ ಹೆಂಗಸನ್ನು ಅವನು ಮರ್ಯಾದಸ್ಥೆ ಎಂದು ತಿಳಿಯಲು ಹೇಗೆ ಸಾಧ್ಯ? ಕಂಪೆನಿಗಳಲ್ಲಿ ಕೆಲಸ ಮಾಡುವ ಹೆಂಗಸರನ್ನು ಅವನು ನೋಡಿದ್ದಾನೆ. ಸರ್ಕಸ್ ಕಂಪೆನಿಯ ಒಡತಿ ತನ್ನ ಇಬ್ಬರು ಬೆಳೆದ ಹೆಣ್ಣುಮಕ್ಕಳೊಡನೆ ಹುಲಿಯ ಗಾಡಿಯ ಸಮೀಪಕ್ಕೆ ಬಂದು ನಿಲ್ಲುತ್ತಿದ್ದಳು. ಅಷ್ಟೇ ಅಲ್ಲ ಹುಲಿಗೆ ಅದರ ಆಹಾರ ಕೊಡುತ್ತಿದ್ದಳು. ಜೊತೆಗೆ ಅದನ್ನು ಪ್ರೀತಿಯಿಂದಲೂ ಕಾಣುತ್ತಿದ್ದು, ಅದನ್ನು ಮುದ್ದುಮಾಡುತ್ತಿದ್ದಳು. ಅವಳ ದೊಡ್ಡ ಮಗಳು ತನ್ನ ಎತ್ತುಗಳಿಗೂ ಡಬ್ಬಲ್ ರೋಟಿ-ಬಿಸ್ಕತ್ತುಗಳನ್ನು ತಿನ್ನಿಸಿದ್ದಳು.

ಹಿರಾಮನ್ ತುಂಬಾ ಹುಷಾರು. ಹಿಮ ಬೀಳುವುದು ಕಡಿಮೆಯಾಗಿದ್ದೇ ತಡ, ತನ್ನ ದುಪಟಿಯನ್ನು ಮೈಮೇಲಿಂದ ತೆಗೆದು ಅದನ್ನೇ ಗಾಡಿಯ ಟಾಪಿನ ಮೇಲೆ ಹಾಸಿ ಪರದೆಯನ್ನಾಗಿ ಮಾಡಿದ. ಎರಡು ಗಂಟೆ ಹೀಗಿರಲಿ. ದಾರಿ ಕಳೆಯುವುದು ಆಮೇಲೆ ಕಷ್ಟವಾಗುತ್ತೆ. ಕಾರ್ತಿಕಮಾಸದ ಬೆಳಗಿನ ಬಿಸಿಲು ಜೋರಾಗಿರುತ್ತೆ. ನಿಮಗೆ ಅದನ್ನು ತಡೆಯುವುದು ಕಷ್ಟವಾಗಬಹುದು. ಕಜರಿ ಹೊಳೆಯ ದಂಡೆಯಲ್ಲಿ ಗಾಡಿಯನ್ನು ನಿಲ್ಲಿಸಿ ಮಧ್ಯಾಹ್ನ ಕಳೆದು...

ಮುಂದುಗಡೆಯಿಂದ ಬರುತ್ತಿದ್ದ ಗಾಡಿಯನ್ನು ದೂರದಿಂದಲೇ ಕಂಡು ಗಂಭೀರನಾಗಿಬಿಟ್ಟ. ಗಾಡಿ ಚಕ್ರಗಳ ಗುರುತು ಮತ್ತು ತಮ್ಮ ಎತ್ತುಗಳ ಮೇಲಷ್ಟೆ ಅವನೀಗ ಧ್ಯಾನಾಸಕ್ತನಾಗಿ ಕುಳಿತುಬಿಟ್ಟ. ಎದುರಾಗಿ ಬಂದ ಗಾಡಿಯವನು ಕೇಳಿದ – "ಜಾತ್ರೆ ಮುಗೀತಾ ಇದೇಯೇನಪ್ಪೋ ?"

ಹಿರಾಮನ್ ಜವಾಬು ಕೊಟ್ಟ – "ಜಾತ್ರೆ ಇಚಾರ ನಂಗೊತ್ತಿಲ್ಲಪ್ಪೋ!" ಅವನ ಗಾಡೀಲಿರೋದು 'ಬಿದಾಗಿ'ಯ ಸವಾರಿ – ಅಂದರೆ, ಗಂಡನ ಮನೆಗೆ ನವವಧು ಹೋಗುತ್ತಿದ್ದಾಳೆ ಎಂದರ್ಥ. ಹಿರಾಮನ್ ಯಾವ ಊರಿನ ಹೆಸರು ಹೇಳಿದನೋ ಏನೊ ?

– ಛತಾಪುರ್–ಪಚೀರಾ ಯಾವ ಕಡೇಗಿದೆ ?

ಎಲ್ಲಾದರೂ ಇರಲಿ, ನಿಮಗ್ಯಾಕೆ ಅದು ? ಹಿರಾಮನ್ ತನ್ನ ಬುದ್ಧಿವಂತಿಕೆಗೆ ತಾನೇ ಮೆಚ್ಚಿಕೊಂಡು ನಗತೊಡಗಿದ. ಪರದೆ ಹಾಕಿದ್ದರೂ ತನ್ನ ಬೆನ್ನು ಕಚಕುಳಿ ಇಟ್ಟಂತಾಗುತ್ತಿದೆಯಲ್ಲ! ಪರದೆಯ ಸಂದಿನಿಂದ ನೋಡುತ್ತಾನೆ. ಹೀರಾಬಾಯಿ ಒಂದು ಕಡ್ಡಿಪೆಟ್ಟಿಗೆಯಷ್ಟು ಚಿಕ್ಕ ಕನ್ನಡಿಯಲ್ಲಿ ತನ್ನ ಹಲ್ಲುಗಳನ್ನು ನೋಡಿಕೊಳ್ಳುತ್ತಿದ್ದಾಳೆ. ಮದನ್‌ಪುರ್ ಜಾತ್ರೆಯಲ್ಲಿ ತನ್ನ ಎತ್ತುಗಳಿಗಾಗಿ ಚಿಕ್ಕಚಿಕ್ಕ ಕವಡೆಗಳ ಕತ್ತಿನ ಪಟ್ಟಿಯನ್ನು ಕೊಂಡು ಕೊಂಡಿದ್ದುದುಂಟು. ಅಂದವಾದ ಆ ಪುಟ್ಟಪುಟ್ಟ ಕವಡೆಗಳ ಪಂಕ್ತಿ ಇನ್ನೂ ಅವನ ಕಣ್ಮುಂದಿದೆ. ಅವು ಈಗ ಅವನಿಗೆ ಕೂಡಲೇ ನೆನಪಿಗೆ ಬಂದುವು.

ತೋಪಿನ ಆ ಮೂರು ದೊಡ್ಡ ಮರಗಳು ದೂರದಿಂದಲೇ ಅವನಿಗೆ ಈಗ ಕಾಣಿಸುತ್ತಿವೆ. ಹಿರಾಮನ್ ಪರದೆಯನ್ನು ಸ್ವಲ್ಪ ಜರುಗಿಸುತ್ತಾ ಹೇಳಿದ. ನೋಡಿ, ಇಲ್ಲಿಗೆ ಕಾಣುತ್ತಿವೆ ತೇಗಭಿಯಾ. ಕಾಣುತ್ತಿರುವ ಆ ಎರಡು ಮರಗಳು ವಟವೃಕ್ಷಗಳು – ನೇತಾಡುತ್ತಿರುವ ಆ ಜಟೆಗಳನ್ನು ನೋಡಿ. ಆ ಇನ್ನೊಂದು ಮರದಲ್ಲಿ ಹೂವುಗಳು ಬಿಡುತ್ತವೆ. ನಿಮ್ಮ ಮುಡಿಯಲ್ಲಿದೆಯಲ್ಲ ಅಂಥದೇ ಹೂವುಗಳು – ಒಳ್ಳೆ ಸುವಾಸನೆಯ ಹೂವು. ಎರಡು ಕೋಸಿನಷ್ಟು ದೂರಕ್ಕೆ ಅದರ ಘಮಘಮ ಇರುತ್ತದೆ. ಅದರ ಹೆಸರೇನೋ ತಿಳಿಯದು. ಅದನ್ನು ಹೊಗೆಸೊಪ್ಪಿನ ಜೊತೆಗೆ ಬೆರೆಸಿಕೊಂಡು ಹೊಗೆ ಎಳೆಯುತ್ತಾರೆ...

–"ಆ ತೋಪಿನ ಆಚೆ ಕೆಲವು ಮನೆಗಳು ಕಾಣುತ್ತಿವೆಯಲ್ಲ, ಯಾವುದಾದರೂ ಹಳ್ಳೀನೋ ಅಥವಾ ಅಲ್ಲಿ ಯಾವುದಾದರೂ ದೇವಸ್ಥಾನ ಗೀವಸ್ಥಾನ ಇದೆಯೇ ?"

ಹಿರಾಮನ್ ಬೀಡಿ ಹಚ್ಚಲು ಹೊರಟವನು ಕೇಳಿದ – "ಬೀಡಿ ಸೇದಬಹುದೇ ? ಬೀಡಿ ವಾಸನೆ ನಿಮ್ಮ ಮೂಗಿಗೆ ಬಡಿಯುದಿಲ್ಲವಷ್ಟೆ ?... ಅದೇ ನೋಡಿ ನಾಮಲಗರ್... ನಾವು ಯಾವ ರಾಜನ ಹೆಸರಿನ ಜಾತ್ರೆಯಿಂದ ಬರುತ್ತಿದ್ದೇವೆಯೋ ಅದೇ ರಾಜಮನೆತನ ಇದ್ದ ಸ್ಥಳ....ಹೋಯಿತ್ ಆ ಕಾಲ!"

ಹಿರಾಮನ್ "ಹೋಯಿತು ಆ ಕಾಲ" ಎಂದು ಹೇಳಿ ಅಲ್ಲಿಗೇ ಮಾತು ನಿಲ್ಲಿಸಿ ಕುತೂಹಲ ಕೆರಳಿಸಿದ್ದ. ಹೀರಾಬಾಯಿ ಪರದೆಯನ್ನು ಪಕ್ಕಕ್ಕೆ ಸಿಕ್ಕಿಸಿಬಿಟ್ಟಳು.

...ಹೀರಾಬಾಯಿಯ ಆ ದಂತ – ಪಂಕ್ತಿ !

–"ಯಾವ ಕಾಲ?" ...ಗಲ್ಲದ ಮೇಲೆ ಕೈಯಿಟ್ಟು ಅವಳು ಉತ್ಸುಕತೆಯಿಂದ ಕೇಳಿದಳು.

–ನಾಮಲಗರ್ ಡ್ಯೋಢಿಯ ಕಾಲ–ಹ್ಯಾಗಿತ್ತು!... ಹೇಗಿದ್ದಿದ್ದು ಹೇಗಾಯಿತು? ಹಿರಾಮನ್‌ಗೆ ತುಂಬಾ ರಸವತ್ತಾಗಿ ಮಾತನಾಡುವ ಕಲೆ ಗೊತ್ತಿತ್ತು.

ಹೀರಾಬಾಯಿ ಕೇಳಿದಳು–"ಆ ಕಾಲ ಹೇಗಿತ್ತು ಅನ್ನೋದನ್ನು ನೋಡಿದ್ದೀರಾ?"

–ನೋಡಿಲ್ಲ... ಕೇಳಿದ್ದೇನೆ... ರಾಜಾ ಹೇಗೆ ಹೋದ... ಅದು ತುಂಬಾ ದುಃಖದ ಕಥೆ. ದೇವರೇ ಅವನ ಮನೆಯಲ್ಲಿ ಜನ್ಮತಾಳಿದ್ದ. ಜನ್ಮತಾಳಿದ ಮಾತ್ರಕ್ಕೆ ದೇವತ್ವ ಹೋಯಿತೇ?... ದೇವರು ಎಲ್ಲಿದ್ದರೂ ದೇವರೇ... ಹೌದೋ ಅಲ್ಲವೋ? ಇಂದ್ರಾಸನ ಬಿಟ್ಟು ಮರ್ತ್ಯಲೋಕದಲ್ಲಿ ಜನ್ಮತಾಳಿದ ಮಾತ್ರಕ್ಕೆ ಅವನ ತೇಜಸ್ಸನ್ನು ಗಮನಿಸಲು ಸಾಧ್ಯವಾಗುವುದಿಲ್ಲವೇ? ಮುಖದ ಪ್ರಕಾಶ ಸೂರ್ಯಕಾಂತಿ ಹೂವಿನಂತೆ ಅರಳಿರುತ್ತದೆ. ಆದರೆ ದೃಷ್ಟಿಗೆ ಮಂಕುಬಡೆದಿತ್ತು. ಎಂದೇ, ಯಾರೂ ಗಮನಿಸಲಿಲ್ಲ. ಒಂದು ಸಲ ಲಾಟ್ ಸಾಹೇಬ್ ಮತ್ತು ಅವರ ಹೆಂಡತಿ ಮೋಟಾರ್ ಗಾಡಿಯಲ್ಲಿ ಅವರ ರಾಜನ ಮನೆಗೆ ಬಂದರು. ಮಗುವನ್ನು ನೋಡಿದರು. ಲಾಟ್‌ಸಾಹೇಬರಿಗೂ ತಿಳಿಯಲಿಲ್ಲ: ಆದರೆ ಅವರ ಹೆಂಡತಿ ಮಗುವಿನ ಮುಖದಲ್ಲಿದ್ದ ದೈವಕಳೆಯನ್ನು ಕೂಡಲೇ ಗುರುತಿಸಿದಳು ಮತ್ತು ರಾಜನನ್ನು ಉದ್ದೇಶಿಸಿ ರಾಜಾಸಾಹೇಬ್. ಇದು ಮನುಷ್ಯರ ಮಗು ಅಲ್ಲ, ದೇವತೆಯ ಮಗು ಎಂದು ಸ್ಪಷ್ಟವಾಗಿ ಹೇಳಿದಳು.

ಲಾಟ್ ಸಾಹೇಬ್, ಅಂದರೆ, ಗವರ್ನರ್ ಸಾಹೇಬರ ಹೆಂಡತಿ ಈ ಮಾತನ್ನು ಹೇಗೆ ಹೇಳಿರಬೇಕು ಎಂಬುದನ್ನು ಅಣಕಮಾಡಿ ಹೇಳಲು ಹೀರಾಮನ್ 'ಹೆವ್-ಫೆಲ್-ಲೆಟ್' ಎಂದು ಮುಂತಾಗಿ ಇಂಗ್ಲಿಷಿನ ಅಪಭ್ರಂಶ ಮಾಡಲು ಹೋಗಿದ್ದ. ಸ್ವಾರಸ್ಯವಾಗಿ ಅವನು ಮಾಡಿದ ಈ ಅಣಕ ಕೇಳಿ ಹೀರಾಬಾಯಿಗೆ ಎಲ್ಲಿಲ್ಲದ ನಗು ಬಂತು. ಹೊಟ್ಟೆ ಹುಣ್ಣಾಗುವಂತೆ ನಕ್ಕುಬಿಟ್ಟಳು. ಅವಳ ಇಡೀ ದೇಹ ಆ ಸಮಯದಲ್ಲಿ ಹತ್ತು ತುಂಡಾಯಿತು.

–ಹೀರಾಬಾಯಿ ತನ್ನ ಮೈಮೇಲಿನ ಹೊದಿಕೆಯನ್ನು ಸರಿಮಾಡಿಕೊಂಡಳು. ಆಗ ಹೀರಾಮನ್ ಮನಸ್ಸಿನಲ್ಲಿ ಹೇಗಾಯಿತು ಅಂದ್ರೆ... ಹೇಗಾಯಿತು ಅಂದ್ರೆ...

–ಆಮೇಲೆ? ಆಮೇಲೆ ಏನಾಯಿತು ಮಿತಾ?

–ಇಸ್ಸ್! ಕಥೆ ಕೇಳುವ ಶೋಕಿ ಬಹಳ ಅಂತ ಕಾಣುತ್ತೆ ನಿಮಗೆ? ...ಆದರೆ, ರಾಜಾ ಏನು, ಮಹಾರಾಜ ಆದರೂ ಕಪ್ಪು ಮನುಷ್ಯ ಕಪ್ಪು ಮನುಷ್ಯಾನೇ; ಸಾಹೇಬರಿಗಿರುವ ಬುದ್ಧಿ ಅವನಿಗೆಲ್ಲಿಂದ ಬರಬೇಕು! ಎಲ್ಲರೂ ನಕ್ಕುಬಿಟ್ಟು ಮಾತು ಹಾರಿಸಿದರು. ಆದರೆ ದೇವರು ಬಿಡಬೇಕಲ್ಲ–ರಾಣಿಯ ಸ್ವಪ್ನದಲ್ಲಿ ಬಂದೂ ಬಂದೂ ನನ್ನ ಸೇವೆ ನಡೆಸಿ ಎಂದು ಹೇಳಿಕೊಂಡರೂ ರಾಜಾ ರಾಣಿ ಮನಸ್ಸು ಆ ಕಡೆ ಹೋಗಲಿಲ್ಲ. ಹೋಗಲಿ ಬಿಡಿ, ನಿಮಗೇ ಇಲ್ಲ–ನಾನು ಹೋಗುತ್ತೇನೆ, ಇಲ್ಲಿ ಇರೋದೇ ಇಲ್ಲ. ಅದರ ನಂತರ ಶುರುವಾಯಿತು ನೋಡಿ ದೇವರ ಆಟ... ಎಲ್ಲಕ್ಕೂ ಮೊದಲು ಒಳ್ಳೇ ಇಷ್ಟಪಟ್ಟಿದ್ದ ಕೋರೆ

ಹಲ್ಲುಗಳಿದ್ದ ಎರಡು ಆನೆ ಸತ್ತುವು, ಆಮೇಲೆ ರಾಜನ ಕುದುರೆ ಸತ್ತಿತು, ಆಮೇಲೇನು ಎಲ್ಲ 'ಪಟಪಟಾಂಗ್'...

— ಪಟಪಟಾಂಗ್ ಎಂದರೇನು?

ಹೀರಾಮನ್‌ನ ಮನಸ್ಸು ಘಳಿಗೆ ಘಳಿಗೂ ಬದಲಾಯಿಸುತ್ತಿದೆ. ಮನಸ್ಸು ರಂಗು ರಂಗಾಗುತ್ತಿದೆ — ಕಾಮನಬಿಲ್ಲಿನ ಕೊಡೆ ಬಿಚ್ಚುತ್ತಿರುವ ಹಾಗೆ... ಅವನ ಗಾಡಿಯಲ್ಲಿ ದೇವಕುಲದ ಕುಳಿತಿರುವಂತೆ ಭಾಸವಾಗುತ್ತಿದೆ — ಅಪ್ಸರೆ ಎಲ್ಲಿ ಕುಳಿತಿದ್ದರೂ ಅಪ್ಸರೆಯೇ!

— "ಪಟಪಟಾಂಗ್! ಅಂದರೆ, ಧನಕನಕಾದಿ ಐಶ್ವರ್ಯ, ದೌಲತ್ತು, ಎಲ್ಲ ಸುತರಾಂ ಸಾಫ್! ದೇವತೆಯ ಇಂದ್ರಾಸನ ಇಲ್ಲವಾಯಿತು." ಹೀರಾಬಾಯಿ ಭಾವಪರವಶಳಾಗಿ ದೇವಸ್ಥಾನದ ಶಿಖರದ ಕಡೆ ನೋಡಿ ದೊಡ್ಡ ನಿಟ್ಟುಸಿರು ಬಿಟ್ಟಳು.

— ಆದರೆ ರಾಜನ ಮನೆಯನ್ನು ಬಿಟ್ಟು ದೇವರು ಹೋಗುವಾಗ ಇನ್ನೊಂದು ಮಾತು ಹೇಳಿಹೋದರು. ಈ ರಾಜ್ಯದಲ್ಲಿ ಒಂದು ಸಂತತಿ ಬಿಟ್ಟು ಇನ್ನೊಂದು ಆಗುವುದಿಲ್ಲ. ಐಶ್ವರ್ಯವನ್ನು ನಾವು ತೆಗೆದುಕೊಂಡು ಹೋಗುತ್ತೇವೆ, ಗುಣವನ್ನು ಬಿಟ್ಟು ಹೋಗುತ್ತೇವೆ. ದೇವರ ಹಿಂದೆಯೇ ಎಲ್ಲ ದೇವಿ ದೇವತೆಯರೂ ಹೊರಟುಹೋದರು. ಕೇವಲ ಸರಸ್ವತಿ ತಾಯಿ ಹಿಂದೆ ಉಳಿದಳು. ಅದೇ ಸರಸ್ವತಿದೇವಿಯ ದೇವಸ್ಥಾನ ಇದು.

ದೇಸಿ ಕುದುರೆಯ ಮೇಲೆ ಒಟ್ಟೆಯ ಗಂಟನ್ನು ಇಟ್ಟುಕೊಂಡು ಬರುತ್ತಿದ್ದ ಒಬ್ಬ ವ್ಯಾಪಾರಿಯನ್ನು ಕಂಡು ಹಿರಾಮನ್ ತನ್ನ ಗಾಡಿಯ ಪರದೆಯನ್ನು ಮತ್ತೆ ಹಾಕಿಕೊಂಡ. ಎತ್ತುಗಳನ್ನು ಓಡಿಸುವ ಸಲುವಾಗಿ ಕೂಗುಹಾಕಿ ದೇಶೀ ಭಾಷೆಯ ವಂದನಾಗೀತೆಯೊಂದನ್ನು ಹಾಡತೊಡಗಿದ — ಜೈ ಮೈಯಾ ಸರಸೋತಿ, ಅರಜೀ ಕರತ ಬಾನೀ ಹಮಾರಾ ಪರ ಹೋಖೂಸಹಾಯಿ ಹೈ ಮೈಯಾ, ಹಮಾರಾ ಪರ ಹೋಕು ಸಹಾಯಿ —

ಹಿರಾಮನ್ ಉಲ್ಲಾಸಗೊಂಡು, ಕುದುರೆಯ ಬಟ್ಟೆ ಗಂಟನ್ನಿಟ್ಟುಕೊಂಡು ಬರುತ್ತಿದ್ದ ವ್ಯಾಪಾರಿಯನ್ನು ಕುರಿತು, ಕೇಳಿದ — ಪಟುವಾ ಧಾರಣೆ ಹ್ಯಾಗಿದೆ ಮಹಾಜನಜೀ.

ಕುಂಟು ಕುದುರೆಯ ಬನಿಯಾ ಹೇಳಿದ — ಇಪ್ಪತ್ತೇಳು-ಇಪ್ಪತ್ತೆಂಟು ರೂಪಾಯಿಂದ ಹಿಡಿದು ಮೂವತ್ತರ ವರೆಗೆ, ಮಾಲಿಗೆ ತಕ್ಕಂತೆ ಧಾರಣೆ.

ಜೊತೆಯಲ್ಲಿಯೇ ಬರುತ್ತಿದ್ದ ಯುವಕ ವ್ಯಾಪಾರಿ ಕೇಳಿದ — ಜಾತ್ರೆ ಹೇಗೆ ನಡೀತಿದೇಣ್ಣಾ? ಯಾವ ನೌಟಂಕಿ ಕಂಪೆನಿಯ ಆಟ ಆಗ್ತಿತೆ — ರೌತಾ ಕಂಪೆನೀದೋ ಮಥುರಾಮೋಹನ್ ಕಂಪೆನೀದೋ?

— ಜಾತ್ರೆಯ ವಿಚಾರ ಜಾತ್ರೆಯ ಜನಕ್ಕೇ ಗೊತ್ತು. ಹಿರಾಮನ್ ಮತ್ತೆ ಛತಾಪುರ್—ಪಟೀರಾದ ಹೆಸರನ್ನೇ ಹೇಳಿದ.

ಸೂರ್ಯ ಸುಮಾರು ಎತ್ತರಕ್ಕೆ ಬಂದಿದ್ದ. ಹಿರಾಮನ್ ಈಗ ತನ್ನ ಎತ್ತುಗಳ ಜೊತೆಗೆ ಮಾತು ಆರಂಭಿಸಿದ. 'ಇನ್ನೂ ಒಂದು ಕೋಸಿನಷ್ಟು ದಾರಿ ತುಳಿಯಬೇಕು. ಸ್ವಲ್ಪ

ಜೋರಾಗಿ ಕಾಲಿಡಿ. ನೀರಡಿಕೆ ತೀರಿಸಿಕೊಳ್ಳುವ ಸಮಯ ಆಗ್ತಿದೆಯಲ್ಲ? ಜ್ಞಾಪಕ ಇದೆಯಾ ನಿಮಗೆ – ಆಗ ಬಂದಿದ್ದಾಗ ತೆಗಧಿಯಾ ಹತ್ತಿರ ಸರ್ಕಸ್ ಕಂಪೆನಿಯ ಜೋಕರ್ ಮತ್ತು ಕೋತಿ ಆಡಿಸುವ ಸಾಹಬ್ ಮಧ್ಯೆ ಜಗಳ ಆಗಿತ್ತು? ಆಗ ಜೋಕರ್ ಅಪ್ಪಟ ಕೋತಿಯ ಹಾಗೆ ಹಲ್ಲುಗಳನ್ನು ಕಿರಿಯುತ್ತಾ ಕಿ–ಕಿ–ಕಿ ಎಂದಿದ್ದ ...ಗೊತ್ತಿಲ್ಲ ಯಾವ ಯಾವ ಕಡೆಯಿಂದ ಎಂಥೆಂಥ ಜನ ಬರುತ್ತಾರೋ!

ಹಿರಾಮನ್ ಮತ್ತೆ ಪರದೆಯ ಸಂದಿನಿಂದ ನೋಡಿದ – ಹೀರಾಬಾಯಿ ಒಂದು ಚಿಕ್ಕ ಕಾಗದದ ಮೇಲೆ ತನ್ನ ದೃಷ್ಟಿಯನ್ನು ನೆಟ್ಟು ಕುಳಿತಿದ್ದಾಳೆ. ಹಿರಾಮನ್‌ನ ಮನಸ್ಸು ಇವೊತ್ತು ತುಂಬಾ ಹಗುರವಾಗಿದ್ದು ತುಂಬಾ ಗೆಲುವಾಗಿದ್ದಾನೆ. ಅವನಿಗೆ ವಿಧವಿಧವಾದ ಹಾಡುಗಳು ನೆನಪಿಗೆ ಬರುತ್ತಿವೆ. ಇಪ್ಪತ್ತು–ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ಹೊರಗಡೆಯಿಂದ ಬಂದಿದ್ದ ಭೋಕರಾ-ನಾಚ್‌ನವರು ಕುಣಿದುಕೊಂಡು ನಜಲ್ – ಖೇಮಟಾ ಹಾಡುಗಳನ್ನು ಹೇಗೆ ಗತ್ತಿನಿಂದ ಹಾಡಿದ್ದರು! ಈಗಲೂ ಹಾಡುತ್ತಾರೆ ಭೋಂಪಾಮ ಭೋಂಪು, ಭೋಂಪು ಎಂದು ಮುಂತಾಗಿ – ಅವೇನು ಹಾಡುಗಳೋ? ಭೋಕರಾ–ನಾಚಿನ ಒಂದು ಹಾಡು ಅವನ ನೆನಪಿಗೆ ಬಂತು...

ಸಜನವಾ ಬೈರಿ ಹೋಗಯೆ ಹಮಾರಾ! ಸಜನವಾ...
ಅರೆ, ಚಿಡಿಯಾ ಹೋ ತೋ ಸಬ್ ಕೋಯಿ ಬಾಂಚ್, ಚಿಡಿಯಾ ಹೋ ತೋ...
ಹಾಯ್! ಕರಮವಾ ಹಾಯ್ ಕರಮವಾ...
ಕೋಯಿ ನ ಬಾಂಚಿ ಹಮಾರೋ, ಸಜನವಾ... ಹೋ ಕರಮವಾ...

ಗಾಡಿಯ ಪಟ್ಟಿಯ ಮೇಲೆ ತನ್ನ ಹಾಡಿಗೆ ಕೈ ಬೆರಳುಗಳಿಂದ ತಾಳ ಹಾಕುತ್ತಾ ಇದ್ದ ಹಿರಾಮನ್ ತನ್ನ ಹಾಡನ್ನು ಅಷ್ಟಕ್ಕೇ ನಿಲ್ಲಿಸಿದ. ಭೋಕರಾ-ನಾಚಿನ ಮನುವಾ-ನಟುವಾ ಮುಖ ಹೀರಾಬಾಯಿಯ ಮುಖದಂತೆಯೇ ಇತ್ತು... ಎಲ್ಲಿ ಹೋಯಿತು ಆ ಹಿಂದಿನ ಕಾಲ? ಊರಿಗೆ ಪ್ರತಿ ತಿಂಗಳೂ ಕುಣಿಯುವವರ ಒಂದಲ್ಲ ಒಂದು ತಂಡ ಬರುತ್ತಿತ್ತು. ಅವರು ಕುಣಿಯುವುದನ್ನು ನೋಡುತ್ತಾ ನಿಂತಿದ್ದಾಗ ತನ್ನ ಅತ್ತಿಗೆಯಿಂದ ಬೈಸಿಕೊಳ್ಳ ಬೇಕಾದ ಪ್ರಸಂಗವೂ ಬಂದಿತ್ತು. ಮನೆಯಿಂದ ಹೊರಗೆ ಹಾಕುತ್ತೇನೆ ಎಂದು ಅಣ್ಣನೂ ಗದರಿಸಿದ್ದ.

ಇವೊತ್ತು ಹಿರಾಮನ್‌ಗೆ ಸರಸ್ವತಿದೇವಿಯ ಅನುಗ್ರಹ ಆಗಿದೆ ಎಂದು ತೋರುತ್ತದೆ. ಹೀರಾಬಾಯಿ ಹೇಳಿದಳು – "ವಾಹ್, ನೀವೆಷ್ಟು ಚೆನ್ನಾಗಿ ಹಾಡುತ್ತೀರಿ!"

ಅದನ್ನು ಕೇಳಿ ಅವನ ಮುಖ ಕೆಂಪಾಗಿ ಹೋಗಿತ್ತು. ತಲೆ ತಗ್ಗಿಸಿಕೊಂಡು ನಗುತ್ತಿದ್ದ. ತೆಗಧಿಯಾದ ಬಳಿ ಒಂದು ಗಾಡಿಯೂ ಇಲ್ಲ. ಇಲ್ಲಿ ಯಾವಾಗಲೂ ಗಾಡಿಗಳು ನಿಂತಿರು ತ್ತವೆ. ಒಬ್ಬ ಸೈಕಲ್‌ಸವಾರನು ಮಾತ್ರ ಅಲ್ಲಿ ಕುಳಿತು ಒಂದಿಷ್ಟು ವಿರಾಮ ತೆಗೆದು ಕೊಳ್ಳುತ್ತಿದ್ದಾನೆ. ಮಹಾವೀರ ಸ್ವಾಮಿಯನ್ನು (ಆಂಜನೇಯ) ಸ್ಮರಿಸಿಕೊಂಡು

ಹಿರಾಮನ್ ತನ್ನಗಾಡಿಯನ್ನಲ್ಲಿ ನಿಲ್ಲಿಸಿದ. ಹೀರಾಬಾಯಿ ಪರದೆ ತೆಗೆಯಲುದ್ಯುಕ್ತಳಾದಳು. ಆಗ ಮೊದಲ ಬಾರಿಗೆ ಹಿರಾಮನ್ ಅವಳನ್ನು ಮುಖಕ್ಕೆ ಮುಖಕೊಟ್ಟು ಮಾತನಾಡಿಸಿದ. ಆ ಸೈಕಲ್‌ಸವಾರ ಅವರನ್ನೇ ದಿಟ್ಟಿಸಿ ನೋಡುತ್ತಿದ್ದ.

ಎತ್ತುಗಳನ್ನು ಬಿಚ್ಚುವುದಕ್ಕೆ ಮೊದಲು ಗಾಡಿಗೆ ಗಳುವಿನ 'ಟಿಕಲಿ'ಯನ್ನು ಆಸರೆಯಾಗಿ ಕೊಟ್ಟು ನಿಲ್ಲಿಸಿದ. ಅನಂತರ ಸೈಕಲ್‌ಸವಾರನ ಕಡೆಗೆ ಮತ್ತೆ ಮತ್ತೆ ದುರುಗುಟ್ಟಿ ನೋಡುತ್ತಾ ಕೇಳಿದ – ಎಲ್ಲಿಗೆ ಹೋಗಬೇಕಾಗಿದೆ? ಜಾತ್ರೆಗೆ? ಬಂದಿದ್ದು ಎಲ್ಲಿಂದ? ಬಿಸನ್‌ಪುರದಿಂದ? ಇಷ್ಟು ದೂರಕ್ಕೇ ಸುಸ್ತಾಗಿ ಹೋಯಿತೇ? ...ಏನು ಯುವಕರೋ ಏನೋ!

ಸೈಕಲ್‌ಸವಾರ ಸಣಕಲು-ಬಡಕಲು ಯುವಕ ಏನೋ ಗೊಣಗಿಕೊಂಡು ಬೀಡಿ ಹಚ್ಚಿಕೊಳ್ಳುತ್ತಾ ಎದ್ದು ನಿಂತ.

ಹೀರಾಬಾಯಿ ಯಾರ ಕಣ್ಣಿಗೂ ಬೀಳದ ರೀತಿಯಲ್ಲಿ ರಕ್ಷಿಸಬೇಕು ಎಂದುಕೊಂಡಿದ್ದ ಹಿರಾಮನ್ ಸುತ್ತಲೂ ಒಮ್ಮೆ ದೃಷ್ಟಿ ಹಾಯಿಸಿದ. ಎಲ್ಲಿಯೂ ಒಂದು ಗಾಡಿಯಾಗಲಿ ಕುದುರೆಯಾಗಲಿ ಕಾಣಿಸಲಿಲ್ಲ.

ಕಜರೀ ಹೊಳೆಯ ಸಣ್ಣ ಪ್ರವಾಹ ತೆಗಧಿಯಾದ ಹತ್ತಿರ ಹರಿದು ಬಂದು ಪೂರ್ವದ ಕಡೆಗೆ ತಿರುಗಿದೆ. ಹೀರಾಬಾಯಿ ನೀರಿನಲ್ಲಿ ಕುಳಿತಿರುವ ಎಮ್ಮೆಗಳು ಮತ್ತು ಅವುಗಳ ಬೆನ್ನಿನ ಮೇಲೆ ಕುಳಿತಿರುವ ಕೊಕ್ಕರೆಗಳನ್ನು ನೋಡುತ್ತಾ ಇದ್ದಾಳೆ.

ಹಿರಾಮನ್ ಹೇಳಿದ – "ಹೋಗಿ, ಹೊಳೆ ಹತ್ತಿರ ಹೋಗಿ ಮೈ ಕೈ ತೊಳೆದುಕೊಂಡು ಬನ್ನಿ, ಹೋಗಿ."

ಹೀರಾಬಾಯಿ ಗಾಡಿಯಿಂದ ಕೆಳಗೆ ಇಳಿದಳು. ಹಿರಾಮನ್‌ನ ಗುಂಡಿಗೆ ಹೊಡೆದುಕೊಳ್ಳುತ್ತಿತ್ತು. ಇಲ್ಲ... ಇಲ್ಲ... ಕಾಲು ನೆಟ್ಟಗಿವೆ. ಡೊಂಕಾಗಿಲ್ಲ. ಆದರೆ ಪಾದ ಏಕೆ ಇಷ್ಟು ಕೆಂಪಗಿದೆ! ಹೀರಾಬಾಯಿ ಹೊಳೆಯ ಕಡೆಗೆ ಹೊರಟು ಹೋದಳು. ಊರಿಗೆ ಬಂದಿರುವ ಸೊಸೆ-ಮಗಳು ಹೋಗುವ ಹಾಗೆ ತಲೆ ತಗ್ಗಿಸಿಕೊಂಡು ನಿಧಾನವಾಗಿ. ಇವಳು ಕಂಪೆನಿಯ ಹೆಂಗಸು ಎಂದು ಯಾರು ಹೇಳುತ್ತಾರೆ? ...ಹೆಂಗಸಲ್ಲ, ಹುಡುಗಿ. ಕುಮಾರಿಯೇ ಇರಬೇಕು.

ಹಿರಾಮನ್ ಟಿಕಲಿಯ ಮೇಲೆ ನಿಂತಿರುವ ಗಾಡಿಯ ಮೇಲೆ ಕುಳಿತ. ಹಾಗೆಯೇ ಗಾಡಿಯೊಳಗೆ ಇಣಕಿ ನೋಡಿದ. ಒಂದು ಬಾರಿ ಈ ಕಡೆ ಆ ಕಡೆ ನೋಡಿ ಹೀರಾಬಾಯಿ ದಿಂಬಿನ ಮೇಲೆ ಕೈಯನ್ನಿಟ್ಟುಕೊಂಡ. ಮತ್ತೆ ದಿಂಬಿನ ಮೇಲೆ ತನ್ನ ಮೊಣಕೈಯನ್ನು ಇಟ್ಟ. ಅದರ ಬಲದ ಮೇಲೆ ಇನ್ನೂ ಮುಂದು ಮುಂದಕ್ಕೆ ಬಗ್ಗುತ್ತಾ ಹೋದ. ಅವನ ದೇಹದಲ್ಲೆಲ್ಲಾ ಸುವಾಸನೆ ಹರಡಿಕೊಂಡಿತು. ದಿಂಬಿನ ಕವರಿನ ಮೇಲೆ ಹಾಕಲಾಗಿದ್ದ ಹೂವುಗಳನ್ನೆಲ್ಲ ಮುಟ್ಟಿ ಮುಟ್ಟಿ ಮೂಸಿ ನೋಡಿದ. ಆ ಸುಗಂಧ! – ಹಾಯ್ ರೇ ಹಾಯ್! ತಲೆ ಸುತ್ತುವಂತಾಯಿತು. ಒಂದೇ ಸಲಕ್ಕೆ ಐದು ಚಿಲಂ ಎಳೆದರೆ ಹೇಗೆ ಅದು

ನೆತ್ತಿಗೆ ಹೋಗಬಹುದೋ ಹಾಗೆ. ಹೀರಾಬಾಯಿಯ ಆ ಚಿಕ್ಕ ಕನ್ನಡಿಯಲ್ಲಿ ಅವನು ತನ್ನ ಮುಖ ನೋಡಿಕೊಂಡ. ಅವನ ಕಣ್ಣುಗಳು ಏಕೆ ಅಷ್ಟು ಕೆಂಪಾಗಿದ್ದುವು!

ಹೀರಾಬಾಯಿ ಹಿಂದಿರುಗಿ ಬಂದಾಗ ಅವನು ನಕ್ಕು ಹೇಳಿದ – "ಈಗ ನೀವು ಗಾಡಿಯ ಪಹರೆ ಕೊಡಿ, ನಾನು ಹೋಗಿ ಬೇಗ ಬಂದುಬಿಡುತ್ತೇನೆ."

ಹಿರಾಮನ್ ತನ್ನ ಪ್ರವಾಸದ ಚೀಲದಿಂದ ಒಂದು ಒಗೆದು ಸಜ್ಜಾಗಿರುವ ಬನಿಯನ್ ತೆಗೆದುಕೊಂಡ. ಟವಲನ್ನು ಝಾಡಿಸಿ ಹೆಗಲ ಮೇಲೆ ಹಾಕಿಕೊಂಡ ಮತ್ತು ಕೈಯಲ್ಲಿ ಬಾಲ್ದಿಯನ್ನು ಎತ್ತಿಕೊಂಡು ನಡೆದ. ಅವನ ಎತ್ತುಗಳು ಮತ್ತೆ ಮತ್ತೆ 'ಹುಂಕ್ ಹುಂಕ್' ಎಂದು ಏನೋ ಹೇಳಿದುವು. ಹಿರಾಮನ್ ಹೋಗುತ್ತಿದ್ದವನು ಅವುಗಳ ಕಡೆ ತಿರುಗಿ "ಹಾಂ, ಹಾಂ, ಎಲ್ಲರಿಗೂ ನೀರಡಿಕೆಯಾಗಿದೆ. ಹಿಂದಿರುಗಿ ಬಂದು ಮೇವು ಕೊಡುತ್ತೇನೆ, ಅಲ್ಲಿಯ ವರೆಗೂ ತಂಟೆ ತಕರಾರು ಮಾಡಬೇಡಿ."

ಹೂಗುಟ್ಟುವ ರೀತಿಯಲ್ಲಿ ಅವು ಕಿವಿ ಅಲ್ಲಾಡಿಸಿದುವು.

ಹಿರಾಮನ್ ಸ್ನಾನ ಮುಗಿಸಿ ಹಿಂದಿರುಗುವ ಹೊತ್ತಿಗೆ ಹೀರಾಬಾಯಿಗೆ ನಿದ್ದೆ ಬಂದಿತ್ತು. ಹೊಳೆಯ ನೀರಿನ ಕಡೆ ನೋಡುತ್ತಾ ನೋಡುತ್ತಾ ರಾತ್ರಿ ಬಾರದಿದ್ದ ನಿದ್ದೆ ಈಗ ಬಂಧು ಬಿಟ್ಟಿತ್ತು. ಹಿರಾಮನ್ ಸಮೀಪದ ಗ್ರಾಮದಿಂದ ಉಪಾಹಾರಕ್ಕೆಂದು ಮೊಸರು–ಅವಲಕ್ಕಿ – ಸಕ್ಕರೆ ಇಷ್ಟು ತಂದಿದ್ದ.

–ಏಳಿ, ಮತ್ತೆ ನಿದ್ರೆ ಮಾಡುವಿರಂತೆ, ಹೊಟ್ಟೆಗೆ ಒಂದೆರಡು ತುತ್ತು ಆಧಾರ ಮಾಡಿ ಕೊಂಡಮೇಲೆ.

ಕಣ್ಣು ತೆರೆದು ನೋಡಿದ ಹೀರಾಬಾಯಿಗೆ ಆಶ್ಚರ್ಯವೋ ಆಶ್ಚರ್ಯ. ಒಂದು ಕೈಯಲ್ಲಿ ಮಣ್ಣಿನ ಹೊಸ ಗಡಿಗೆಯಲ್ಲಿ ಮೊಸರು, ಬಾಳೆಯೆಲೆ. ಇನ್ನೊಂದು ಕೈಯಲ್ಲಿ ಬಾಲ್ದಿ ತುಂಬಾ ನೀರು. ಕಣ್ಣುಗಳಲ್ಲಿ ಆತ್ಮೀಯತೆಯಿಂದ ಕೂಡಿದ ಅನುರೋಧ.

– ಇಷ್ಟೆಲ್ಲಾ ಎಲ್ಲಿಂದ ತಂದಿರಿ?

– ಈ ಊರಿನ ಮೊಸರು ತುಂಬಾ ಹೆಸರುವಾಸಿ... ಚಹಾ ಬೇಕಾದರೆ ಫಾರಬಿಸ್ ಗಂಜ್‌ಗೇ ಹೋಗಿ ಕುಡಿಯಬಹುದು.

ಹಿರಾಮನ್‌ನ ದೇಹದಲ್ಲಿ ಆಗುತ್ತಿದ್ದ ಕಚಕುಳಿ ಮರುಕಳಿಸಿತು. ಹೀರಾಬಾಯಿ ಹೇಳಿದಳು – "ನೀವೂ ಎಲೆ ಹಾಕಿಕೊಳ್ಳಿ... ಯಾಕೆ!... ನೀವು ತಿನ್ನುವುದಿಲ್ಲವಾದರೆ ನಾನೂ ತಿನ್ನುವುದಿಲ್ಲ... ಅದೆಲ್ಲವನ್ನೂ ದಯಮಾಡಿ ನಿಮ್ಮ ಚೀಲಕ್ಕೆ ಬೇಕಾದರೆ ಹಾಕಿಕೊಳ್ಳಿ."

– ಇಸ್ಸ್! ಹಿರಾಮನ್ ನಾಚಿಕೊಂಡು ಹೇಳಿದ – "ನಾನು ತಿನ್ನುತ್ತೇನೆ. ನಿಮ್ಮದು ಮೊದಲು ಆಗಲಿ."

– ಇದರಲ್ಲಿ ಮೊದಲು–ಆಮೇಲೆ ಯಾಕೆ? ನೀವೂ ಕುಳಿತುಕೊಳ್ಳಿ.

ಹೀರಾಮನ್‌ನ ಮನಸ್ಸು ತುಂಬಾ ಮೆಚ್ಚಿಕೊಂಡಿತು. ಹೀರಾಬಾಯಿ ತನ್ನ ಕೈಯಿಂದಲೇ ಅವನಿಗಾಗಿ ಎಲೆ ಹಾಕಿದಳು, ಅದರ ಮೇಲೆ ನೀರು ಚಿಮುಕಿಸಿದಳು, ಅವಲಕ್ಕಿಯನ್ನು ತೆಗೆದು .ಬಡಿಸಿದಳು. ಇಸ್ಸ್! ಧನ್ಯನಾದೆ, ಧನ್ಯನಾಗಿಬಿಟ್ಟೆ. ಹಿರಾಮನ್ ನೋಡುತ್ತಾನೆ – ಭಗವತಿ ಮೈಯಾ ನೈವೇದ್ಯ ತೆಗೆದುಕೊಳ್ಳುತ್ತಿದ್ದಾಳೆ. ಆ ಕೆಂಪು ತುಟಿಗಳ ಮೇಲೆ ಗೋರಸ ಸ್ಪರ್ಶ... ಬೆಟ್ಟಗುಡ್ಡಗಳ ಕಡೆಯ ಗಿಣಿ ಹಾಲು-ಅನ್ನ ತಿನ್ನುವುದನ್ನು ನೋಡಿದ್ದೀರಾ? ದಿನ ಕಳೆದುಹೋಯಿತು.

ಗಾಡಿಯಲ್ಲಿ ಮಲಗಿದ್ದ ಹೀರಾಬಾಯಿ, ಕೆಳಗೆ ಜಮಖಾನೆ ಹಾಸಿಕೊಂಡು ಮಲಗಿದ್ದ ಹಿರಾಮನ್ – ಇಬ್ಬರಿಗೂ ಒಂದೇ ಸಲ ನಿದ್ದೆ ಎಚ್ಚರಾಯಿತು. ಜಾತ್ರೆಗೆ ಹೋಗುವ ಗಾಡಿಗಳು ತೆಗಧಿಯಾದ ಬಳಿಯೇ ಬಂದು ನಿಂತಿವೆ. ಗಾಡಿಗಳಲ್ಲಿ ಇರುವ ಮಕ್ಕಳು ಕುಯ್ಯೋ–ಮರ‍್ರೋ ಎನ್ನುತ್ತಿವೆ.

ಹಿರಾಮನ್ ದಡಬಡಾಯಿಸಿಕೊಂಡು ಎದ್ದ. ಗಾಡಿಯೊಳಕ್ಕೆ ಇಣುಕಿಹಾಕಿ ಸಂಜ್ಞೆಯಿಂದಲೇ ಹೊತ್ತಾಗಿಹೋಯಿತು ಎಂದು ಹೇಳಿದ. ಗಾಡಿಗೆ ಎತ್ತುಗಳನ್ನು ಕಟ್ಟುವಾಗ ಬೇರೆ ಗಾಡಿಗಳವರು ಕೇಳುತ್ತಿದ್ದ ಯಾವ ಪ್ರಶ್ನೆಗೂ ಅವನು ಉತ್ತರ ಕೊಡಲಿಲ್ಲ. ಗಾಡಿ ಹೊಡೆಯುವ ಸಮಯಕ್ಕೆ ಹೇಳಿದ – ಸಿಲ್‌ಪುರ್ ಬಜಾರ್ ಆಸ್ಪತ್ರೆಯ ಡಾಕ್ಟರಮ್ಮ ಇದ್ದಾರೆ; ರೋಗಿ ನೋಡಲು ಹೋಗುತ್ತಿದ್ದಾರೆ; ಹತ್ತಿರದ ಕುಡುಮಾಗಾಂವ್‌ಗೆ.

ಛತ್‌ಪುರ್–ಪಚೀರಾದ ಹೆಸರನ್ನು ಹೀರಾಬಾಯಿ ಮರೆತಿದ್ದಳು. ಗಾಡಿ ಸ್ವಲ್ಪ ದೂರ ಸಾಗಿ ಬಂದಮೇಲೆ ಅವಳು ಕೇಳಿದಳು: ಪತಾಪುರ್–ಛಪೀರಾ – ಅವನು ನಕ್ಕು ಹೇಳಿದ.

ನಕ್ಕೂ ನಕ್ಕೂ ಹೊಟ್ಟೆ ಹುಣ್ಣಾಗಿ ಹೋಯಿತು – ಅವನ ಉತ್ತರ ಕೇಳಿ. ಹಾ... ಹಾ... ಆ ರೈತರು ಛತಾಪುರ್–ಪಚೀರಾದವರೇ ಆಗಿದ್ದುದರಿಂದ ಅವನು ಅವನ್ನು ಹೇಳಲು ಹೇಗೆ ಸಾಧ್ಯವಿತ್ತು? ...ಹೀ ...ಹೀ.

ಹೀರಾಬಾಯಿ ಹುಸಿನಗುತ್ತಾ ಊರಿನ ಕಡೆಗೆ ನೋಡುತ್ತಿದ್ದಳು.

ಅವರು ಮುಂದೆ ಹೋಗಬೇಕಾದ ದಾರಿ ತೇಗಧಿಯಾ ಗ್ರಾಮದ ಮೂಲಕವಾಗಿಯೇ ಹೋಗುತ್ತದೆ. ಊರಿನ ಮಕ್ಕಳು ಪರ್ದಾ ಹಾಕಿದ್ದ ಗಾಡಿ ನೋಡಿ ಚಪ್ಪಾಳೆ ತಟ್ಟಿಕೊಂಡು ಕುಣಿದರು. ಮತ್ತು ಕಂಠಪಾಠ ಮಾಡಿದ್ದ ಪಂಕ್ತಿಗಳನ್ನು ಪುನರುಚ್ಚಾರ ಮಾಡತೊಡಗಿದರು ರಾಗವಾಗಿ.

ಲಾಲೀ ಲಾಲೀ ಡೋಲಿಯಾಮ
ಲಾಲೀ ರೇ ದುಲ್ಹನಿಯಾ
ಪಾನ ಖಾಯೆ......।

ಹಿರಾಮನ್ ನಕ್ಕುಬಿಟ್ಟ... ದುಲ್ಹನಿಯಾ, ಮದುಮಗಳು... ಲಾಲಿ ಲಾಲಿ ಡೋಲಿಯಾ... ಮದುಮಗಳು ಎಲೆ ಜಗಿಯುತ್ತಾಳೆ ಮೇನೆಯಲ್ಲಿ ಕುಳಿತು...

ಮದುಮಗನ ಪೇಟದಲ್ಲಿ ಬಾಯಿ ಒರೆಸುತ್ತಾಳೆ. ಓಹ್, ಮದುಮಗಳು ನಿಜಕ್ಕೂ ತೆಗಧಿಯಾ ಗ್ರಾಮದ ಮಕ್ಕಳನ್ನು ಮರೆಯುವಂತಿಲ್ಲ. ಬರುವಾಗ ಅವರಿಗಾಗಿ ಸಿಹಿತಿಂಡಿ ತಿನಸು ಬೇರೆ ತರಬೇಕು... "ಲೌಟತಿ ಬೇರ್ ಗುಡ್‌ಕಾ ಲಡ್ಡೂ ಲೇತಿ ಆಯಿಯೋ, ಲಾಖ್ ಬರಸ್ ತೇರಾ ದುಲಹಾ ಜೀಯೆ" (ನಿನ್ನ ಮದುಮಗ ಲಕ್ಷ ವರ್ಷ ಬದುಕಲಿ – ಎಂಬ ಹಾರೈಕೆ ಬೇರೆ) ...ಹಿರಾಮನ್‌ನ ಎಷ್ಟು ದಿನಗಳ ಕನಸು ಇವೊತ್ತು ನನಸಾಗಿದೆ... ಅವನ ಹಳೆಯ ಹಂಬಲ ಈಗ ಪೂರೈಸಿದಂತಾಗಿದೆ... ಅವನು ತನ್ನ ವಧುವನ್ನು ಕರೆದು ಕೊಂಡು ಬರುತ್ತಿದ್ದಾನೆ... ದಾರಿಯುದ್ದಕ್ಕೂ ಪ್ರತಿಯೊಂದು ಗ್ರಾಮದ ಮಕ್ಕಳು ಹೀಗೆ ಚಪ್ಪಾಳೆ ತಟ್ಟಿ ಹಾಡುತ್ತಿದಾರೆ... ತಮ್ಮ ತಮ್ಮ ಮನೆಯ ಹಿತ್ತಲಿಂದ ಹೆಣ್ಣು ಮಕ್ಕಳು ಇಣಕಿ ನೋಡುತ್ತಿದ್ದಾರೆ. ಪುರುಷರು ಕೇಳುತ್ತಿದ್ದಾರೆ – ಯಾವ ಊರಿನ ಗಾಡಿ ಎಲ್ಲಿಗೆ ಹೋಗುತ್ತದೆ – ಎಂದು. ಅವನ ವಧು ಮೇನೆಯ ಪರದೆಯನ್ನು ಸ್ವಲ್ಪ ಜರುಗಿಸಿ ನೋಡುತ್ತಿದ್ದಾಳೆ... ಹೀಗೇ ಇನ್ನೂ ಅನೇಕ ಸ್ವಪ್ನಗಳು...

ಊರನ್ನು ದಾಟಿಕೊಂಡು ಗಾಡಿ ಮೈದಾನಕ್ಕೆ ಬಂದಮೇಲೆ ಅವನು ಕಿರುಗಣ್ಣಿನಿಂದ ಗಾಡಿಯ ಒಳಗೆ ದೃಷ್ಟಿ ಹಾಯಿಸಿ ನೋಡುತ್ತಾನೆ... ಹೀರಾಬಾಯಿ ಏನೋ ಯೋಚಿಸು ತ್ತಿದ್ದಾಳೆ. ಹಿರಾಮನ್ ಕೂಡ ಯಾವುದೋ ಯೋಚನೆಯಲ್ಲಿ ಮುಳುಗುತ್ತಾನೆ. ಸ್ವಲ್ಪ ಹೊತ್ತಿನ ನಂತರ ಹಾಗೆಯೇ ಗುನುಗುನಾಯಿಸುತ್ತಾನೆ...

> ಸಜನ ರೇ ಝೂಠ್ ಮತ್ ಬೋಲೋ, ಖುದಾಕೆ ಪಾಸ್ ಜಾನಾ ಹೈ
> ನಹೀಂ ಹಾಥೀ, ನಹೀಂ ಘೋಡಾ, ನಹೀಂ ಗಾಡೀ...
> ವಹಾಂ ಪೈದಲ್ ಹೀ ಜಾನಾ ಹೈ । ಸಜನರೇ...

ಹೀರಾಬಾಯಿ ಕೇಳಿದಳು – ಏನು ಮೀತಾ? ನಿಮ್ಮ ದೇಶಿ ಭಾಷೆಯಲ್ಲಿ ಯಾವುದೂ ಹಾಡಿಲ್ಲವೇ?

ಹೀರಾಮನ್ ಈಗ ಯಾವ ಸಂಕೋಚವೂ ಇಲ್ಲದೆ ನೇರವಾಗಿ ಹೀರಾಬಾಯಿಯ ಮುಖ ನೋಡಿಕೊಂಡೇ ಮಾತನಾಡುತ್ತಾನೆ. ಕಂಪೆನಿ ಹೆಂಗಸು ಹೀಗಿರಲು ಸಾಧ್ಯವೇ? ಸರ್ಕಸ್ ಕಂಪೆನಿಯ ಮಾಲಿಕಳು ಕೂಡ ಹೆಂಗಸೇ ಆಗಿದ್ದಳು. ಆದರೆ ಎಷ್ಟು ವ್ಯತ್ಯಾಸ. ಹೀರಾಬಾಯಿ ದೇಶಿ ಭಾಷೆಯಲ್ಲಿ ಹಾಡು ಕೇಳಲು ಬಯಸುತ್ತಾಳೆ. ಅದನ್ನು ಕೇಳಿ ಅವನು ಮುಗುಳ್ನಕ್ಕು ಕೇಳಿದ್ದ – ದೇಶಿ ಭಾಷೆಯಲ್ಲಿ ಹೇಳಿದರೆ ನಿಮಗೆ ಅರ್ಥವಾದೀತೇ?

"ಹೂಂ–ಊಂ–ಊಂ", ಹೀರಾಬಾಯಿ ಕತ್ತು ಕುಣಿಸಿದಳು ಅವಳ ಕಿವಿಯ ಝುಮಕಿಗಳು ಅಲ್ಲಾಡಿದುವು.

ಹೀರಾಮನ್ ಸ್ವಲ್ಪ ಹೊತ್ತಿನ ವರೆಗೆ ಸುಮ್ಮನೆ ಗಾಡಿ ನಡೆಸುತ್ತಿದ್ದ. ಆಮೇಲೆ ಹೇಳಿದ – ನಿಜಕ್ಕೂ ಹಾಡು ಕೇಳುತ್ತೀರೇನು? ಹಾಡಲೇಬೇಕೆ? ಇಸ್ಸ್! ಹಳ್ಳಿಯ ಹಾಡು ಕೇಳಲು ಇಷ್ಟು ಚಪಲವೇ ನಿಮ್ಮದು? ಹಾಗಾದರೆ ಬೇರೆ ದಾರಿ ಹಿಡಿಯಬೇಕು.

ಗಾಡಿಗಳು ಹೋಗಿ ಹೋಗಿ ಆಗಿರುವ ದಾರಿಯಲ್ಲಿ ಹಾಡಲು ತಾನೇ ಹೇಗೆ ಸಾಧ್ಯ? ಎಡಗಡೆಯ ಎತ್ತಿನ ಹಗ್ಗ ಎಳೆದು ಬಲಗಡೆಯದನ್ನು ದಾರಿಬಿಟ್ಟು ಮೇಲೆ ಬರುವಂತೆ ಮಾಡಿದ ಮತ್ತು ಹೇಳಿದ – ಹರಿಪುರದ ಮಾರ್ಗವಾಗಿ ಈಗ ಹೋಗುವುದಿಲ್ಲ.

ಚಾಲು ಆಗಿರುವ ದಾರಿಯನ್ನು ಬಿಟ್ಟು ಗಾಡಿಯನ್ನು ಮೇಲಕ್ಕೆ ತೆಗೆದುಕೊಂಡುದನ್ನು ಹಿಂದಿನಿಂದ ಗಮನಿಸಿದ ಮತ್ತೊಂದು ಗಾಡಿಯವನು ಕೂಗಿ ಹೇಳಿದ – ದಾರಿ ಬಿಟ್ಟು ದಾರಿಗೆ ಎಲ್ಲಿಗೆ ಹೋಗುತ್ತೀ ಕಣಪ್ಪೋ?

ಹಿರಾಮನ್ ಚಾಟಿಯಿಂದ ತನ್ನ ದಿಕ್ಕನ್ನು ತೋರಿಸುತ್ತಾ ಉತ್ತರ ಕೊಟ್ಟ – ದಾರಿ ಬಿಟ್ಟು ಎಲ್ಲಿ ಬಂದಿವ್ನಿ? ನನನ್‌ಪುರಕ್ಕೆ ಅದು ಹೋಗ್ತದೇನು? ಆಮೇಲೆ ತನ್ನಲ್ಲೇ ಗೊಣಗಿಕೊಂಡ – ಹಳ್ಳಿ ಜನರದು ಇದೊಂದು ದುರಭ್ಯಾಸ. ದಾರಿಯಲ್ಲಿ ಹೋಗ್ತಾ ಹತ್ತಾರು ವಿಷಯ ಕೇಳ್ತಾರೆ. ತಮ್ಮ ಪಾಡಿಗೆ ತಾವು, ತಮ್ಮ ದಾರಿ ಹಿಡಿದು ಹೋಗುತ್ತಿರಬೇಕು... ಹಳ್ಳಿ ಜನಾನೇ ಹೀಗೆ.

ಹೀರಾಬಾಯಿ ನೋಡುತ್ತಾಳೆ – ನನನ್‌ಪುರದ ದಾರಿ ನಿಜಕ್ಕೂ ಬಿಕೋ ಎನ್ನುತ್ತಿದೆ. ಜನಸಂಚಾರವೇ ಇಲ್ಲ. ಹಿರಾಮನ್‌ಗೆ ಅವಳ ಕಣ್ಣಿನ ಇಂಗಿತ ಗೊತ್ತಾಗುತ್ತದೆ. ಈಗ ಹೇಳುತ್ತಾನೆ – ಗಾಬರಿಪಡಬೇಡ. ಈ ರಸ್ತೆ ಕೂಡ ಫಾರಬಿಸ್‌ಗಂಜ್‌ಗೆ ಹೋಗುತ್ತದೆ. ಈ ದಾರಿಯ ಜನ ಕೂಡ ತುಂಬಾ ಒಳ್ಳೆಯವರು... ರಾತ್ರಿ ಒಂದು ಗಂಟೆಯೊಳಗಾಗಿ ನಾವು ತಲಪಿರುತ್ತೇವೆ.

ಹೀರಾಬಾಯಿಗೆ ಫಾರಬಿಸ್‌ಗಂಜ್ ತಲಪುವ ಆತುರವೇನೂ ಇಲ್ಲ. ಹಿರಾಮನ್ ಮೇಲೆ ಅವಳಿಗೆ ಇಷ್ಟು ಭರವಸೆ ಬಂದಿದೆ. ಮನಸ್ಸಿನಲ್ಲಿ ಹೆದರಿಕೆಗೆ ಅವಕಾಶವೇ ಇಲ್ಲ. ಹಿರಾಮನ್ ಮೊದಲು ಮನಃಪೂರ್ತಿಯಾಗಿ ಮುಗುಳ್ನಕ್ಕು ಯೋಚಿಸಿದ. ಯಾವ ಹಾಡನ್ನು ಹಾಡಬೇಕು ಅವನೀಗ? ಹೀರಾಬಾಯಿಗೆ ಹಾಡೂ ಇಷ್ಟ, ಕಥೆಯೂ ಇಷ್ಟ... ಮಹುವಾ ಘಟವಾರಿನ್ ಹೇಳಿದರೆ ಹೇಗೆ? ಹೇಳಿದ – ಸರಿ, ನಿಮಗಷ್ಟು ಅಪೇಕ್ಷೆಯಾಗಿದ್ದರೆ ಮಹುವಾ ಘಟವಾರಿನ್ ಹಾಡನ್ನೇ ಕೇಳಿ – ಅದರಲ್ಲಿ ಹಾಡೂ ಇದೆ, ಕಥೆಯೂ ಇದೆ.

...ಮನಸ್ಸಿನಲ್ಲಿ ಇದೂ ಒಂದು ಆಸೆ ಇತ್ತು, ಬಹಳ ದಿನದಿಂದ. ಅದನ್ನೂ ಇವೊತ್ತು ಭಗವತಿ ಮಾಯಿ ಪೂರೈಸುತ್ತಿದ್ದಾಳೆ. ಜೈ ಭಗವತಿ. ಇವೊತ್ತು ಹಿರಾಮನ್ ತನ್ನ ಮನಸ್ಸಿನ ಎಲ್ಲ ಆಸೆಗಳನ್ನೂ ಪೂರೈಸಿಕೊಳ್ಳುವಂತಾಗುತ್ತದೆ – ಇನ್ನೇನೂ ಅಲ್ಲಿ ಉಳಿಯದು. ಅವನು ಒಂದು ಬಾರಿ ಹೀರಾಬಾಯಿಯ ಕಡೆ ತಿರುಗಿ ಅವಳ ಮಂದಹಾಸವನ್ನು ಕ್ಷಣಕಾಲ ಹಾಗೆಯೇ ನೋಡುತ್ತಿದ್ದು ಹೇಳುತ್ತಾನೆ –

– ಕೇಳಿ ಇವೊತ್ತಿಗೂ ಪರಮಾನ್ ನದಿಯ ದಂಡೆಯ ಮೇಲೆ ಕೆಲವು ಹಳೆಯ ಘಟ್ಟಗಳಿವೆ. ಈ ಪ್ರಾಂತ್ಯದಲ್ಲಿ ಮಹುವಾ ಇದ್ದಳು. ಬಹಳ ಸತ್ಯವಂತೆ. ಅವಳ ಅಪ್ಪ ಕುಡುಕ. ಯಾವಾಗಲೂ ಸೇಂದಿ–ದಾರು ಕುಡಿದು ಬಿದ್ದಿರುತ್ತಿದ್ದ. ಮಹುವಾಳ ಮಲ

ತಾಯಿ ಸಾಕ್ಷಾತ್ ರಾಕ್ಷಸಿ. ಅವಳು ಆಡದ ಆಟ ಇಲ್ಲ. ರಾತ್ರಿಯ ಅವೇಳೆಯಲ್ಲಿ ಗಾಂಜಾ, ಅಫೀಮು, ಸಾರಾಯಿ ಇವುಗಳನ್ನು ಕದ್ದು ಮಾರುತ್ತಿದ್ದಂತಹ ಜನರಿಂದ ಹಿಡಿದು ತರಹಾವಾರು ಜನರ ಜೊತೆಗೆ ಇವಳ ನಿಕಟ-ಸಂಪರ್ಕ ಇತ್ತು. ಎಲ್ಲರೊಡನೆಯೂ ಅವಳ ವ್ಯವಹಾರಗಳು ನಡೆಯುತ್ತಿದ್ದುವು. ಮಹುವಾ ಇನ್ನೂ ಕುಮಾರಿ. ಆದರೆ ಅವಳ ಹತ್ತಿರ ದುಡಿಸಿ ದುಡಿಸಿ ಆ ರಾಕ್ಷಸಿ ಪ್ರಾಣ ತೆಗೆಯುತ್ತಿದ್ದಳು. ಮಹುವಾ ವಯಸ್ಸಿಗೂ ಬಂದಳು. ಆದರೆ ಅವಳ ಮದುವೆಯ ಪ್ರಸ್ತಾಪವನ್ನೂ ತಾಯಿಯಾದ ವಳು ಮಾಡುತ್ತಿರಲಿಲ್ಲ. ಒಂದು ರಾತ್ರಿ ನಡೆದ ಪ್ರಸಂಗ ಕೇಳಿ–

ಹಿರಾಮನ್ ಮೆಲುದನಿಯಲ್ಲಿ ಹಾಡಿಗೆ ಪೀಠಿಕೆಯ ರೂಪದಲ್ಲಿ ಗುನುಗುನಾಯಿಸಿ ಕಂಠ ಸರಿಮಾಡಿಕೊಂಡ.

> ಹೇ–ಅ–ಅ–ಅ ಸಾವನ ಭಾದವಾ ಕೆ–ದ–ಉಮಡಲ್ ನದಿಯಾ–ಮೆ–ಮೆ
> ಓ–ಓ, ಮೈಯೋ
> ಗೇರೇನಿ ಭಯಾವಸಿ–ಹೇ–ವ–ವ–ಉ ತಡಕಾ-ತಡಕೆ ಘಟಕೆ ಕರ್ರೈಜಿ ಆ–ಆ–
> ಪೇರಾ ಕಿ ಹಮಹು ಜಿ ಬಾರೀ–ನಾನ್ಹೀ ರೇ...ಏ...ಏ...

ಓ ಮಾತೆ, ಶ್ರಾವಣ–ಭಾದ್ರಪದ ಕಾಲದಲ್ಲಿ ಪ್ರವಾಹ ತುಂಬಿ ಬರುತ್ತಿದೆ, ಭಯಾನಕ ರಾತ್ರಿಯಲ್ಲಿ ಗುಡುಗು ಮಿಂಚು, ನಾನಿನ್ನೂ ಏನೂ ತಿಳಿಯದ ಹಸುಳೆ, ನನ್ನ ಹೃದಯ ಬಿರಿಯುತ್ತಿದೆ, ಭಯದಿಂದ, ಒಬ್ಬಳೇ ನಾನು ಹೇಗೆ ಹೋಗಲಿ ನದಿಯ ಘಟ್ಟಕ್ಕೆ? ಅದೂ ಊರೂರು ಸುತ್ತುವ ಒಬ್ಬ ಪರದೇಶಿಯ ಕಾಲಿಗೆ ತೈಲ ಹಚ್ಚುವ ಸಲುವಾಗಿ! ಮಲತಾಯಿ ತನ್ನ ಬಂಜರು ಮನೆಯ ಬಾಗಿಲನ್ನು ಹಾಕಿಕೊಂಡಿದ್ದಾಳೆ. ಆಕಾಶ ದಲ್ಲಿ ಮೋಡಗಳು ಟಕರಾಯಿಸಿದುವು–ಗುಡುಗು–ಮಿಂಚು–ಮಳೆ ಧಾರಾಕಾರವಾಗಿ ಬೀಳುತ್ತಿದೆ. ಮೃತಗೊಂಡ ತನ್ನ ತಾಯಿಯನ್ನು ಜ್ಞಾಪಿಸಿಕೊಂಡು ಮಹುವಾ ಅಳು ತ್ತಿದ್ದಾಳೆ. ಇವೊತ್ತು ಅವಳ ತಾಯಿ ಇದ್ದಿದ್ದರೆ ತನ್ನ ಮಹುವಾ ಬೇಟಿಯನ್ನು ಎದೆಗವಚಿ ಕೊಂಡು ಸಾಂತ್ವನ ನೀಡುತ್ತಿದ್ದಳು. ಹೇ ನನ್ನ ತಾಯಿ, ಈ ದಿನಕ್ಕೆಂದೇ ಇದನ್ನು ತೋರಿಸ ಲಿಕ್ಕೆಂದೇ ನನ್ನನ್ನು ಹೊಟ್ಟೆಯಲ್ಲಿಟ್ಟು ಬೆಳಸಿ ಬಿಟ್ಟು ಹೋದೆಯಾ? ಮಹುವಾಗೆ ತನ್ನ ತಾಯಿಯ ಮೇಲೆ ತುಂಬಾ ಕೋಪ ಬರುತ್ತದೆ. ಯಾಕೆ? ಸಾಯುವಾಗ ತಾನೊಬ್ಬಳೇ ಸಾಯಬೇಕಾಗಿತ್ತೆ? ಅದಕ್ಕವಳನ್ನು ಶಪಿಸುತ್ತಾ ಹೇಳಿದಳು–

ಈ ಸನ್ನಿವೇಶದ ಕಥೆಯನ್ನು ರಸವತ್ತಾಗಿ ಮಾಡಲು ಹಿರಾಮನ್ ತನ್ನ ಕಂಠವನ್ನು ಕಂಪನಗೊಳಿಸಿ ಹಾಡತೊಡಗಿದನು–

> ಹೂಂ–ಊಂ–ಊಂ–ರೇ ಡಾಯಿನಿಯಾಂ ಮೈಯಾ ಮೋರಿ–ಈ–ಈ
> ನೋನ್‌ವಾ ಚಢಾಯಿ ಕಾಹೆ ನಾಹಿ.
> ಮಾರಲಿ ಸಾರೀ ಘರ್–ಅ–ಅ । ಯಹಿ ದಿನವಾ ಖಾತಿರ್ ಛಿನರೋ ಛಿಯೊ
> ತೇಹು ಪೋಸಲಿ ಕಿ ನೇನು–ದೂಢ್–ಉಟಗನ್...।

ಹಿರಾಮನ್ ಮಧ್ಯದಲ್ಲಿ ಉಸಿರು ತೆಗೆದುಕೊಳ್ಳುತ್ತಾ ಕೇಳಿದ – ಭಾಷೆಯನ್ನೂ ಸ್ವಲ್ಪ ಅರ್ಥಮಾಡಿಕೊಳ್ಳುತ್ತೀರೋ ಅಥವಾ ಬರಿ ಹಾಡನ್ನೇ ಕೇಳುತ್ತೀರೋ?

ಹೀರಾ ಹೇಳಿದಳು – ಭಾಷೆಯೂ ತಿಳಿಯುತ್ತೆ. ಉಟಗನ್ ಅಂದರೆ ಉಬಟನ್ ತಾನೇ?... ಶರೀರಕ್ಕೆ ಉಪಯೋಗಿಸುವ ಲೇಪನ.

ಹಿರಾಮನ್ ಆಶ್ಚರ್ಯಗೊಂಡು ಕೇಳಿದ – ಇಸ್ಸ್... ಅವಳು ಅತ್ತು ಕರೆಯುವುದರ ಪ್ರಯೋಜನವಾದರೂ ಏನು? ಅವಳ ಪೂರ್ತಿ ಬೆಲೆಯನ್ನವನು ಕೊಟ್ಟುಬಿಟ್ಟಿದ್ದ. ಎಂದೇ ಅವನು ಅವಳ ತಲೆಗೂದಲು ಹಿಡಿದು ಎಳೆದುಕೊಂಡು ಹೋಗಿ ಅವಳನ್ನು ದೋಣಿಯಲ್ಲಿ ಹಾಕಿಕೊಂಡ. ಮತ್ತು ನಾವೆ ನಡೆಸುವವನಿಗೆ ಆಜ್ಞೆ ಕೊಟ್ಟ, ಹೂಂ, ನಾವೆ ನಡೆಸು ಇನ್ನು, ಎಂದು. ನೌಕೆ ಪುಕ್ಕ ಬಂದಿರುವ ಗುಬ್ಬಚ್ಚಿಯಂತೆ ಹಾರುತ್ತಿದೆ ಯೇನೋ ಎಂಬಂತೆ ಹೊರಟಿತು. ರಾತ್ರಿಯೆಲ್ಲ ಮಹುವಾ ಅಳುತ್ತಿದ್ದಳು ಚಡಪಡಾ ಯಿಸುತ್ತಿದ್ದಳು. ತನ್ನನ್ನು ಕೊಂಡುಕೊಂಡು ಬಂದಿದ್ದ ವ್ಯಾಪಾರಿಯ ನೌಕರರು ಅವಳನ್ನು ಎಷ್ಟೋ ಹೆದರಿಸಿದರು ಬೆದರಿಸಿದರು ಸುಮ್ಮನಿರದಿದ್ದರೆ ಎತ್ತಿ ನಿನ್ನನ್ನು ನೀರಿಗೆ ಬಿಸಾಡುತ್ತೇವೆ ಎಂದರು... ಆ ಒಂದು ಮಾತಿನಿಂದಲೇ ಮಹುವಾಗೆ ಪರಿಹಾರ ಸುಳಿ ಯಿತು. ಆಕಾಶದಲ್ಲಿ ಆ ತಾರೆ ಮೋಡದ ಮರೆಯಿಂದ ಸ್ವಲ್ಪ ಹೊರಗೆ ಕಾಣಿಸಿಕೊಂಡು ಮತ್ತೆ ಮರೆಯಾಯಿತು. ಇತ್ತ ಮಹುವಾ ಕೂಡ ಕಣ್ಣು ಮುಚ್ಚಿ ಕಣ್ಣು ತೆರೆಯುವುದ ರೊಳಗೆ ನೀರಿಗೆ ಧುಮುಕಿದಳು... ವ್ಯಾಪಾರಿಯ ಒಬ್ಬ ನೌಕರ ಮಾತ್ರ ಅವಳನ್ನು ನೋಡಿದ ಸಮಯದಿಂದಲೂ ಅವಳಲ್ಲಿ ಮೋಹಗೊಂಡಿದ್ದ. ಅವಳ ಹಿಂದೆಯೇ ಅವನೂ ಧುಮುಕಿದ ನೀರಿಗೆ. ಆ ಎದಿರು-ಪ್ರವಾಹದಲ್ಲಿ ಈಜುವುದು ಅಷ್ಟು ಸುಲಭವಾಗಿರಲಿಲ್ಲ– ಅದೂ ಭಾದ್ರಪದಮಾಸದ ನದಿಯ ಪ್ರವಾಹದಲ್ಲಿ. ಮಹುವಾ ಎಷ್ಟೇ ಆಗಲಿ ಅಸಲಿ ಘಟವಾರಿನ್ ಮಗಳಾಗಿದ್ದಳು. ನೀರಿನಲ್ಲಿ ಈಜುವುದು ಮೀನಿಗೆ ಕಷ್ಟವೇ? ನೀರಿನ ಪ್ರವಾಹವನ್ನು ಸೀಳುತ್ತಾ, ಕಾಲುಗಳಿಂದ ನೀರನ್ನು ಬಡಿಯುತ್ತಾ ಅವಳು ನೀರಿನಲ್ಲಿ ಮುಂದೆ ಮುಂದೆ ತೀವ್ರಗತಿಯಲ್ಲಿ ಸಾಗುತ್ತಿದ್ದಳು. ಅವಳ ಹಿಂದೆ ವ್ಯಾಪಾರಿಯ ನೌಕರ ಕೂಡ ಈಜಿಕೊಂಡು ಬರುತ್ತಿದ್ದ. ಕೂಗಿ ಕೂಗಿ ಹೇಳುತ್ತಿದ್ದ – ಮಹುವಾ ಸ್ವಲ್ಪ ನಿಲ್ಲು, ನಿಮ್ಮನ್ನು ಹಿಡಿಯಲು ನಾನು ಬರುತ್ತಿಲ್ಲ, ನಾನು ನಿನ್ನ ಸಾಥಿಯಾಗಿ, ಜೀವನಸಂಗಾತಿ ಯಾಗಿ ಬದುಕಲು ಬರುತ್ತಿದ್ದೇನೆ. ಇಬ್ಬರೂ ಬದುಕಿ ಬಾಳೋಣ. ಆದರೆ..."

ಹಿರಾಮನ್‌ಗೆ ಇದು ಬಹಳ ಪ್ರಿಯವಾದ ಹಾಡು. ಮಹುವಾ ಘಟವಾರಿನ್ ಜಾನಪದ ಗೀತೆಯನ್ನು ಅವನು ಧ್ವನಿಯೆತ್ತಿ ಹಾಡುತ್ತಿದ್ದರೆ ಅವನ ಕಣ್ಮುಂದೆ ಶ್ರಾವಣ ಭಾದ್ರಪದ ಕಾಲದ ನದಿಯ ಪ್ರವಾಹ ಏಳುತ್ತದೆ, ಅಮಾವಾಸ್ಯೆಯ ರಾತ್ರಿ ಹಾಗೂ ಕಾರ್ಮೋಡಗಳು ಮುಚ್ಚಿದ ರಾತ್ರಿಯಲ್ಲಿ ಪದೇ ಪದೇ ಮಿಂಚು ಹೊಳೆಯತೊಡಗು ತ್ತದೆ. ಅದರ ಬೆಳಕಿನಲ್ಲಿ ಅಲೆಗಳ ಜೊತೆಗೆ ಗುದ್ದಾಡುತ್ತಿರುವ ಮಹುವಾಳ ಆ ಈಜಾಟದ ವೈಖರಿಯ ದರ್ಶನವಾಗುತ್ತದೆ. ಮಹುವಾ ಹಿಂದೆ ಈಜಿಕೊಂಡು ಹೋಗುತ್ತಿರುವ

ಆ ವ್ಯಾಪಾರಿಯ ನೌಕರನೇ ತಾನೆಂಬಂತೆ ಅವನು ಭಾವನಾಪರವಶನಾಗುತ್ತಾನೆ. ಮಹುವಾ ಹಿಂದೆ ತಿರುಗಿ ನೋಡುವುದೂ ಇಲ್ಲ. ಒಂದು ಮಾತನ್ನೂ ಕಿವಿಗೆ ಹಾಕಿಕೊಳ್ಳದೆ ಹೋಗುತ್ತಿದ್ದಾಳೆ. ಮತ್ತು ಅವನೂ ಅವಳ ಹಿಂದೆಯೇ ಈಜಿಕೊಂಡು ಹೋಗುತ್ತಿದ್ದಾನೆ...

ಈ ಸಲ ಮಹುವಾ ಅವನ ಕೈಗೆ ಸಿಕ್ಕಿರುವಂತೆ ಭಾಸವಾಗುತ್ತಿದೆ. ಅಷ್ಟೇ ಅಲ್ಲ, ಅವಳೇ ಬೇಕೆಂದು ಅವನ ಕೈಗೆ ಸಿಕ್ಕಿರುವ ಹಾಗೆ. ಅವನು ಮಹುವಾಳನ್ನು ಮುಟ್ಟಿದ್ದಾನೆ. ಅವಳನ್ನು ತನ್ನವಳನ್ನಾಗಿ ಮಾಡಿಕೊಂಡಿದ್ದಾನೆ, ಅವನ ಆಯಾಸವೆಲ್ಲ ಪರಿಹಾರವಾಗಿದೆ. ಹದಿನೈದು–ಇಪ್ಪತ್ತು ವರ್ಷ ನದಿಯ ಪ್ರವಾಹಕ್ಕೆ ಎದುರಾಗಿ ಈಜಾಡಿಕೊಂಡು ಹೋಗುತ್ತಿದ್ದ ಮನಸ್ಸಿಗೆ ಈಗ ದಡ ಸಿಕ್ಕಿದೆ. ಅವನ ಕಣ್ಣಿಲ್ಲಿ ಬರುತ್ತಿರುವ ಆನಂದ ಬಾಷ್ಪಕ್ಕೆ ಕೊನೆಯೇ ಇಲ್ಲವಾಗಿದೆ – ತಡೆಯೇ ಇಲ್ಲ!...

ನೀರು ತುಂಬಿಬಂದಿದ್ದ ತನ್ನ ಕಣ್ಣುಗಳನ್ನು ಹೀರಾಬಾಯಿಯಿಂದ ಬಚ್ಚಿಡಲು ಪ್ರಯತ್ನಿಸುತ್ತಾನೆ. ಆದರೆ ಹೀರಾ ಅವಳ ಮನಸ್ಸಿನಲ್ಲಿ ಭದ್ರವಾಗಿ ಕುಳಿತುಬಿಟ್ಟಿದ್ದು ಅವನ ಎಲ್ಲ ಗತಿ-ವಿಧಿಗಳನ್ನೂ ಈಕ್ಷಿಸುತ್ತಿದ್ದಾಳೆ – ಗೊತ್ತಿಲ್ಲ ಎಷ್ಟು ಹೊತ್ತಿನಿಂದ. ಹಿರಾಮನ್ ಭಾವಾವೇಶದಿಂದ ಕಂಪಿಸುತ್ತಿರುವ ತನ್ನ ಮಾತುಗಳನ್ನು ತಡೆಹಿಡಿದು ಎತ್ತುಗಳನ್ನು ಬೇಗ ಓಡಿಸಲು ಅವುಗಳ ಕಡೆಗೆ ಗಮನ ಹರಿಸಿದ್ದಾನೆ. ಈ ಹಾಡು ಕೇಳುತ್ತಿದ್ದಂತೆ ಅವೂ ನಿಧಾನವಾಗಿ ಕಾಲೆಳೆಯತೊಡಗುತ್ತವೆ – ಇದರಲ್ಲಿ ಅದೇನು ಮೋಡಿ ಇದೆಯೋ ಏನೋ! ನೂರು ಮಣಗಳಷ್ಟು ಭಾರ ಹೊತ್ತು ನಡೆಯುತ್ತಿರುವಂತೆ ನಡೆಯತೊಡಗುತ್ತವೆ.

ಹೀರಾಬಾಯಿ ದೊಡ್ಡ ನಿಟ್ಟುಸಿರೊಂದು ಬಿಡುತ್ತಾಳೆ. ಹಿರಾಮನ್‌ನ ಅಂಗಾಂಗಗಳಲ್ಲಿ ಮಾತ್ರ ಎಲ್ಲಿಲ್ಲದ ಉತ್ಸಾಹ ಬರುತ್ತದೆ.

– ನೀವು ನಿಜಕ್ಕೂ ಉಸ್ತಾದರಿದ್ದೀರಿ ಮಿತಾ!

-- ಇಸ್ಸ್!

, ಆಶ್ವೀಜ–ಕಾರ್ತಿಕ ಮಾಸಕಾಲದ ಸೂರ್ಯ ಬಹಳ ಬೇಗ ಮುಳುಗುತ್ತಾನೆ. ಸೂರ್ಯ ಮುಳುಗುವ ಮೊದಲೇ ನನನ್‌ಪುರ ತಲಪಬೇಕು. ಹಿರಾಮನ್ ತನ್ನ ಎತ್ತುಗಳಿಗೆ ತಿಳಿಸುತ್ತಿದ್ದಾನೆ... ಸ್ವಲ್ಪ ಕಾಲು ಹರಡಿ ಹೃದಯ ಗಟ್ಟಿ ಮಾಡಿಕೊಂಡು ಓಡಬೇಕು... ಏ...ಛೀಃ... ಛೀಃ... ಹೂಂ, ಓಡಬೇಕು ನೋಡೋಣ... ಲೆ...ಲೆ–ಎ–ಹೆ–ಹಯ್!

ನನನ್‌ಪುರ ತಲಪುವವರೆಗೂ ಅವನು ಹೀಗೆಯೇ ತನ್ನ ಎತ್ತುಗಳ ಹಿಂದೆ ಬಿದ್ದಿದ್ದ. ಒಂದೊಂದು ಸಲ ಅವುಗಳನ್ನು ಸಂಕೇತ ಶಬ್ದಗಳ ಮೂಲಕ ಓಡಿಸುವುದಕ್ಕೆ ಮೊದಲು ಹಿಂದಿನ ವಿಚಾರಗಳನ್ನು ನೆನಪಿಗೆ ತಂದುಕೊಡುತ್ತಿದ್ದ... ಜ್ಞಾಪಕ ಇದೆ ತಾನೆ? ಚೌಧರಿಯವರ ಮಗಳ ಮದುವೆ ಸಮಯದಲ್ಲಿ ಎಷ್ಟು ಗಾಡಿಗಳಿದ್ದುವು... ಆದ್ರೆ ಅವುಗಳನ್ನೆಲ್ಲ ಹಿಂದಕ್ಕೆ ಹಾಕಿ ಓಡಿದ್ದಿರಿ... ಅದೇ ರೀತಿ ಈಗಲೂ ಓಡಬೇಕು ನೋಡಿ... ಲೆ-ಲೆ-ಲೆ.

ನನನ್‌ಪುರದಿಂದ ಫಾರ್‌ಬಿಸ್‌ಗಂಜ್ ಮೂರು ಕೋಸಿನಷ್ಟು ದೂರ... ಇನ್ನೂ ಎರಡು ಗಂಟೆ ಹೋಗಬೇಕು.

ನನನ್‌ಪುರದ ಪೇಟೆಯಲ್ಲಿ ಈಗ ಚಹಾ ಕೂಡ ಸಿಗುತ್ತದೆ. ಹಿರಾಮನ್ ತನ್ನ ಲೋಟದಲ್ಲಿ ಚಹಾ ತುಂಬಿಕೊಂಡು ಬಂದ... ಕಂಪೆನಿಯ ಹೆಂಗಸು ಎಂದಮೇಲೆ ಕ್ಷಣಕ್ಷಣಕ್ಕೂ ಚಹಾ ಕುಡಿಯುತ್ತಿರುತ್ತಾರೆ. ಅವರಿಗೆ ಚಹಾ ಪ್ರಾಣ ಇದ್ದಂತೆ.

ಹೀರಾಬಾಯಿ ಹೊಟ್ಟೆ ಹುಣ್ಣಾಗುವಷ್ಟು ನಗುತ್ತಿದ್ದಾಳೆ, ಕೇಳುತ್ತಿದ್ದಾಳೆ–ಅದು ಸರಿ, ಮದುವೆಯಾಗದ ಮನುಷ್ಯ ಚಹಾ ಕುಡಿಯಬಾರದೆಂದು ಯಾರಾದರೂ ನಿಮಗೆ ಹೇಳಿದ್ದಾರೇನು ?

ಹೀರಾಮನ್ ನಾಚಿಕೆಯಲ್ಲಿ ಮುಳುಗಿಹೋದ. ಅವರು ಏನು ಹೇಳಿದರು ?... ನಾಚಿಕೆ ಪಡಬೇಕಾದ ಮಾತು. ಆದರೆ ಒಮ್ಮೆ ಅದನ್ನು ಅನುಭವಿಸಿಬಿಟ್ಟಿದ್ದಾನೆ. ಸರ್ಕಸ್ ಕಂಪೆನಿಯ ಮೇಮ್‌ಸಾಹೇಬಳ ಕೈಯಿಂದ ಚಹಾ ಕುಡಿದು ಬಾಯಿ ಚಪ್ಪರಿಸಿದ್ದುಂಟು. ಬಹಳ ಬಿಸಿಯಾಗಿತ್ತು.

–ಕುಡಿಯಿರಿ ಗುರೂಜಿ ! ಹೀರಾ ನಕ್ಕುಬಿಟ್ಟಳು.

–ಇಸ್ಸ್.

ನನನ್‌ಪುರದ ಪೇಟೆಯಲ್ಲೂ ಎಲ್ಲ ಕಡೆ ದೀಪಗಳು ಹಚ್ಚಿದ್ದುವು. ಹಿರಾಮನ್ ಹೊರಗೆ ಹೋಗುವಾಗ ತಾನು ಯಾವಾಗಲೂ ತೆಗೆದುಕೊಂಡು ಹೋಗುವ ಲಾಟೀನ್ ಹಚ್ಚಿ ಅದನ್ನು ತನ್ನ ಗಾಡಿಗೆ ತಗಲಿಸಿಕೊಳ್ಳುತ್ತಾನೆ... ಶಹರದಿಂದ ಐದು ಕೋಸಿನಷ್ಟು ದೂರ ಇರುವ ಹಳ್ಳಿಗಳಲ್ಲೂ ಇವೊತ್ತು ಲಾಟೀನ್ ಇಲ್ಲದೆ ಹೋದರೆ ಹಿಡಿದು ಚಲಾನ್ ಹಾಕಿಬಿಡುತ್ತಾರೆ ಈಚೀಚೆಗೆ. ತಾವು ಶಹರಿನವರಿಗೇನು ಕಡಿಮೆ ಎಂದುಕೊಳ್ಳತೊಡಗಿದ್ದಾರೆ...

–ತಾವು ನನ್ನನ್ನು ಗುರೂಜಿ ಎಂದು ಕರೆಯಬೇಡಿ.

–ನೀವು ನನ್ನ ಉಸ್ತಾದರು. ನಮ್ಮ ಶಾಸ್ತ್ರಗಳಲ್ಲಿ ಹೇಳಿರುವಂತೆ ಒಂದು ಅಕ್ಷರ ಕಲಿಸಿದರೂ ಸರಿಯೇ ಅವರು ಗುರು, ಒಂದು ರಾಗ ಹೇಳಿಕೊಟ್ಟಿದ್ದರೂ ಸರಿ, ಅವರು ಉಸ್ತಾದರು.

–ಇಸ್ ! ಶಾಸ್ತ್ರ-ಪುರಾಣಗಳ ಮಾತೂ ನಿಮಗೆ ತಿಳಿದಿದೆಯೇ ? ...ನಾನೇನು ಕಲಿಸಿದ್ದೇನೆ ?... ನಾನೇನು... ?

ಹೀರಾ ನಕ್ಕು ಗುನುಗುನಾಯಿಸತೊಡಗಿದಳು– ಹೆ–ಅ–ಅ–ಅ ಸಾವನ-ಭಾದವಾ ಕೆ–ರ––! ಹಿರಾಮನ್ ಆಶ್ಚರ್ಯದಿಂದ ಮೂಕನಾಗಿಬಿಟ್ಟ... ಇಸ್ಸ್ ! ಇಷ್ಟು ಚುರುಕಾದ ಗ್ರಹಣಶಕ್ತಿ ! ಹು...ಬು...ಹೂ ಮಹವಾ ಘಟವಾರಿನ್.

ಗಾಡಿ ಆ ಇಳಿಜಾರಿನಲ್ಲಿ ದಡದಡ ಎನ್ನುತ್ತಾ ತುಂಬಾ ಜೋರಾಗಿ ಇಳಿಯತೊಡಗಿತ್ತು ಸಣ್ಣ-ಪುಟ್ಟ ಹಳ್ಳಕೊಳ್ಳಗಳಲ್ಲಿ ಧುಮುಕಿಕೊಂಡು. ಗಾಡಿ ತುಂಬಾ ಮುಂದಕ್ಕೆ ವಾಲಿದ್ದುದ

ರಿಂದ ಹೀರಾಬಾಯಿ ತನ್ನ ಒಂದು ಕೈಯನ್ನು ಹಿರಾಮನ್‌ನ ಹೆಗಲಮೇಲೆ ಇಟ್ಟು ಕೊಂಡಿದ್ದಳು. ಬಹಳ ಹೊತ್ತಿನ ವರೆಗೆ ಹಿರಾಮನ್‌ನ ಭುಜದ ಮೇಲೆ ಅವಳ ಕೈಬೆರಳು ಗಳು ಹಾಗೆಯೇ ಇದ್ದುವು. ಹಿರಾಮನ್ ಹಲವು ಬಾರಿ ತನ್ನ ಓರೆಗಣ್ಣಿನಿಂದ ಅವುಗಳ ಕಡೆ ನೋಡಲು ಪ್ರಯತ್ನಿಸಿದ್ದನು. ಸಡಿಲವಾಗಿ ಅವನ ಹೆಗಲಮೇಲಿದ್ದ ಕೈಬೆರಳುಗಳು ಗಾಡಿ ದಿಣ್ಣೆಯನ್ನು ಹತ್ತತೊಡಗಿದಾಗ ಅವನ ಹೆಗಲನ್ನು ಬಿಗಿಯಾಗಿ ಹಿಡಿದು ಕೊಂಡುವು.

ಮುಂದುಗಡೆ ಫಾರಬಿಸ್‌ಗಂಜ್ ಶಹರಿನ ದೀಪಗಳು ಮಿನುಗುತ್ತಿರುವುದು ಕಾಣಿಸು ತ್ತಿದೆ. ಶಹರಿನ ಸ್ವಲ್ಪ ದೂರದಲ್ಲಿ ಪ್ರತ್ಯೇಕವಾಗಿ ಜಾತ್ರೆಯ ದೀಪಗಳು... ಗಾಡಿಯ ಟಾಪಿನಲ್ಲಿ ನೇತುಹಾಕಿರುವ ಲಾಟೀನು ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ತೂರಾಡುತ್ತಿದೆ. ಅದರ ಬೆಳಕಿನಲ್ಲಿ ಆ ತುಯ್ದಾಟದ ನೆರಳು ಬೀಳುತ್ತಿದೆ! ಅಶ್ರು ಪೂರ್ಣ ಕಣ್ಣುಗಳಿಗೆ ದೀಪಗಳು ಸೂರ್ಯಕಾಂತಿಯ ಹೂವುಗಳಂತೆ ಕಾಣುತ್ತಿವೆ.

ಫಾರಸ್‌ಬಿಸ್‌ಗಂಜಂತೂ ಹಿರಾಮನ್‌ನ ಗ್ರಾಮಕ್ಕೆ ಪ್ರವೇಶದ್ವಾರವಿದ್ದಂತೆ. ಅದರ ಮೂಲಕವೇ ಹೋಗಬೇಕು. ಅವನೆಷ್ಟು ಬಾರಿ ಇಲ್ಲಿಗೆ ಬಂದಿದ್ದಾನೆಯೋ ತಿಳಿಯದು. ಜಾತ್ರೆಯ ಭಾರ ಹೊತ್ತಿದ್ದಾನೆ. ಒಬ್ಬ ಹೆಂಗಸಿನೊಡನೆಯೂ ಒಮ್ಮೆ ಬಂದಿದ್ದಾನೆ. ಹೌದು, ಒಂದು ಬಾರಿ, ಅವನ ಅತ್ತಿಗೆ ಇಲ್ಲಿ ಒಂದು ನಾಟಕವನ್ನು ನೋಡಲು ಅವನೊಡನೆ ಬಂದಿದ್ದಳು. ಈಗ ಮಾಡಿರುವಂತೆಯೇ ಆಗಲೂ ಅವನ ಗಾಡಿಗೆ ನಾಲ್ಕೂ ಕಡೆಯಿಂದ ಟಾರ್‌ಪಾಲ್ ಕಟ್ಟಿ ಗೂಡಿನಂತೆ ಮಾಡಲಾಗಿತ್ತು.

ಹಿರಾಮನ್ ತನ್ನ ಗಾಡಿಯನ್ನು ಟಾರ್‌ಪಾಲ್‌ನಿಂದ ಮುಚ್ಚುತ್ತಿದ್ದಾನೆ. ನಾಳೆ ಬೆಳಿಗ್ಗೆ ಯಾಗುತ್ತಲೇ ರೌತಾ ನೌಟಂಕಿ ಕಂಪೆನಿಯ ಮೆನೇಜರ್ ಜೊತೆಗೆ ಮಾತನಾಡಿ ಹೀರಾ ಬಾಯಿ ಕಂಪೆನಿಯನ್ನು ಸೇರಿಕೊಳ್ಳುತ್ತಾಳೆ. ನಾಳಿದ್ದರಿಂದ ಜಾತ್ರೆ ಪ್ರಾರಂಭವಾಗುತ್ತದೆ. ಈ ಸಲ ಜಾತ್ರೆ ಜೋರಾಗಿ ಸೇರಿದೆ. ...ಒಂದೇ ರಾತ್ರಿ. ಇಡೀ ರಾತ್ರಿ ಅವಳು ಹಿರಾ ಮನ್‌ನ ಗಾಡಿಯಲ್ಲೇ ಇರುತ್ತಾಳೆ... ಹಿರಾಮನ್‌ನ ಗಾಡಿಯಲ್ಲಿ ಅಂದರೆ ತಪ್ಪಾಗುತ್ತದೆ. ಅವನ ಮನೆಯಲ್ಲಿ ಎಂದೇ ಹೇಳಬಹುದು.

– ಎಲ್ಲಿಯ ಗಾಡಿ? ...ಯಾರು, ಹಿರಾಮನ್? ಯಾವ ಜಾತ್ರೆಯಿಂದ ಬಂದೆ? ಏನು ಸಾಮಾನು ತಂದೆ?

ಊರಿನ ಗಾಡಿಯವರು ಹುಡುಕಿಕೊಂಡು ವಿಚಾರಿಸಿ ಪಕ್ಕದಲ್ಲೇ ತಮ್ಮ ಗಾಡಿ ಗಳನ್ನೂ ಬಿಡುತ್ತಾರೆ. ತನ್ನ ಊರಿನ ಲಾಲ್‌ಮೊಹರ್, ಧುನ್ನೀರಾಮ್ ಮತ್ತು ಪಲಟ್‌ದಾಸ್ ಇವರೇ ಮೊದಲಾದವರೆಲ್ಲರ ಗುಂಪನ್ನು ಕಂಡು ಹಿರಾಮನ್ ಕೈ ಹಿಚುಕಿ ಕೊಂಡ. ಅತ್ತ ಪಲಟ್‌ದಾಸ್ ಗಾಡಿಯ ಒಳಕ್ಕೆ ಇಣಿಕಿ ನೋಡಿ ಒಂದು ಹುಲಿಯನ್ನು ನೋಡಿದಷ್ಟೇ ಗಾಬರಿಗೊಂಡ. ಹಿರಾಮನ್ ಕೈಸನ್ನೆಯಿಂದಲೇ ಎಲ್ಲರನ್ನೂ ಸುಮ್ಮನಿರಿಸಿದ.

ಆ ಮೇಲೆ ಗಾಡಿಯ ಕಡೆಗೆ ಕಣ್ಣು ಹೊಡೆದು ಕಿವಿಮಾತು ಹೇಳಿದ. ಕಂಪೆನಿಯ ಹೆಂಗಸು – ನೌಟಂಕಿ ಕಂಪೆನಿಯವಳು.

– ಕಂಪೆನಿಯ ...ಆ ...ಅಂ?

– ......?? ......?? ......

ಈಗ ಒಬ್ಬನಲ್ಲ, ನಾಲ್ಕು ಜನ ಹಿರಾಮನ್ನರು. ನಾಲ್ವರೂ ಒಬ್ಬರನ್ನೊಬ್ಬರು ಆಶ್ಚರ್ಯದಿಂದ ನೋಡಿದರು... ಕಂಪೆನಿ ಅನ್ನುವ ಒಂದು ಪದದಲ್ಲಿ ಅದೆಷ್ಟು ಗಮ್ಮತ್ತು ಇದೆ! ಹಿರಾಮನ್ ಇಶಾರೆಯಿಂದಲೇ ಏನೋ ಹೇಳಿದ. ಮೂವರೂ ನಿಸ್ತಬ್ಧ ರಾದರು. ಸ್ವಲ್ಪ ದೂರ ಸರಿದು ಮಾತನಾಡುವ ಅಪೇಕ್ಷೆಯನ್ನು ಲಾಲ್‌ಮೋಹರ್ ಕೈಸನ್ನೆಯಿಂದಲೇ ಸೂಚಿಸಿದ. ಹಿರಾಮನ್ ಗಾಡಿಯ ಟಾಪಿನ ಕಡೆಗೆ ಮುಖಮಾಡಿ ಕೇಳಿದ – ಇಷ್ಟು ಹೊತ್ತಿಗೆ ಹೋಟಲ್ ಯಾವುದೂ ತೆರೆದಿರಲಾರದು, ಹಲವಾಯಿ ಅಂಗಡಿಯಿಂದ ಏನಾದರೂ ತರೋಣವೇ?

– ಹಿರಾಮನ್, ಸ್ವಲ್ಪ ಇಲ್ಲಿ ಕೇಳಿ... ನಾನೀಗ ಏನೂ ತಿನ್ನುವುದಿಲ್ಲ. ...ನೀವು ಹೋಗಿ ತಿಂದು ಬನ್ನಿ.

– ಏನಿದು, ದುಡ್ಡು? ಇಸ್ಸ್!... ಫಾರ್‌ಬಿಸ್‌ಗಂಜ್‌ನಲ್ಲಿ ಹಿರಾಮನ್ ಯಾವತ್ತೂ ದುಡ್ಡು ಕೊಟ್ಟು ಏನನ್ನೂ ತಿಂದಿದ್ದೇ ಇಲ್ಲ. ಅವನ ಊರಿನ ಎಷ್ಟು ಜನ ಗಾಡಿಯವರು ಇರುತ್ತಾರೆ, ಅವರು ಇರುವುದಾದರೂ ಏಕೆ? ಅವನು ದುಡ್ಡು ಮುಟ್ಟುವ ಮಾತೇ ಇಲ್ಲ. ಅವನು ಹೀರಾಬಾಯಿಗೆ ಹೇಳಿದ – ಸುಮ್ಮನೆ ಜಾತ್ರೆ ಜನರ ಮಧ್ಯೆ ಮರ್ಯಾದೆಯ ಸವಾಲು ತರಬೇಡಿ. ದುಡ್ಡನ್ನು ನಿಮ್ಮಲ್ಲೇ ಇಡಿ. ಲಾಲ್‌ಮೋಹರ್ ಕೂಡ ಸಮಯ ನೋಡಿ ಹತ್ತಿರಕ್ಕೆ ಬಂದು ಸವಾಲು ಹಾಕಿ ಹೇಳಿದ – ನಾಲ್ಕು ಜನರ ಊಟ ಇದೆ. ಇದರಲ್ಲಿ ಇನ್ನಿಬ್ಬರು ಖುಷಿಯಾಗಿ ತಿನ್ನಬಹುದು. ಇನ್ನೇನು ಅನ್ನ ತಯಾರಾಗುತ್ತದೆ.... ಹೋ–ಹೋ–ಹೋ. ನಾವೆಲ್ಲ ಒಂದೇ ಊರಿನವರು. ಅವನ ಊರಿನವರು ಇಷ್ಟು ಜನ ಇರುವಾಗ ಹಿರಾಮನ್ ಹೋಟಲು–ಹಲ್ವಾಯಿ ಅಂಗಡಿ ಹುಡುಕಿಕೊಂಡು ಹೋಗಲು ಸಾಧ್ಯವೇ?

ಹಿರಾಮನ್ ಲಾಲ್‌ಮೋಹರ್‌ನ ಕೈ ಹಿಸುಕಿದ – ಹಾಗೆ ಬಾಯಿಗೆ ಬಂದದ್ದನ್ನೆಲ್ಲ ಒದರುತ್ತಾ ನಿಂತ್ಕೋಬೇಡ.

ಗಾಡಿಯಿಂದ ಸ್ವಲ್ಪ ದೂರ ಹೋಗುತ್ತಾ ಧುನ್ನೀರಾಮ್ ತನ್ನ ಮನಸ್ಸಿನಲ್ಲಿ ಕಚಕುಳಿ ಇಡುತ್ತಿದ್ದ ಮಾತನ್ನು ಹೇಳಿಯೇಬಿಟ್ಟ – ಇಸ್ಸ್, ನೀನೂ ಪರವಾಗಿಲ್ಲ, ಕಣೋ ಹಿರಾಮನ್. ಆ ಸಲ ಕಂಪೆನಿಯ ಹುಲಿ, ಈ ಸಲ ಕಂಪೆನಿಯ ಹೆಂಗಸು!

ಹಿರಾಮನ್ ಮೆಲುದನಿಯಲ್ಲಿ ಹೇಳಿದ – ನೋಡ್ರೋ ಇದು ನಮ್ಮ ಕಡೆ ಊರಿನ ಹೆಂಗಸಲ್ಲ, ನಾವು ಏನು ಒದರಿದ್ದರೂ ಕೇಳಿಕೊಂಡು ಇರೋದಕ್ಕೆ. ಮೊದಲೇ ಪಶ್ಚಿಮದ ಹೆಂಗಸು, ಜೊತೆಗೆ ಕಂಪೆನಿಯ ಹೆಂಗಸು ಬೇರೆ.

ಧುನ್ನೀರಾಮ್ ತನ್ನ ಮನಸ್ಸಿನ ಶಂಕೆಯನ್ನೂ ವ್ಯಕ್ತಪಡಿಸಿದ. ನಾವು ಕೇಳಿರುವ ಹಾಗೆ ಕಂಪೆನಿಯಲ್ಲಿ ಇರುವ ಹೆಂಗಸಿನ ಹೆಸರು, ಪತುರಿಯಾ, ನೀನು ನೋಡಿದರೆ ಹೀಗ್ ಹೇಳ್ತಿದ್ದೀ.

ಥುತ್! ಎಲ್ಲರೂ ಒಟ್ಟಿಗೆ ಅವನ ಮುಖದ ಮೇಲಿನ ನೀರು ಇಳಿಸಿದರು. ಎಂಥವನೋ ಇವ್ನು? ಪತುರಿಯಾ ಕಂಪೆನಿಯಲ್ಲಿ ಇರುತ್ತಾಳೇನೋ? ನಿನ್ನ ಬುದ್ಧಿಗೆ ಏನು ಹೇಳ ಬೇಕಪ್ಪ... ಕೇಳಿದ್ದಾನೆ, ನೋಡಿದ್ದಂತೂ ಇಲ್ಲ.

ಧುನ್ನೀರಾಮ ತನ್ನ ತಪ್ಪನ್ನೊಪ್ಪಿಕೊಂಡ. ಪಲಟ್‌ದಾಸನಿಗೆ ವಿಷಯ ತಟಕ್ಕನೆ ತಲೆಗೆ ಬಂತು. ಎಲ್ಲರೂ ಮಾತನಾಡಿಕೊಂಡು ಈ ಕಡೆ ಬಂದುಬಿಟ್ಟಿದ್ದಾರೆ, ಗಾಡಿಯ ಹತ್ತಿರ ಯಾರೂ ಇಲ್ಲ. ಹೀರಾಬಾಯಿ ಒಬ್ಬಳೇ ಗಾಡಿಯಲ್ಲಿದ್ದಾಳೆ. ಎಷ್ಟೇ ಆಗಲಿ ಹೆಂಗಸು; ಒಬ್ಬಳೇ ಇರುವುದು ಎಂದರೇನು? ಏನಾದರೂ ಅಗತ್ಯ ಬಿದ್ದರೂ ಬೀಳಬಹುದು.

ಹೌದು. ಈ ವಿಚಾರ ತಲೆಗೇ ಬಂದಿರಲಿಲ್ಲ, ಎನಿಸಿತು ಎಲ್ಲರಿಗೂ. ಹಿರಾಮನ್ ಹೇಳಿದ – ನೀನು ಹೇಳಿದ್ದು ಸರಿ. ಪಲಟ್, ನೀನು ವಾಪಸ್ಸು ಹೋಗಿ ಗಾಡಿಯ ಹತ್ತಿರವೇ ಇರು. ನೋಡು. ಸ್ವಲ್ಪ ಹುಷಾರಾಗಿರಬೇಕು, ಹಾಂ.

...ಹಿರಾಮನ್ ಮೈಯಲ್ಲಿ ಒಳ್ಳೆ ಸೆಂಟಿನ ಹಾಗೂ ಗುಲಾಬಿಹೂವಿನ ಸುವಾಸನೆ ಬರುತ್ತಿದೆ. ಈ ಸಲ ಇವನ ಅದೃಷ್ಟ ಖುಲಾಯಿಸಿದೆ. ಹೋದ ಸಲ ಹುಲಿ-ಗಾಡಿಯನ್ನು ಎಳೆದು ತಂದಿದ್ದಾಗ ಇವನ ಮೈಯಲ್ಲಿ ದುರ್ನಾತ ಬಡೀತಿತ್ತು. ನಾಲ್ಕು ತಿಂಗಳು ಆ ದುರ್ಗಂಧ ಹೋಗಿರಲಿಲ್ಲ. ಈ ಸಲ! ಲಾಲ್‌ಮೋಹರ್ ಹಿರಾಮನ್‌ನ ಟವಲನ್ನು ಮೂಸಿ ಮೂಸಿ ನೋಡಿದ ...ಏ...ಈ.

ಹಿರಾಮನ್ ಹೋಗುತ್ತಾ ಹೋಗುತ್ತಾ ಹಾಗೆಯೇ ನಿಂತ – ಏನು ಮಾಡೋದು. ಲಾಲ್‌ಮೋಹರ್ ಭಾಯ್, ತುಂಬಾ ಹಟ ಹಿಡಿದಿದ್ದಾರೆ, ನಾನು ನೌಟಂಕಿ ನಾಟಕ ನೋಡಲೇಬೇಕಂತೆ!

– ಬಿಟ್ಟಿ?

– ಈ ಮಾತು ಊರಿಗೆ ಹೋಗಿ ಜನರ ಕಿವಿ ಮುಟ್ಟಿದರೆ?

ಹಿರಾಮನ್ ಹೇಳಿದ – ಇಲ್ಲಪ್ಪ ಆಗೋಲ್ಲ. ಒಂದು ರಾತ್ರಿ ನೌಟಂಕಿ ನೋಡಿ ಜೀವಮಾನ ಪರ್ಯಂತ ಜನರ ಬಾಯಿಂದ ಮಾತು ಕೇಳುವುದು ಸಾಧ್ಯವಿಲ್ಲ. ದೇಶಿ ಕೋಳಿಗೆ ವಿಲಾಯಿತಿ ಮಿಜಾಜು.

ಧುನ್ನೀರಾಮ್ ಕೇಳಿದ – ಮುಫತ್ತಿನಲ್ಲಿ ನೌಟಂಕಿ ಆಟ ನೋಡಿದೆವು ಅಂದ್ರೂ ನಿಮ್ಮ ಅತ್ತಿಗೆ ಬಯ್ತಾಳೇನು?

ಲಾಲ್‌ಮೋಹರ್ ತನ್ನ ಗಾಡಿ ಬಿಟ್ಟಿರುವ ಸ್ಥಳದ ಪಕ್ಕದಲ್ಲಿಯೇ ಕಟ್ಟಿಗೆಯ ಅಂಗಡಿ ಯನ್ನು ಹೊತ್ತು ತಂದಿರುವ ಗಾಡಿಯವರೂ ತಮ್ಮ ಗಾಡಿಗಳನ್ನು ಬಿಟ್ಟುಕೊಂಡಿದ್ದಾರೆ.

ಗಾಡಿಕಾರ ಮಿಯಾಜಾನ್ ಗುಡುಗುಡಿ ಹುಕ್ಕಾ ಕುಡಿಯುತ್ತಾ ಕೇಳಿದ – ಏನಪ್ಪಾ, ಮೀನಾಬಾಜಾರ್ ಮಾಲಿನ ಬಾಡಿಗೆ ಯಾರು ತಂದಿದ್ದಾರೆ?

ಮೀನಾ ಬಜಾರ್! ಮೀನಾ ಬಜಾರ್ ಎಂದು ಪತುರಿಯಾಳನ್ನು ಕರೆಯುತ್ತಾರೆ. ಈ ಬುಡ್ಡಾ ಮಿಯಾಂ ಏನು ಹೇಳ್ತಾ ಇದಾನೆ? ಲಾಲ್‌ಮೋಹರ್ ಹಿರಾಮನ್ನನ ಕಿವಿಯಲ್ಲಿ ಪಿಸುಗುಟ್ಟುತ್ತಾ ಹೇಳಿದ – ನಿನ್ನ ಮೈಯಲ್ಲಿ ಸುಗಂಧ!... ಹೌದೇನು?

ಲಹಸನ್‌ವಾ ಲಾಲ್‌ಮೋಹರ್‌ನ ಗಾಡಿ ಹೊಡೆಯುವ ನೌಕರನಿದ್ದಾನೆ. ವಯಸ್ಸಿನಲ್ಲಿ ಎಲ್ಲರಿಗೂ ಚಿಕ್ಕವನು. ಅವನು ಮೊದಲ ಬಾರಿಗೆ ಈ ಜಾತ್ರೆಗೆ ಬಂದಿದ್ದರೇನಾಯಿತು? ಬಾಬು ಬಿಟುವಾಸೋ ಅವರ ಹತ್ತಿರ ಬಾಲ್ಯದಿಂದಲೂ ಕೆಲಸ ಮಾಡಿದ್ದಾನೆ. ಅವನು ಆಗಾಗ ಮೂಗಿನ ಸೊಳ್ಳೆಯನ್ನು ಅಗಲ ಮಾಡಿಕೊಂಡು ಸುತ್ತ ಏನನ್ನೋ ಮೂಸಿ ನೋಡುವ ಪ್ರಯತ್ನ ಮಾಡುತ್ತಿದ್ದಾನೆ. ಹಿರಾಮನ್ ನೋಡಿದ – ಲಹಸನ್‌ವಾನ ಮುಖ ಕೆಂಪಾಗಿ ಫಳಫಳ ಎನ್ನುತ್ತಿದೆ... ಯಾರು ಬರುತ್ತಿದ್ದಾರೆ ಗಡಬಡಾಯಿಸಿಕೊಂಡು? ಯಾರು... ಪಲಟ್‌ದಾಸ್? ಏನು?

ಪಲಟ್‌ದಾಸ್ ಬಂದು ಸುಮ್ಮನೆ ನಿಂತುಬಿಟ್ಟ. ಅವನ ಮುಖ ಕೂಡ ಕೆಂಪಾಗಿ ಫಳಫಳ ಎನ್ನುತ್ತಿದೆ. ಹಿರಾಮನ್ ಕೇಳಿದ – ಏನಾಯಿತು? ಯಾಕೆ ಏನೂ ಹೇಳುತ್ತಿಲ್ಲ?

ಪಲಟ್‌ದಾಸ್ ಏನು ಜವಾಬು ಕೊಡಬೇಕು? ಹಿರಾಮನ್ ಮೊದಲೇ ಅವನಿಗೆ ಎಚ್ಚರಿಕೆ ಕೊಟ್ಟಿದ್ದ. ಹುಷಾರಾಗಿರಬೇಕು ಎಂದು. ಅವನು ಹೋಗಿ ಸುಮ್ಮನೆ ಗಾಡಿಯ ಮೇಲೆ ಕುಳಿತುಕೊಂಡುಬಿಟ್ಟಿದ್ದ. ಹಿರಾಮನ್ ಕುಳಿತುಕೊಳ್ಳುವ ಕಡೆ. ಹೀರಾಬಾಯಿ ಕೇಳಿದಳು – ನೀನು ಹಿರಾಮನ್‌ನ ಸ್ನೇಹಿತನೇನು? ಪಲಟ್‌ದಾಸ್ ತಲೆ ಅಲ್ಲಾಡಿಸಿ ಹೂಂಗುಟ್ಟಿದ್ದ. ಹೀರಾಬಾಯಿ ಮತ್ತೆ ಮಲಗಿಕೊಂಡುಬಿಟ್ಟಳು. ಅವಳ ಮುಖ, ಅವಳ ಮಾತು, ಢಂಗು – ಡೌಲು ಇವೆಲ್ಲ ನೋಡಿ ಸ್ತಂಭೀಭೂತನಾಗಿ ಪಲಟ್‌ದಾಸ್‌ನಿಗೆ ನಡುಕ ಆರಂಭವಾಯಿತು. ಹೀಗೇಕೆ ಎಂಬುದೇ ಅರ್ಥವಾಗಲಿಲ್ಲ. ಹಾಂ. ರಾಮಲೀಲಾ ವಲ್ಲಿ ಸೀತಾಮಾತೆ ಹೀಗೇ ಮಲಗಿಕೊಂಡಿದ್ದಳು. ಜೈ ಸಿಯಾವರ ರಾಮಚಂದ್ರಕೀ ಜೈ... ಪಲಟದಾಸನ ಮನಸ್ಸಿನಲ್ಲಿ ಜೈ ಜೈಕಾರ ಆರಂಭವಾಗಿತ್ತು. ಅವನು ವೈಷ್ಣವಪಂಥಿ ದಾಸ, ಜೊತೆಗೆ ಹರಿಕಥೆಯನ್ನೂ ಮಾಡುತ್ತಾನೆ. ಸೀತಾಮಾತೆ ತನ್ನ ಕೈಬೆರಳುಗಳ ಮೂಲಕ ಸಂಜ್ಞೆ ಮಾಡಿ ತನ್ನ ಕಾಲು ಒತ್ತುವಂತೆ ಹೇಳಿದಂತಾಗಿತ್ತು. ಅವನು ಹೋಗಿ ಹೀರಾಬಾಯಿಯ ಕಾಲು ಒತ್ತುತ್ತಾ ಕುಳಿತ. ಹೀರಾಬಾಯಿ ಗಾಬರಿಗೊಂಡು ಎದ್ದು ಕುಳಿತಳು – ಅರೇ, ನಿನಗೇನು ಹುಚ್ಚು... ಹೊರಡು ಇಲ್ಲಿಂದ! ಓಡು...

ಕಂಪೆನಿಯ ಹೆಂಗಸು ಕೋಪದಿಂದ ಅವನ ಮೇಲೆ ಕೆಂಡಕಾರುತ್ತಿದ್ದಳು ಎಂದೇ ಅಲ್ಲಿ ನಿಲ್ಲದೆ ಭಟಕ್ ಭಟಕ್ ಎಂದು ಕೊಂಡು ಓಡಿ ಬಂದಿದ್ದ ಈ ಕಡೆಗೆ.

ಪಲಟ್‌ದಾಸ ಏನೂ ಹೇಳುವ ಸ್ಥಿತಿಯಲ್ಲೇ ಇರಲಿಲ್ಲ. ಅವನು ಜಾತ್ರೆಯನ್ನೇ ಬಿಟ್ಟು ಹೊರಟುಹೋಗುವ ಮಾರ್ಗ ಹುಡುಕುತ್ತಿದ್ದ. ಅವನು ಹೇಳಿದ – ಒಬ್ಬ ವ್ಯಾಪಾರಿ

ಸಿಕ್ಕಿದ್ದಾನೆ. ನಾನು ಈಗಲೇ ಪೇಟನ್‌ಗೆ ಹೋಗಿ ಸಾಮಾನು ತರಬೇಕು. ಅನ್ನ ತಯಾರಾಗಲು ಇನ್ನೂ ಟೈಂ ಇದೆ ಹೇಗಾದರೂ. ಅದು ಸಿದ್ಧ ಆಗೋ ಒಳಗಾಗಿ ಬಂದು ಬಿಡುತ್ತೇನೆ.

ಅವನು ಹೋಗುವಾಗ ಧುನ್ನಿರಾಮ್ ಮತ್ತು ಲಹಸನ್‌ವಾ ಇಬ್ಬರನ್ನೂ ಟೀಕರಾಯಿಸಿಕೊಂಡು ಹೋದ. ಅವನ ಬುಟ್ಟಿ ಅವರಿಗೆ ತಗಲಿತ್ತು... ಚಿಕ್ಕ ಮನುಷ್ಯ ...ಎಲ್ಲೀದೋ ಕಂಜೂಸ್ ಇದ್ದಾನೆ... ಒಂದೊಂದು ಕಾಸಿನ ಲೆಕ್ಕ ಇಡ್ತಾನೆ. ಊಟ ಮುಗಿದ ಮೇಲೆ ಲಾಲಮೋಹರನ ಗುಂಪಿನವರು ತಮ್ಮ 'ಠಿಕಾಣಿ' ಕಿತ್ತು ಹಾಕಿದರು. ಧುನ್ನೀ ಮತ್ತು ಲಹಸನ್‌ವಾ ಗಾಡಿ ಕಟ್ಟಿಕೊಂಡು ಹಿರಾಮನ್ ಗಾಡಿ ಬಿಟ್ಟುಕೊಂಡಿದ್ದ 'ಬಾಸಾ'–ಠಿಕಾಣಿ ಕಡೆಗೆ ಹೋದರು. ಹಿರಾಮನ್ ನಡೆಯುತ್ತಾ ನಿಂತು ಲಾಲ್‌ಮೋಹರ್‌ಗೆ ಹೇಳಿದ–ಸ್ವಲ್ಪ ನನ್ನ ಭುಜ ಮೂಸಿ ನೋಡು. ಮೂಸಿ ನೋಡು ಹೇಳ್ತೀನಿ.

ಲಾಲ್‌ಮೋಹರ್ ಅವನ ಭುಜ ಮೂಸಿ ನೋಡಿ ಹಾಗೇ ಕಣ್ಣು ಮುಚ್ಚಿಕೊಂಡನು. ಬಾಯಿಂದ ಅಸ್ಪಷ್ಟ ಶಬ್ದ ಹೊರಟಿತು–ಏ–ಹ...

ಹಿರಾಮನ್ ಹೇಳಿದ–ಸ್ವಲ್ಪ ಹಾಗೆ ಕೈ ಇಟ್ಟಮಾತ್ರಕ್ಕೆ ಇಷ್ಟು ಸುಗಂಧ–ಯೋಚಿಸಿ ನೋಡು.

ಲಾಲ್‌ಮೋಹರ್ ಹಿರಾಮನ್‌ನ ಕೈ ಹಿಡಿದುಕೊಂಡ–ಅವನ ಭುಜದ ಮೇಲೆ ಕೈ ಇಟ್ಟು ಹೇಳಿದ–ಹಿರಾಮನ್. ನೌಟಂಕಿ ನೋಡುವ ಇಂತಹ ಅವಕಾಶ ಮುಂದೆ ಯಾವತ್ತೂ ಸಿಗುವುದಿಲ್ಲ–ತಿಳೀ.

–ನೀನೂ ನೋಡ್ತೀಯೇನು?

ಲಾಲ್‌ಮೋಹರಿನ ಮೂವತ್ತಾರು ಹಲ್ಲುಗಳೂ ಲೌಕಿಕದ ಬೆಳಕಿನಲ್ಲಿ ಹೊಳೆಯುತ್ತಿದ್ದುವು.

ತನ್ನ 'ಠಿಕಾಣಿ' ಇರುವ ಕಡೆ ಬಂದು ಹಿರಾಮನ್ ನೋಡುತ್ತಾನೆ–ಗಾಡಿಯ ಸಮೀಪದಲ್ಲಿ ನಿಂತು ಯಾರೋ ಮಾತನಾಡುತ್ತಾ ಇದ್ದಾರೆ. ಹೀರಾಬಾಯಿ ಜೊತೆಗೆ. ಧುನ್ನಿ ಮತ್ತು ಲಹಸನ್‌ವಾ ಇಬ್ಬರೂ ಒಟ್ಟಿಗೆ ಹೇಳಿದರು–ಹಿಂದೆ ಎಲ್ಲಿ ಇದ್ದುಬಿಟ್ಟಿದ್ದಿರಿ? ಬಹಳ ಹೊತ್ತಿನಿಂದ ನಿಮ್ಮನ್ನು ಹುಡುಕಾಡುತ್ತಿದ್ದಾರೆ ಕಂಪೆನಿಯವರು...!

ಹಿರಾಮನ್ ಸಮೀಪಕ್ಕೆ ಹೋಗಿ ನೋಡಿದ–ಅದೇ, ಅದೇ ಮನುಷ್ಯ! ಚಂಪಾ ನಗರದ ಜಾತ್ರೆಯಲ್ಲಿ ಪೆಟ್ಟಿಗೆಯನ್ನು ಹೊತ್ತು ತಂದು ಹೀರಾಬಾಯಿಯನ್ನು ಗಾಡಿಯಲ್ಲಿ ಕೂರಿಸಿ ಎಲ್ಲೋ ಮಾಯವಾಗಿದ್ದ ಅವಳ ನೌಕರ.

–ಬಂದುಬಿಟ್ಟಿರಾ ಹಿರಾಮನ್? ಒಳ್ಳೇದು–ಈ ಕಡೆ ಬನ್ನಿ ...ಇದನ್ನು ತಕೊಳ್ಳಿ. ಇದು ನಿಮ್ಮ ಬಾಡಿಗೆ, ಇದು ನಿಮ್ಮ ದಕ್ಷಿಣೆ. ಇಪ್ಪತ್ತೈದು, ಇಪ್ಪತ್ತೈದು–ಐವತ್ತು.

ಯಾರೋ ತನ್ನನ್ನು ಆಕಾಶದಿಂದ ಒಂದೇ ಏಟಿಗೆ ಭೂತಲಕ್ಕೆ ಹೊಡೆದು ಕೆಡವಿದ ಹಾಗಾಯಿತು. ಯಾರೋ ಏನು, ಆ ಪೆಟ್ಟಿಗೆ ಎತ್ತುವ ಮನುಷ್ಯ–ಎಲ್ಲಿಂದ ಬಂದುಬಿಟ್ಟ?

ಅವನ ನಾಲಿಗೆ ಮೇಲೆ ಬಂದಂಥ ಮಾತು ನಾಲಿಗೆಯ ಮೇಲೆಯೇ ಉಳಿಯಿತು. ಇಸ್ಸ್! ದಕ್ಷಿಣೆ ...ಸುಮ್ಮನೆ ನಿಂತುಬಿಟ್ಟ.

ಹಿರಾಬಾಯಿ ಹೇಳಿದಳು – ತೆಗೆದುಕೊಳ್ಳಿ... ಇನ್ನೊಂದು ಮಾತು, ನಾಳೆ ಬೆಳಿಗ್ಗೆ ರೌತಾ ಕಂಪೆನಿಗೆ ಬಂದು ನನ್ನನ್ನು ಕಾಣಬೇಕು. ಪಾಸ್ ಮಾಡಿಸಿ ಇಟ್ಟಿರುತ್ತೇನೆ... ಯಾಕೆ ಮಾತೇ ಆಡ್ತಿಲ್ಲ?

ಲಾಲ್‌ಮೋಹರ್ ಹೇಳಿದ – ಅಮ್ಮಾವ್ರು ಇನಾಂ-ಬಕ್ಷೀಸು ಕೊಡ್ತಿದ್ದಾರೆ, ಈಸಿಕೋ ಹಿರಾಮನ್. ಹಿರಾಮನ್ ಲಾಲ್‌ಮೋಹರ್ ಕಡೆಗೆ ಲಘುವಾಗಿ ದುರುಗುಟ್ಟಿದ... ಈ ಲಾಲ್‌ಮೋಹರ್‌ಗೆ ಮಾತಾಡುವ ರೀತಿ ಕೂಡ ಗೊತ್ತಿಲ್ಲ.

ಧುನ್ನೀರಾಮನ ಸ್ವಗತವನ್ನು ಎಲ್ಲರೂ ಕೇಳಿದರು – ಹೀರಾಬಾಯಿ ಕೂಡ – ಗಾಡಿ ಎತ್ತು ಒಂದು ಕಡೆ ಬಿಟ್ಟಿದ್ದು ಯಾವ ಗಾಡಿಯವನು ತಾನೆ ನೌಟಂಕಿ ನೋಡಲು ಹೋಗುತ್ತಾನೆ, ಅದೂ ಜಾತ್ರೇಲಿ?

ಹಿರಾಮನ್ ಹಣವನ್ನು ಸ್ವೀಕರಿಸುತ್ತಾ "ಏನು ಹೇಳಲಿ" ಎಂದಷ್ಟೇ ಹೇಳಿ ನಗಲು ಪ್ರಯತ್ನಿಸಿದ... ಕಂಪನಿಯ ಹೆಂಗಸು ಕಂಪೆನಿಗೆ ಹೋಗುತ್ತಿದ್ದಾಳೆ, ಹಿರಾಮನ್, ಯಾವ ಲೆಕ್ಕಕ್ಕೆ! ಪೆಟ್ಟಿಗೆ ಹೊರುವವನು ಅವಳಿಗೆ ದಾರಿ ತೋರಿಸುತ್ತಾ ಮುಂದೆ ಮುಂದೆ ನಡೆದ – ಈ ಕಡೆ, ಹೀಗೆ. ಹೀರಾಬಾಯಿ ಹೋಗುತ್ತಾ ನಿಂತುಬಿಟ್ಟಳು ಮತ್ತು ಹಿರಾಮನ್‌ನ ಎತ್ತುಗಳ ಕಡೆ ತಿರುಗಿ ಹೇಳುತ್ತಾಳೆ – "ಅಚ್ಛಾ, ನಾನು ಹೊರಟೆ ಮೈಯನ್" ಹಿರಾಮನ್ ಅವುಗಳನ್ನು ಕರೆಯುತ್ತಿದ್ದುದಾದರೂ ಹಾಗೆಯೇ.

ಆ ಶಬ್ದ ಕೇಳಿ ಎತ್ತುಗಳೂ ಕಿವಿ ಆಡಿಸಿದುವು.

......?? ......?? ......!!

...ಮಹನೀಯರೇ ಮತ್ತು ಮಹಿಳೆಯರೇ, ಇವೊತ್ತು ರಾತ್ರಿ, ದಿ ರೌತಾ ಸಂಗೀತ ನೋಟಂಕಿ ಕಂಪೆನಿಯ ಸ್ಟೇಜಿನ ಮೇಲೆ ಗುಲ್‌ಬದನ್ ನೋಡಲು ಮರೆಯಬೇಡಿ, ಗುಲ್‌ಬದನ್. ನಿಮಗೆ ಸಂತೋಷವಾಗುವ ಒಂದು ಸಮಾಚಾರ ಎಂದರೆ, ಮಥುರಾ ಮೋಹನ್ ಕಂಪನಿಯ ಸುಪ್ರಸಿದ್ಧ ಆಕ್ಟ್ರೆಸ್ ಮಿಸ್ ಹೀರಾದೇವಿ, ಯಾರ ಒಂದೊಂದು ಹಾವಭಾವಕ್ಕೆ ಸಾವಿರಾರು ಜನ ಮುಗ್ಧರಾಗಿ ಹೋಗುತ್ತಾರೋ, ಅಂತಹ ಸುಪ್ರಸಿದ್ಧ ಆಕ್ಟ್ರೆಸ್ ಮಿಸ್ ಹೀರಾದೇವಿ ಈ ಸಲ ನಮ್ಮ ಕಂಪೆನಿಯಲ್ಲಿ ಅಭಿನಯಿಸುತ್ತಾರೆ. ಮರೆಯಬೇಡಿ. ಈ ದಿನ ರಾತ್ರಿ. ಮಿಸ್ ಹೀರಾದೇವಿ ಗುಲ್‌ಬದನ್...!

ನೌಟಂಕಿ ಕಂಪೆನಿಯ ಈ ಘೋಷಣೆಯಿಂದಾಗಿ ಜನಸಮೂಹದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಎಲ್ಲೆಲ್ಲೂ ಅದೇ ಮಾತು. ಹೀರಾಬಾಯಿ? ಮಿಸ್ ಹೀರಾದೇವಿ? ಲೈಲಾ, ಗುಲಬದನ್...? ಫಿಲಂ ಆಕ್ಟ್ರೆಸ್ ಹಾಗೇ ಅಭಿನಯಿಸುತ್ತಾಳೆ... ತೇರಿ ಬಾಂಕಿ ಅದಾಪರ್ ಮೈ ಖುದ್ ಹೂಂ ಫಿದಾ, ತೇರಿ ಚಾಹತ್ ಕೀ ದಿಲ್‌ದರ್

ಐಯಾಂ ಕ್ಯಾ ಕಹೇಂ । ಯಹೀ ಖಾಹಿಶ್ ಹೈ ಕಿ...ಇ...ಇ...ಇ ತೂ ಮುಝುಸ ದೇಖಾ ಕರೆ ಔರ್ ದಿಲಾಜಾನ್ ಮೇಂ ತುಮಕೂ ದೇಖಾ ಕರೂಂ । ಕಿರ್...ರ್...ರ್ ರ್...ಕಡರಡಡಡರ್–ಘನ್–ಘನ್–ಘನ್–ಘಡಾಮ್.

ಪ್ರತಿಯೊಬ್ಬನ ಮನಸ್ಸೂ ಈ ನಗಾರಿಯಾಗಿದೆ.

ಲಾಲ್‌ಮೋಹರ್ ಓಡುತ್ತಾ–ಮೇಲುಸಿರು ಬಿಡುತ್ತಾ ಗಾಡಿಗಳನ್ನು ಬಿಟ್ಟಿರುವ ತಾಣಕ್ಕೆ ಬಂದ. ಏ ಹೀರಾಮನ್. ಇಲ್ಲಿ ಯಾಕೆ ಕೂತಿದ್ದೀಯೋ. ನೋಡು ನಡಿ ಹೇಗೆ ಜೈಕಾರ ಆಗ್ತಿದೆ. ಅದೇನು ಬಾಜಾ ಬಜಂತ್ರಿ. ನೋಟೀಸುಗಳ ಹಂಚಿಕೆ. ಜೊತೆಗೆ ಹೀರಾಬಾಯಿಯ ಜೈಕಾರ ನಡೆಯುತ್ತಿದೆ. ನೀನು ಇಲ್ಲಿ ಕೂತಿದ್ದೀಯಾ.

ಹಿರಾಮನ್ ಗಡಬಡಾಯಿಸಿಕೊಂಡು ಎದ್ದ. ಲಹಸನ್‌ವಾ ಹೇಳಿದ–ಧುನ್ನೀ ಕಾಕಾ. ನೀನು ಇಲ್ಲೇ ತಾಣದ ಮೇಲೆ ಇರು, ನಾನು ನೋಡಿ ಬರ್‍ತೇನೆ.

ಧುನ್ನಿಯ ಮಾತನ್ನು ಯಾರು ಕೇಳುತ್ತಾರೆ? ಮೂವರೂ ನೋಟಂಕಿ ಕಂಪನಿಯ ಜಾಹಿರಾತು ಪಾರ್ಟಿಯನ್ನನುಸರಿಸಿ ಅವರ ಹಿಂದೆಯೇ ಹೊರಟರು. ಹೆಜ್ಜೆಹೆಜ್ಜೆಗೂ ಪಾರ್ಟಿ ನಿಲ್ಲುತ್ತಿತ್ತು: ಬಾಜಾಬಜಂತ್ರಿ ನಿಲ್ಲಿಸಿ. ಜಾಹೀರು ಘೋಷಣೆಗಳನ್ನು ಆರಂಭಿಸುತ್ತಿದ್ದರು. ಪ್ರಚಾರ ಘೋಷಣೆಗಳ ಒಂದೊಂದು ಶಬ್ದವೂ ಹಿರಾಮನ್‌ನ ಮನಸ್ಸಿನಲ್ಲಿ ಒಂದೊಂದು ಅಲೆಯನ್ನು ಎಬ್ಬಿಸುತ್ತದೆ. ಹೀರಾಬಾಯಿಯ ಹೆಸರು. ಆ ಹೆಸರಿನ ಜೊತೆಗೆ ಪ್ರಶಂಸೆ ಇತ್ಯಾದಿಗಳನ್ನು ಕೇಳಿ ಅವನು ಲಾಲಮೋಹರನ ಬೆನ್ನು ತಟ್ಟುತ್ತಾನೆ... ಭೇಷ್, ಭೇಷ್. ಅಲ್ಲ?

ಲಾಲಮೋಹರ್ ಆಗ ಕೇಳುತ್ತಾನೆ–ಈಗ ಹೇಳು. ಈಗಲೂ ನೌಟಂಕಿ ನೋಡುತ್ತೀಯೋ ಇಲ್ಲವೋ? ಬೆಳಗ್ಗೆಯಿಂದಲೂ ಲಾಲ್‌ಮೋಹರ್ ಮತ್ತು ಧುನ್ನೀರಾಮ್ ಅವನನ್ನು ಒಪ್ಪಿಸಲು ಪ್ರಯತ್ನಿಸಿ ಸೋತಿದ್ದರು. ...ಕಂಪನಿಗೆ ಹೋಗಿ ಭೇಟಿ ಮಾಡಿ ಬಾ... ಹೋಗುವಾಗ ಅವಳು ನಿನಗೆ ಕರೆ ಕೊಡಲಿಲ್ಲವೇ? ಇವಕ್ಕೆಲ್ಲ ಒಂದೇ ವಾಕ್ಯದಲ್ಲಿ ಅವನು ನಕಾರ ಹೇಳಿದ–ಛತ್ ಯಾರು ಭೇಟಿಮಾಡ ಹೋಗುತ್ತಾರೆ. ಕಂಪನಿಯ ಹೆಂಗಸು ಕಂಪನಿಗೆ ಹೋದಳು. ಅವಳ ಹತ್ತಿರ ಏನು ವ್ಯವಹಾರ ಉಳಿದಿದೆ? ನಮ್ಮ ಕಡೆ ತಿರುಗಿಯೂ ನೋಡದಿರಬಹುದು ಅವಳು.

ಅವನಿಗೆ ಮನಸ್ಸಿನಲ್ಲೇ ಅವಳ ಮೇಲೆ ತುಂಬಾ ಕೋಪಬಂದಿತ್ತು. ಈ ಜಾಹಿರಾತು ವೈಖರಿ ನೋಡಿದ ಮೇಲೆ ಲಾಲ್‌ಮೋಹರ್ ಕಡೆ ತಿರುಗಿ ಹೇಳಿದ–ನೋಡಲೇಬೇಕು. ಏನು ಹೇಳ್ತಿ?

ಇಬ್ಬರೂ ಪರಸ್ಪರ ಸಮಾಲೋಚನೆ ನಡೆಸಿದ ಮೇಲೆ ರೌತಾ ಕಂಪನಿ ಕಡೆಗೆ ಕಾಲು ಹಾಕಿದರು. ಡೇರೆಯನ್ನು ಸಮೀಪಿಸಿದ ಮೇಲೆ ಹಿರಾಮನ್ ಲಾಲ್‌ಮೋಹರ್ ಕಡೆಗೆ ಸನ್ನೆಮಾಡಿದ. ಅವರು ಇವರನ್ನು ನೋಡಿಕೊಳ್ಳುವ ಮೋಹ ಅವನದಾಗಿತ್ತು.

ಲಾಲ್‌ಮೋಹರ್ ಶುದ್ಧ ಶಹರಿನ ಭಾಷೆಯಲ್ಲಿ ಮಾತನಾಡಬಲ್ಲ. ಲಾಲ್‌ಮೋಹರ್ ಕಪ್ಪು ಕೋಟು ಧರಿಸಿದ್ದವನನ್ನು ಕಂಡು ಹೇಳಿದ – ಬಾಬೂ ಸಾಹೇಬ್. ಸ್ವಲ್ಪ ಕೇಳಿ ಇಲ್ಲಿ.

ಕಪ್ಪು ಕೋಟಿನ ಆ ಮನುಷ್ಯ ಮೂಗು–ಮುಖ ಸೊಟ್ಟಗೆ ಮಾಡಿಕೊಂಡು ಕೇಳಿದ – ಏನದ? ಈ ಕಡೆ ಯಾಕೆ ಬಂದಿರಿ?

ಲಾಲ್‌ಮೋಹರನ ಭಾಷೆಯ ಮೇಲಿನ ಪ್ರಭುತ್ವವೆಲ್ಲ ಹಾರಿಹೋಯಿತು. ಅವನು ನೋಡಿದ ರೀತಿ ಕಂಡು ಹೆದರಿ ತೊದಲತೊಡಗಿದ – ಗುಲ್‌ಗುಲ್... ಅಲ್ಲ ಅಲ್ಲ... ಬುಲ್‌ಬುಲ್... ಅಲ್ಲ...!

ಅದನ್ನು ಗಮನಿಸಿದ ಹಿರಾಮನ್ ಮಧ್ಯೆ ಬಾಯಿ ಹಾಕಿ ಕೇಳಿದ – ಹೀರಾದೇವಿ ಎಲ್ಲಿ ಇರುತ್ತಾರೆ. ಸ್ವಲ್ಪ ಹೇಳುತ್ತೀರಾ?

ಆ ಮನುಷ್ಯನ ಕಣ್ಣುಗಳು ಹಠಾತ್ತನೆ ಕೆಂಪಾದುವು. ಮುಂದ ನಿಂತಿದ್ದ ನೇಪಾಳಿ ಸಿಪಾಯಿಯನ್ನು ಕರೆದು ಹೇಳಿದ – ಇವರನ್ನು ಯಾರು ಬಿಡಲು ಹೇಳಿದರು ನಿನಗೆ?

– ಹಿರಾಮನ್... ಎಲ್ಲಿಂದ ಬಂತು ಆ ಮಧುರವಾಣಿ? ಡೇರೆಯ ಪರದೆಯನ್ನು ಸರಿಸಿ ಹೀರಾಬಾಯಿ ಕರೆದಳು – ಈ ಕಡೆಯಿಂದ ಬನ್ನಿ ಒಳಗೆ. ನೋಡು ಬಹಾದೂರ್ ಇವರನ್ನು ಸರಿಯಾಗಿ ನೋಡಿಕೋ. ಈತನೇ ನನ್ನ ಹಿರಾಮನ್... ತಿಳೀತಾ?

ನೇಪಾಳಿ ವಾಚಮನ್ ಹಿರಾಮನ್ ಕಡೆ ನೋಡಿ ಸ್ವಲ್ಪ ಮುಗುಳ್ನಕ್ಕು ಹೊರಟು ಹೋದ. ಹೋಗಿ ಕಪ್ಪು ಕೋಟು ಧರಿಸಿದ್ದ ಬಾಬೂಗೆ ಹೇಳಿದ – ಹೀರಾಬಾಯಿ ಕಡೆ ಮನುಷ್ಯ. ತಡೆಯಬೇಡ ಎಂದಿದ್ದಾರೆ.

ಲಾಲ್‌ಮೋಹರ್ ಎಲೆ ಅಡಿಕೆ ತಂದ. ನೇಪಾಳಿ ವಾಚಮನ್‌ಗಾಗಿ – ತಿನ್ನಲಿ ಅಂತ.

– ಇಸ್ಸ್! ಒಂದಲ್ಲ ಐದು ಪಾಸು. ಎಂಟಾಣೆ ವರ್ಗದ ಪಾಸುಗಳು. ಎಷ್ಟು ದಿನ ಜಾತ್ರೆಯಲ್ಲಿರುತ್ತೀರೋ ಪ್ರತಿದಿನ ಬಂದು ನೋಡಬಹುದು. ಬರಬೇಕು ಪ್ರತಿದಿನ. ಮರೆತಿಲ್ಲ, ಎಲ್ಲರಿಗೂ ಕೊಡಬೇಕಾದ ಗಮನ ಕೊಟ್ಟೇ ಕೊಡುತ್ತಾಳೆ. ನಿನ್ನ ಇನ್ನೆಷ್ಟು ಜನ ಜೊತೆಗಾರರಿದ್ದಾರೋ ಅವರಿಗೆಲ್ಲ ಪಾಸ್ ತೆಗೆದುಕೊಂಡು ಹೋಗು ಎನ್ನುತ್ತಾಳೆ. ಕಂಪನಿಯ ಹೆಂಗಸರು ಎಷ್ಟು ಚೆನ್ನಾಗಿ ಮಾತಾಡ್ತಾರೆ ನೋಡು.

ಲಾಲ್‌ಮೋಹರ್ ಆ ಕೆಂಪು ಕಾಗದದ ಚೂರುಗಳನ್ನು ಮುಟ್ಟಿ ನೋಡಿದ. ಪಾ–ಸ! ವಾಹ್ ಹಿರಾಮನ್ ಭಾಯ್!... ಆದರೆ ಐದು ಪಾಸುಗಳನ್ನು ತಕ್ಕೊಂಡ್ ಏನ್ ಮಾಡೋದು? ಪಲಟ್‌ದಾಸನಂತೂ ಹೋದವನು ಇನ್ನೂ ಬರಲೇ ಇಲ್ಲ.

ಹಿರಾಮನ್ ಹೇಳಿದ – ಅವನಿಗೇ ಅದೃಷ್ಟ ಇಲ್ಲ. ಹೋಗಲಿ ಬಿಡು. ...ಅವನ ಹಣೇಲಿ ಬರೆದದ್ದು – ಹಾಂ. ಎಲ್ಲರೂ ನಾಟಕ ನೋಡೋದಕ್ಕೆ ಮೊದಲು ಗುರು ಹೆಸರಿನಲ್ಲಿ ಪ್ರಮಾಣಮಾಡಬೇಕು... ನಾವು ನಾಟಕ ನೋಡಿದ ಮಾತು ಊರಿನಲ್ಲಿ ಯಾರ ಕಿವಿಗೂ ಮುಟ್ಟಬಾರದು. ಪಲಟಾ ಏನಾದರೂ ಬದ್ಮಾಷಿ ಮಾಡಿದರೆ ಇನ್ನೊಮ್ಮೆ ಅವನನ್ನು ಜೊತೆಗೇ ಕರ್ಕೊಂಡ್ ಬರೋಲ್ಲಾ.

ಹಿರಾಮನ್ ಇವೊತ್ತು ತನ್ನ ಚೀಲವನ್ನು ಹೀರಾಬಾಯಿ ಸುಫರ್ದಿಗೆ ಕೊಟ್ಟು ಜತನ ಮಾಡಿದನು. ಜಾತ್ರೆಯ ಸಮಾಚಾರ, ಆಮೇಲೇನು ಗತಿ? ಹ್ಯಾಗಾದರೂ ಆಗ ಬಹುದು. ತರಹೆ ತರಹೆಯ ಜೇಬುಗಳ್ಳರು ಬರುತ್ತಾರೆ ಪ್ರತಿ ವರ್ಷ. ತನ್ನ ಜೊತೆ ಗಾರರದೂ ಯಾವ ಭರವಸೆ! ಹೀರಾಬಾಯಿ ಒಪ್ಪಿ ತೆಗೆದುಕೊಂಡಳು. ಹಿರಾಮನ್‌ನ ಆ ಕಪ್ಪು ಬಟ್ಟೆಯ ಚೀಲವನ್ನು ತನ್ನ ಚರ್ಮದ ಪೆಟ್ಟಿಗೆಯಲ್ಲಿ ಭದ್ರವಾಗಿ ಇಟ್ಟು ಜತನ ಮಾಡಿದಳು. ಪೆಟ್ಟಿಗೆ ಮೇಲೂ ಬಟ್ಟೆಯ ಹೊದಿಕೆ, ಒಳಗೂ ರೇಷಿಮೆಯ ಹೊಳಪಿರುವ ಬಟ್ಟೆ. ಮನಸ್ಸಿನ ದುಗುಡ ದೂರವಾಗಿ ಹೋಯಿತು.

ಲಾಲ್‌ಮೋಹರ್ ಮತ್ತು ಧುನ್ನೀರಾಮ್ ಇಬ್ಬರೂ ಹಿರಾಮನ್‌ನ ಬುದ್ಧಿವಂತಿಕೆ ಯನ್ನು ಮೆಚ್ಚಿಕೊಂಡರು. ಅದೃಷ್ಟವಂತ ಎಂದು ಬಾಯಿತುಂಬ ಹೊಗಳಿದರು. ಅವನ ಅಣ್ಣ ಮತ್ತು ಅತ್ತಿಗೆಯ ಆಕ್ಷೇಪಣೆಯನ್ನೂ ಮಾಡಿದರು. ಹಿರಾಮನ್‌ನಂತಹ ಒಳ್ಳೆ ವಜ್ರದಂತಹ ತಮ್ಮ – ಸಿಗಬೇಕಲ್ಲ ಇಂತಹ ತಮ್ಮ. ಬೇರೆ ಯಾರಾದರೂ ಅವನ ತಮ್ಮ ನಾಗಿದ್ದರೆ...

ಲಹಸನ್‌ವಾನ ಮುಖ ಬಾಡಿ ಜೋತುಬಿದ್ದಿತ್ತು. ಜಾಹೀರಾತು ಪಾರ್ಟಿಯ ಹಿಂದೆ ಹೋದವನು ಅಲ್ಲಿ ಇಲ್ಲಿ ಅಡ್ಡಾಡಿಕೊಂಡು ಸಂಜೆಯ ಹೊತ್ತಿಗೆ ಹಿಂದಿರುಗಿದ. ಲಾಲ್ ಮೋಹರ್ ಅವನನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಂಡು ಲಫಂಗ ಎಲ್ಲೀದೋ ಎಂದು ಬೈದುಬಿಟ್ಟಿದ್ದಾನೆ.

ಧುನ್ನೀರಾಮ್ ಒಲೆಯ ಮೇಲೆ ಖಿಚಡಿಯನ್ನು ಇಡುತ್ತಾ ಮೊದಲು ಇದನ್ನು ತೀರ್ಮಾನ ಮಾಡು – ಇಲ್ಲಿ ಯಾರು ಇರಬೇಕು ಎಂದು. ಗಾಡಿ ಹತ್ತಿರ ಯಾರಾದರೂ ಇರಲೇಬೇಕು.

– ಬೇರೆ ಯಾರು ಇರಬೇಕು. ಈ ಲಹಸನವಾ ಎಲ್ಲಿ ಹೋಗುತ್ತಾನೆ, ಇಲ್ಲೇ ಬಿದ್ದಿರು ತ್ತಾನಲ್ಲ.

ಲಹಸನವಾ ಅಳುವುದಕ್ಕೇ ಶುರುಮಾಡಿದ... ಮಾಲಿಕ್, ಕೈ ಮುಗೀತೀನಿ ಹಾಗೆ ಮಾಡಬೇಡಿ... ಒಂದು ಸ್ವಲ್ಪ ಹೊತ್ತು... ಸ್ವಲ್ಪ ಹೊತ್ತೇ ಸಾಕು, ಒಂದು ಝಲಕ್ ಸಾಕು.

ಹಿರಾಮನ್ ಉದಾರ ಮನುಷ್ಯನಾಗಿ ಹೇಳಿದ – ಅಚ್ಛಾ, ಅಚ್ಛಾ. ಒಂದು ಝಲಕ್ ಯಾಕೆ ಒಂದು ಗಂಟೆ ಹೊತ್ತು ನೋಡುವಿಯಂತೆ. ನಾನು ಬಂದುಬಿಡುತ್ತೇನೆ.

ನಾಟಕ ಶುರುವಾಗುವುದಕ್ಕೆ ಎರಡು ಗಂಟೆ ಮುಂಚೆಯೇ ಬಾಜಾ ಬಜಂತ್ರಿ ಆರಂಭ ವಾಗಿಬಿಡುತ್ತೆ. ಆ ದೊಡ್ಡ ನಗಾರಿಯ ಶಬ್ದ ಆರಂಭವಾಗುತ್ತಲೇ ಜನ ಬೆಳಕಿನ ಹುಳು ಗಳಂತೆ ಬಂದು ಮುತ್ತುತ್ತಾರೆ. ಟಿಕೆಟ್ ಮಾರುವ ಸ್ಥಳದಲ್ಲಿ ಇದ್ದ ನೂಕುನುಗ್ಗಲು ನೋಡಿ ಹಿರಾಮನ್‌ಗೆ ನಗು ಬಂತು.

ಲಾಲ್‌ಮೋಹರ್, ಅಲ್ಲಿ ನೋಡು ಜನರ ನೂಕುನುಗ್ಗಲು ಹೇಗಿದೆ?

– ಹಿರಾಮನ್ ಭಾಯ್!

– ಯಾರು? ಪಲಟ್‌ದಾಸ್. ಎಲ್ಲಿಂದ ಮಾಲು ತಂದೆ? ಲಾಲ್‌ಮೋಹರ್ ಹೊಸಬ ನನ್ನು ಕೇಳುವಂತೆ ಕೇಳಿದ.

ಪಲ್ಟಟ್‌ದಾಸ್ ಕೈ ಉಜ್ಜಿಕೊಳ್ಳುತ್ತಾ ಕ್ಷಮಾಪಣೆ ಕೇಳಿದ – ತಪ್ಪಾಗಿ ಹೋಯಿತು, ಕ್ಷಮಿಸಿ. ನೀವೆಲ್ಲ ಸೇರಿ ಏನು ಶಿಕ್ಷೆ ಕೊಡುತ್ತೀರೋ ಅದಕ್ಕೆ ಸಿದ್ಧ. ನಿಜ ಹೇಳಬೇಕಾದರೆ ಸುಕುಮಾರಿ ಸೀತಾಮಾತೆ...

ಹಿರಾಮನ್ ಮನಸ್ಸಿನಲ್ಲಿ ನೌಟಂಕಿ ಕಂಪನಿಯ ಆ ನಗಾರಿಯ ಶಬ್ದದ ಜೊತೆಗೆ ಕುತೂಹಲ ಕೆರಳುತ್ತಿದೆ. ಮನದ ಬಯಕೆ ಅರಳುತ್ತಿದೆ. ಅವನು ಹೇಳಿದ – ನೋಡು ಪಲಟಾ, ಊರಿನ ಹೆಂಗಸರಂತೆ ಅಂತಾ ತಿಳೀಬೇಡ ಇವಳನ್ನು. ನೋಡು ನಿನಗೋಸ್ಕ ರಾನೂ ನಾನ್ ಪಾಸ್ ತೆಗೆದುಕೊಂಡಿದ್ದೇನೆ. ನಿನ್ನ ಪಾಸ್ ತೆಗೆದುಕೋ, ತಮಾಷಾ ನೋಡು.

ಲಾಲ್‌ಮೋಹರ್ ಹೇಳಿದ – ಆದರೆ ಒಂದು ಶರತ್ತಿನ ಮೇಲೆ ಪಾಸ್ ಸಿಗುತ್ತದೆ. ಮಧ್ಯೆ ಮಧ್ಯ ಲಹಸನ್‌ವಾಗೂ...

ಪಲಟ್‌ದಾಸ್‌ಗೆ ಅದೊಂದನ್ನೂ ಹೇಳುವ ಅಗತ್ಯವಿಲ. ಅವನು ಆಗಲೇ ಲಹಸನ್‌ವಾ ಜೊತೆಗೆ ಮಾತುಕತೆ ನಡೆಸಿ ಬಂದಿದ್ದಾನೆ.

ಲಾಲ್‌ಮೋಹರ್ ತನ್ನ ಎರಡನೆಯ ಶರತ್ತನ್ನು ಮುಂದೆ ಇಟ್ಟ – ಈ ಮಾತು ಊರಿನಲ್ಲಿ ಯಾರ ಕಿವಿಗಾದರೂ ಬಿತ್ತು ಅಂದರೆ...

– ರಾಮ್, ರಾಮ್, ಪಲಟ್‌ದಾಸ್ ನಾಲಿಗೆ ಕಚ್ಚಿಕೊಂಡು ಉದ್ಗಾರ ತೆಗೆದ.

ಪಲಟ್‌ದಾಸ್ ತೋರಿಸಿದ – ಎಂಟಾಣೆಯ ಬಾಗಿಲು ಈ ಕಡೆಯಿದೆ. ಬಾಗಿಲಲ್ಲಿ ನಿಂತಿರುವ ಮನುಷ್ಯ ಪಾಸನ್ನು ಕೈಗೆ ತೆಗೆದುಕೊಂಡು ಅವರ ಮುಖವನ್ನು ಪದೇ ಪದೇ ನೋಡಿದ. ಇದು ಪಾಸ್ ಸರಿ. ಆದರೆ ನಿಮಗೆಲ್ಲಿ ಸಿಕ್ಕಿತು?

ಈಗ ಲಾಲ್‌ಮೋಹರ್ ತನ್ನ ಶಹರಿ ಭಾಷೆಯನ್ನು ಆರಂಭಿಸಿದ. ಅವರ ಗತ್ತು ನೋಡಿಯೇ ಆ ಗೇಟಿನ ಮನುಷ್ಯ ಗಾಬರಿಯಾದ – ಮತ್ತೆಲ್ಲಿಂದ ಸಿಗುತ್ತೆ. ಸಿಗುವ ಕಡೆಯಿಂದ ಸಿಗುತ್ತೆ. ಹೋಗಿ ನಿನ್ನ ಕಂಪೆನಿಯವರನ್ನು ವಿಚಾರಿಸಿಕೋ. ನಾಲ್ಕು ಮಾತ್ರ ಅಲ್ಲ, ನೋಡು ಇಲ್ಲಿ ಇನ್ನೊಂದೂ ಇದೆ. ಜೇಬಿನಿಂದ ಇನ್ನೊಂದು ಪಾಸ್ ತೆಗೆದು ಲಾಲ್‌ಮೋಹರ್ ಕೊಟ್ಟ.

ಒಂದು ರೂಪಾಯಿ ಗೇಟಿನಲ್ಲಿ ಆ ನೇಪಾಳಿ–ವಾಚ್‌ಮನ್ ನಿಂತಿದ್ದ. ಹಿರಾಮನ್ ಅವನನ್ನು ಕರೆದು ಹೇಳಿದ–ಏ ಸಿಪಾಯಿ ಸಾಹೇಬ. ಬೆಳಿಗ್ಗೆ ಪರಿಚಯ ಮಾಡಿಸಿದ್ದಾಗಿದೆ. ಆಗಲೇ ಮರೆತುಬಿಟ್ಟೆಯಾ?

ನೇಪಾಳಿ ಗೇಟ್‌ಕೀಪರ್ ಹೇಳಿದ–ಅವರಲ್ಲ ಹೀರಾಬಾಯಿ ಕಡೆ ಜನ, ಹೋಗುವುದಕ್ಕೆ ಬಿಡು. ಪಾಸ್ ಇದ್ದಮೇಲೆ ಯಾಕೆ ಅಡ್ಡಿ ಬರ್ತಿದ್ದೀಯಾ?

ಎಂಟಾಣೆಯ ದರ್ಜೆ.

ಮೂವರೂ ಕುಳಿತು ಒಂದು ಬಾರಿ 'ಪರದೆಮನೆ'ಯ ಕಡೆ ನೋಡಿದರು. ಅವರ ಮುಂದೆ ಕುರ್ಚಿ–ಬೆಂಚುಗಳ ವರ್ಗಗಳಿವೆ. ಪರದೆಯ ಮೇಲೆ ರಾಮ ವನವಾಸ ಹೋಗು ತ್ತಿರುವ ಚಿತ್ರ ಇದೆ. ಪಲಟ್‌ದಾಸ್ ಬುದ್ಧಿಗೆ ಎಲ್ಲ ತೋರಿತು. ಪರದೆಯ ಮೇಲೆ ರಾಮ. ಸೀತೆ, ಲಕ್ಷ್ಮಣ ಇರುವ ಆ ಚಿತ್ರಕ್ಕೆ ಕೈಮುಗಿದು ನಮಸ್ಕಾರ ಮಾಡಿದ. ಜೈ ಹೋ, ಜೈ ಹೋ. ಪಲಟದಾಸ್‌ನ ಕಣ್ಣುಗಳಲ್ಲಿ ಆನಂದಬಾಷ್ಪ ಬಂತು.

ಹಿರಾಮನ್ ಕೇಳಿದ – ಲಾಲ್‌ಮೋಹರ್. ಚಿತ್ರದಲ್ಲಿರುವ ಅವರು ನಿಂತಿದ್ದಾರೋ ಹೋಗುತ್ತಿದ್ದಾರೊ?

ಲಾಲ್‌ಮೋಹರ್ ತನ್ನ ಅಕ್ಕಪಕ್ಕದವರ ಜೊತೆಗೆ ಆಗಲೆ ಪರಸ್ಪರ ಪರಿಚಯ ಮುಗಿಸಿ ದ್ದಾನೆ. ಹಿರಾಮನ್‌ಗೆ ಹೇಳುತ್ತಾನೆ – ಇನ್ನೂ ನಾಟಕ ಶುರು ಆಗಿಲ್ಲ, ಪರದೆಯ ಹಿಂದೆ ಇದ್ದಾರೆ ಎಲ್ಲ. ಇನ್ನೂ ಟಿಕೆಟ್ ಕೊಡುತ್ತಿದ್ದಾರೆ – ನೆಲದ ಮೇಲಿನ ಟಿಕೆಟ್. ಜನ ಬರ್ತಾ ಇದ್ದಾರೆ ಇನ್ನೂ.

ಪಲಟ್‌ದಾಸ್‌ಗೆ ಢೋಲಕ್ ಬಾರಿಸುವುದು ಬರುತ್ತದೆ. ಆದುದರಿಂದಲೇ ಅವನು ಹೊರಗಡೆ ನಗಾರಿಯ ನಾದಕ್ಕೆ ಸರಿಯಾಗಿ ತಲೆ ಕುಣಿಸುತ್ತಿದ್ದಾನೆ. ಮತ್ತು ಕಡ್ಡಿಪೆಟ್ಟಿ ಗೆಯ ಮೇಲೆ ತಾಳ ಹಾಕುತ್ತಿದ್ದಾನೆ. ಬೀಡಿ ಕೊಡುವುದು, ತೆಗೆದುಕೊಳ್ಳುವುದರ ಮೂಲಕ ಈಗ ಹಿರಾಮನ್ ಕೂಡ ತನ್ನ ಅಕ್ಕಪಕ್ಕದವರು ಕೆಲವರ ಪರಿಚಯ ಮಾಡಿ ಕೊಂಡಿದ್ದಾನೆ. ಲಾಲ್‌ಮೋಹರ್‌ನ ಪರಿಚಿತ ವ್ಯಕ್ತಿಯೊಬ್ಬ ದೇಹವನ್ನು ದುಪಟಿಯಿಂದ ಪೂರ್ತಿ ಮುಚ್ಚಿಕೊಳ್ಳುತ್ತಾ "ಇನ್ನೂ ನಾಟಕ ಶುರು ಆಗಬೇಕಾದರೆ ಹೊತ್ತಾಗುತ್ತದೆ, ಅಲ್ಲಿಯ ವರೆಗೆ ಒಂದು ನಿದ್ದೆ ಮಾಡಬಹುದು" ಎನ್ನುತ್ತಾನೆ... ಎಂಟಾಣೆಯದು ಎಲ್ಲಾ ದರ್ಜೆಗಳಿಗಿಂತ ಚೆನ್ನಾಗಿದೆ. ಎಲ್ಲಕ್ಕೂ ಹಿಂದೆ ಎತ್ತರದಲ್ಲಿದೆ. ನೆಲದ ಮೇಲೆ ಜಮಖಾನೆ ಹಾಸಿದ್ದಾರೆ. ಬೆಚ್ಚಗಿದೆ. ಕುರ್ಚಿ ಬೆಂಚುಗಳ ಮೇಲೆ ಕುಳಿತಿರುವವರು ಈ ಚಳಿಗಾಲದಲ್ಲಿ ಚಹಾ ಕುಡಿದು ಬರಲು ಏಳಬೇಕಾಗುತ್ತೆ ಮತ್ತೆ ಮತ್ತೆ.

ಆ ಮನುಷ್ಯ ತನ್ನ ಜೊತೆಯವರಿಗೆ ಹೇಳುತ್ತಾನ – ಆಟ ಶುರು ಆದಮೇಲೆ ಎಬ್ಬಿಸಿ ಬಿಡು. ಇಲ್ಲ... ಇಲ್ಲ – ಆಟ ಶುರು ಆದಮೇಲೆ ಅಲ್ಲ... ಆ ಜಿಂಕೆ ಸ್ಟೇಜಿನ ಮೇಲೆ ಬರುತ್ತಲ್ಲ, ಆಗ.

ಹಿರಾಮನ್‌ನ ಹೃದಯದಲ್ಲಿ ಸ್ವಲ್ಪ ಚುರ್ ಎಂದಿತು – ಜಿಂಕೆ – ತುಂಬಾ ಕೆಟ್ಟ ನಡತೆಯ ಮನುಷ್ಯ ಅಂತ ಕಾಣುತ್ತೆ. ಕಣ್ಣುಸನ್ನೆಯಿಂದಲೇ ಲಾಲ್‌ಮೋಹರ್‌ಗೆ ತಿಳಿಸಿದ- ಆ ಮನುಷ್ಯನ ಜೊತೆ ಮಾತುಕತೆ ಬೇಡ.

...ಧನ್-ಧನ್-ಧನ್ ಧಡಾಮ್. ಪರದೆ ಏಳುತ್ತಿದೆ... ಹೇ–ಎ–ಹೇ–ಏ. ಹೀರಾ ಬಾಯಿ ಶುರುವಿನಲ್ಲಿಯೇ ಸ್ಟೇಜಿನ ಮೇಲೆ ಬಂದುಬಿಟ್ಟಳು. ಇಡೀ ಸ್ಟೇಜಿಗೆ ಕಳೆ

ಒಂದುಬಿಟ್ಟಿತು. ಹಿರಾಮನ್ ಆಶ್ಚರ್ಯದಿಂದ ಬಾಯಿಬಿಟ್ಟು ಕುಳಿತಿದ್ದ. ಲಾಲಮೋಹರ್‌ಗೆ ಏಕೆ ಆ ರೀತಿಯ ನಗು ಬರುತ್ತಿದೆಯೋ ತಿಳಿಯದು. ಹೀರಾಬಾಯಿಯ ಹಾಡಿನ ಒಂದೊಂದು ಪದವೂ ಅವನನ್ನು ನಗಿಸುತ್ತಿದೆ. ಕಾರಣವಿಲ್ಲದೆ ಹೀಗೆ ನಗುವುದೆ!

ಗುಲ್‌ಬದನ್ ದರ್ಬಾರು ನಡೆಸುತ್ತಿದ್ದಾಳೆ. ಆಮೇಲೆ ಒಂದು ರಾಜಘೋಷಣೆ... ಯಾರು ಸಪ್ತಸ್ವರಗಳಗಳಿರುವ ಹೂವಿನ ಸಿಂಹಾಸನ ಮಾಡಿ ತಂದು ಕೊಡುತ್ತಾರೋ ಅವರಿಗೆ ಅವರು ಕೇಳಿದ ಬಹುಮಾನ. ಈ ಸವಾಲು ಅಂಗೀಕರಿಸುವ ಕಲಾವಿದನಾದರೂ ಯಾರಿದ್ದಾನೆ! ಹೇಗೆ ಮಾಡಿ ತಂದಾನು?... ಆಹ ಏನು ನೃತ್ಯ! ಏನು ಕಂಠ! ಹೀರಾ ಬಾಯಿ ಪಾನ್‌ಬೀಡಾ. ಬೀಡಿ ಸಿಗರೇಟ್, ಮದ್ಯ – ಇವಾವುದನ್ನೂ ಮುಟ್ಟುವುದಿಲ್ಲ ವಂತೆ – ಗೊತ್ತೇನು? ಆ ಮನುಷ್ಯ ಹೇಳುತ್ತಾನೆ – ಅವನು ಹೇಳೋದು ನಿಜಾನೇ... ತುಂಬಾ ನೇಮದ ರಂಡಿ ಇದಾಳೆ!... ಯಾರು ಹೇಳ್ತಾರೆ ಅವಳು ವೇಶ್ಯೆ ಅಂತ? ಹಲ್ಲುಗಳ ಮೇಲೆ 'ಮಿಸ್ಸಿ' ಕಾಣಬೇಡವೇ? ಸಾಧಾರಣ ಪೌಡರಿನಿಂದ ಹಲ್ಲುಜ್ಜಿ ಕೊಳ್ಳಬಹುದು. ಅವಳು ಖಂಡಿತ ಅಂಥ ಹೆಂಗಸಲ್ಲ... ಯಾರವನು? ಆಡಬಾರದ ಮಾತೆಲ್ಲ ಆಡ್ತಾ ಇದಾನೆ... ಕಂಪನಿಯ ಹೆಂಗಸನ್ನು ಬಾಜಾರಿನ ಹೆಣ್ಣು ಅನ್ನುತ್ತಾನೆ... ನಿನಗ್ಯಾಕಪ್ಪ ಹುಳುಕಿತು? ಯಾರು ಆ ರಂಡಿಯ ಭಡವ... ಕೊಡೀ ಆ ಮಗನಿಗೊಂದು– ಥೇ ನಿನ್ನ...

ಹೀಗೆ ಆರಂಭವಾಗಿರುವ ಗಲಭೆಯ ಮಧ್ಯ ಹಿರಾಮನ್‌ನ ಎತ್ತರವಾದ ಧ್ವನಿ. ಅದು ಹೋಗಿ ಪರದೆಯ ಆಚೆ ಕೇಳಿಸುವಷ್ಟು ಜೋರಾಗಿ – ಹೋಗಿ. ನಾವು ಒಬ್ಬೊಬ್ಬರ ತಲೆ ಕಡಿದು ಹಾಕುತ್ತೇವೆ.

ಲಾಲ್‌ಮೋಹರ್ ಎತ್ತುಗಳನ್ನು ಹೊಡೆಯುವ ಚಾಟಿಯಿಂದ ಮುಂದೆ ಇರುವ ಜನರನ್ನು ಒಂದೇ ಸಮನೆ ಬಡಿಯುತ್ತಾ ಹೊರಟಿದ್ದಾನೆ. ಪಲಟ್‌ದಾಸ್ ಒಬ್ಬ ಮನುಷ್ಯನ ಎದೆಯ ಮೇಲೆ ಕುಳಿತು ಸವಾರಿ ಮಾಡುತ್ತಿದ್ದಾನೆ – ಮಗನೇ. ಸೀತಾ ಮಾತೆಗೆ ಕೆಟ್ಟ ಕೆಟ್ಟ ಮಾತು ಹೇಳ್ತಿಯೇನೋ. ಜೊತೆಗೆ ಮುಸಲ್ಮಾನ ಬೇರೆ!

ಧುನ್ನೀರಾಮ್ ಮೊದಲಿಂದಲೂ ಸುಮ್ಮನೆಯೇ ಇದ್ದ. ಮಾರಾಮಾರಿ ಶುರುವಾಗು ವುದೇ ತಡ ಅವನು ಪರದೆಯ ಸಂದಿನಿಂದ ತೂರಿಕೊಂಡು ಹೊರಗೆ ಓಡುತ್ತಾನೆ.

ಕಪ್ಪು ಕೋಟು ಧರಿಸಿರುವ ಕಂಪನಿ ಮನೇಜರ್ ಒಬ್ಬ ನೇಪಾಳೀ ಸಿಪಾಯಿಯ ಜೊತೆಗೆ ಧಾವಿಸಿಬರುತ್ತಾರೆ ದರೋಗಾ ಸಾಹೇಬರು ತಮ್ಮ ಹಂಟರಿನಿಂದ ಕೈಗೆ ಸಿಕ್ಕಿದವರನ್ನು ಬಾರಿಸುತ್ತಿದ್ದಾರೆ. ಹಂಟರಿನ ಏಟು ಬಿದ್ದುದೇ ತಡ ಲಾಲ್‌ಮೋಹರ್ ಆ ಪೆಟ್ಟಿಗೆ ಹತಾಶನಾಗಿ ತನ್ನ ಶಹರಿನ ಭಾಷೆಯಲ್ಲಿ ಒಂದು ಭಾಷಣವನ್ನೇ ಆರಂಭಿಸಿದ– ದರೋಗಾ ಸಾಹೇಬ್. ಹೊಡೀತೀರೇನು, ಹೊಡೀರಿ! ಅದಕ್ಕೆ ಅಡ್ಡಿ ಬರುವುದಿಲ್ಲ. ಏನೇನೂ ಆಕ್ಷೇಪ ಇಲ್ಲ. ಆದರೆ ಹೊಡೆಯುವ ಮೊದಲು ಈ ಪಾಸ್ ನೋಡಿಕೊಳ್ಳಿ– ಜೇಬಿನಲ್ಲಿ ಇನ್ನೂ ಒಂದು ಪಾಸ್ ಇದೆ. ಹುಜೂರ್, ಅದನ್ನೂ ತೋರಿಸುತ್ತೇನೆ

ಬೇಕಾದರೆ. ಟಿಕೆಟ್ ಅಲ್ಲ. ಪಾಸ್... ಅಂದಮೇಲೆ ಕಂಪೆನಿಯ ಹೆಂಗಸಿಗೆ ಯಾರಾದರೂ ಕೆಟ್ಟ ರೀತಿಯಲ್ಲಿ ಏನಾದರೂ ಹೇಳಿದರೆ. ನಾವೇಕೆ ನೋಡುತ್ತಾ ಸುಮ್ಮನಿರಬೇಕು?

ಮ್ಯಾನೇಜರರ ತಲೆಗೆ ಈಗ ಎಲ್ಲ ವಿಷಯ ಹೊಳೆಯಿತು. ಅವನು ದರೋಗಾಜಿಯವರಿಗೆ ವಿವರಿಸಿ ಹೇಳಿದ – ಹುಜೂರ್. ನನಗೆಲ್ಲ ಈಗ ಗೊತ್ತಾಯಿತು ಬಿಡಿ. ಇದೆಲ್ಲ ಬದಮಾಶಿ ಮಥುರಾಮೋಹನ್ ಕಂಪೆನಿಯವರ ಕಡೇ ಜನರದು. ನಾಟಕ ನಡೆಯುತ್ತಿರುವಾಗ ಗಲಭೆ ನಡೆಸಿ ಕಂಪೆನಿಗೆ ಕೆಟ್ಟ ಹೆಸರು ತರಲು ಮಾಡಿರುವ ಸನ್ನಾಹ ಇದು– ಇವರನ್ನು ಬಿಟ್ಟುಬಿಡಿ. ಇವರು ಹೀರಾಬಾಯಿಯ ಕಡೆ ಜನ. ಪಾಪ. ಆಕೆಯ ಪ್ರಾಣಕ್ಕೇ ಅಪಾಯ ಬಂದಿದೆ – ನಾನು ನಿಮಗೆ ಆಗಲೇ ಹೇಳಿದ್ದೀನಲ್ಲ.

ಹೀರಾಬಾಯಿಯ ಹೆಸರು ಕೇಳಿಯೇ ದರೋಗಾಜಿ ಮೂವರನ್ನೂ ಬಿಟ್ಟುಬಿಟ್ಟರು. ಮ್ಯಾನೇಜರ್ ಮೂವರನ್ನೂ ಕುರ್ಚಿಯ ವರ್ಗಕ್ಕೆ ಕರೆದುಕೊಂಡು ಹೋಗಿ ಕೂಡಿಸಿದ – ನೀವು ಇಲ್ಲೇ ಕುಳಿತುಕೊಳ್ಳಿ, ಕುಡಿಯೋದಕ್ಕೆ ಕಳುಹಿಸುತ್ತೇನೆ. ಪರಿಸ್ಥಿತಿ ಶಾಂತಗೊಂಡ ಮೇಲೆ, ಸ್ಟೇಜಿನ ಮೇಲೆ ಮತ್ತೆ ಹೀರಾಬಾಯಿ ಬಂದುಬಿಟ್ಟಳು.

ನಗಾರಿಯ ಶಬ್ದ ಮತ್ತೆ.

ಸ್ವಲ್ಪ ಹೊತ್ತಿನ ನಂತರ ಮೂವರಿಗೂ ಧುನ್ನೀರಾಮನ ನೆನಪು ಬಂತು. ಧುನ್ನೀರಾಮ್ ಎಲ್ಲಿ ಹೋದ?

– ಮಾಲಿಕ್. ಓ ಮಾಲಿಕ್! ಡೇರೆಯ ಹೊರಗಿನಿಂದ ಲಹಸನ್‌ವಾ ಕೂಗಿಕೊಳ್ಳುತ್ತಿದ್ದಾನೆ – ಓ. ಲಾಲ್‌ಮೋಹರ್ ಮಾಲಿಕ್!

ಲಾಲ್‌ಮೋಹರ್ ಜೋರಾಗಿ ಒಳಗಿನಿಂದಲೇ ಅವನಿಗೆ ಜವಾಬು ಕೊಟ್ಟ... ಈ ಕಡೆಯಿಂದ. ಇಲ್ಲ ಆ ಕಡೆಯಿಂದ – ರೂಪಾಯಿ ಟಿಕೆಟ್ಟಿನ ಕಡೆಯಿಂದ. ಪ್ರೇಕ್ಷಕರೆಲ್ಲ ಅವನ ಕಡೆಯೇ ತಿರುಗಿ ನೋಡಿದರು. ನೇಪಾಳಿ ಸಿಪಾಯಿ ಲಹಸನ್‌ವಾನನ್ನು ಲಾಲ್‌ಮೋಹರನ ಕಡೆಗೆ ಕರೆದುಕೊಂಡು ಬಂದ. ಅವನು ಜೇಬಿನಿಂದ ಪಾಸ್ ತೆಗೆದು ತೋರಿಸಿದ. ಲಹಸನ್‌ವಾ ಬಂದೊಡನೆಯೇ ಕೇಳಿದ – ಹೇಳಿ ಮಾಲಿಕ್, ಯಾರು ಏನ್ ಹೇಳ್ತಿದ್ರು? ಸ್ವಲ್ಪ ಹೇಳಿ. ಯಾರು ಅದು ತೋರಿಸಿ. ಅವನ ಒಂದು ಝಲಕ್ ತೋರಿಸಿದರೆ ಸಾಕು.

ಜನ ಲಹಸನ್‌ವಾನ ಆ ಅಗಲವಾದ ಎದೆ ಹಾಗೂ ಕಟ್ಟುಮಸ್ತು ದೇಹ ನೋಡಿದರು. ಈ ಚಳಿಯಲ್ಲೂ ಬಿಚ್ಚೆದೆಯಿಂದ ಬಂದಿದ್ದಾನೆ. ಎಷ್ಟು ವರ್ಗ ಬಂದಿರುವಂತಿದೆ.

ಲಾಲ್‌ಮೋಹರ್ ಲಹಸನ್ವಾನನ್ನು ಶಾಂತಗೊಳಿಸಿದ.

...ನೌಟಂಕಿ ಆಟ ಹೇಗಿತ್ತು ಏನು ನೋಡಿದೆ ಎಂದು ಕೇಳಲು ಹೋಗಬೇಡಿ. ಹೇಗೆ ಅದೆಲ್ಲ ಜ್ಞಾಪಕದಲ್ಲಿರಲು ಸಾಧ್ಯ? ಹೀರಾಬಾಯಿ ಮೊದಲಿಂದಲೂ ತನ್ನ ಕಡೆಯೇ ನೋಡಿಕೊಂಡು ಹಾಡುತ್ತಿದ್ದಾಳೆ. ಕುಣಿಯುತ್ತಿದ್ದಾಳೆ ಎಂದು ಹಿರಾಮನ್‌ಗೆ ಅನಿಸುತ್ತಿತ್ತು. ಲಾಲಮೋಹರ್‌ಗೆ ಅನಿಸುತ್ತಿತ್ತು ಅವಳು ತನ್ನನ್ನೇ ನೋಡಿಕೊಂಡು ಹುಡುಕುತ್ತಿರುವಳು ಎಂದು. ಹಿರಾಮನ್‌ಗಿಂತಲೂ ತಾನು ಹೆಚ್ಚಿನ ಪವರ್ ಇರುವ ಮನುಷ್ಯ

ಎಂದು ಅವಳು ತಿಳಿದುಕೊಂಡಿದ್ದಾಳೆ. ಪಲಟ್‌ದಾಸ್‌ಗೆ ಏನಿದ್ದರೂ ಅರ್ಥವಾಗುವುದು ಕಥಾಭಾಗ... ಅದರಲ್ಲಿ ಹೊಸದು ಎನ್ನುವುದು ಏನಿದೆ? ಅದೇ ರಾಮ, ಅದೇ ಸೀತೆ, ಅದೇ ಲಕ್ಷ್ಮಣ, ಅದೇ ರಾವಣ, ಸೀತಾಮಾತೆಯನ್ನು ರಾಮನಿಂದ ಕಸಿದುಕೊಂಡು ಹೋಗಲು ನಾನಾ ರೀತಿಯ ವೇಷ ಹಾಕಿಕೊಂಡು ಅವನು ಬರುತ್ತಾನೆ. ರಾಮ ಮತ್ತು ಸೀತೆ ಇಬ್ಬರೂ ರೂಪ ಬದಲಾಯಿಸಿಕೊಳ್ಳುತ್ತಾರೆ. ಇಲ್ಲ, ಈ ನಾಟಕದಲ್ಲಿ, ಸೀತೆಯೇ ಗುಲಬದನ್ ಆಗಿ ಬಂದಿದ್ದಾಳೆ... ರಾಣಿಯ ಸವಾಲನ್ನು ಅಂಗೀಕರಿಸುವ ಕಲಾವಿದನ ಹೆಸರೂ ಇಲ್ಲಿ ರಾಮ ಎಂದೇ. ಅವನು ಮಾಲಿಯ ಮಗ. ಅವನ ಸ್ನೇಹಿತನ ಹೆಸರು ಲಕ್ಷ್ಮಣ. ಸುಲ್ತಾನನೇ ರಾವಣ... ಧುನೀರಾಮನಿಗೆ ತುಂಬಾ ಜ್ವರ ಬಂದಿದೆ. ಲಹಸನ್ವಾಗೆ ತುಂಬಾ ಹಿಡಿಸಿರುವ ಪಾತ್ರ ಎಂದರೆ ಜೋಕರ್ ಪಾತ್ರ... ಬೆರ್‍ಯಾ ತೋಹಕೆ ಲೇಕೇನಾ. ಜಯಿವೆ ಸರಹಟಕೆ ಬಜರಿಯಾ. ಆ ಜೋಕರ್ ಜೊತೆಗೆ ಸ್ನೇಹ ಬೆಳೆಸಬೇಕೆಂದು ಅವನ ಆಸೆ... ನನ್ನ ಸ್ನೇಹ ಬೇಡವೇ ಜೋಕರ್ ಸಾಹೇಬ್?

ಹಿರಾಮನ್‌ಗೆ ಒಂದು ಹಾಡಿನ ಅರ್ಧ ಭಾಗ ಬಾಯಿಗೆ ಬಂದಿದೆ – ಮಾರೆ ಗಯೇ ಗುಲ್ಫಾಮ್. ಹತಗೊಂಡ ಗುಲ್ಫಾಮ್ ಯಾರು? ಹೀರಾಬಾಯಿ ಅಳುತ್ತಾ ಹಾಡುತ್ತಿದ್ದಾಳೆ – "ಅಜಿ ಹಾಂ, ಮಾರೆಗಯೆ ಗುಲ್ಫಾಮ್."

ಪೊಲೀಸರು ಗಲಭೆಯ ಸಮಯದಲ್ಲಿ ಮೂವರಿಂದಲೂ ಕಿತ್ತುಕೊಂಡಿದ್ದ ಚಾಟಿ-ಕೋಲುಗಳನ್ನು ವಾಪಸ್ಸು ಕೊಡುತ್ತಾ ಹೇಳಿದ್ದರು – ಲಾಠಿ, ಚಾಟಿ ಇವುಗಳನ್ನೆಲ್ಲ ತೆಗೆದುಕೊಂಡು ನಾಟಕ ನೋಡಲು ಬರುತ್ತೀರೇನು?

ಮಾರನೆಯ ದಿನ ಎಲ್ಲೆಲ್ಲೂ ಇದೇ ಮಾತು. ಮಥುರಾ ಮೋಹನ್ ಕಂಪನಿಯಿಂದ ಹೀರಾಬಾಯಿ ಓಡಿ ಬಂದಿದ್ದಾಳೆ: ಅದರಿಂದಲೇ ಆ ಕಂಪನಿ ಈ ಸಲ ಜಾತ್ರೆಗೆ ಬರಲಿಲ್ಲ... ಅವಳ ಜೊತೆಗೆ ಗುಂಡಾಗಳನ್ನು ಕರ್ಕೊಂಡ್ ಬಂದಿದ್ದಾಳೆ... ಹೀರಾಬಾಯಿಯೇನು ಕಡಿಮೆ ಇಲ್ಲ. ತುಂಬಾ ಖಿಲಾಡಿ ಹೆಂಗಸು – ಹಕ್ಕಿಯ ಧಾಂಡಿಗರನ್ನೇ ಹಿಡಿದು ಸಾಕುತ್ತಿದ್ದಾಳೆ... ವಾಹ್ ಮೇರಿಜಾನ್. ಏನು ಕಡಿಮೆ ಆಟಾನೇ ಇದು!

ಹತ್ತು ದಿನ! ಹಗಲೂ ರಾತ್ರಿ. ಹೀಗೆಯೇ ಕಳೆಯಿತು.

ಬೆಳಗಿನ ಹೊತ್ತನ್ನು ಗಾಡಿ ಹೊಡೆಯುತ್ತಾ ಕಳೆಯುತ್ತಿದ್ದ, ಹಿರಾಮನ್. ಸಂಜೆ ನೌಟಂಕಿ ಕಂಪನಿಯ ನಗಾರಿಯ ಶಬ್ದ ಕಿವಿಗೆ ಬೀಳುವುದೇ ತಡ, ಹೀರಾಬಾಯಿಯ ಕರೆ ಅವನ ಕಿವಿಗಳಿಗೆ ಬಂದುಮುಟ್ಟುತ್ತಿತ್ತು. ...ಮಿತಾ ಹಿರಾಮನ್, ...ಉಸ್ತಾದ್ ...ಗುರೂಜಿ. ದಿನವೆಲ್ಲ ಒಂದಲ್ಲ ಒಂದು ಮಧುರ ನಿನಾದ ಅವನ ಕಿವಿಗಳಲ್ಲಿ ಗುಂಯ್ ಗುಟ್ಟುತ್ತಿತ್ತು. ಒಂದಲ್ಲ ಒಂದು ವಾದ್ಯ. ಒಮ್ಮೆ ಹಾರ್ಮೋನಿಯಂ, ಒಮ್ಮೆ ನಗಾರಿ, ಒಮ್ಮೆ ಢೋಲಕ್, ಒಮ್ಮೆ ಹೀರಾಬಾಯಿಯ ನಡಿಗೆಯ ಆ ಝುಂಕಾರ. ಅವುಗಳ ಬಲದಿಂದಲೇ ಅವನ ಪ್ರತಿಯೊಂದು ಗತಿವಿಧಿಯೂ ನಡೆಯುತ್ತಿದೆ. ನೌಟಂಕಿ

ಕಂಪೆನಿಯ ಮ್ಯಾನೇಜರ್‌ನಿಂದ ಹಿಡಿದು ಪರದೆ ಎಳೆಯುವ ಜವಾನನ ವರೆಗೆ ಎಲ್ಲರೂ ಈಗ ಅವನ ಪರಿಚಿತರು... ಹೀರಾಬಾಯಿಯ ಮನುಷ್ಯ ಎಂದು ಅವನನ್ನು ಅವರು ಗುರುತಿಸುತ್ತಾರೆ.

ಪಲಟ್‌ದಾಸ್ ಪ್ರತಿದಿನ ರಾತ್ರಿ ನಾಟಕ ಆರಂಭವಾಗುವುದಕ್ಕೆ ಮೊದಲು ಪೂರ್ಣ ಶ್ರದ್ಧೆಯಿಂದ ರಂಗಸ್ಥಳಕ್ಕೆ ಕೈಮುಗಿದು ನಮಸ್ಕಾರ ಮಾಡುತ್ತಾನೆ. ಲಾಲ್‌ಮೋಹರ್ ಒಂದು ದಿನ ಹೀರಾಬಾಯಿಯ ಎದುರಿಗೆ ತನ್ನ ಕಚೇರಿ-ಭಾಷೆಯನ್ನು ಆರಂಭಿಸಿದ್ದ. ಹೀರಾಬಾಯಿಗೆ ಅರ್ಥವೇ ಆಗಿರಲಿಲ್ಲ. ಅಂದಿನಿಂದ ಅವನ ಮನಸ್ಸು ಬಹಳ ಸಂಕುಚಿತಗೊಂಡಿದೆ. ಅವನ ನೌಕರಿಯಲ್ಲಿದ್ದ ಲಹಸನ್‌ವಾ ಕೆಲಸ ಬಿಟ್ಟು ಈ ನೌಟಂಕಿ ಕಂಪೆನಿಯಲ್ಲೇ ಕೆಲಸಕ್ಕೆ ಸೇರಿದ್ದಾನೆ. ಜೋಕರ್ ಜೊತೆಗೆ ಅವನ ಸ್ನೇಹ ಬೆಳೆದಿದೆ. ಅವನ ಬಟ್ಟೆಬರೆಯೆಲ್ಲ ಒಗೆಯುತ್ತಾನೆ. ಇಡೀ ದಿನ ನೀರು ಹೊರುತ್ತಾನೆ. ಊರಿನಲ್ಲಿ ಏನಿದೆ. ಹೋಗಿ ಏನು ಮಾಡಬೇಕು ಎನ್ನುತ್ತಾನೆ. ಲಾಲ್‌ಮೋಹರ್ ಯಾವಾಗಲೂ ಮಂಕುಬಡಿದವನಂತೆ ಇರುತ್ತಾನೆ. ಧುನ್ನೀರಾಮ್ ಮನೆಗೆ ಹೊರಟುಹೋಗುತ್ತಾನೆ – ಕಾಯಿಲೆಯಾಗಿ.

ಹೀರಾಮನ್ ಇವೊತ್ತು ಬೆಳಿಗ್ಗೆಯಿಂದ ಸಾಮಾನು ಹೊತ್ತು ಮೂರು ಬಾರಿ ಸ್ಟೇಷನ್ನಿಗೆ ಹೋಗಿ ಬಂದಿದ್ದಾನೆ. ಏಕೋ ಏನೋ ಇವೊತ್ತು ಅವನಿಗೆ ತನ್ನ ಅತ್ತಿಗೆಯ ನೆನಪು ಬರುತ್ತಿದೆ. ಧುನ್ನೀರಾಮ್ ತನ್ನ ಜ್ವರದ ಗುಂಗಿನಲ್ಲಿ ಏನೂ ಹೇಳಿಲ್ಲವಷ್ಟೆ. ಇಲ್ಲಿ ಈಗಿರುವಷ್ಟು ಮೋಜು ಹಿಂದೆಲ್ಲಿತ್ತು – ಗುಲಬದನ್, ಸಾವಿರ ದಳಗಳಿರುವ ಹೂವಿನ ಸಿಂಹಾಸನ – "ತಖ್ತ್-ಹಜಾರಾ". ಲಹಸನ್‌ವಾ ತುಂಬಾ ಮೋಜಿನಲ್ಲಿದ್ದಾನೆ. ದಿನವೆಲ್ಲ ಹೀರಾಬಾಯಿಯನ್ನು ನೋಡುತ್ತಾ ಕಳೆಯುತ್ತಿರಬೇಕು. ನಿನ್ನೆ ಹೇಳುತ್ತಿದ್ದ – ಹಿರಾಮನ್ ಮಾಲಿಕ್, ತಮ್ಮ ಕೃಪೆ. ಖುಷಿಯಾಗಿದ್ದೇನೆ ಎಂದು. ಹೀರಾಬಾಯಿಯ ಸೀರೆ ಒಗೆದ ಮೇಲೆ ಬಕೆಟ್ಟಿನ ನೀರು ತುಂಬಾ ಸುಗಂಧಮಯವಾಗಿ ಪನ್ನೀರಾಗಿಬಿಡುತ್ತದೆ ಎನ್ನುತ್ತಾನೆ. ಅದರಲ್ಲೇ ಅವನು ತನ್ನ ಟವೆಲನ್ನು ಹಿಂಡಿ ಒಣಗಿಸುತ್ತಾನೆ. ಮೂಸಿ ನೋಡುತ್ತೀರೇನು, ನೋಡಿ! ಪ್ರತಿದಿನ ರಾತ್ರಿ ಒಬ್ಬರ ಬಾಯಿಂದ ಅಲ್ಲ ಒಬ್ಬರ ಬಾಯಿಂದ ಅದೇ ಮಾತು ಕೇಳುತ್ತಾನೆ – ಹೀರಾಬಾಯಿ ರಂಡಿ ಎಂದು. ಈ ಮಾತಿಗೆ ಅವನು ಎಷ್ಟು ಜನರ ಜೊತೆಗೆ ಜಗಳ ಆಡಬೇಕು. ನೋಡದೆ ಮಾಡದೆ ಜನ ಹೀಗೆ ಮಾತನಾಡುತ್ತಾರೆ – ಅವಳು ವೇಶ್ಯೆಯಂತೆ, ಏನು ಹೇಳುವುದು. ರಾಜನ ಬೆನ್ನ ಹಿಂದೆ ಜನ ಅವನನ್ನು ಹೀಗೆಯೇ ಬೈಯುತ್ತಾರೆ. ಇವೊತ್ತು ಹೀರಾಬಾಯಿಯನ್ನು ಕಂಡು ಅವನು ಹೇಳಬೇಕು – ನೌಟಂಕಿ ಕಂಪೆನಿಯಲ್ಲಿ ಕೆಲಸ ಮಾಡುವುದರಿಂದ ಜನ ಏನೇನೋ ಬಾಯಿಗೆ ಬಂದಂತೆ ಹೇಳುತ್ತಾರೆ ಎಂದು. ಬಹಳ 'ಬದನಾಮಿ' ಮಾಡುತ್ತಾರೆ. ಸರ್ಕಸ್ ಕಂಪೆನಿ ಸೇರುವುದು ಒಳ್ಳೆಯದು. ಜನ ಹುಲಿಯನ್ನು ನೋಡಿಯೇ ಹೆದರುತ್ತಾರೆ. ಇನ್ನು ಅದರ ಬಳಿ ಇರುವ ಹೆಂಗಸಿನ ಗೊಡವೆಗೆ ಹೇಗೆ ಬಂದಾರು? ಹೀರಾಬಾಯಿ ಅಲ್ಲಿ ಸುರಕ್ಷಿತವಾಗಿರಬಹುದು – ಯಾವ ಗಾಡಿ ಬರುತ್ತಿದೆ?

..."ಹಿರಾಮನ್, ಏ ಹಿರಾಮನ್ ಭಾಯ್!"—ಲಾಲ್‌ಮೊಹರ್‌ನ ಧ್ವನಿ ಕೇಳಿ ಕತ್ತು ತಿರುಗಿಸಿ ನೋಡಿದ—ಲಾಲ್‌ಮೋಹರ್ ಏನು ಬಾಡಿಗೆ ತಂದಿರಬಹುದು!

—"ಹೀರಾಬಾಯಿ ನಿನ್ನನ್ನು ಹುಡುಕುತ್ತಿದ್ದಾಳೆ, ಸ್ಟೇಷನ್ನಿನಲ್ಲಿ, ಹೋಗ್ತಿದ್ದಾಳೆ", ಒಂದೇ ಉಸುರಿಗೆ ಅವನು ಹೇಳಿದ್ದ. ಜಾತ್ರೆಯಿಂದ ಅವನ ಗಾಡಿಯಲ್ಲಿಯೇ ಅವಳು ಬಂದಿದ್ದಳು.

"ಹೋಗ್ತಿದ್ದಾಳೆಯೇ? ಎಲ್ಲಿಗೆ?—ಈ ಮೇಲ್ ಗಾಡಿಯಲ್ಲಿ?"

ಹಿರಾಮನ್ ಗಾಡಿಯನ್ನು ಬಿಟ್ಟುಬಿಟ್ಟ. ಸ್ವಲ್ಪ ಎತ್ತು—ಗಾಡಿ ನೋಡ್ಕೊ, ಈಗಲೇ ಬರುತ್ತೇವೆ, ಎಂದು ಗೂಡ್ಸ್ ವಾಚ್‌ಮನ್‌ಗೆ ಹೇಳಿ ಒಳಗೆ ಹೋಗುತ್ತಾನೆ.

—ಉಸ್ತಾದ್! ಹೆಂಗಸರ ವೇಟಿಂಗ್ ರೂಂ ಬಳಿ ಹೀರಾಬಾಯಿ ಒಂದು 'ಓಢ್ನಿ' ಹೊದ್ದುಕೊಂಡು ನಿಂತಿದ್ದಾಳೆ—ಅವನ ನಿರೀಕ್ಷೆಯಲ್ಲಿ. "ಇದು ತಗೊಳ್ಳಿ ನಿಮ್ಮ ಚೀಲ. ಸಧ್ಯ ನೀವು ಬಂದಿರಿ, ನಾನು ಸಂಪೂರ್ಣ ಆಶೆಯನ್ನೇ ಬಿಟ್ಟಿದ್ದೆ. ನಿಮ್ಮ ಭೇಟಿ ಇವೊತ್ತು ಆಗಲಾರದು ಎಂದುಕೊಂಡಿದ್ದೆ. ನಾನು ಹೋಗುತ್ತಿದ್ದೇನೆ ಗುರೂಜಿ."

ಪೆಟ್ಟಿಗೆ ಎತ್ತಿಕೊಂಡು ಹೋಗುವ ಮನುಷ್ಯ ಇವೊತ್ತು ಕೋಟು ಪ್ಯಾಂಟ್ ಧರಿಸಿ ಬಾಬೂಜಿ ಆಗಿಬಿಟ್ಟಿದ್ದಾನೆ. ಒಳ್ಳೆ ಮಾಲಿಕನಂತೆ ಕೂಲಿಗಳ ಮೇಲೆಲ್ಲಾ ಕೂಗಾಡುತ್ತಾ ಆಜ್ಞೆ ಕೊಡುತ್ತಾನೆ—ಹೆಂಗಸರ ಗಾಡಿಯಲ್ಲಿ ಹತ್ತಿಸುವುದು ಒಳ್ಳೆಯದು.

ಹಿರಾಮನ್ ತನ್ನ ದುಡ್ಡಿನ ಚೀಲವನ್ನು ಕೈಗೆ ತೆಗೆದುಕೊಂಡು ಸುಮ್ಮನೆ ನಿಂತಿದ್ದಾನೆ. ಚೀಲವನ್ನು ಹೀರಾಬಾಯಿ ತನ್ನ ವಕ್ಷಸ್ಥಳದಿಂದ ತೆಗೆದು ಕೊಟ್ಟಿದ್ದಳು... ಚೀಲ ಹಕ್ಕಿಯ ದೇಹದಂತೆ ಬಿಸಿಯಾಗಿದೆ.

—ಗಾಡಿ ಬರುತ್ತಿದೆ. ಪೆಟ್ಟಿಗೆ ಎತ್ತುವ ಮನುಷ್ಯ ಮುಖ ಒಂದು ರೀತಿ ಮಾಡಿಕೊಂಡು ಅವಳಿಗೆ ಹೇಳುತ್ತಾನೆ—ಅದರ ಅರ್ಥ ಸ್ಪಷ್ಟವಾಗಿದೆ—ಏನು ಹರಟೆ ಹೊಡೆಯುತ್ತಿದ್ದೀಯ ಅಷ್ಟು ಹೊತ್ತು ಎನ್ನುವಂತಿದೆ ಆ ಮುಖಮುದ್ರೆ.

ಹೀರಾಬಾಯಿ ಚಂಚಲ ಮನಸ್ಕಳಾಗಿದ್ದಾಳೆ. ಹೇಳುತ್ತಾಳೆ—ಹಿರಾಮನ್, ಈ ಕಡೆ ಬನ್ನಿ ಸ್ವಲ್ಪ ಒಳಗೆ. ನಾನು ಮತ್ತೆ ಮಥುರಾಮೋಹನ್ ಕಂಪನಿಗೆ ಹೋಗುತ್ತಿದ್ದೇನೆ. ನಮ್ಮ ಊರಿನ ಕಂಪನಿ ಅದು... ಬನೇಲಿಯ ಜಾತ್ರೆಗೆ ಬರ್ತೀರಲ್ಲ ನೀವು?

ಹೀರಾಬಾಯಿ ಹಿರಾಮನ್‌ನ ಭುಜದ ಮೇಲೆ ಕೈ ಇಡುತ್ತಾಳೆ—ಈ ಸಲ ಬಲಗಡೆಯ ಭುಜದ ಮೇಲೆ. ಮತ್ತೆ ತನ್ನ ಚೀಲದಿಂದ ರೂಪಾಯಿ ತೆಗೆಯುತ್ತಾ, ಇದರಿಂದ ಒಂದು ಬೆಚ್ಚಗಿರುವ ದುಪ್ಪಟಿ ತೆಗೆದುಕೊಳ್ಳಿ...

ಹಿರಾಮನ್ ಈಗ ತನ್ನ ಮೌನವನ್ನೊಡೆದು—ಇಸ್ಸ್, ಪ್ರತಿಸಲ ದುಡ್ಡು, ರೂಪಾಯಿ. ನಿಮ್ಮಲ್ಲೇ ಇಡೀ ಅದನ್ನ... ದುಪ್ಪಟಿ ತೆಕೊಂಡು ಏನು ಮಾಡಲಿ?

ಹೀರಾಬಾಯಿಯ ಕೈ ಅಷ್ಟಕ್ಕೇ ನಿಂತುಹೋಯಿತು. ಅವಳು ಹಿರಾಮನ್‌ನ ಮುಖವನ್ನು ಗಂಭೀರವಾಗಿ ನೋಡಿದಳು. ಆಮೇಲೆ ಹೇಳಿದಳು—ನಿಮ್ಮ ಮನಸ್ಸು ಚಿಕ್ಕದು

ಮಾಡಿಕೊಂಡಿದ್ದೀರಿ. ಏಕೆ ಮೋತಾ? ಮಹುವಾ ಘಟವಾರಿನ್‌ಳನ್ನು ವ್ಯಾಪಾರಿ ಕೊಂಡು ಕೊಂಡಿದ್ದಾನೆ ಎಂದೇ ಗುರೂಜೀ?

ಹೀರಾಬಾಯಿಗೆ ಕಂಠ ಬಿಗಿದುಕೊಂಡಂತಾಯಿತು. ಹೊರಗಡೆ ಪೆಟ್ಟಿಗೆ ಹೊರುವ ಆ ಮನುಷ್ಯ ಕೂಗುಹಾಕುತ್ತಿದ್ದಾನೆ – ಗಾಡಿ ಬಂದುಬಿಟ್ಟಿತು ಎಂದು. ಹಿರಾಮನ್ ಕೋಣೆಯಿಂದ ಹೊರಗೆ ಬಂದ. ಪೆಟ್ಟಿಗೆ ಹೊರುವವನು ನೌಟಂಕಿ ಕಂಪೆನಿಯ ಜೋಕರ್ ನಂತೆ ಮುಖಮಾಡಿ ಹೇಳಿದ – ಪ್ಲಾಟ್‌ಫಾರಂನಿಂದ ಹೊರಗಡೆ ಓಡು. ಟಿಕೆಟ್ ಇಲ್ಲದೆ ಹಿಡಿದರು ಎಂದರೆ ಮೂರು ತಿಂಗಳ ಶಿಕ್ಷೆ...

ಹಿರಾಮನ್ ಏನೊಂದೂ ಮಾತನಾಡದೆ ಬಾಗಿಲ ಹೊರಗೆ ನಿಂತುಕೊಂಡ – ಸ್ಟೇಷನ್ನಿನ ವ್ಯವಹಾರ, ರೈಲಿನವರ ರಾಜ್ಯ. ಇಲ್ಲ ಎಂದರೆ ಅವನ ಸೊಟ್ಟಮುಖವನ್ನು ಹಿರಾಮನ್ ನೆಟ್ಟಗೆ ಮಾಡಿಬಿಡುತ್ತಿದ್ದ.

ಹೀರಾಬಾಯಿ ನೆಟ್ಟಗೆ ತನ್ನ ಮುಂದೆಯೇ ನಿಂತಿದ್ದ ಗಾಡಿಯನ್ನು ಹತ್ತಿದ್ದಳು. ಇಸ್ಸ್, ಎಷ್ಟು ಮನಸ್ಸಿಗೆ ಹಚ್ಚಿಕೊಂಡಿದ್ದಾಳೆ. ಗಾಡಿಯಲ್ಲಿ ಕುಳಿತೂ ಹಿರಾಮನ್‌ನ ಕಡೆಗೇ ನೋಡುತ್ತಿದ್ದಾಳೆ... ಲಾಲ್‌ಮೊಹರ್‌ನನ್ನು ನೋಡಿದರೆ ಯಾಕೋ ಮನಸ್ಸು ಉರಿದೇಳುತ್ತದೆ. ಯಾವಾಗಲೂ ನನ್ನ ಹಿಂದೆಯೇ ಇರುತ್ತಾನೆ. ಪ್ರತಿಯೊಂದರಲ್ಲೂ ಪಾಲು ಪಡೆಯುವ ಚಪಲ ಅವನದು...

ಗಾಡಿ ಕೂಗಿ ಹೊರಡುವ ಸೂಚನೆ ಕೊಟ್ಟಿತು. ಅವನ ಮನಸ್ಸಿನ ಅಂತರಾಳದಿಂದ ಯಾವುದೋ ಆರ್ತಸ್ವರ ಹೊರಟು ರೈಲಿನ ಆ ಕೂ ಶಬ್ದದ ಜೊತೆ ಸೇರಿ ಮೇಲೆ ಹಾರಿ ಹೋದ ಹಾಗೆ ಅವನಿಗೆ ಆಯಿತು... ಕೂ ಊ ಊ ... ಇಸ್ಸ್...

– ಛಿ – ಈ... ಈ ಛಕ್. ಗಾಡಿ ಅಲುಗಿತು. ಹಿರಾಮನ್ ತನ್ನ ಎಡಗಾಲಿನ ಹೆಬ್ಬೆರಳನ್ನು ತನ್ನ ಬಲಗಾಲಿನ ಹಿಮ್ಮಡಿಯಿಂದ ಒಮ್ಮೆ ತುಳಿದುಕೊಂಡ. ಅದರಿಂದ ಅವನ ಹೃದಯದಲ್ಲಾಗುತ್ತಿದ್ದ ಆಲ್ಲೋಲಕಲ್ಲೋಲ ಸ್ಥಿಮಿತಕ್ಕೆ ಬಂದಂತಾಯಿತು... ಹೀರಾಬಾಯಿ ತನ್ನ ಕರವಸ್ತ್ರದಿಂದ ಮುಖ ಒರೆಸಿಕೊಳ್ಳುತ್ತಿದ್ದಾಳೆ... ಕರವಸ್ತ್ರವನ್ನು ಬೀಸುತ್ತಾ ಸನ್ನೆ ಮಾಡುತ್ತಾಳೆ. ಈಗ ಹೋಗು ಎಂದು... ಕೊನೆಯ ಡಬ್ಬಿ ಹೋಯಿತು. ಪ್ಲಾಟ್‌ಫಾರಂ ಖಾಲಿಯಾಗಿದೆ... ಎಲ್ಲವೂ ಖಾಲಿ... ಬರಿದೋ ಬರಿದು... ಗೂಡ್ಸ್ ಗಾಡಿಯ ಡಬ್ಬಿಗಳಿದ್ದಂತೆ... ಪ್ರಪಂಚವೇ ಖಾಲಿಯಾಗಿಹೋದಂತಿದೆ! ಹಿರಾಮನ್ ತನ್ನ ಗಾಡಿಯ ಬಳಿಗೆ ಹಿಂದಿರುಗಿ ಬಂದ.

ಹಿರಾಮನ್ ಲಾಲ್‌ಮೊಹರ್‌ನನ್ನು ಕೇಳಿದ – ಊರಿಗೆ ಯಾವಾಗ ಹೋಗುತ್ತಿದ್ದೀಯಾ ನೀನು?

ಲಾಲ್‌ಮೊಹರ್ ಹೇಳಿದ – ಈಗಲೇ ಊರಿಗೆ ಹೋಗಿ ಏನು ಮಾಡಬೇಕು? ಬಾಡಿಗೆ ಸಂಪಾದಿಸುವ ಕಾಲ ಇದು. ಹೀರಾಬಾಯಿ ಹೊರಟುಹೋದಳು. ಈಗ ಜಾತ್ರೆ ಕೂಡ ಬರಿದಾಗತೊಡಗುತ್ತದೆ.

ಒಳ್ಳೇದು. ಮನೆಗೇನಾದರೂ ಸುದ್ದಿ ಕೊಡಬೇಕೇನು?

ಲಾಲ್‌ಮೋಹರ್ ಹಿರಾಮನ್‌ಗೆ ಎಷ್ಟೋ ಸಮಾಧಾನ ಹೇಳಿದ. ಆದರೆ ಅವನು ಮಾತ್ರ ತನ್ನ ಗಾಡಿಯನ್ನು ತನ್ನ ಊರಿನ ಕಡೆಗೆ ಹೋಗುವ ದಾರಿಗೆ ತಿರುಗಿಸಿದ... ಈಗ ಜಾತ್ರೆಯಲ್ಲಾದರೂ ಏನಿದೆ? ಎಲ್ಲಾ ಬರಿದಾಗಿಹೋಗಿದೆ.

ರೈಲುಗಾಡಿಯ ಹಾದಿ ಪಕ್ಕದಲ್ಲಿಯೇ ಬಹುದೂರದ ವರೆಗೆ ತನ್ನ ಹಳ್ಳಿಯ ಕಚ್ಚಾ ರಸ್ತೆಯೂ ಹೋಗುತ್ತದೆ. ಹಿರಾಮನ್ ಯಾವತ್ತೂ ರೈಲಿನಲ್ಲಿ ಪ್ರಯಾಣಮಾಡಿಯೇ ಇಲ್ಲ. ಹಳೆಯ ಬಯಕೆಯೇ ಮರುಕಳಿಸಿತು. ರೈಲುಗಾಡಿಯಲ್ಲಿ ಕುಳಿತು ದಾರಿಯುದ್ದಕ್ಕೂ ಹಾಡುತ್ತಾ ಜಗನ್ನಾಥ ಧಾಮಕ್ಕೆ ಹೋಗುವ ಬಹಳ ಹಿಂದಿನ ಬಯಕೆ... ಖಾಲಿ ಬಿದ್ದಿರುವ ತನ್ನ ಗಾಡಿಯೊಳಕ್ಕೆ ಹಿಂದಿರುಗಿ ನೋಡುವ ಧೈರ್ಯ ಇಲ್ಲ... ಇವೊತ್ತೂ ಅವನ ಬೆನ್ನಿನಲ್ಲಿ ಕಚಕುಳಿ ಇಟ್ಟಂತಾಗುತ್ತದೆ. ಈಗಲೂ ಅವನ ಗಾಡಿಯೊಳಗಿಂದ ಸಂಪಿಗೆ ಹೂವಿನ ಕಂಪು ಬರುತ್ತಿದೆ–ಆಗೊಮ್ಮೆ ಈಗೊಮ್ಮೆ. ಹಾಡಿನ ಲಹರಿ ಹರಿಯುತ್ತಿರುವಂತೆ ಒಂದು ಕೊಂಡಿ ಕಳಚಿಕೊಂಡು ನಗಾರಿಯ ನಾದದ ತಾಳ ಪದೇ ಪದೇ ತಪ್ಪುತ್ತದೆ.

ಹಿಂದಿರುಗಿ ನೋಡುತ್ತಾನೆ–ಕಳ್ಳಪೇಟೆ ಮಾಲಿನ ಮೂಟೆಗಳೂ ಇಲ್ಲ, ಗಳಗಳೂ ಇಲ್ಲ, ಹುಲಿಯೂ ಇಲ್ಲ... ಗಂಧರ್ವಕನ್ಯೆ... ಭಗವತಿದೇವಿ... ಮಿಾತಾ... ಹೀರಾದೇವಿ... ಮಹುವಾ ಘಟವಾರಿನ್... ಯಾರೂ ಇಲ್ಲ. ಗತಿಸಿ ಹೋದ ಸನ್ನಿವೇಶಗಳ ನೆನಪುಗಳು ಪ್ರತಿಧ್ವನಿತವಾಗುತ್ತಿವೆ ಮತ್ತು ಅವನ ಹೃದಯದ ತಂತಿಯನ್ನು ಮಿಾಟುತ್ತಿವೆ. ಹಿರಾಮನ್‌ನ ತುಟಿಗಳು ಕಂಪಿಸುತ್ತಿವೆ. ಪ್ರಾಯಶಃ ಈಗ ಅವನು ತಾನು ಮಾಡಬೇಕಾದ ಮೂರನೆಯ ಶಪಥದ ಯೋಚನೆಯಲ್ಲಿದ್ದಾನೆ–ಕಂಪನಿಯ ಮಾಲನ್ನು ಇನ್ನುಮೇಲೆ ತನ್ನ ಗಾಡಿಯಲ್ಲಿ ಸಾಗಿಸುವುದಿಲ್ಲ ಎಂದು...!

ಹಿರಾಮನ್ ಹಠಾತ್ತನೆ ತನ್ನ ಎರಡೂ ಎತ್ತುಗಳ ಮೇಲೆ ಗದರಿಕೊಳ್ಳುತ್ತಾನೆ. ಚಾಟಿಯಿಂದ ಎರಡೂ ಎತ್ತುಗಳ ಬೆನ್ನಿನ ಮೇಲೆ ಹೊಡೆಯುತ್ತಾ ಹೇಳುತ್ತಾನೆ–ರೈಲ್ವೆ ಲೈನಿನ ಕಡೆ ಏನು ತಿರುಗಿ ತಿರುಗಿ ನೋಡ್ತಿದ್ದೀರಿ? ಎರಡೂ ಎತ್ತುಗಳು ಈಗ ಕಾಲುಗಳನ್ನು ಸಡಿಲಬಿಟ್ಟು ರಸ್ತೆಯ ಜಾಡು ಹಿಡಿದುವು. ಹಿರಾಮನ್ ರಾಗವನ್ನು ಗುನುಗುನಾಯಿಸತೊಡಗಿದ–ಅಜಿ ಹಾಂ, ಮಾರೆಗಯೆ ಗುಲ್ಫಾನ್.

# ಲಂಡನ್ನಿನ ಒಂದು ರಾತ್ರಿ

ನಾನು ಎರಡನೆಯ ಸಲ ಅಲ್ಲಿಗೆ ಹೋಗಿದ್ದೆ. ಮೊದಲ ರಾತ್ರಿ ಹೋಗಿದ್ದಾಗ ತಡವಾಗಿ ತಲುಪಿದ್ದೆ. ನಾನು ತಲಪುವ ಮೊದಲೇ ಜನರನ್ನು ಕೆಲಸಕ್ಕೆ ಆರಿಸಿಕೊಂಡುಬಿಟ್ಟಿದ್ದರು. ಒಳಗಡೆ ಚಲಿಸುತ್ತಿದ್ದ ಯಂತ್ರಗಳ ಧಡಧಡ ಶಬ್ದದ ಜೊತೆಗೆ ಸೋಡಾ ಬಾಟ್ಲಿಗಳ ಶಬ್ದ ಕೂಡ ಕೇಳಿಸುತ್ತಿತ್ತು. ಮುಂದೆ ಏನು ಮಾಡಬೇಕೆಂದು ತಿಳಿಯದೆ ನಾನು ಗೇಟಿನ ಹೊರಗೆ ನಿಂತಿದ್ದೆ. ಕೊನೆಯ ಘಳಿಗೆಯಲ್ಲಿ ಇನ್ನೊಬ್ಬ ಮನುಷ್ಯನ ಅಗತ್ಯಬಿದ್ದರೂ ಬೀಳಬಹುದು. ಆಗ ಅವರು ನನ್ನನ್ನೇ ಆರಿಸಿಕೊಳ್ಳುತ್ತಾರೆ ಎಂದು ನಿರೀಕ್ಷಿಸುತ್ತಿದ್ದೆ. ಯಾರನ್ನು ಕೆಲಸಕ್ಕೆ ಆರಿಸಿಕೊಂಡಿದ್ದಾರೋ ಅವರು ಬೇಗ ಬೇಗ ತಮ್ಮ ಸೂಟುಗಳನ್ನು ತೆಗೆದು ಕೆಲಸದ ಬಟ್ಟೆಯನ್ನು ಉಡುತ್ತಿದ್ದರು.

ಹೊರಗಡೆಯ ಅಂಗಳದಲ್ಲಿ ಬಾಟ್ಲಿಗಳನ್ನು ಇಟ್ಟಿದ್ದರು. ತಿಳಿಬೆಳುದಿಂಗಳಲ್ಲಿ ಅವು ಹೊಳೆಯುತ್ತಿದ್ದುವು. ಒಂದರ ಮೇಲೆ ಒಂದು, ಸಾಲುಸಾಲಾಗಿ ಫ್ಯಾಕ್ಟರಿಯ ಗೋಡೆಗೆ ಹೊಂದಿಕೊಂಡು ಅವುಗಳನ್ನು ಜೋಡಿಸಲಾಗಿತ್ತು. ದೂರದಿಂದ ನೋಡುವಾಗ ಗಾಜಿನ ಯಾವುದೋ ಉದ್ದನೆಯ ಬೆಂಚಿನ ಮೇಲೆ ಬೆಕ್ಕುಗಳು ಸಾಲಾಗಿ ಪರಸ್ಪರ ಅಪ್ಪಿಕೊಂಡು ಕುಳಿತಿವೆಯೇನೋ ಎಂದು ಭಾಸವಾಗುತ್ತಿತ್ತು.

ನಾನು ನಿಂತುಕೊಂಡೇ ಇದ್ದೆ. ಸ್ವಲ್ಪ ಹೊತ್ತಿನ ಮೇಲೆ ಒಬ್ಬ ಆಂಗ್ಲ ಮಹಾಶಯ ನನ್ನ ಸಮೀಪಕ್ಕೆ ಬಂದು ಕೇಳಿದ: ನೀನು ಇನ್ನೂ ನಿಂತಿದ್ದೀಯೇನು? ...ನಾನು ಹೇಳಿದ ನಲ್ಲ, ಇವೊತ್ತು ಏನು ಕೆಲಸ ಇಲ್ಲ, ...ಹಾಗೆ ಹೇಳುತ್ತಾ ಆತ ನನ್ನ ಹೆಗಲ ಮೇಲೆ ಕೈ ಹಾಕಿದ.

"...ಇಲ್ಲ, ನಾನು ಸುಮ್ಮನೆ ನೋಡ್ತಾ ನಿಂತಿದೀನಿ ಅಷ್ಟೆ." ನಾನು ನಿಧಾನವಾಗಿ ಅವನ ಕೈಯನ್ನು ನನ್ನ ಹೆಗಲ ಮೇಲಿಂದ ತೆಗೆದುಬಿಟ್ಟೆ.

"ನಾಳೆ ಹದಿನೈದು ನಿಮಿಷ ಮುಂಚೆ ಬಂದುಬಿಡು. ನಾಳೆ ಜನ ಯಾರಾದರೂ ಬರದೆ ಹೋದರೆ, ನಿನ್ನನ್ನು ಕೆಲಸಕ್ಕೆ ತೆಗೆದುಕೊಳ್ಳುತ್ತೇವೆ. ಗುಡ್ ನೈಟ್...", ಹಾಗೆ ಹೇಳಿ ಅವನು ಹೊರಟುಹೋದ.

ಅದು ಮೂರನೆಯ ದಿನದ ರಾತ್ರಿ. ಟ್ಯೂಬ್ ಸ್ಟೇಷನ್ನಿನ ಮೆಟ್ಟಲುಗಳನ್ನು ಹತ್ತಿ ಮೇಲಕ್ಕೆ ಬಂದು ನೋಡುತ್ತೇನೆ, ಬೆಳುದಿಂಗಳು ಚೆನ್ನಾಗಿ ಸುತ್ತಲೂ ಹರಡಿದೆ. ದೂರದ ಗಿರಣಿಗಳ ಚಿಮಣಿಗಳು ಕಾಣುತ್ತಿವೆ. ಅವುಗಳ ಮಧ್ಯೆ ಲಂಡನ್ನಿನ ಹೊಗೆ ತುಂಬಿದ್ದ ಆಕಾಶವನ್ನು ನೋಡಬಹುದಿತ್ತು.

ಎರಡನೆಯ ಬಾರಿಗೆ ನಾನು ರಸ್ತೆ ಹುಡುಕಿಕೊಂಡು ಹೋಗಬೇಕಾಗಲಿಲ್ಲ. ನನ್ನ ನಾನು ತುಳಿದಿದ್ದ ದಾರಿಯನ್ನೇ ಮತ್ತೆ ತುಳಿಯತೊಡಗಿದೆ. ಅವು ನನಗೆ ಪರಿಚಿತ ರಸ್ತೆಗಳಾಗಿದ್ದುವು. ಆದರೆ ಇಂದು ಕಾಣುತ್ತಿದ್ದ ಬೆಳುದಿಂಗಳಲ್ಲಿ ಏನೋ ಹೊಸತು ಅನುಭವಕ್ಕೆ ಬರುತ್ತಿತ್ತು.

ನಾರ್ತ್ ಆಕ್ಟನ್ ನಿಲ್ದಾಣದಿಂದ ಸ್ವಲ್ಪ ಮುಂದಕ್ಕೆ ನಡೆದು ಹೋದಮೇಲೆ ನನ್ನ ಕಾಲುಗಳು ತಾವೇತಾವಾಗಿ ಹಠಾತ್ತನೆ ನಿಂತುಹೋದುವು. ನಾನು ಇವೊತ್ತು ಮುಂಚೆಯೇ ಬಂದಿದ್ದೇನೆ. ಬೇರೆ ಪ್ರಾಯಶಃ ಯಾರೂ ಬಂದಿರಲಾರರು ಎಂದುಕೊಂಡಿದ್ದ ನನ್ನ ಊಹೆ ಸಂಪೂರ್ಣ ಸುಳ್ಳಾಗಿತ್ತು. ಅಷ್ಟು ಹೊತ್ತಿಗೆ ಆಗಲೇ ೨೦–೨೫ ಜನ ನಿರುದ್ಯೋಗಿಗಳ ಗುಂಪು ಸೇರಿತ್ತು. ಆಂಗ್ಲ ಯುವಕರು, ಬರ್ಮೀಯರೆಂದು ಕಾಣುತ್ತಿದ್ದ ವಿದ್ಯಾರ್ಥಿಗಳು, ದಕ್ಷಿಣ ಆಫ್ರಿಕಾದ ಹಾಗೂ ವೆಸ್ಟ್ ಇಂಡೀಸಿನ ನೀಗ್ರೋಗಳು – ಇವರೆಲ್ಲರೂ ತಮ್ಮ ತಮ್ಮದೇ ಆದ ಪ್ರತ್ಯೇಕ ಗುಂಪುಗಳಲ್ಲಿ ನಿಂತಿದ್ದರು. ಎಲ್ಲರ ಕಣ್ಣುಗಳೂ ಗೇಟಿನ ಕಡೆಗೇ ಇದ್ದುವು. ಕೆಲವರ ಮುಖಗಳು ಪರಿಚಿತ ಮುಖಗಳಾಗಿದ್ದುವು. ಪ್ರಾಯಶಃ ಹಿಂದಿನ ರಾತ್ರಿ ಅವರನ್ನು ನೋಡಿರಬೇಕು. ಅವರೆಲ್ಲರ ಕಣ್ಣುಗಳೂ ನನ್ನ ಕಡೆ ಹೊರಳಿದುವು. ಆತಂಕಕ್ಕೊಳಗಾಗಿದ್ದ ಮೂಕ ನೋಟ. ಆ ಮೂಕ ನೋಟದಲ್ಲಿ ಒಂದು ವಿಚಿತ್ರ ಭಯವೂ ಇತ್ತು. ನನ್ನ ಬಗ್ಗೆ ಅಲ್ಲ. ಇನ್ನು ಕೆಲವೇ ನಿಮಿಷಗಳಲ್ಲಿ ಆಗಬಹುದಾಗಿದ್ದ ನಿರ್ಣಯ ಹಾಗೂ ಅದಕ್ಕೆ ಆಧಾರವಾಗಿದ್ದ ನಿಯಮದ ಬಗ್ಗೆ.

ನಾನೂ ಅವರ ಜೊತೆಗೆ ಒಂದು ಮೂಲೆಯಲ್ಲಿ ನಿಂತಿದ್ದೆ – ಅವರ ಬಗ್ಗೆ ನನಗೆ ಹೆದರಿಕೆ ಇತ್ತು. ಆದರೆ ಜೊತೆಗೆ ಅವರೊಡನೆ ಒಂದು ಬಗೆಯ ಬಂಧನವೂ ಇತ್ತು.

ಎಂಟುಮುಕ್ಕಾಲು ಗಂಟೆ ಹೊತ್ತಿಗೆ ಮೆನೇಜರ್ ನಮ್ಮ ಸಮೀಪಕ್ಕೆ ಬಂದರು. ನನಗೆ ತುಂಬಾ ನಿರಾಶೆಯಾಯಿತು. ಅವರು ನಿನ್ನೆ ನನ್ನ ಭುಜದ ಮೇಲೆ ಕೈ ಇಟ್ಟಿದ್ದ ಮಹಾಶಯರಾಗಿರಲಿಲ್ಲ. ಮೆನೇಜರ್ ಕೈಯಲ್ಲಿ ಕಾಗದದ ಪಟ್ಟಿಯೊಂದಿತ್ತು. ಮೃಗಾಲಯದಲ್ಲಿ ತಿನ್ನಲು ಏನಾದರೂ ಸಿಕ್ಕಿದರೆ ಸಾಕೆಂದು ಯಾಂತ್ರಿಕವಾಗಿ ಪಂಜರದ ಸಲಾಕೆಗಳ ಕಡೆಗೆ ಓಡಿಬಂದು ಮುತ್ತಿಕೊಳ್ಳುವ ರೀತಿಯಲ್ಲಿ ನಾವು ಮೆನೇಜರರನ್ನು ಸುತ್ತುಗಟ್ಟಿದೆವು. ಒಂದು ಕ್ಷಣ ಅವರು ನಮ್ಮೆಲ್ಲರ ಕಡೆ ದೃಷ್ಟಿ ಹಾಯಿಸಿ ನೋಡಿದರು. ನಮ್ಮ ಭಾವಹೀನ ಮುಖಗಳನ್ನು ನೋಡಿ ಅವರಿಗೂ ಹೆದರಿಕೆಯಾಗಿರಬೇಕು. ಕೂಡಲೇ ತಮ್ಮ ಕೈಯಲ್ಲಿದ್ದ ಕಾಗದದ ಪಟ್ಟಿಯ ಕಡೆಗೆ ದೃಷ್ಟಿ ಹೊರಳಿಸಿ ಹೆಸರುಗಳನ್ನು ಓದತೊಡಗಿದರು.

ಹಿಂದಿನ ರಾತ್ರಿ ಯಾರು ಯಾರು ಕೆಲಸ ಮಾಡಿದ್ದರೋ ಅವರನ್ನೆಲ್ಲ ಈಗಲೂ ಆರಿಸಿಕೊಳ್ಳಲಾಗಿತ್ತು. ಅವರನ್ನು ಬಿಟ್ಟು ಇನ್ನು ಮೂವರನ್ನು ಮಾತ್ರ ಇಂದಿನ ಕೆಲಸಕ್ಕೆ ಆರಿಸಿಕೊಳ್ಳಲಾಗಿತ್ತು. ಇಬ್ಬರು ಆಂಗ್ಲ ಯುವಕರು ಮತ್ತು ಎಲ್ಲರಿಗಿಂತ ಮುಂದೆ ನಿಂತಿದ್ದು ಪದೇ ಪದೇ ಮೆನೇಜರರ ಕಿವಿಯಲ್ಲಿ ಏನೋ ಕುಸುಕುಸ ಎನ್ನುತ್ತಿದ್ದ ಒಬ್ಬ ದಕ್ಷಿಣ ಆಫ್ರಿಕಾದ ವಿದ್ಯಾರ್ಥಿ.

ಮನೇಜರರು ನಮ್ಮ ಕಡೆ ಸಹಾನುಭೂತಿಯ ದೃಷ್ಟಿಯಿಂದ ನೋಡುತ್ತಾ, ಇವೊತ್ತು ಇಷ್ಟೇ ಜನ ...ನೀವು ನಾಳೆ ಬನ್ನಿ, ಕೆಲವರ ಅಗತ್ಯ ಬಿದ್ದರೂ ಬೀಳಬಹುದು" ಎಂದರು.

ಗುಂಪಿನಿಂದ ಮೂರು ನಾಲ್ಕು ಜನ ಯುವಕರು ಮುಂದೆ ನುಗ್ಗಿ ಮನೇಜರರ ಜೊತೆಗೆ ಚರ್ಚೆಗೆ ನಿಂತರು. ಆದರೆ ಅವರು ಅಸಹಾಯಕ ಭಾವದಿಂದ ಕೈ ಆಡಿಸಿಬಿಟ್ಟು ಮುಗುಳ್ನಗುತ್ತಾ ನಮ್ಮ ಕಡೆ ನೋಡಿಕೊಂಡು ಒಳಗೆ ಹೊರಟುಹೋದರು

ಇನ್ನು ನಿರೀಕ್ಷಿಸಿ ಪ್ರಯೋಜನವಿರಲಿಲ್ಲ. ಆದರೂ ಇದರ ಬಗ್ಗೆ ನಮ್ಮಲ್ಲಿ ಯಾರಿಗೂ ವಿಶ್ವಾಸವಿಲ್ಲ. ಮನೇಜರರು ಹೋದಮೇಲೂ ನಾವು ನಮ್ಮ ಸ್ಥಳ ಬಿಟ್ಟು ಕದಲಿರಲಿಲ್ಲ. ಕಳೆದ ಎರಡು ನಿಮಿಷಗಳಲ್ಲಿ ಏನು ನಡೆಯಿತು. ಅದಿನ್ನೂ ಅಪೂರ್ಣ, ಅದೊಂದು ಅವಾಸ್ತವಿಕ ಸತ್ಯ, ಆದರೆ ಅದಕ್ಕೂ ನಮಗೂ ಸಂಬಂಧವಿಲ್ಲ ಎನ್ನುವ ರೀತಿಯಲ್ಲಿ ನಾವು ಇನ್ನು ಬಾಕಿ ಉಳಿದಿರುವ ಸಾಧ್ಯತೆಯ ನಿರೀಕ್ಷೆಯಲ್ಲಿದ್ದೆವು; ನಮಗಾಗಿ ಬಾಗಿಲು ತೆರೆಯುವ ಪ್ರಸಂಗ ಬಂದರೂ ಬರಬಹುದು... ಮೂರು ಅಥವಾ ನಾಲ್ಕು ಷಿಲ್ಲಿಂಗಿನ ಟಿಕೆಟ್ ತೆಗೆದುಕೊಂಡು ಲಂಡನ್ನಿನ ಮೂಲೆ ಮೂಲೆಯಿಂದ, ದೂರದೂರದಿಂದ, ಟ್ಯೂಬ್ ರೈಲಿನಲ್ಲಿ ಪ್ರಯಾಣಮಾಡಿ ಬಂದವರೇ ನಮ್ಮಲ್ಲಿ ಬಹುಮಂದಿ ಇದ್ದರು. ಜೊತೆಗೆ ನಾವು ನಮ್ಮ ಕೈಯಲ್ಲಿ ಒಂದೊಂದು ಚೀಲ ತಂದಿದ್ದೆವು, ಅದರಲ್ಲಿ ರಾತ್ರಿಯ ಡ್ಯೂಟಿಗೆ ಬೇಕಾಗುವ ಬಟ್ಟೆ ಹಾಗೂ ತಿನ್ನಲು ಒಂದಿಷ್ಟು ತಿಂಡಿ ಇವು ಇದ್ದುವು. ಮುಂದಿನ ರೈಲಿನಲ್ಲಿ ನಾವು ಹಿಂದಕ್ಕೆ ಹೋಗಬೇಕಾಗಬಹುದು ಎಂಬ ವಿಚಾರ ನಮ್ಮ ಪೈಕಿ ಯಾರಿಗೂ ಬಂದಿರಲಿಲ್ಲ. ಪೈಪಿನಿಂದ ಒಂದು ಕಡೆ ನೀರು ಹರಿಯುತ್ತಿದೆ. ಹಳ್ಳ ಕೊಳ್ಳಗಳಲ್ಲಿ ಸೇರಿರುವ ಕೊಚ್ಚೆ ಬೆಳುದಿಂಗಳಲ್ಲಿ ಮಿನುಗುತ್ತಿದೆ, ಅತ್ತ ನಾಲೆಯಲ್ಲಿ ಒಂದು ಖಾಲಿ ಬಾಟ್ಲಿ ಬಿದ್ದಿದೆ. ನಮ್ಮ ಯೋಚನೆ ಎಲ್ಲಿಯ ತನಕ ಹೋಗಿದೆಯೆಂದರೆ ಈ ಖಾಲಿ ಬಾಟ್ಲಿ ಇಲ್ಲಿ ಏಕೆ ಬಿದ್ದಿದೆ ಎಂದು ನಾವು ಯೋಚಿಸುತ್ತಿದ್ದೇವೆ ...ಹೀಗೆ ನಮ್ಮ ಗಮನ ಈ ಕಡೆ ಆ ಕಡೆ, ಅದರ ಔಚಿತ್ಯ ಅನೌಚಿತ್ಯದ ಕಡೆಗೆ ಹರಿದು ನಾವು ಇಲ್ಲಿ ಏಕೆ ಬಂದಿದ್ದೇವೆ ಎಂಬುದನ್ನೂ ಮರೆತು ನಿಂತಿದ್ದೇವೆ. ಕೆಲವು ನಿಮಿಷಗಳಿಗೆ ಮುಂಚೆ ನಮಗೆ ಕೆಲಸ ಸಿಗಲಿಲ್ಲವಲ್ಲ ಎಂಬ ದುಃಖ ನಮಗೆ ಆಗಿತ್ತು. ಅದು ಈಗ ಒಂದು ವಿಕೃತ ಭಾರವಾಗಿ ನಮ್ಮ ಕಾಲುಗಳನ್ನು ಸುತ್ತಿಕೊಂಡಿರುವಂತೆ ಭಾಸವಾಗುತ್ತಿದೆ. ಹೀಗೆ ಭಾರವಾಗಿರುವ ಕಾಲುಗಳನ್ನು ಮತ್ತೆ ಎಳೆದುಕೊಂಡು ನಾವು ಹೋಗಬೇಕಾಗಬಹುದು.

ಈ ಕ್ಷಣದಲ್ಲಿ ಹಸಿವು, ನಿರಾಶೆ ಇವೆರಡನ್ನು ಬಿಟ್ಟರೆ ನಮ್ಮ ಮನಸ್ಸಿನಲ್ಲಿ ಬೇರೆ ಯಾವುದರ ಗೊಡವೆಯೂ ಇಲ್ಲ.

ಇದೆಲ್ಲ ಕೆಲವು ನಿಮಿಷಗಳ ಮಟ್ಟಿಗೆ. ಬಹುಬೇಗ ಆ ಸ್ಥಿತಿ ಕಳೆದು ನಮ್ಮ ನಮ್ಮ ವಿಚಾರಕ್ಕೆ ನಾವು ಬಂದೆವು. ಗುಂಪಾಗಿ ನಿಂತಿದ್ದವರು ನಿರಾಶೆಯಿಂದ ಭಾರವಾಗಿ ನಿಟ್ಟುಸಿರು ಬಿಟ್ಟು ಗೊಣಗಿಕೊಂಡೆವು. ನಿಟ್ಟುಸಿರಿನ ಹಿಂದೆಯೇ ಅಶ್ಲೀಲ ಹಾಗೂ ನಿರರ್ಗಳ ಬೈಗುಳಗಳ ಸುರಿಮಳೆಯೂ ಆಯಿತು. ಕೊನೆಗೆ ಅವರವರ ದಾರಿ ಹಿಡಿದು ಚದುರತೊಡಗಿದರು.

ನಾವು ಮೂವರು ಮಾತ್ರ ಆ ಆವರಣದ ಒಳಗೇ ಇನ್ನೂ ಅನಿಶ್ಚಿತ ರೂಪದಲ್ಲಿ ನಿಂತಿದ್ದೆವು. ನನ್ನ ಹಿಂದೆ ಲಘುವಾಗಿ ಸರಸರ ಶಬ್ದ ಕೇಳಿಸಿತು.

...ಬ್ಲಡೀ ಬಾಸ್ಟರ್ಡ್! ಮೊದಲನೆಯ ವ್ಯಕ್ತಿ ಮೆಲುದನಿಯಲ್ಲೇ ಗಡುಸಾಗಿ ಹೇಳಿದ. ನಿಂತಿದ್ದವನು ಮುಂದೆ ಬಂದ. ಆದರೆ ಭಯಭೀತ ಸ್ಥಿತಿಯಲ್ಲಿ. ಭಯಗ್ರಸ್ತ ಆಶಂಕಾಪೂರ್ಣ ದೃಷ್ಟಿಯನ್ನು ನಾಲ್ಕೂ ಕಡೆ ಹಾಯಿಸಿ ಪೆಟ್ಟಿಗೆಗಳಲ್ಲಿ ಜೋಡಿಸಿಟ್ಟಿದ್ದ ಬಾಟ್ಲಿಗಳ ರಾಸಿ ಯಿಂದ ಒಂದು ಸೋಡಾ ಬಾಟ್ಲಿಯನ್ನು ತೆಗೆದು – ಅದನ್ನು ಕುಡಿಯತೊಡಗಿದ. ಬಲವಂತದಿಂದ ಇನ್ನೊಂದು ಬಾಟ್ಲಿಯನ್ನು ಮೂರನೆಯ ವ್ಯಕ್ತಿಯ ಕೈಗೆ ಒಪ್ಪಿಸಿ ಹೇಳಿದ: "ಕುಡಿಯಯ್ಯಾ, ಈ ಮಕ್ಕಳಿಗೆ ಆದರ ಸುಳಿವೇ ಸಿಗುವುದಿಲ್ಲ."

ನೀಗ್ರೋ ವಿದ್ಯಾರ್ಥಿಯಂತೆ ಕಾಣುತ್ತಿದ್ದ ಮೂರನೆಯ ವ್ಯಕ್ತಿ ಬಾಟ್ಲಿಯನ್ನು ತೆಗೆದು ಕೊಳ್ಳಲು ಹಿಂಜರಿಯುತ್ತಿದ್ದ. ಆಮೇಲೆ ಅವನಿಗೆ ಅದೇನು ಯೋಚನೆ ಬಂತೋ ಏನೋ. ಒಮ್ಮೆ ತಲೆಯನ್ನು ಲಘುವಾಗಿ ಕೊಡವಿ. ಹಾಲು ಕುಡಿಯುವ ಮಗುವಿನಂತೆ ಬಾಟ್ಲಿ ಯನ್ನು ಎರಡೂ ಕೈಗಳಿಂದ ಹಿಡಿದುಕೊಂಡು ತುಟಿಗೆ ಹಚ್ಚಿದ. ದೀರ್ಘವಾಗಿ ಒಮ್ಮೆ ಹೀರಿ ಮೊಣಕೈಯಿಂದ ಬಾಯಿ ಒರೆಸಿಕೊಂಡು ಬಾಟ್ಲಿಯನ್ನು ನನ್ನ ಮುಂದೆ ಇಟ್ಟುಬಿಟ್ಟ.

– ನಾನು ಇಲ್ಲಿಗೆ ಬಂದಿರುವುದು ಇದು ಮೂರನೆಯ ಸಲ. ನಾಳೆ ಬಾ, ಕೆಲಸ ಕೊಡು ತ್ತೇನೆ ಎಂದು ಭರವಸೆ ಕೊಟ್ಟಿದ್ದ ಮಹಾಶಯ ಇವೊತ್ತು ಕಾಣಲಿಲ್ಲ.

– ನಾಳೆಯೂ ಹೀಗೆಯೇ ಆಗುತ್ತದೆ. ಹೊಸಬ ಬರುತ್ತಾನೆ, ಇವೊತ್ತು ರಾತ್ರಿ ನಾವು ಬಂದಿದ್ದವರು ಎಂದು ಅವನಿಗೆ ತಿಳಿಯುವುದೇ ಇಲ್ಲ.

– ನಾಳೆ ಯಾರು ಬರುತ್ತಾರೆ? ನಾನಂತೂ ಈ ಕಡೆ ತಲೆಹಾಕುವುದಿಲ್ಲ ...ಡ್ಯಾಮ್ ದಿಸ್.

ಮೊದಲ ವ್ಯಕ್ತಿ ತನ್ನ ಓವರುಕೋಟಿನ ಗುಂಡಿಗಳನ್ನು ಬಿಚ್ಚಿಬಿಟ್ಟ. ಇಷ್ಟು ಸೆಖೆಯಲ್ಲಿ ಓವರುಕೋಟು ಹಾಕಿದ್ದಾನಲ್ಲ ಎಂದುಕೊಳ್ಳುತ್ತಿದ್ದ ನನಗೆ ಇದರಿಂದ ಆಶ್ಚರ್ಯವಾಗ ಲಿಲ್ಲ. ಅವನ ವ್ಯಕ್ತಿತ್ವ ಹಾಗೂ ಅವನ ಆ ಓವರುಕೋಟು. ಇವೆರಡೂ ಎಷ್ಟು ಒಂದ ಕ್ಕೊಂದು ಪೂರಕವಾಗಿದ್ದುವು ಎಂದರೆ, ಅವೆರಡನ್ನು ಪ್ರತ್ಯೇಕಿಸುವುದು ಆಶ್ಚರ್ಯದ ಸಂಗತಿಯಾಗಿತ್ತು. ಅವನೊಬ್ಬ ಹೃಷ್ಟ-ಪುಷ್ಟ ಯುವಕ. ಚಿಕ್ಕದೊಂದು ಗಡ್ಡವೂ ಇತ್ತು. ಆದರ ಹಿಂದಿನಿಂದ ಕಣ್ಣುಗಳು ಒಣಗಿಕೊಂಡು ಮಿಕಮಿಕ ಎನ್ನುತ್ತಿದ್ದುವು. ಬೇಟೆಯ ಭೀತಿಗೊಳಗಾಗಿರುವ ಪ್ರಾಣಿಗಳ ಕಣ್ಣುಗಳಲ್ಲಿ ಕಾಣುವಂತಹ ಒಂದು ಕಂಪನ ಆ ಕಣ್ಣು ಗಳಲ್ಲಿ ಕಾಣುತ್ತಿತ್ತು. ಹಾಲಿವುಡ್ ಚಿತ್ರಗಳಲ್ಲಿ ಬರುವ ಖಳನಾಯಕನಿಗೆ ಹೋಲುವ ಅವನ ಢಂಗು-ಡೌಲು ಕತ್ತಲೆಯಲ್ಲಿ ಹೊಸಬರಿಗೆ ಸಾಕಷ್ಟು ಭಯಾನಕವಾಗಿ ಕಾಣು ವಂತಿತ್ತು.

ನಾವು ನಿಧಾನವಾಗಿ ಕಾಲೆಳೆಯುತ್ತಾ ನಾರ್ತ್ ಎಕ್ಸನ್‌ದ ಸೇತುವೆಯನ್ನು ದಾಟಿ ಬಂದಿದ್ದೆವು. ಲಂಡನ್ನಿನ ಡಬಲ್‌ಡೆಕರ್ ಬಸ್ಸು ನಮ್ಮನ್ನು ಹಾದುಕೊಂಡು ಹೋಯಿತು.

ಆಗಸ್ಟ್ ತಿಂಗಳ ಒಣಗಿದ ಎಲೆಗಳು ಬಹಳ ದೂರದ ವರೆಗೆ ಬಸ್ಸಿನ ಹಿಂದೆ ಅಲೆಯಂತೆ ಹಾರಿಹೋಗುತ್ತಿದ್ದುವು.

ಮೂರನೆಯ ವ್ಯಕ್ತಿ, ಆ ನೀಗ್ರೋ ಯುವಕ. ಈಗಲೂ ಉದಾಸನಾಗಿದ್ದ. ಏನೊಂದೂ ಮಾತನಾಡದೆ ತಲೆ ತಗ್ಗಿಸಿಕೊಂಡು ರಸ್ತೆಯನ್ನೇ ನೋಡುತ್ತಾ ಬರುತ್ತಿದ್ದ.

– ಲಂಡನ್ನಿನಲ್ಲಿ ಯಾವಾಗಿಂದ ಇದ್ದೀಯಾ? – ಗಡ್ಡದ ಯುವಕ (ತನ್ನ ಹೆಸರು ವಿಲೀ ಎಂದು ಆಮೇಲೆ ಅವನು ತಿಳಿಸಿದ್ದ) ನೀಗ್ರೋ ಯುವಕನ ಹೆಗಲ ಮೇಲೆ ಕೈ ಇಡುತ್ತಾ ಕೇಳಿದ.

ಅವನು ಸುಮ್ಮನೆಯೇ ಇದ್ದ

– ಎಲ್ಲಿಂದ ಬಂದಿದ್ದೀಯೆ?

– ದಕ್ಷಿಣ ಆಫ್ರಿಕಾದಿಂದ; ಇಲ್ಲಿ ಓದುತ್ತಿದ್ದೇನೆ.

ಪ್ರಾಯಶಃ ಮಾತನ್ನು ಅವನು ಅಲ್ಲಿಗೇ ಮುಗಿಸಬಯಸುತ್ತಿದ್ದ. ಜೇಬಿನಿಂದ ಸಿಗರೇಟಿನ ಪ್ಯಾಕೆಟ್ ತೆಗೆದು ನಮ್ಮಿಬ್ಬರ ಮುಂದೆ ಹಿಡಿದ. ನಾವು ಅವನಿಗೆ ಧನ್ಯವಾದ ಹೇಳಿ ದೃಷ್ಟಿ ಹೊರಳಿಸಿದೆವು. ಪ್ಯಾಕೆಟ್ಟಿನಲ್ಲಿ ಅದೇ ಕೊನೆಯ ಸಿಗರೇಟ್. ನಮಗೆ ಅದು ಬೇಕೆನಿಸಿದ್ದರೂ ಅದನ್ನು ತೆಗೆದುಕೊಳ್ಳುವುದು ಶಿಷ್ಟಾಚಾರವಾಗಿರಲಿಲ್ಲವೆಂದೇ ಹೀಗೆ ಮಾಡಬೇಕಾಯಿತು. ಆದರೆ ಹೆಚ್ಚು ಕಾಲ ಆ ಶಿಷ್ಟಾಚಾರದ ಪ್ರಜ್ಞೆ ಉಳಿಯಲಿಲ್ಲ. ಸ್ವಲ್ಪ ಹೊತ್ತಿನಲ್ಲಿಯೇ ನಾವು ಮೂವರೂ ಸರದಿಯ ಪ್ರಕಾರ ಆ ಒಂದೇ ಸಿಗರೇಟನ್ನು ಸೇದುತ್ತಿದ್ದೆವು.

ನಮ್ಮ ಮುಂದೆ ಇದ್ದುದು, ಲಂಡನ್ನಿನ ರಾತ್ರಿ – ಘನೀಭೂತ, ಮಲಿನ ಪ್ರಶಾಂತ. ಅದು ಪಟ್ಟಣದ ಹೊರ ಅಂಚಿನ ಜನಸಂಚಾರವಿಲ್ಲದ ಬಿಕೋ ಎನ್ನುತ್ತಿದ್ದ ರಸ್ತೆ. ಜನ ಸಂಚಾರ ಇರಲಿಲ್ಲ ಅಷ್ಟೆ. ಆದರೆ ಹಾಳು ರಸ್ತೆಯೇನಲ್ಲ. ಎಲೆಗಳ ಸರ್‌ಸರ್ ಶಬ್ದ. ಹಳೆಯ ಮನೆಗಳ ಸುತ್ತುಮುತ್ತಲಿನ ದುರ್ಗಂಧ – ಕೊಚ್ಚೆಯ ಮಧ್ಯೆ ಹಲವು ನಿರ್ಜೀವ ಪದಾರ್ಥಗಳನ್ನು ನಾವು ಎಡವಿಕೊಂಡು ಹೋಗುತ್ತೇವೆಯೇನೋ ಎಂದು ಭಾಸವಾಗು ತ್ತಿತ್ತು. ಆದರೆ ನಿಜಕ್ಕೂ ಹೇಳುವುದಾದರೆ ರಾತ್ರಿಯ ಗಾಳಿ ಹಾಗೂ ಮಧ್ಯೆ ಮಧ್ಯೆ ನಾವು ಹಾದುಹೋಗುತ್ತಿದ್ದ ಲ್ಯಾಂಪ್‌ಪೋಸ್ಟ್ ಗಳನ್ನುಬಿಟ್ಟು ಬೇರೇನೂ ಅಲ್ಲಿ ಇರಲಿಲ್ಲ; ನಾವಷ್ಟೇ ಆ ನಿರ್ಜನ ಪ್ರದೇಶದಲ್ಲಿ ನಡೆದು ಹೋಗುತ್ತಿದ್ದೆವು.

– ನೀನು ಎಲ್ಲಿಗೆ ಹೋಗುತ್ತಿದ್ದೀಯ?

– ವಾರನ್ ಸ್ಟ್ರೀಟ್, ಅವನು ಹೇಳಿದ – ಕಳೆದ ಎರಡು ದಿನಗಳಿಂದಲೂ ಬರು ತ್ತಿದ್ದೇನೆ. ಈ ತನಕ ಇಲ್ಲಿಗೆ ಬಂದುಹೋಗಲಿಕ್ಕೆಂದೇ ಐದು ಬಿಲ್ಲೆಗಳು ಖರ್ಚಾಗಿಹೋಗಿವೆ. ಇಷ್ಟು ಹಣ ಇದ್ದಿದ್ದರೆ ನಾನು ಟೆನಿಸ್ ಆಡಲಾದರೂ ಹೋಗಬಹುದಿತ್ತು.

ಈ ಸಮಯದಲ್ಲಿ ಟೆನಿಸ್ ಆಟದ ಪ್ರಸ್ತಾಪ ಬಂದುದು ಸ್ವಲ್ಪ ವಿಚಿತ್ರವೇ ಆಗಿತ್ತು.

ಕಳೆದ ಕೆಲವು ದಿನಗಳಿಂದ ಅವನು ಹೊಟ್ಟೆ ತುಂಬ ಊಟ ಸಹ ಮಾಡಿರಲಾರ ಎಂಬುದು ಅವನ ಮುಖದಿಂದಲೆ ತಿಳಿಯುತ್ತಿತ್ತು.

– ನನ್ನ ಸ್ನೇಹಿತನಿಗೆ ಕೆಲಸ ಸಿಕ್ಕಿದೆ – ನೀಗ್ರೋ ವಿದ್ಯಾರ್ಥಿ ಅತ್ಯಂತ ಉತ್ಸಾಹಪೂರ್ಣವಾಗಿ ಹೇಳಿದ. ನಾವಿಬ್ಬರೂ ಒಟ್ಟಿಗೆ ಇದ್ದೇವೆ. ಪ್ರಾಯಶಃ ನಾಳೆ ಅವನು ನನಗೆ ಕೆಲವು ಷಿಲಿಂಗ್‌ಗಳ ಸಾಲ ಕೊಡಬಹುದು.

– ಡ್ಯಾಮ್ ಹಿಮ್ ಇಫ್ ಹಿ ಡಸನ್ಟ್, ವಿಲೀ ಧ್ವನಿ ಎತ್ತಿ ಹೇಳಿದ. ನಾನಂತೂ ನಾಳೆ ಏನಾದರೂ ಬರುವುದಿಲ್ಲ... ಪ್ಲೀಸ್ ಕಮ್, ಯಾವುದೋ ಮ್ಯಾನೇಜರನನ್ನು ಅಣಕಿಸುವ ರೀತಿಯಲ್ಲಿ ಹೇಳಿ ಮುಖ ಸಿಂಡರಿಸಿಕೊಂಡ. ಟುಮಾರೋ ಬಿ ಡ್ಯಾಮ್ಡ್. ನಾಳೆ ನೀನು ಬರುತ್ತೀಯೇನು? ಅವನು ಮೊದಲ ಬಾರಿಗೆ ನನ್ನ ಕಡೆ ತಿರುಗಿ ಕೇಳಿದ.

ಬಂದರೂ ಬರುತ್ತೇನೆ – ನಾನು ಬೇಕೆಂದೇ ಅವನನ್ನು ಇನ್ನಷ್ಟು ರೇಗಿಸುವ ದೃಷ್ಟಿಯಿಂದ ಹೇಳಿದೆ. ಈ ಸಮಯದಲ್ಲಿ ಅವನು "ನಾಳೆ"ಯ ಮಾತು ತೆಗೆದಿದ್ದುದು ನನ್ನ ಮಟ್ಟಿಗೆ ತುಂಬಾ ದುಃಖದ ವಿಚಾರವೇ ಆಗಿತ್ತು.

– ಈ 'ಮಕ್ಕಳು' ಎಷ್ಟು ಕೊಡುತ್ತಾರೆ?

– ಎರಡೂವರೆ ಪೌಂಡ್, ನೀಗ್ರೋ ವಿದ್ಯಾರ್ಥಿ ಹೇಳಿದ.

– ಪ್ರತಿದಿನ ಬೆಳಿಗ್ಗೆ?

– ಹಾಂ, ಪ್ರತಿದಿನ ಬೆಳಿಗ್ಗೆ. ಮಧ್ಯರಾತ್ರಿ ಹೊತ್ತಿಗೆ ಸ್ಯಾಂಡ್‌ವಿಚ್ ಮತ್ತು ಟೀ ಕೂಡ ಕೊಡುತ್ತಾರೆ ಅಂತ ನನ್ನ ಸ್ನೇಹಿತ ಹೇಳಿದ್ದ. ನೆನ್ನೆ ನಾವಿಬ್ಬರೂ ಒಟ್ಟಿಗೆ ಬಂದಿದ್ದೆವು. ಅವನನ್ನು ಕೆಲಸಕ್ಕೆ ತೆಗೆದುಕೊಂಡರು, ನನ್ನನ್ನು ತೆಗೆದುಕೊಳ್ಳಲಿಲ್ಲ.

– ಅವನು ನೀಗ್ರೋ ಏನು?

– ಇಲ್ಲ, ಬರ್ಮೀ.

– ನೀವು? ವಿಲೀ ನನ್ನ ಕಡೆಗೆ ತಿರುಗಿ ನನ್ನನ್ನು ಅಳೆದು ನೋಡುತ್ತಿರುವನೇನೋ ಎನ್ನುವ ದೃಷ್ಟಿಯಲ್ಲಿ ನೋಡುತ್ತಾ ಕೇಳಿದ. ನೀವು ಜಾಪಾನಿ ಏನು?

ನಾನು ತಲೆ ಅಲ್ಲಾಡಿಸಿದೆ, ಅಷ್ಟೆ. ಈ ಸಣ್ಣ ವಿಚಾರವಾಗಿ ನಾನು ಮಾತಿಗೆ ಇಳಿಯುವುದು ನಿರರ್ಥಕವೆನಿಸಿತು.

ಸ್ವಲ್ಪ ಹೊತ್ತು ನಾವು ಮೌನವಾಗಿ ಟ್ಯೂಬ್ ಸ್ಟೇಷನ್ ಕಡೆಗೆ ಹೋಗುತ್ತಿದ್ದೆವು. ಬಿಸಿ ಗಾಳಿಯ ರಭಸಕ್ಕೆ ಒಮ್ಮೊಮ್ಮೆ ನಾವು ಹೆದರಿ ನಡುಗುತ್ತಿದ್ದೆವು. ಆಗಲೇ ಎಲ್ಲಿಲ್ಲದ ಹಸಿವು ಅನುಭವಕ್ಕೆ ಬರುತ್ತಿತ್ತು. ಗಾಳಿಯು ಎಷ್ಟು ರಭಸದಿಂದ ಬೀಸುತ್ತಿತ್ತು ಎಂದರೆ ಲ್ಯಾಂಪ್ ಪೋಸ್ಟಿನ ದೀಪದ ಭಾಗವನ್ನು ಎಲ್ಲಿ ಕಿತ್ತುಕೊಂಡು ಹೋಗುತ್ತದೆಯೋ ಎನ್ನುವಂತಿತ್ತು.

– ಬಹಳ ಸೆಖೆ, ಕಳೆದ ಐದು ವರ್ಷಗಳಲ್ಲಿ ಇಷ್ಟು ಸೆಖೆ ನೋಡೇ ಇರಲಿಲ್ಲ.

– ಕಳೆದ ಐದು ವರ್ಷಗಳಿಂದ ಲಂಡನ್ನಿನಲ್ಲಿ ಇದ್ದೀಯೇನು?

– ಇನ್ನೂ ಹಿಂದಿನಿಂದ ಇರಬೇಕು... ಬಂದಾಗಿನಿಂದ ಹಲವು ಕೆಲಸಗಳನ್ನು ಮಾಡಿದ್ದಾಗಿದೆ. ಇನ್ನು ಜಾಸ್ತಿ ದಿನ ಇರುವುದಿಲ್ಲ.

– ಮನೇಗೆ ವಾಪಸ್ಸು ಹೋಗಬೇಕು ಅನ್ನಿಸ್ತಿದೆಯೇನು? ಎಲೀ ಕೇಳಿದ.

– ಮನೆ?–ನೀಗ್ರೋ ವಿದ್ಯಾರ್ಥಿ ಜಾರ್ಜನಿಗೆ 'ಮನೆ' ಎನ್ನುವ ಪದವೇ ವಿಚಿತ್ರವಾಗಿ ಕೇಳಿಸಿರಬೇಕು. ಮೊದಲ ಬಾರಿಗೆ ಅದು ಅವನ ಕಿವಿಗೆ ಬಿದ್ದಿರುವಂತೆ ಅವನಿಗಾಗಿರಬೇಕು. ಎಂದೇ ಅವನ ಧ್ವನಿಯಲ್ಲಿ ನಿರಾಶೆ ಮೂಡಿಬಂದಿತ್ತು. ನಾನು ಇಲ್ಲಿಯೇ ಇರಬೇಕೆಂದು ಕೊಂಡಿದ್ದೆ. ಆದರೆ ಅವರು ನಮ್ಮನ್ನು ದ್ವೇಷಿಸುತ್ತಾರೆ.

– ಅವರು ...ಆಹ್? ಎಲೀ ಉದ್ಗರಿಸಿದ.

ಅವರು ...ನಾವು ಸುತ್ತ ಒಮ್ಮೆ ನೋಡಿದೆವು. ಯಾರೂ ಇರಲಿಲ್ಲ. ಆದರೆ ಅವರು ಎಲ್ಲ ಕಡೆ ನಮ್ಮ ಜೊತೆಗೇ ಇದ್ದರು. ...ನಮ್ಮ ಹೊರಗೆ ಹೋಗೋ ಹಾಗೆ ನಮ್ಮ ಒಳಗೂ...

– ಜಾರಿಂಗ್ ಹಿಲ್‌ನಲ್ಲಿ ಆ ಧಾಳಿ ನಡೆದಾಗ ನೀನು ಇದ್ದೆಯಾ?

– ಇಲ್ಲ, ಆಗ ನಾನಿನ್ನೂ ಲಂಡನ್ನಿಗೆ ಬಂದಿರಲಿಲ್ಲ.

– ನಾನು ಅದೇ ಸ್ಥಳದಲ್ಲಿದ್ದೇನೆ. ಮೂರು ದಿನ ಒಬ್ಬ ಆಂಗ್ಲ ಯುವತಿ ಮನೆಯಲ್ಲಿ ತಲೆಮರೆಸಿಕೊಂಡಿದ್ದೆ. ಒಬ್ಬೊಬ್ಬ ನೀಗ್ರೋವನ್ನೂ ಆರಿಸಿ ಆರಿಸಿ 'ಲಿಂಚ್' ಮಾಡುತ್ತಿದ್ದರು. ನಾನು ಆ ಬಿಳಿ ಚರ್ಮದ ಹಾದರಗಿತ್ತಿ ಜೊತೆ ಹಾಯಾಗಿ ಮಲಗಿರುತ್ತಿದ್ದೆ. ನಾನು ಅವಳನ್ನು ಪ್ರೀತಿಸುತ್ತೇನೆಂದು ತಿಳಿದುಕೊಂಡಿದ್ದಳು... ಆದರೆ ನಾನು ಮಾತ್ರ ಆ ನಂತರ ಅವಳನ್ನು ಹೋಗಿ ನೋಡಲೇ ಇಲ್ಲ. ನಾನು ಅವಳ ಬಿಳಿ ಚರ್ಮದ ಜೊತೆಗೆ ಸೇಡು ತೀರಿಸಿಕೊಳ್ಳುತ್ತಿದ್ದೆ ಎಂದು ಅವಳಿಗೇನು ಗೊತ್ತು?... ಹಾಗೆ ಹೇಳಿದ ಅವನು ತನ್ನ ಕೈಯಿಂದ ಕೆಟ್ಟ ಸಂಕೇತ ಮಾಡಿ ತೋರಿಸಿದ.

– ಅದು ಅಶ್ಲೀಲವಾಗಿದ್ದುದಕ್ಕಿಂತ ಹೆಚ್ಚಾಗಿ ಜುಗುಪ್ಸೆಯಿಂದ ಕೂಡಿತ್ತು.

ದೂರದ ಕಾರ್ಖಾನೆಗಳ ಹೊಗೆಯ ಆಚೆ ಟ್ಯೂಬ್ ಸ್ಟೇಷನ್ನಿನ ಲೈಟುಗಳು ಮಿನುಗುತ್ತಿದ್ದುವು. ಭೂಮಿಯ ಒಂದು ಭಾಗ ಇದ್ದಕ್ಕಿದ್ದಂತೆ ಸೀಳಿಕೊಂಡು ಅದರ ಮಧ್ಯೆ ಮುತ್ತು ರತ್ನಗಳು ಫಳಫಳ ಎಂದು ಮಿನುಗುತ್ತಾ ಒಂದು ಪದರವಾಗಿ ಮೇಲೆ ಬಂದಿವೆಯೇನೋ ಎಂಬಂತೆ.

– ನೀನು ಇಲ್ಲಿ ಓದುತ್ತಿದ್ದೀಯಾ?

– ಹೂಂ... ಆದರೆ ಬೇಸಿಗೆಯ ದಿನಗಳಲ್ಲಿ ಒಂದಲ್ಲ ಒಂದು ಕೆಲಸ ಮಾಡುತ್ತೇನೆ. ಮೊದಲು ಡ್ಯಾನ್ಸ್‌ಗೆ ಹೋಗುತ್ತಿದ್ದೆ, ಜಾರ್ಜ್ ಹೇಳಿದ. ಅವನ ಧ್ವನಿ ಕೂಡ ತುಂಬಾ ಕುಗ್ಗಿತ್ತು. ಕೆಲಸ ಸಿಗದೆ ಹೋಗಿದ್ದ ನಿರಾಶೆ ಇನ್ನೂ ಸಂಪೂರ್ಣ ಹೋಗಿರಲಿಲ್ಲವೆಂಬುದು ಆದರಿಂದ ಸ್ಪಷ್ಟವಾಗಿತ್ತು.

– ಕಾಂಟಿನೆಂಟಿಗೆ ಏಕೆ ಹೋಗೋಲ್ಲ? ವಿಲೀ ಹೇಳಿದ – ನನ್ನ ಒಬ್ಬ ಸ್ನೇಹಿತ ಜರ್ಮನಿಗೆ ಹೋಗಿದ್ದ. ಅಲ್ಲಿ ಕೆಲಸದ ಕೊರತೇನೂ ಇಲ್ಲ. ಅಲ್ಲಿಯ ಹುಡುಗಿಯರು ಕರೀ ಚರ್ಮದ ಹಿಂದೆ ಓಡುತ್ತಾರೆ ಎಂದೂ ಕೇಳಿದ್ದೇನೆ... ಸ್ವಲ್ಪ ಸೂಚನೆ ಕೊಟ್ಟರೆ ಸಾಕು.

– ಹಿಂದಿನ ಯುದ್ಧವೇ ಇದಕ್ಕೆ ಕಾರಣವಿರಬೇಕು. ಜಾರ್ಜ್ ಹೇಳಿದ – ನನ್ನ ತಂದೆ ಕೆಲವು ವರ್ಷಗಳ ಹಿಂದೆ ಅಲ್ಲಿಗೆ ಹೋಗಿದ್ದರು. ಗಂಡಸರು ಎಲ್ಲೂ ಕಾಣಿಸುವುದೇ ಇಲ್ಲ ಎಂದು ಹೇಳುತ್ತಿದ್ದರು. ಎಲ್ಲಿ ನೋಡಿದರೂ ಹೆಂಗಸರೇ...

– ಓಹ್, ಹೌ ಐ ವಿಷ್ ಫಾರ್ ಅನದರ್ ವಾರ್... ಅನದರ್ ಅಂಡ್ ಅನದರ್... ವಿಲೀ ಹೇಳಿದ.

ಜಾರ್ಜ್ ಆಶ್ಚರ್ಯದಿಂದ ವಿಲೀ ಕಡೆಗೆ ನೋಡಿದ, ಅನಂತರ ನನ್ನ ಕಡೆಗೆ. ಏನೋ ಹೇಳಬೇಕೆಂದು ಅವನಿಗನಿಸಿರಬೇಕು. ಆಮೇಲೆ ಏನೋ ಯೋಚಿಸಿ ಒಮ್ಮೆ ತಲೆ ಕೊಡವಿಕೊಂಡ. ಏನೂ ಹೇಳಲಿಲ್ಲ.

ಹಾಗೆ ಸುಮ್ಮನಿದ್ದುದೂ ಸರಿಯೇ. ಲಂಡನ್ನಿನ ಆ ಪ್ರಶಾಂತ ಬೆಚ್ಚಗಿನ ರಾತ್ರಿಯಲ್ಲಿ 'ಯುದ್ಧ' ಬಹಳ ದೂರದ ವಿಚಾರವಾಗಿತ್ತು – ಅರ್ಥಹೀನ ಹಾಗೂ ಹಾಸ್ಯಾಸ್ಪದ. ಅದರ ಬಗ್ಗೆ ಚರ್ಚೆಗೆ ಇಳಿಯುವುದು ಈಗ ಸಮಯೋಚಿತ ವಾಗಿರಲಿಲ್ಲ. ಕೊನೆಗ ಇಲ್ಲಿ ಆದದ್ದೂ ಅಷ್ಟೆ. ಬಹುಬೇಗ ನಾವು ವಿಲೀಯ ಮಾತನ್ನು ಮರೆತಿದ್ದೆವು. ಅನಂತರ ನಾವು ಬೇರೆ ಬೇರೆ ದೇಶದ ಹುಡುಗಿಯರ ವಿಚಾರವಾಗಿ ಮಾತನಾಡುತ್ತಿದ್ದೆವು. ಹಳೆಯ ಹಸಿವಿನ ಜೊತೆಗೆ ಈಗ ಹೊಸದೊಂದು ಹಸಿವು ಇದ್ದಕ್ಕಿದ್ದ ಹಾಗೆಯೇ ಕಾಣಿಸಿಕೊಂಡಂತಿತ್ತು.

ನಾನು ಸ್ಪೇನಿಗೆ ಹೋಗಲು ಬಯಸುತ್ತಿದ್ದೆ. ಅಲ್ಲಿಯ ಹುಡುಗಿಯರು – ಆಹ್! ಪ್ಯಾಷನ್ ಅಂದರೆ ಅವರದು. ಆದರೆ ಹಾಳಾದವರು ವಿಸಾ ಕೊಡಲು ನಿರಾಕರಿಸಿದ್ದರು. ತಮ್ಮ ದೇಶದ ಹುಡುಗಿಯರ ಮರ್ಯಾದೆ ಬಗ್ಗೆ ಅವರು ವಿಶೇಷ ಗಮನ ಕೊಡುತ್ತಾರೆ.

ಸ್ಪೇನ್!... ಯಾವುದೋ ಹಳೆಯ ನೆನಪನ್ನು ಕೆದಕಿದ ಹಾಗೆ.

– ನೀನು ಸ್ಪೇನಿಗೆ ಹೋಗಿದ್ದೀಯೇನು?

– ನಾನು ಹೋಗಬೇಕೆಂದುಕೊಂಡಿದ್ದೆ – ಬಹಳ ಹಿಂದೆ.

– ಸಿವಿಲ್ ವಾರ್ ನಡೆದಾಗ?

– ಆಗ ನಾನು ಬಹಳ ಚಿಕ್ಕವನಿದ್ದೆ.

– ನಮ್ಮ ದೇಶದಲ್ಲಿಯೂ ಸಿವಿಲ್ ವಾರ್ ನಡೆದರೆ... ಜಾರ್ಜ್ ಏನೋ ಹೇಳ ಹೊರಟವನು ಅಷ್ಟಕ್ಕೇ ನಿಲ್ಲಿಸಿದ. ಅವನ ಗುಂಗುರು ಕೂದಲ ಮೇಲೆ ಬೆವರಿನ ಹನಿ ಮಿನುಗುತ್ತಿತ್ತು.

– ಐ ಡೋಂಟ್ ಲೈಕ್ ಸಿವಿಲ್ ವಾರ್ – ವಿಲೀ ಹೇಳಿದ.

ನಮ್ಮ ಮಾತು ಎಲ್ಲೆಲ್ಲೋ ಸುತ್ತುಹಾಕಿ ಮತ್ತೆ ಅಲ್ಲಿಗೇ ಬಂದು ನಿಲ್ಲುತ್ತಿತ್ತು. ಬೆಗಾಟೇಲ್ ಆಟದಲ್ಲಿ ಗೋಲಿ ಎಲ್ಲೆಲ್ಲೋ ಸುತ್ತುಹಾಕಿ ಕೊನೆಗೆ ಅದೇ ಸಂದಿನಲ್ಲಿ ಬಂದು

ಬೀಳುವ ಹಾಗೆ. ನಮಗೂ ಸಿವಿಲ್ ವಾರಿಗೂ ಏನೇನೂ ಸಂಬಂಧವಿರಲಿಲ್ಲ. ಲಂಡನ್ನಿನ ಆ ಪ್ರಶಾಂತ ಬೆಚ್ಚಗಿನ ರಾತ್ರಿಯಲ್ಲಿ ಯುದ್ಧದ ಮಾತು ನಮಗೆ ಸಂಬಂಧ ಪಡದ ದೂರದ ವಿಷಯವಾಗಿತ್ತು.

ರಸ್ತೆಯ ಎಡ ಭಾಗದಲ್ಲಿದ್ದ ಒಂದು ಹಳೆಯ ಪಡಖಾನೆಯಿಂದ ಜನರ ನಗು ಹಾಗೂ ಸಂಗೀತ ಬೆರೆತ ಶಬ್ದ ಕಿವಿಗೆ ಬೀಳುತ್ತಿತ್ತು. ಆ ಮದ್ಯಪಾನ ಗೃಹದ ಹಿಂಭಾಗದ ಕತ್ತಲು ಮೂಲೆಯಲ್ಲಿ ಒಬ್ಬರನ್ನೊಬ್ಬರು ಅಪ್ಪಿಕೊಂಡಿರುವ ಇಬ್ಬರ ನೆರಳು ಆಗಾಗ ಎದ್ದು ಕಾಣುತ್ತಿತ್ತು. ಇಬ್ಬರೂ ಪದೇ ಪದೇ ಹುರುಪುಗೊಳ್ಳುತ್ತಿದ್ದರು. ಮೇಲೆ ಎದ್ದುಕೊಂಡಿ ರುವ ಸ್ಕರ್ಟಿನ ಕೆಳಗಿನ ಒಂದು ಸುಂದರ ಕಾಲು ಆಗಾಗ ಕಂಪಿಸುತ್ತಿತ್ತು ಮತ್ತು ಹುಡು ಕಾಡುತ್ತಿರುವ ಪಿಪ್ಪಲಿ ಕೈಗಳ ಹಿಡಿತಕ್ಕೆ ಕೊನೆಗೆ ಸಿಗುತ್ತಿದ್ದ ದೃಶ್ಯ ಕಾಣುತ್ತಿತ್ತು.

– ಪಡೀರಿ ಒಂದಿಷ್ಟು ಬೀರ್ ಕುಡಿಯೋಣ. ಕುಡಿಯದೆ ನನಗೆ ನಿದ್ದೆಯೇ ಬರುವುದಿಲ್ಲ ಪೀಮು ವಿಲೀ ಹೇಳಿದ.

ನನಗಿದು ಒಂದು ಲಘು ಸಮಸ್ಯೆಯೇ ಆಯಿತು. ನನ್ನ ಜೇಬಿನಲ್ಲಿ ಕೊನೆಯದಾಗಿ ಎರಡು ಷಿಲಿಂಗ್ ಮಾತ್ರ ಇತ್ತು. ಜಾರ್ಜಿನ ಪರಿಸ್ಥಿತಿ ನನಗಿಂತ ಹೆಚ್ಚು ಉತ್ತಮ ವಾಗಿರುವಂತೆ ಕಾಣಲಿಲ್ಲ. ವಿಲೀಯ ಸಲಹೆಯನ್ನು ಕೇಳಲಿಲ್ಲವೆನ್ನುವಂತೆ ಕತ್ತಲೆಯಲ್ಲಿ ತನ್ನಷ್ಟಕ್ಕೇ ತಾನು ಶಿಳ್ಳು ಹಾಕಿಕೊಂಡು ಅವನು ಬರುತ್ತಿದ್ದ.

ವಿಲೀಗೆ ಇದು ಅರ್ಥವಾಗಿರಬೇಕು. ಜಾರ್ಜಿನ ಹೆಗಲ ಮೇಲೆ ಕೈ ಇಟ್ಟು ಅವನು ಹೇಳಿದ – ಯೋಚನೆ ಮಾಡಬೇಡ. ಇಲ್ಲಿಯ ಜನ ನನಗೆ ಪರಿಚಿತರಿದ್ದಾರೆ. ಹಿಂದೆ ನಾನು ಇಲ್ಲಿಗೆ ಆಗಾಗ ಬರುತ್ತಲೇ ಇದ್ದೆ.

ಜಾರ್ಜಿನ ಮುಖದಲ್ಲಿ ಹಿಂದೆ ಇದ್ದ ಉಪೇಕ್ಷೆ ಈಗ ಸಂಪೂರ್ಣ ಮಾಯವಾಗಿ ಒಂದು ರೀತಿಯ ಹುಡುಗು-ಉತ್ಸಾಹ ಮತ್ತು ಗೆಲುವು ಈಗ ಅವನ ಮುಖದಲ್ಲಿ ಒಮ್ಮೆಲೇ ಕಾಣುತ್ತಿತ್ತು.

– ನಾನು ಸ್ವಲ್ಪವೇ ಸ್ವಲ್ಪ ಜಿನ್ ತೆಗೆದುಕೊಳ್ಳುತ್ತೇನೆ: ನಾಳೆ ನನ್ನ ಸ್ನೇಹಿತ ಕೆಲವು ಷಿಲಿಂಗುಗಳನ್ನು ಸಾಲವಾಗಿ ಕೊಡಬಹುದು.

ನಮ್ಮ ಕಾಲುಗಳು ತಾವಾಗಿಯೇ ಆ ಮದ್ಯಪಾನಗೃಹದ ಕಡೆಗೆ ಹೊರಳಿದುವು.

ಬಾಗಿಲು ತೆಗೆದೊಡನೆಯೇ ಒಳಗಿನ ಹಲವು ಶಬ್ದಗಳ ಕಾವು ಏರಿದ್ದ ಉನ್ಮತ್ತ ಪ್ರವಾಹದಲ್ಲಿ ನಾವು ಸಿಕ್ಕಿಕೊಂಡಂತಾಯಿತು – ಸಿಗರೇಟುಗಳ ಹೊಗೆಯಲ್ಲಿ ಆ ಪರಸ್ಪರ ಕೂಗಾಟದ ಧ್ವನಿಗಳು ಸೇರಿ ಹೊರಗೆ ಹೋಗಲು ಸಾಧ್ಯವಾಗದೆ ಅಲ್ಲೇ ಘನೀಭೂತ ವಾಗಿದ್ದುವು. ಕುದಿಯುತ್ತಿರುವ ಕೆಟ್ಟ ನೀರು ಅಲ್ಲಿಯೇ ಘನೀಭೂತವಾಗುತ್ತಿರುವ ರೀತಿಯಲ್ಲಿ. ದೀಪದ ಬೆಳಕು ಇತ್ತು. ಆದರೆ ಹೊಗೆ ತುಂಬಿಕೊಂಡು ಒಬ್ಬರ ಮುಖ ಒಬ್ಬರಿಗೆ ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಜನ ಒಂದೊಂದು ಗುಡ್ಡೆಯಾಗಿ ಕಾಣುತ್ತಿದ್ದರೇ ಹೊರತು ಅವರನ್ನು ಪ್ರತ್ಯೇಕಿಸಿ ನೋಡುವುದು ಕಷ್ಟವಾಗಿತ್ತು.

ಕೆಳಮಾಳಿಗೆಯೊಂದಿತ್ತು. ಮೆಟ್ಟಿಲುಗಳನ್ನು ಇಳಿದು ಈ ಬೇಸ್‌ಮೆಂಟಿಗೆ ಹೋಗ ಬೇಕಾಗಿತ್ತು. ಕೆಳಗೆ ನರ್ತಿಸುತ್ತಿದ್ದ ಗಂಡು-ಹೆಣ್ಣುಗಳ ನೆರಳು ಆಗಾಗ ಆ ಮೆಟ್ಟಿಲುಗಳ ಮೇಲೆ ಕಾಣಿಸಿಕೊಳ್ಳುತ್ತಿತ್ತು. ಕೆಲವೊಮ್ಮೆ ಉದ್ದುದ್ದ ನೆರಳಾದರೆ ಕೆಲವೊಮ್ಮೆ ವಿಕಾರಾಕೃತಿಯ ನೆರಳುಗಳು: ಒಮ್ಮೊಮ್ಮೆ ತುಂಬಾ ಚಿಕ್ಕ ಚಿಕ್ಕ ಆಕಾರದ ನೆರಳುಗಳು ಸ್ವಚ್ಛ ತಿಳಿನೀರಿನ ಅಡಿಯಿಂದ ಮೇಲೆದ್ದು ಬಂದು ಮರುಕ್ಷಣದಲ್ಲಿಯೇ ಮುಳುಗಿಹೋಗುವ ಮೀನುಗಳಂತೆಯೂ ಕಾಣುತ್ತಿದ್ದುವು.

ನಾವು ಮೂಲೆಯ ಮೇಜಿನ ಮುಂದೆ ಎದುರು – ಬದಿರಾಗಿ ಕುಳಿತುಕೊಂಡೆವು. ಕೆಲವು ಸಮಯದ ನಂತರ ವಿಲೀ ತನ್ನ ಕೈಯಲ್ಲಿ ಬೀರಿನ ಮೂರು ಬಾಟ್ಲಿಗಳು ಹಾಗೂ ಗ್ಲಾಸುಗಳನ್ನು ಹಿಡಿದುಕೊಂಡು ಬಂದ. ನಾವು ಕುಡಿಯತೊಡಗಿದೆವು.

– ಹಿಂದೆ ನಾನು ಇಲ್ಲಿ ಕೆಲಸ ಮಾಡುತ್ತಿದ್ದೆ. ಕೆಲವು ತಿಂಗಳು ಇದ್ದೆ. ಆಮೇಲೆ ಬೇಡ ವಾಯಿತು. ಈ ಪಬ್ಬಿನ ಮಾಲೀಕ ಒಬ್ಬ ಇಟಾಲಿಯನ್. ಕೆಟ್ಟವನಲ್ಲ. ಆದರೆ ಬಹಳ ಹೆದರುತ್ತಾನೆ. ಈ ಕಡೆ ಬಂದರೆ ನಿಮಗೆ ಪರಿಚಯ ಮಾಡಿಸುತ್ತೇನೆ – ವಿಲೀ ಹೇಳಿದ.

– ಸಾಕಷ್ಟು ಟಿಪ್ಸ್ ಸಿಗ್ತಿದ್ದುವು ಅಂತ ತೋರುತ್ತೆ.

– ಆಂಗ್ಲರು ಜಾಸ್ತಿ ಕೊಡುವುದಿಲ್ಲ. ಆರು ಪೆನ್ನಿ ಕೊಟ್ಟರೆ ಹೆಚ್ಚು. ಆದರೆ ಕಾಂಟಿನೆಂಟಿನಿಂದ ಬರುವ ಟೂರಿಸ್ಟರ ಮಾತು ಬೇರೆ. ಅವರು ತುಂಬಾ ಉದಾರಿಗಳು. ಆದರೆ ತುಂಬಾ ಮೂರ್ಖರೂ ಹೌದು.

– ನನಗೆ ಯಾವ ಕೆಲಸ ಸಿಕ್ಕಿದರೂ ಸರಿ. ಮಾಡುತ್ತೇನೆ – ಜಾರ್ಜ್ ಹೇಳಿದ.

ಬೀರು ದೇಹದೊಳಗಿನ ಗಂಟುಗಳ ಮೂಲಕ ದಾರಿ ಮಾಡಿಕೊಂಡು ಒಳಗೆ ಹೋಗಿದೆ. ಈ ಮೊದಲು ಮೈಮುದುರಿಕೊಂಡು ಕುಳಿತಿದ್ದ ಪಕ್ಷಿ ಈಗ ರೆಕ್ಕೆ ಕೆದರಿಕೊಂಡು ಹಾರುವ ಆತುರದಲ್ಲಿದೆ.

– ನಾನೀಗ ಇಲ್ಲಿ ಹೆಚ್ಚು ದಿನ ಇರುವುದಿಲ್ಲ – ವಿಲೀ ಹೇಳಿದ – ನನ್ನ ಸ್ನೇಹಿತನೊಬ್ಬ ಜರ್ಮನಿಯಲ್ಲಿದ್ದಾನೆ. ಸಾಧ್ಯವಾದರೆ ಅಲ್ಲಿಗೆ ಹೋಗಬೇಕೆಂದಿದ್ದೇನೆ.

ವಿಲೀ ಗ್ಲಾಸು ಖಾಲಿ ಮಾಡಿದ ಮತ್ತು ಮೇಜಿನ ಮೇಲೆ ಅದನ್ನು ಬೋರಲುಮಾಡಿ ಇಟ್ಟುಬಿಟ್ಟ. ಅದರಿಂದ ಒಂದು ಹನಿಯಷ್ಟೂ ಕೆಳಗೆ ಬೀಳಲಿಲ್ಲ. ಬೀರಿನ ನೊರೆ ಗಡ್ಡದ ಮೇಲೆ ಕಾಣಿಸುತ್ತಿತ್ತು – ಮಂಜಿನ ಕಣದಂತೆ, ನೀರುನೀರಾಗಿ ಮತ್ತು ಬೆಳ್ಳಗೆ.

– ಜರ್ಮನಿಯೆಂದರೆ ನನಗೆ ಆಗದು, ಜಾರ್ಜ್ ಮತ್ತೆ ಹೇಳಿದ.

– ದೇರ್ ಈಜ್ ರಿಯಲ್ ಲೈಫ್. ಯಾವ ಮೂಲೆಯಲ್ಲಿ ನೋಡಿದರೂ ಯೌವನದಿಂದ ಕೂಡಿದ ತರುಣಿಯರು ನಿಂತಿರುತ್ತಾರೆ – ವಿಲೀ ಹೇಳಿದ.

– ಜರ್ಮನಿಯೆಂದರೆ ನನಗೆ ಆಗದು – ಜಾರ್ಜ್ ಹೇಳಿದ. ನನಗೆ ನಗು ಬಂತು, ನಗತೊಡಗಿದೆ.

ಜಾರ್ಜ್ ನನ್ನ ಕಡೆ ನೋಡಿದ. ಅವನ ಕಣ್ಣುಗಳು ತುಂಬಾ ವಿರಕ್ತಗೊಂಡಿದ್ದುವು.

– ಜನ ಒಂದೇ ತರಹ ಇದ್ದಾರೆ, ಎಲೀ ಹೇಳಿದ.

– ಆದರೆ ಆ ಜನ – ಜಾರ್ಜ್ ಸಂಜ್ಞೆ ಮಾಡಿದ – ಹೊರಗಡೆ, ಬಾಗಿಲಾಚೆ, ಸಾಕಷ್ಟು ಕತ್ತಲೆ ಇರುವ ಆ ಕಡೆ.

– ಅವರೂ ಅಷ್ಟೆ... ನೀನು ಸುಮ್ಮನೆ ಹೆದರುತ್ತೀಯೆ... ಎಲೀ ಹೇಳಿದ.

ಒಂದು ಕ್ಷಣದ ಮಟ್ಟಿಗೆ, ಗ್ಲಾಸಿನ ಮೇಲೆ ಇದ್ದ ಜಾರ್ಜನ ಕೈ, ಕೆಳಗೆ ಸರಿದುಕೊಂಡಿತು.

– ಯು ಆರ್ ಎ ರಾಟರ್. ಜಾರ್ಜ್ ಹೇಳಿದ.

ಅವನ ಆ ಧ್ವನಿಯಲ್ಲಿ ಏನು ವಿಶೇಷ ಇತ್ತೋ ಏನೋ ಎಲಿಯ ಮುಖ ಇದ್ದಕ್ಕಿದ್ದಂತೆ ಬಿಳುಚಿಕೊಂಡಿತು.

– ನೋಡು, ನಾನು ತುಂಬಾ ಕೆಟ್ಟ ಮನುಷ್ಯ. ಇನ್ನೊಮ್ಮೆ ಆ ಶಬ್ದ ಉಚ್ಚರಿಸಬೇಡ.

– ಓಹ್, ನಿಜಕ್ಕೂ? ...ಜಾರ್ಜನ ಧ್ವನಿ ಕಂಪಿಸುತ್ತಿತ್ತು – ಗಾಳಿಯ ಮಧ್ಯೆ ಹಗ್ಗದ ಮೇಲೆ ನಡೆಯುತ್ತಿರುವ ಮತ್ತು ಯಾವ ಸಮಯದಲ್ಲಿಯೋ ಏನೋ ಕೆಳಗೆ ಪಾತಾಳಕ್ಕೆ ಬೀಳಬಹುದೆನ್ನುವ ರೀತಿಯಲ್ಲಿತ್ತು ಆ ಧ್ವನಿ... ಪ್ರೆಸ್... ಯು ಆರ್ ಎ ರಾಟರ್.

ಎಲೀ ಗ್ಲಾಸನ್ನು ಕೈಯಲ್ಲೇ ಹಿಡಿದುಕೊಂಡು ಒಮ್ಮೆಲೆ ನಿಂತ – ಆಟದ ನಿಯಮಕ್ಕೆ ಬದ್ಧನಾಗಿ ನಿಲ್ಲುವಂತೆ.

– ಇನ್ನೊಮ್ಮೆ ಹೇಳಿ ನೋಡು – ಅವನ ಗ್ಲಾಸು ಜಾರ್ಜನ ತಲೆಯ ಸಮೀಪಕ್ಕೆ ಬಂದಿತ್ತು. ಗಾಜಿನ ಮೇಲೆ ಅಂಟಿಕೊಂಡಿದ್ದ ಬೀರಿನ ನೊರೆ ದೀಪದ ಬೆಳಕಿಗೆ ಮಿನುಗುತಿತ್ತು.

ಜಾರ್ಜ್ ತನ್ನ ಅರ್ಧ ಮುಚ್ಚಿದ ಕಣ್ಣುಗಳನ್ನು ಅವನ ಕಡೆಗೆ ಹೊರಳಿಸಿ ಹೇಳಿದ – ಎಸ್, ಯು ಆರ್ ಎ ರಾಟರ್ ಆಲ್ ರೈಟ್."

ಗ್ಲಾಸಿನ ಕೆಳಭಾಗದಲ್ಲಿ ಅವನ ತಲೆ ಅಲ್ಲಾಡುತ್ತಿತ್ತು. ಮನಷ್ಯನ ತಲೆ ದೇಹದಿಂದ ಪ್ರತ್ಯೇಕವಾಗಿ ಮಾತ್ರ ಈ ರೀತಿ ಕಂಪಿಸಲು ಸಾಧ್ಯವಿತ್ತು. ಅದು ನನಗೆ ತುಂಬಾ ಹಾಸ್ಯಾಸ್ಪದವಾಗಿ ಕಂಡಿತು.

ಎಲೀ ಬಹಳ ವಿಸ್ಮಯದಿಂದ ಅವನ ಕಡೆ ನೋಡಿದ ಮತ್ತು ನಗತೊಡಗಿದ – ನೀನು ಸರಿಯಾಗಿದ್ದೀಯಷ್ಟೆ... ಮ ಬಿ ಐ ಯಾಮ್ – ಹಾಗೆ ಹೇಳಿಕೊಂಡು ಅವನು ಕುರ್ಚಿಯ ಮೇಲೆ ಮತ್ತೆ ಕುಳಿತುಕೊಂಡ.

ನಾವು ಹೆಚ್ಚೇನೂ ಕುಡಿದಿರಲಿಲ್ಲ – ಆದರೆ ಯಾರೋ ನಮ್ಮ ಸುತ್ತುಮುತ್ತಲೂ ಒಂದು ಭಯಾನಕ ರೂಪದ ಜಾಲ ಬೀಸಿದ್ದರು. ಅದನ್ನು ಮುಟ್ಟಿದರೂ ಸಾಕು, ರಕ್ತ ಸುರಿಯುತ್ತದೆ ಎನ್ನುವ ಸ್ಥಿತಿ ಇತ್ತು.

ಸ್ವಲ್ಪ ಹೊತ್ತಿನ ನಂತರ ಪಬ್ಬಿನ ಮಾಲಿಕ ನಮ್ಮ ಮೇಜದ ಬಳಿ ಬಂದು ನಿಂತುಕೊಂಡ. ಗುಂಡುಗುಂಡಾದ ದೇಹ, ಒಳ್ಳೆ ಅಚ್ಚುಕಟ್ಟಾಗಿ ಕಾಣುತ್ತಿತ್ತು. ಹಳದಿಯ ಬಣ್ಣ, ಹಣೆಯ ಮೇಲೆ ಬಂದಿದ್ದ ಎಣ್ಣೆ ಹಚ್ಚಿದ್ದ ಗುಂಗುರು ಕೂದಲು.

– ಇನ್ನೂ ಬೇಕೇನು? ಅವನು ಹುಸಿನಗುತ್ತಾ ವಿಲೀಯ ಕಡೆ ನೋಡಿ ಕೇಳಿದ.

ಇನ್ನೂ ಇದೆ... ಆಮೇಲೆ ಕೊಡುವಿಯಂತೆ ವಿಲೀ ಹೇಳಿದ. ಅವನ ಸ್ವರದಲ್ಲಿ ಮೊದಲಿನ ಉತ್ಸಾಹ ಇರಲಿಲ್ಲ. ಆದರೆ ತಿರಸ್ಕಾರವನ್ನು ಅವನಿಂದ ಮುಚ್ಚಿಡಲು ಸಾಧ್ಯವಾಗಿರಲಿಲ್ಲ – ಇವರು ನನ್ನ ಸ್ನೇಹಿತರು.

ಇಟಾಲಿಯನ್ ನಮ್ಮ ಕಡೆಗೆ ನೋಡಿದ. ಆದರೆ ಅವನ ಕಣ್ಣುಗಳಲ್ಲಿ ನಮ್ಮನ್ನು ಭೇಟಿ ಮಾಡುವ ಯಾವ ಉತ್ಸುಕತೆಯೂ ಇದ್ದಂತೆ ಕಾಣಲಿಲ್ಲ.

ವಿಲೀ ನಮ್ಮಲ್ಲಿ ಕೆಲಸ ಮಾಡುತ್ತಿದ್ದ... ಅವನು ಒಂದು ರೀತಿಯ ಅಭಿಮಾನದಿಂದ ವಿಲೀಯ ಕಡೆ ನೋಡಿದ. ವಿಲೀನ ಹೋಲಿಸಿದರೆ ನೀವು ತುಚ್ಛರು ಎನ್ನುವ ಭಾವನ ಅವನಲ್ಲಿರುವಂತೆ ಕಂಡಿತು ಅವನ ಆ ನೋಟದಿಂದ.

– ಬಹಳ ದಿನಗಳಾಯಿತೇನು ಬಂದು? – ಅವನು ಕೇಳಿದ.

ಜಾರ್ಜ್ ಸುಮ್ಮನಿದ್ದ. (ಸದ್ಯ ದೇವರ ದಯದಿಂದ. ಅವನ ತಲೆ ಈಗ ಕಂಪಿಸುತ್ತಿಲ್ಲ) ಬರಿ ಗ್ಲಾಸು ನನ್ನ ಕೈಯಲ್ಲಿತ್ತು. ಅದನ್ನು ಕೈಯಲ್ಲಿ ಆಡಿಸುತ್ತಿದ್ದೆ. ನನ್ನ ಕೈಗಳೀಗ ಹಾಗೆಯೇ ನಿಂತುವು.

–ಕೆಲವು ದಿನಗಳಾಯಿತು, ಅಷ್ಟೆ. ಎಂದು ಹೇಳಿದೆ.

– ಈಜ್‌ಂಟ್ ಇಟ್ ಫೈನ್?

– ಇಟ್ ಈಜ್ ಫೈನ್... ನಾನು ಹೇಳಿದೆ.

..................

– ಯಾವುದಾದರೂ ಕೆಲಸ ಸಿಕ್ಕೀತೇ? ಹಾಗೆ ಕೇಳುತ್ತಾ ಅವನು ನನ್ನ 'ಕಮೀಜ'ನ ಕಾಲರ್ ನೋಡುತ್ತಿದ್ದ. ಅದರ ಮೇಲೆ ಎಷ್ಟು ದೇಶಗಳ ಧೂಳು ತುಂಬಿದೆಯೋ!

– ಇನ್ನೂ ಯಾವುದೂ ಸಿಕ್ಕಿಲ್ಲ...

– ವಿಲೀಗೆ ಕೆಲಸ ಸಿಗುತ್ತದೆ. ಆದರ ಯಾವುದೇ ಕಡೆ ನಿಲ್ಲುವುದಿಲ್ಲ. ಅವನು ವಿಲಿಯ ಕಡೆ ನೋಡಿ ಹೇಳಿದ. ಪ್ರೀತಿಯಿಂದ ಹಾಗೂ ಅವನ ಬಗ್ಗೆ ದೂರು ಕೊಡುವ ಧ್ವನಿಯಲ್ಲಿ.

– ನಾನು ನಿಮ್ಮಲ್ಲೇ ಕೆಲಸದಲ್ಲಿ ಇರುತ್ತಿದ್ದೆ. ಆದರೆ ನೀವು... ವಿಲೀ ಹೇಳಿದ.

ಇಟಾಲಿಯನ್ನನ ಮುಖ ಕಪ್ಪಿಟ್ಟಿತು. ಅವನು ಹೇಳಿದ – ನಿನಗೇನು ಗೊತ್ತಿಲ್ಲವೇ...

– ಓಹ್... ವಿಲೀ ಹೇಳಿದ – ನೀವೆಲ್ಲ ಒಂದೇ. ನನಗೆ ಗೊತ್ತಿಲ್ಲವೇ?

– ಬಹಳ ಸರಿ... ಜಾರ್ಜ್ ಹೇಳಿದ.

– ನಿನಗೆ ಗೊತ್ತಿದೆ... ಇಟಾಲಿಯನ್ ತುಂಬಾ ಆಗ್ರಹಪೂರ್ವಕವಾಗಿ ಹೇಳಿದ.

– ಇಲ್ಲ... ನನಗೊಂದೂ ಗೊತ್ತಿಲ್ಲ. ನನಗೆ ಡಾನ್ಸ್ ಮಾಡುವುದೊಂದೇ ಗೊತ್ತಿದೆ... ಎಂದು ವಿಲೀ ಹೇಳಿಕೊಂಡು ಎದ್ದು ನಿಂತ, ಮತ್ತು ತಾನು ಕುಳಿತಿದ್ದ ಕುರ್ಚಿಯನ್ನು ಹಿಂದಕ್ಕೆ ಜರುಗಿಸಿಬಿಟ್ಟ.

ಆದರೆ ಇಟಾಲಿಯನ್ ಕೂಡಲೇ ಹೋಗಿ ಅವನ ಹೆಗಲ ಮೇಲೆ ಕೈಹಾಕಿ ನಿಂತ. ಕಣ್ಣುಗಳಲ್ಲಿ ಅವನ ಪರಾಭವ ಎದ್ದು ಕಾಣುತ್ತಿತ್ತು. ವಿಲಿಯ ಆ ಎತ್ತರದ ಆಕೃತಿ ಯೆದುರು ಅವನ ತುಚ್ಛಾಕಾರ ಕರುಣಾಜನಕವಾಗಿತ್ತು.

– ವಿಲೀ ನಿನಗೆ ಗೊತ್ತು. ಇಲ್ಲಿ...

ವಿಲೀ ತನ್ನ ಹೆಗಲನ್ನು ಅವನ ಕೈಯಿಂದ ಜಟಕ್ಕನೆ ಬಿಡಿಸಿಕೊಂಡ. ನಮ್ಮ ಮೇಜಿನ ಮೇಲೆ ಅವನ ಬೆನ್ನು ವಾಲಿತ್ತು... ಅದನ್ನೇ ಆಸರೆಯಾಗಿ ಪಡೆದಿತ್ತು. ಜಾರ್ಜ್ ಬೀರಿನ ಬಾಟ್ಲಿಯನ್ನು ಹಿಡಿದುಕೊಂಡ. ಒಂದು ಕ್ಷಣಾರ್ಧ ಮಟ್ಟಿಗೆ ನಾವು ಬಿರುಗಾಳಿಗೆ ಸಿಕ್ಕಿ ಓಲಾಡುತ್ತಿರುವ ನಾವೆಯಲ್ಲಿ ನಿಂತಿರುವಂತಾಯಿತು.

ಆರ್ಕೆಸ್ಟ್ರಾ ಶುರುವಾಗುವುದೇ ತಡ ಒಂದೊಂದು ಮೂಲೆಯಲ್ಲಿ ನಿಂತಿದ್ದ ಯುವಕ-ಯುವತಿಯ ಜೊತೆಗಳು ಕೆಳಮಾಳಿಗೆಯ ಮೆಟ್ಟಿಲುಗಳನ್ನು ಇಳಿಯುತ್ತಾ ಹೊರಟುವು.

ಇಟಾಲಿಯನ್ ಹಿಂದೆ ತಿರುಗಿ ಕೂಡ ನೋಡಲಿಲ್ಲ. ಮೂಕನಾಗಿ ನೋಡುತ್ತಾ ನಿಂತುಬಿಟ್ಟ.

ವಿಲೀ ಮುಂದೆ ಅಲ್ಲಿ ಎಲ್ಲಿಯೂ ಕಾಣಲಿಲ್ಲ.

ಅವನ ಖಾಲಿ ಗ್ಲಾಸು ನಮ್ಮ ಮೇಜಿನ ಮೇಲಿತ್ತು. ಜಾರ್ಜ್ ಬಾಟ್ಲಿಯ ಮೇಲಿನಿಂದ ಕೈ ಎತ್ತಿಕೊಂಡನು. ಅವನ ಕೈ ಬೆವರುತ್ತಿದ್ದುದರಿಂದ ಅದರ ಮುದ್ರೆ ಸಂಪೂರ್ಣವಾಗಿ ಬಾಟ್ಲಿಯ ಗಾಜಿನ ಮೇಲೆ ಬಿದ್ದಿತ್ತು.

ಇಟಾಲಿಯನ್ ನಮ್ಮ ಕಡೆ ನೋಡಿದ. ನಮ್ಮ ಗುರುತು ಕೂಡ ಅವನಿಗೆ ಇಲ್ಲವೆನ್ನುವಂತಾಗಿತ್ತು ಆಗ ಅವನ ಮುಖಭಾವ. ಹತಾಶನಾಗಿ ತನ್ನ ಎರಡೂ ಕೈಗಳನ್ನು ಬೀಸುತ್ತಾ ಹೇಳಿದ –

"ಹುಚ್ಚನಿದ್ದಾನೆ...ಅಲ್ಲವೇ?"

ನಾವು ಸುಮ್ಮನಿದ್ದೆವು. ಆ ಸಮಯದಲ್ಲಿ ಅಲ್ಲೊಂದು ಪ್ರಸಂಗ ನಡೆಯಿತು. ಅದಕ್ಕೂ ನಮಗೂ ಸಂಬಂಧವಿರಲಿಲ್ಲ. ಆದರೂ ಅದರ ಮ್ಲಾನ ಛಾಯೆ ನಮ್ಮ ಮಧ್ಯದಿಂದ ಹಾದುಹೋಯಿತು. ಅವನು ತನ್ನ ಭಾರವಾದ ಕಾಲುಗಳನ್ನು ಎಳೆದುಕೊಂಡು ಕೌಂಟರಿನ ಕಡೆಗೆ ಹೊರಟುಹೋದ.

– ಬಹಳ ಸೆಖೆ... ಜಾರ್ಜ್ ಹೇಳಿದ – ನಿನ್ನ ಹತ್ತಿರ ಎಷ್ಟು ದುಡ್ಡಿದೆ.

– ಯಾಕೆ? ...ನನಗೆ ಒಮ್ಮೆಲೆ ಎಲ್ಲರ ಮೇಲೆ ಉರಿದುಬೀಳುವಂತಾಯಿತು.

– ಒಂದೂವರೆ ಷಿಲಿಂಗು ನಮ್ಮ ಬಳಿ ಇದೆ. ಇಷ್ಟಕ್ಕೆ ಲಾಗರ್ ಸಿಗುತ್ತದೆಯೋ? – ಅವನು ಕೇಳಿದ.

ನಾನು ವಿಲೀಯ ಖಾಲಿ ಗ್ಲಾಸಿನ ಕಡೆ ನೋಡುತ್ತಿದ್ದೆ... ಹೇಗೆ ಸಾಧ್ಯ?

ಮಂಕುಮಂಕಾದ ದೀಪದ ಕೆಳಗೆ ಸ್ತ್ರೀ-ಪುರುಷರ ಪಾದರಕ್ಷೆಗಳ ಖಟ-ಖಟ ಶಬ್ದ, ಪರಸ್ಪರ ಮಾತನಾಡುವ ಮಾತುಕತೆಗಳ ಗದ್ದಲ – ಸುತ್ತ ಹರಡಿಕೊಂಡಿತ್ತು. ನಾವು

ಈ ವ್ಯಾಪ್ತಿಯ ಒಂದು ಅಂಚಿನಲ್ಲಿ ಕುಳಿತಿದ್ದೆವು – ಒಂದು ಮೇಜು, ಜಾರ್ಜ್ ಮತ್ತು ಲಾಗರ್ ಸುರಿದಿದ್ದ ಎರಡು ಗ್ಲಾಸುಗಳು. ನಾವು ಪಬ್ಬನ್ನು ಪ್ರವೇಶಿಸಿದ ಸಮಯದಲ್ಲಿದ್ದ ಗದ್ದಲದ ದೃಶ್ಯವೇ ಈಗಲೂ ಇತ್ತು.

– ಈಗ ಒಂದು ಕುರ್ಚಿ ಮಾತ್ರ ಖಾಲಿ ಇತ್ತು.

– ಪ್ರಾಯಶಃ ಅವನು ಮುನಿದುಕೊಂಡಿದ್ದ... ನನ್ನ ತಾಳ್ಮೆ ಕೂಡ ಕೆಟ್ಟಿತ್ತು. ಸುಮ್ಮನಿರಲು ಸಾಧ್ಯವಾಗಲಿಲ್ಲ – ಜಾರ್ಜ್ ಹೇಳಿದ.

– ನೀನು ಅವನಿಗೆ ಏನೂ ಹೇಳಲಿಲ್ಲವೇ?

– ನನ್ನನ್ನು ನಾನು ಬಿಗಿಹಿಡಿಯಲಾರೆ – ಎಂದು ಹೇಳಿ ಅವನು ಮೇಜಿನ ಮೇಲಿದ್ದ ನನ್ನ ಕೈಯನ್ನು ಹಿಡಿದುಕೊಂಡ.

ಅವನ ಹಸ್ತದಲ್ಲಿ ನನ್ನ ಕೈ ಬೆರಳುಗಳು ಒದ್ದೆಯಾಗುತ್ತಿದ್ದವು.

– ನಿನಗೆ ಗೊತ್ತಿಲ್ಲ; ನನಗೆ ಬಾಕ್ಸಿಂಗ್ ಎಂದರೆ ಪ್ರಾಣ... ನಾನು ಲಂಡನ್ನಿಗೆ ಬಂದ ಹೊಸದರಲ್ಲಿ ಕೆಲಸದಲ್ಲಿದ್ದಾಗ ಪ್ರತಿದಿನ ಬಾಕ್ಸಿಂಗ್‌ಗೆ ಹೋಗ್ತಿದ್ದೆ. ಆದರೆ ನಾನು ಒಂದು ಬಾರಿಯೂ ಬಾಕ್ಸಿಂಗ್‌ನಲ್ಲಿ ಗೆದ್ದಿಲ್ಲ... ಒಂದು ಬಾರಿಯೂ ಇಲ್ಲ.

...ನನ್ನಲ್ಲಿ ಒಂದು ವಿಚಿತ್ರ ಸ್ವಭಾವ ಬೆಳೆಯುತ್ತಿದೆ. ಬೇರೆ ಮನುಷ್ಯ ನನ್ನ ಮೇಲೆ ಆಕ್ರಮಣ ನಡೆಸುತ್ತಾನೆಂಬ ನಿರೀಕ್ಷೆ ಸ್ವಲ್ಪ ಹೊತ್ತು ಇರುತ್ತದೆ ...ಅವನು ಹಾಗೆ ಮಾಡಲಿಲ್ಲ. ನನ್ನ ರಕ್ತ ಕುದಿಯತೊಡಗುತ್ತದೆ... ಯಾವಾಗಲೋ ಬರಬಹುದಾದ ಆಪತ್ತಿನ ನಿರೀಕ್ಷೆಮಾಡುತ್ತಾ ಕುಳಿತುಕೊಂಡಿರುವುದು ನನ್ನಿಂದ ಆಗುವುದಿಲ್ಲ... ಅದು ಬರುವ ಮುಂಚೆಯೇ ನಾನು ಹುಚ್ಚನಾಗಿ ಅದರ ಹಿಂದೆ ಓಡುತ್ತೇನೆ... ಹೀಗೆ ಕಾದಾಟಕ್ಕೆ ಹೋಗುವುದು ತಪ್ಪು ಎಂದು ನನಗೆ ಗೊತ್ತಿದೆ. ನನ್ನ ತಂದೆಯ ಹಾಗೆ ಸಮಯ ಕಾಯುತ್ತಾ ಕೂರುವುದು ನನ್ನಿಂದ ಸಾಧ್ಯವಿಲ್ಲ. ಎಂದೇ ನಾನು ಮನೆ ಬಿಟ್ಟು ಬರಲೂ ನಿಶ್ಚಯಿಸಿದೆ.

– ಆದರೆ ಅವರು... ನಿನ್ನ ತಂದೆ ಯಾರ ಪ್ರತೀಕ್ಷೆಯಲ್ಲಿದ್ದಾರೆ?

– ನನಗೆ ಗೊತ್ತಿಲ್ಲ... ನನಗೆ ರಾಜನೀತಿಯಲ್ಲಿ ಏನೊಂದೂ ಆಸಕ್ತಿ ಇಲ್ಲ. ಲಾಗರ್ ಇದ್ದ ಗ್ಲಾಸಿನ ಹಿಂದೆ ಅವನ ಹಣೆ ಮರೆಯಾಯಿತು.

ನಾನು ಮೆತ್ತಗೆ ನನ್ನ ಕೈಯನ್ನು ಬಿಡಿಸಿಕೊಂಡೆ... ಅದು ಬೆವರಿನಲ್ಲಿ ಮುಳುಗಿ ಹೋಗಿತ್ತು... ಮುದ್ದಿಗೆ ಸಾಕಿರುವ ಪ್ರಾಣಿಯನ್ನು ಸಮೀಪಕ್ಕೆ ಎಳೆದುಕೊಳ್ಳುವ ಹಾಗೆ ನಾನು ಅದನ್ನು ಎಳೆದುಕೊಂಡು ನೋಡಿದೆ. ನನ್ನ ಕೈಯನ್ನೇ ನೋಡತೊಡಗಿದೆ. ಕೈಬೆರಳುಗಳು, ಬಿಳಿ ಮಾಂಸದ ಒಂದು ಮುದ್ದೆ. ಅದರ ಮೇಲೆ ದಟ್ಟವಾಗಿ ಬೆಳೆದಿರುವ ಕೂದಲು, ಅವನ ಸ್ಪರ್ಶದಿಂದ ಇನ್ನೂ ಹಾಗೆಯೇ ಮುದುಡಿಕೊಂಡು ಮಲಗಿದೆ. ನಾನು ಹಾಗೆಯೇ ಯೋಚಿಸಿದೆ – ಹೀಗೆ ನಾವು ನಮ್ಮ ಕೈಯನ್ನು ಸೂಕ್ಷ್ಮವಾಗಿ ಎಷ್ಟು ಕಡಿಮೆ ಬಾರಿ. ಇವು ಹೇಗಿವೆ ಎಂದು ನೋಡುತ್ತೇವೆ!

– ಗೊತ್ತಿದೆಯಾ ನಾನು ಏಲೀಗೆ ರಾಟರ್ ಎಂದು ಏಕೆ ಕರೆದೆ?

– ಇಟ್ ಈಜ್ ನಥಿಂಗ್.

– ಏನು ಹೇಳುತ್ತಿ... ನನ್ನದೇ ಬೇರೆ ರೀತಿ. ನಮ್ಮ ತಂದೆ ಬಗ್ಗೆ ನನಗೆ ಎಷ್ಟು ಗೌರವ ಎಂದು ಮೊದಲೇ ಹೇಳಿದ್ದೇನೆ (ನನಗೆ ಅವನು ಅದನ್ನು ಹೇಳಿಯೇ ಇರಲಿಲ್ಲ) ಅವರು ನಿನಗೆ ಗೊತ್ತಿಲ್ಲ... ಅವರು ಬದುಕಿದ್ದಾರೆಯೋ ಇಲ್ಲವೊ ಅದೂ ನನಗೆ ಗೊತ್ತಿಲ್ಲ. ಅವರ ಒಂದೆಯೂ ಅವರು ಬಿದ್ದಿದ್ದರು.

– ಅವರು ಎಂದರೆ ಯಾರು?

ಅವರು ...ಮೈ ತಣ್ಣಗಾಗುವಂತಹ ಗಾಬರಿ ಆ ಒಂದುಪದದ ಹಿಂದೆ ಇದೆ;... ಸರ್ಪದ ಕುಂಡಲಿಯಂತೆ ಅವನ ಕಣ್ಮುಂದೆ ಅದು ಕೂತುಬಿಟ್ಟಿದೆ.

...ನೀನು ನೋಡಿಲ್ಲವೆ? ಅವನು ನನ್ನ ಕೈಯನ್ನು ಬಹಳ ಬಿಗಿಯಾಗಿ ಹಿಡಿದು ಕೊಂಡ. ಅವನ ಕಪ್ಪು ಮುಖದ ಕಡೆ ನೋಡಿದಾಗ ಬೆಳ್ಳಗಿನ ಅವನ ಹಲ್ಲುಗಳು ಮಾತ್ರ ನನಗೆ ಕಾಣುತ್ತಿದ್ದುವು. ಅವನು ಅಗಲವಾಗಿ ಬಾಯಿ ಬಿಟ್ಟುಕೊಂಡಿದ್ದುದರಿಂದ ಹಲ್ಲು ಗಳ ಆ ಸಾಲು ಈ ಕಿವಿಯಿಂದ ಆ ಕಿವಿಯ ತನಕ ಉದ್ದಕ್ಕೂ ಕಾಣುತ್ತಿತ್ತು. ಅವನು ನಗು ತ್ತಿದ್ದನೋ ಅಥವಾ ಮಂಕುಬಡಿದವನಂತೆ ಕುಳಿತಿದ್ದು ಹಲ್ಲುಗಳ ಪಂಕ್ತಿ ಹಾಗೇ ಅವಾ ಕ್ಕಾಗಿ ಹೊರಗೆ ಚಾಚಿಕೊಂಡಿತ್ತೋ ನನಗೆ ತಿಳಿಯದಾಗಿತ್ತು.

– ನಾನಿಲ್ಲಿ ಸುರಕ್ಷಿತನಾಗಿ ಹಾಯಾಗಿದ್ದೇನೆ... ಅಂಡ್ ಫಾರ್‌ದರ್ ಐ ಹೇಟ್ ಹಿಮ್, ಐ ಹೇಟ್ ಹಿಮ್ ಲೈಕ್ ಹೆಲ್.

ನಾವು ಮಾತನಾಡದೆ ಕುಡಿಯುತ್ತಿದ್ದೆವು. ನನ್ನ ಮುಂದೆ ಗಡಿಯಾರದ ಒಂದು ಡಯಲ್ ಕಾಣುತ್ತಿದೆ; ಪ್ರಥಮ ಬಾರಿಗೆ ನಾನು ಅದನ್ನು ನೋಡುತ್ತಿದ್ದೇನೆ. ನಾನೀಗ ಒಂದು ಸಿಗರೇಟ್ ಸೇದಬೇಕೆಂದೆನಿಸಿದೆ... ಸಿಗರೇಟ್ ಸೇದಿ ಯುಗಗಳಾದುವು ಎನಿಸಿದೆ.

– ಏನು ಯೋಚಿಸ್ತಾ ಇದ್ದಿ? ...ಅವನ ಧ್ವನಿಯಲ್ಲಿ ಮಗುವಿನ ಆಗ್ರಹ ಇತ್ತು.

– ಏನೂ ಇಲ್ಲ.

– ನೀನೇ ನನ್ನ ಸ್ಥಾನದಲ್ಲಿದ್ದರೆ ಏನು ಮಾಡ್ತಿದ್ದೆ?

– ನಿನ್ನ ಸ್ಥಾನದಲ್ಲಿ? ...ನಾನು ನಗತೊಡಗಿದೆ. ನನ್ನ ಸ್ಥಾನದಲ್ಲಿ ನಾನೇನು ಮಾಡ ಬೇಕೆಂಬುದೇ ನನಗೆ ಈ ತನಕ ಗೊತ್ತಿಲ್ಲ.

– ಆದರೆ ನೀನು ಖಂಡಿತ ಒಂದು ನಿರ್ಣಯಕ್ಕೆ ಬಂದಿರಬೇಕು – ಸ್ವದೇಶ ಬಿಡುವುದಕ್ಕೆ ಮೊದಲು.

– ಬಚಾವ್ ಆಗುವ ಸಲುವಾಗಿ.

– ಯಾರಿಂದ ಬಚಾವ್ ಆಗುವ ಸಲುವಾಗಿ?

– ನಮ್ಮ ದೇಶದ ಜನರಿಂದ ...ಇನ್ನೂ ಕೆಲವು ಆತಂಕಗಳಿಂದ ಕೂಡ ಇರಬಹುದು... ಈಗ ನನ್ನ ನೆನಪಿಗೆ ಬರುತ್ತಿಲ್ಲ.

ಹೆಚ್ಚು ನೀರು ಪ್ರಾಯಶಃ ಹೋಗಿರಲಾರದು ಎಂದು ನನಗೆ ಆಗ ಅನಿಸಿತು. ಬೆಳಿಗ್ಗೆಯಿಂದ ಏನೂ ತಿಂದಿಲ್ಲ. ಕರುಳುಗಳು ಮಾತ್ರ ಲಾಗರ್‌ನಿಂದ ಒದ್ದೆಯಾಗಿದ್ದುವು. ಒಂದು ನೀಲಿ–ಹಸುರು ಬಣ್ಣದಂತಹ ಧೂಳು ಎಲ್ಲಿಂದಲೋ ತೂರಿಕೊಂಡು ಬಂದು ನನ್ನ ಕಿಟಕಿಯ ಮುಂದೆ ಪರದೆಯ ರೀತಿಯಲ್ಲಿ ಆವರಿಸಿಕೊಂಡಿತ್ತು. ಅಲ್ಲಿಯೇ ಗಡಿಯಾರದ ಡಯಲ್ ಇದೆ... ಬಹಳ ಬೆಳ್ಳಗೆ...

– ಏಕೆ ನಗುತ್ತಿದ್ದೀಯ?

ನಾನು ನಗುತ್ತಿದ್ದೇನೆಂದು ತಿಳಿದು ನನಗೆ ತುಂಬಾ ಆಶ್ಚರ್ಯವಾಯಿತು... ನಾನು ನಗುತ್ತಿರುವೆನೆಂದು ಒಮ್ಮೆ ತಿಳಿದ ಮೇಲೆ ನಗುವುದನ್ನು ನಿಲ್ಲಿಸುವುದು ಅಪ್ರಾಮಾಣಿಕತೆಯಾದೀತು.

– ಏನು ವಿಷಯ ಹೇಳಬಾರದೆ?

– ಏನೋ ಹೀಗೇ ಜ್ಞಾಪಕಕ್ಕೆ ಬಂತು, ಎಂದು ನಾನು ಮಾತು ಹಾರಿಸುವ ಸಲುವಾಗಿ ಹೇಳಿದೆ – ವಾಸ್ತವಿಕವಾಗಿ ನನಗೆ ಯಾವ ವಿಚಾರವೂ ಜ್ಞಾಪಕಕ್ಕೆ ಬಂದಿರಲಿಲ್ಲ.

– ಏನು ಜ್ಞಾಪಕಕ್ಕೆ ಬಂದಿತ್ತು? ಅವನು ನನ್ನ ಮೇಲೆ ಬಾಗಿದ, ಕತ್ತಿನ ಮೇಲೆ ಇನ್ನೇನು ಜೋಲು ಬೀಳುತ್ತಾನೆ ಎನ್ನುವ ರೀತಿಯಲ್ಲಿ... ಹೇಳು. ಏನು ಜ್ಞಾಪಕಕ್ಕೆ ಬಂತು?

– ನಿನಗೆ ಗೊತ್ತೇನು? ...ಮೂರು ದಿನದ ಹಿಂದೆ ನಾನು ನಿಜಕ್ಕೂ ಜೈಲಿಗೆ ಹೋಗಬೇಕಾಗಿತ್ತು. ಸ್ವಲ್ಪದರಲ್ಲಿ ಅದು ತಪ್ಪಿತು.

ತುಂಬಾ ಒತ್ತಾಯ ಹಾಕಿದರೆ ಒಂದಲ್ಲ ಒಂದು ವಿಷಯ ಜ್ಞಾಪಕಕ್ಕೆಬಂದುಬಿಡುತ್ತೆ... ನಿಜಕ್ಕೂ ಮೂರು ದಿನಕ್ಕೆ ಮುಂಚೆ ನಡೆದಿದ್ದ ಒಂದು ಘಟನೆ ಆಗ ಜ್ಞಾಪಕಕ್ಕೆ ಬಂದು ಬಿಟ್ಟಿತ್ತು.

– ಸ್ವಲ್ಪದರಲ್ಲಿ ನಾನು ಬಚಾವ್ ಆಗಿದ್ದೆ, ಬಾಲ್-ಬಾಲ್ ಬಚ್ ಗಯಾ ಥಾ (ನನಗೆ ಇಂತಹ ಪದಪ್ರಯೋಗಗಳು ಎಂದರೆ ತುಂಬಾ ಆಸೆ. ಅವಕಾಶ ದೊರೆತಾಗಲೆಲ್ಲ ಅವುಗಳನ್ನು ಪದೇ ಪದೇ ಉಪಯೋಗಿಸುತ್ತೇನೆ).

ಲಂಡನ್ನಿನಲ್ಲಿ ನಾನು ಒಬ್ಬ ಸ್ನೇಹಿತನ ಜೊತೆಗೇ ಇದ್ದೇನೆ. ಅವನ ಗರ್ಲ್-ಫ್ರೆಂಡ್ ಕೆಲವು ದಿನಗಳ ಹಿಂದೆ ಫಿನ್‌ಲೆಂಡಿನಿಂದ ಅವನ ಜೊತೆಗಾಡಲು ಬಂದಿದ್ದಳು. ಇದ್ದದ್ದು ಒಂದೇ ಕೊಠಡಿ. ಆದುದರಿಂದ ನಾನು ಹೊರಗೇ ಇರುತ್ತಿದ್ದೆ. ದಿನವೆಲ್ಲ ಮ್ಯೂಸಿಯಮಿನ ಲೈಬ್ರರಿಯಲ್ಲಿರುತ್ತಿದ್ದೆ. ರಾತ್ರಿ ಮಲಗಲು ಪಸ್ಟೇಂಡ್ ಸ್ಟೇಷನ್ನಿಗೆ ಹೊರಟು ಹೋಗುತ್ತಿದ್ದೆ. ಪ್ರತಿದಿನ ಗೊತ್ತಾದ ಸಮಯಕ್ಕೆ ನನ್ನ ಸ್ನೇಹಿತ ನನ್ನನ್ನು ಭೇಟಿ ಮಾಡಿ ಕೆಲವು ಷಿಲಿಂಗುಗಳನ್ನು ಕೊಟ್ಟು ಹೋಗುತ್ತಿದ್ದ. ಅವೊತ್ತು ಸಂಜೆ ಏನು ಕಾರಣವೋ ಏನೋ ಅವನು ನನ್ನಲ್ಲಿಗೆ ಬರಲಾಗಲಿಲ್ಲ. ನನ್ನ ಬಳಿ ಹತ್ತು ಪೆನ್ನಿಗಳು ಮಾತ್ರ ಉಳಿದಿದ್ದುವು.

ಇಡೀ ದಿನ ಮ್ಯೂಜಿಯಂನಲ್ಲಿ ಕೂತಿದ್ದು ಓದುತ್ತಿದ್ದುದರಿಂದ ಹಸಿವಿನ ಕಡೆ ಗಮನ ವಿರಲಿಲ್ಲ. ಆದರೆ ರಾತ್ರಿಯಾಗುತ್ತಿದ್ದ ಹಾಗೆ ಹಸಿವೂ ಪ್ರಬಲವಾಗಿ ಅದನ್ನು ತಡೆಯುವುದು ಸಾಧ್ಯವಾಗಲಿಲ್ಲ. ಆ ಸಮಯಕ್ಕೆ ಕಿಂಗ್ ಕ್ರಾಸಿನ ಕಡಿಮೆ ಬೆಲೆಯ ಉಪಾಹಾರ ಗೃಹಗಳು ಮುಚ್ಚಿದ್ದುವು. ನಾನು ಬಸ್ಸಿನಲ್ಲಿ ಕುಳಿತು ಶಹರಿನ ಮಧ್ಯಭಾಗದಲ್ಲೆಲ್ಲ ಹತಾಶನಾಗಿ ಸುಮ್ಮನೆ ಈ ಕಡೆಯಿಂದ ಆ ಕಡೆಗೆ, ಆ ಕಡೆಯಿಂದ ಈ ಕಡೆಗೆ ಪ್ರಯಾಣ ಮಾಡುತ್ತಿದ್ದೆ. ಕೊನೆಗೆ ಒಂದು ಗ್ರೀಕ್ ಉಪಾಹಾರಗೃಹ ನನ್ನ ಕಣ್ಣಿಗೆ ಬಿತ್ತು. ಹೊರಗಡೆ ಯಿಂದ ನೋಡುವುದಕ್ಕೆ ತುಂಬಾ ಕಡಿಮೆ ದರ್ಜೆಯದೆಂದು ಕಾಣುತ್ತಿತ್ತು. ಒಳಗೆ ಹೋಗಿ ಆಲೂಗಡ್ಡೆ ಚಿಪ್ಸ್ ಮತ್ತು ಟೋಸ್ಟ್‌ಗೆ ಆರ್ಡರ್ ಕೊಟ್ಟು ಕುಳಿತುಕೊಂಡಿದ್ದೆ. ಇವು ತುಂಬಾ ಕಡಿಮೆ ಬೆಲೆಗೆ ಸಿಗುವ ತಿಂಡಿ ಎಂಬುದು ನಿನಗೆ ಗೊತ್ತಿರಬೇಕು. ಹೆಚ್ಚೆಂದರೆ ಎಂಟು ಪೆನ್ನಿಯಷ್ಟಾದೀತು ಅದರ ಬಿಲ್, ಎಂದೇ ನಾನು ತುಂಬಾ ನಿಶ್ಚಿಂತನಾಗಿದ್ದೆ. ಸ್ವಲ್ಪ ಹೊತ್ತಿನ ಮೇಲೆ ನನ್ನ ದೃಷ್ಟಿ ಮುಂದುಗಡೆ ಇದ್ದ ದರಗಳ ಪಟ್ಟಿಯ ಮೇಲೆ ಹೋಯಿತು. ಪ್ರಾರಂಭದಲ್ಲಿ ನನ್ನ ಹಡಾಹುಡಿಯ ಮಧ್ಯೆ ಆ ಕಡೆ ನಾನು ನೋಡಿರಲಿಲ್ಲ. ಈಗ ನೋಡುತ್ತೇನೆ, ಟೋಸ್ಟ್ ಮತ್ತು ಚಿಪ್ಸ್ ಇವುಗಳ ದರ ಒಂದೂವರೆ ಶಿಲಿಂಗ್! ...ನನ್ನ ಹತ್ತಿರ ಹತ್ತು ಪೆನ್ನಿಗಳನ್ನು ಬಿಟ್ಟರೆ ಅರ್ಧ ಪೆನ್ನಿ ಕೂಡ ಹೆಚ್ಚಾಗಿರಲಿಲ್ಲ... ಆಮೇಲೆ ಏನು ಮಾಡಿದೆ ಗೊತ್ತೇ? ಒಮ್ಮೆಲೆ ಎದ್ದುನಿಂತು ಯಾರನ್ನೋ ಅಲ್ಲಿ ಗುರುತಿ ಸಿದಂತೆ "ಗುಡ್ ಈವನಿಂಗ್" ಎಂದು ಜೋರಾಗಿ ಕೂಗಿದೆ ಅರೆ, ಹೊರಗೆ ಏಕೆ ನಿಂತಿ ದ್ದೀಯೇ? (ನಾನು ನಿಜವಾಗಿಯೂ ಕೂಗುತ್ತಿದ್ದೆ... ಜಾರ್ಜನ ಮುಂದೆ) ಹೋಟಲಿನ ಮಾಲಿಕ ಕುತೂಹಲದಿಂದ ನನ್ನ ಕಡೆಗೆ ನೋಡಿಕೊಂಡು ಹೋಗುತ್ತಿದ್ದ. ನನ್ನ ಒಬ್ಬ ಸ್ನೇಹಿತ ಹೊರಗೆ ನಿಂತಿದ್ದಾನೆ... ಅವನನ್ನು ನೋಡಿ ಈಗಲೇ ಬರುತ್ತೇನೆ... ಹೀಗೆ ಹೇಳಿಕೊಂಡು ಟೋಸ್ಟ್ ಮತ್ತು ಚಿಪ್ಸಿನ ಪ್ಲೇಟನ್ನು ಅಲ್ಲಿಯೇ ಟೇಬಲ್ಲಿನ ಮೇಲೆ ಬಿಟ್ಟು ನಾನು ಮುಂದೆ ಹೋದೆ ಬಾಗಿಲಿನ ಕಡೆಗೆ. ಹೀಗೆ ಜೋರು ಜೋರಾಗಿ (ನಾನೀಗ ನಿಜಕ್ಕೂ ಮೇಜುಗಳ ಮಧ್ಯೆ ದಾರಿ ಮಾಡಿಕೊಂಡು ಹೋಗುತ್ತಿದ್ದೆ) ಹಾಗೆ ಹೋಗಿ ಬಾಗಿಲಿನ ಹೊರಗೆ ಪಾರಾದೆ... ಹಿಂದೆ ತಿರುಗಿ ನೋಡಿದ್ದರೆ! (ನಾನು ಹಿಂದಿರುಗಿ ಜಾರ್ಜನ ಬಳಿಗೆ ಬಂದು, ಲಾಗರ್‌ನ ಒಂದು ದೀರ್ಘ ಗುಟುಕು ತೆಗೆದುಕೊಂಡು ಕುಳಿತುಬಿಟ್ಟೆ) ಬಹಳ ದೂರದ ವರೆಗೆ ನಾನು ಓಡುತ್ತಾ ಇದ್ದೆ.

– ಅವನು ನಿನ್ನನ್ನು ಹಿಂಬಾಲಿಸುತ್ತಿದ್ದನೆ?

– ಇಲ್ಲ. ನಗುವಿಗೆ ಕಾರಣ ಇದೇ ಆಗಿತ್ತು. ಅವನು ನನ್ನನ್ನು ಹಿಂಬಾಲಿಸುತ್ತಿರಲಿಲ್ಲ. ಆದರೂ ಒಂದು ಕತ್ತಲೆಯ ಓಣಿ ಬಿಟ್ಟು ಇನ್ನೊಂದು ಕತ್ತಲೆಯ ಓಣಿಗೆ ಓಡುತ್ತಿದ್ದೆ... ಇನ್ನೊಂದು ವಿಚಾರ, ನನ್ನ ಹತ್ತು ಪೆನ್ನಿ ಹಾಗೆಯೇ ಉಳಿಯಿತು, ನನ್ನ ಹಸಿವೂ ಎಲ್ಲಿಯೋ ಮಾಯವಾಗಿತ್ತು.

– ನೀನೂ ಒಳ್ಳೆ ಭೂಪ, ಜಾರ್ಜ್ ನಗುತ್ತಾ ಹೇಳಿದ.

ಅವನು ನಗುತ್ತಿದ್ದುದನ್ನು ಕಂಡು ನನಗೆ ತುಂಬಾ ಸಂತೋಷವಾಗಿತ್ತು. ಮಾರನೆಯ ದಿನ ಈ ಘಟನೆಯನ್ನು ನನ್ನ ಮಿತ್ರನಿಗೆ ತಿಳಿಸಿದಾಗ ಅವನೂ ಅವನ ಪ್ರೇಯಸಿಯೂ ಇದೇ ರೀತಿ ನಕ್ಕಿದ್ದರು. ಯಾರ ಮೇಲೆ ಇಂತಹ ಘಟನೆ ನಡೆಯುತ್ತದೆಯೋ ಅದೇ ಜನ ಆಮೇಲೆ, ಘಟನೆ ನಡೆದು ಅದರಿಂದ ಪಾರಾದ ಮೇಲೆ ಹೇಗೆ ಅದಕ್ಕೆ ಲಘು ಸ್ವರೂಪ ಕೊಟ್ಟು ಅದರ ಬಗ್ಗೆ ಮಾತನಾಡುತ್ತಾರೆ ಎಂಬುದು ನನಗೆ ನಿಜಕ್ಕೂ ಆಶ್ಚರ್ಯವನ್ನುಂಟು ಮಾಡುತ್ತೆ. ಘಟನೆ ನಡೆಯುವಾಗ, ಆ ಸಮಯದಲ್ಲಿ, ಮೈ ಬೆವರುತ್ತಿರುತ್ತದೆ. ಬಟ್ಟೆ ಬೆವರಿನಲ್ಲಿ ನೆಂದು ಮುದ್ದೆಯಾಗಿರುತ್ತದೆ ಮತ್ತು ಎದೆ ಡಬಡಬನೆ ಹೊಡೆದುಕೊಳ್ಳು ತ್ತಿರುತ್ತದೆ. ಆಗ ಮನುಷ್ಯ ಹತಾಶನಾಗಿರುತ್ತಾನೆ. ವಯಸ್ಸು, ಅನುಭವ ಇವುಗಳೆಲ್ಲ ಮರೆತುಹೋಗುತ್ತದೆ... ನಾನು ಆದಿನ ರಾತ್ರಿ ಜೇಬಿನಲ್ಲಿ ಹತ್ತು ಪೆನ್ನಿ ಇಟ್ಟುಕೊಂಡು ಅಂಧಕಾರಮಯ ರಾತ್ರಿಯಲ್ಲಿ ಓಡುತ್ತಿದ್ದಾಗ ನನ್ನನ್ನು ಹಿಂಬಾಲಿಸಿ ಬರು ತ್ತಿರುವವರು ಪದೇ ಪದೇ ನನ್ನನ್ನು ಉದ್ದೇಶಿಸಿ ತೆಗಳುತ್ತಿದ್ದಂತ ಭಾಸವಾಗುತ್ತಿತ್ತು... ಯೂ ಫಕಿಂಗ್ ಫೂಲ್. ಯೂ ಇಡಿಯಟ್... ಯೂ...

ನೀನೂ ತಮಾಷೆ ಮನುಷ್ಯ... ಜಾರ್ಜ್ ಹೇಳಿದ. ಮೂರನೆಯ ಸಲವು ಅವನು ಈ ರೀತಿ ಹೇಳಿದಾಗ ನಾನು ಅಲ್ಲಿ ಕುಳಿತುಕೊಳ್ಳಲಾಗಲಿಲ್ಲ. ಕಣ್ಣುಗಳ ಮುಂದೆ ಗಡಿ ಯಾರದ ಡಯಲ್ ಮತ್ತೆ ಸುಳಿಯತೊಡಗಿತು ಮತ್ತು ಟಾಯ್ಲೆಟ್ ಕಡೆಗೆ ಧಾವಿಸಿದೆ. ಟಾಯ್‌ಲೆಟ್ ಇದ್ದುದು ಕೆಳಗಿನ ಬೇಸ್‌ಮೆಂಟಿನಲ್ಲಿ. ನಾನು ಬೇಗ ಬೇಗ ಮೆಟ್ಟಿಲು ಗಳನ್ನು ಇಳಿಯತೊಡಗಿದೆ. ಇಳಿಯುವಾಗ ಏನಾದರೂ ಆದರೆ ಎಂಬ ಹೆದರಿಕೆ ಇತ್ತು. ಬಾಯಿಯ ಮೇಲೆ ಕೈ ಇಟ್ಟುಕೊಂಡು ಬಹಳ ರಹಸ್ಯಮಯವಾಗಿ ಮುಗುಳ್ನಗುತ್ತಿದ್ದೆ.

ಏನೂ ಆಗಲಿಲ್ಲ. ಮೆಟ್ಟಿಲುಗಳ ಮೇಲೂ ಆಗಲಿಲ್ಲ. ವಾಷ್ ಬೇಸಿನ್ ಮುಂದೆ ಬಹಳ ಹೊತ್ತು ನಾನು ಬಾಗಿ ನಿಂತಿದ್ದಾಗಲೂ ಆಗಲಿಲ್ಲ – ಅದರ ನಿರೀಕ್ಷೆಯಲ್ಲಿ ಸ್ವಲ್ಪ ಹೊರಗೆ ಹೋದುದಕ್ಕೆ ಆಯಿತು. ಈಗ ಗಡಿಯಾರದ ಆ ಬಿಳಿಯ ಡಯಲ್ ಸುಯ್ಯಾಡುತ್ತಿಲ್ಲ. ನಾನು ಪಂಪ್ ತೆಗೆದುಬಿಟ್ಟಿದ್ದೆ. ನಿಧಾನವಾಗಿ ಒಂದೊಂದು ವಿಚಾರವನ್ನೂ ನೆನಪಿಗೆ ತಂದುಕೊಳ್ಳುವುದು ನನ್ನ ಉದ್ದೇಶವಾಗಿತ್ತು – ನಿಶ್ಚಿಂತನಾಗಿ ಪ್ರತಿಯೊಂದನ್ನೂ ಬಿಡಿಸಿ ತಿಳಿದುಕೊಳ್ಳಲೆಂದು (ರಾತ್ರಿ ಈ ಹೊತ್ತಿನಲ್ಲಿ ನಾನು ಇಲ್ಲಿ ಏನು ಮಾಡುತ್ತಿದ್ದೇನೆ? ಹೀಗಾದರೆ ಪ್ರಯೋಜನವಿಲ್ಲ. ಸತ್ಯಶೋಧನೆಗಾಗಿ ಪ್ರತಿಯೊಂದು ವಿವರವನ್ನೂ ತಿಳಿಯ ಬೇಕು. ಇದು ಬಹಳ ಮುಖ್ಯ) ಸವಿವರವಾಗಿ ಒಂದೊಂದು ಮಾತನ್ನೂ ...ನಾನು ಇದನ್ನೇ ಪದೇ ಪದೇ ಯೋಚಿಸುತ್ತಿದ್ದೆ. ವಿವರಗಳು ನನಗೆ ತಿಳಿಯುವ ಬದಲು ನನ್ನ ಮನಸ್ಸಿನಲ್ಲಿದ್ದ ಈ ಉದ್ದೇಶ ನನ್ನ ನಾಲಿಗೆಯ ಮೇಲೆ ಮತ್ತೆ ಮತ್ತೆ ಪುನರ್ಘೋಷಿತ ವಾಗುತ್ತಿತ್ತು.

ಟಾಯ್ಲೆಟ್‌ನಿಂದ ಹೊರಗೆ ಬಂದಾಗ ಕಾಲುಗಳು ಮುಂದೆ ಸಾಗುವುದೇ ಕಷ್ಟ ವಾಯಿತು. ಡಾನ್ಸ್ ಮಾಡುತ್ತಿದ್ದ ಜೋಡಿಗಳು ನನ್ನನ್ನು ಸುತ್ತುವರಿದಿದ್ದುವು.

ಜನ ಸಮ್ಮೂಡನೆ ಟಕರಾಯಿಸಿಕೊಂಡು ಹೋಗುತ್ತಿದ್ದರು. ನಾನು ಒಮ್ಮೆ ಎಡಕ್ಕೆ ಒಮ್ಮೆ ಬಲಕ್ಕೆ ತೊಗಲುಗೊಂಬೆಯಂತೆ ತೂರಾಡುತ್ತಿದ್ದೆ. ಕಾಲುಗಳನ್ನು ಸೇರಿಸಿ ನಡೆಯುವ ಪ್ರಯತ್ನ ನನ್ನದು. ಡಾನ್ಸಿಂಗ್ ಫ್ಲೋರ್ ಕಿರಿದಾದಂತೆ ಭಾಸವಾಗಿ ನಾನು ಸುತ್ತುತ್ತಿರುವ ಬುಗುರಿಯ ಮೇಲೆ ನಿಲ್ಲುವ ಸಾಹಸ ಮಾಡುತ್ತಿರುವಂತೆ ಆಗುತ್ತಿತ್ತು. ಆಗ ನನ್ನ ಹೆಗಲ ಮೇಲೆ ಒಂದು ವಿಚಿತ್ರ ಭಾರವನ್ನು ಅನುಭವಿಸುತ್ತಿರುವಂತೆ ಆಯಿತು.

– ನೀನು ಇಲ್ಲಿದ್ದೀಯಾ? ವಿಲೀಯ ಗಡ್ಡ ನನ್ನ ಹಣೆಯನ್ನು ಸ್ಪರ್ಶಿಸುತ್ತಿತ್ತು. ಜಾರ್ಜ್ ಎಲ್ಲಿ?

– ಅವನು ಅಲ್ಲಿದ್ದಾನೆ... ನಾನು ಮೇಲಿನ ಭಾಗದ ಕಡೆ ಕೈ ತೋರಿಸಿದೆ.

ಅವನು ಯಾರೊಡನೆ ಡಾನ್ಸ್ ಮಾಡುತ್ತಿದ್ದನೋ ಆ ಹುಡುಗಿಯ ಮುಖ ಅವನ ವಕ್ಷಸ್ಥಳದಲ್ಲಿ ಮರೆಯಾಗಿತ್ತು. ಅವಳ ಸುಂದರ ಕೂದಲುಗಳು ಮಾತ್ರ ಹೊರಗಡೆಗೆ ಕಾಣುತ್ತಿದ್ದುವು.

– ನೀನು ಹೋಗುವುದಿಲ್ಲವೇ? ನಿನ್ನ ಲಾಗರ್... ನಾನು ಹೇಳಿದೆ.

– ಹೋಗುತ್ತೇನೆ... ನೀನು ಡಾನ್ಸ್ ಮಾಡುವುದಿಲ್ಲವೇ?

ಈ ಸಲ ಹುಡುಗಿಯು ತಲೆ ಎತ್ತಿದಳು. ಅವಳ ತೆರೆದಿದ್ದ ಬೆನ್ನಿನ ಮೇಲೆ ಪೌಡರಿನ ಲಘು ಗುರುತುಗಳು ಕಾಣುತ್ತಿದ್ದುವು. ಕಡಿಮೆ ಬೆಲೆಯ ಬೇಸಿಗೆಯಲ್ಲಿ ಉಡುವ ಚೀಟಿ ಬಟ್ಟೆಯ ಸ್ಕರ್ಟ್ ಉಟ್ಟಿದ್ದಳು. ಅವಳ ತುಟಿಗಳ ಮೇಲೆ ಬೆವರಿನ ಹನಿಗಳಿದ್ದುವು. ಬಹಳ ಹೊತ್ತು ಡಾನ್ಸ್ ಮಾಡುತ್ತಿದ್ದುದರಿಂದ ಪ್ರಾಯಶಃ ಲಿಪ್‌ಸ್ಟಿಕ್ ಹಾಗೆ ಹರಡಿ ಕೊಂಡಿತ್ತು.

ಆ ಜನಜಂಗುಳಿಯ ಮಧ್ಯೆ ನಿಂತಿರುವುದು ಕಷ್ಟವಾಗಿತ್ತು. ಅವರು ನನ್ನ ಸಮೀಪ ದಲ್ಲಿಯೇ ನಿಧಾನವಾದ ಹೆಜ್ಜೆಗಳನ್ನು ಹಾಕುತ್ತಾ ಡಾನ್ಸ್ ಮಾಡುತ್ತಲೇ ಇದ್ದರು... ಅಲ್ಲೇ ಇಕ್ಕಟ್ಟಾದ ಒಂದು ಸಣ್ಣ ವೃತ್ತದಲ್ಲಿ. ಒಮ್ಮೆ ವಿಲೀಯ ತಲೆ ನನ್ನ ಸಮೀಪಕ್ಕೆ ಬರುತ್ತಿದ್ದರೆ, ಇನ್ನೊಮ್ಮೆ ಆ ಹುಡುಗಿಯ ಸುಂದರ ತಲೆಗೂದಲು.

– ಹೇಗಿದ್ದಾಳೆ? ...ವಿಲೀ ಮೃದುವಾಗಿ ಅವಳ ಸೊಂಪಾದ ತಲೆಗೂದಲನ್ನು ಕೆದಕಿ ಎಳೆದು ಚೆಲ್ಲಾಟವಾಡಿದ.

ಅವಳು ನಗುತ್ತಿದ್ದಳು.

...ಇವನು ಬಹಳ ತುಂಟನಿದ್ದಾನೆ... ಅಲ್ಲ? – ಅವಳು ನಗುತ್ತಾ ಹೇಳಿದಳು. ಅವಳ ಕಣ್ಣುಗಳು ಗೊಂಬೆಯ ಕಣ್ಣುಗಳಂತೆ ತಲೆ ಹಿಂದಕ್ಕೆ ಹೋದಾಗ ಮುಚ್ಚಿಕೊಂಡು ಮುಂದಕ್ಕೆ ಬಂದಾಗ ತೆರೆದುಕೊಳ್ಳುತ್ತಿದ್ದುದನ್ನು ನಾನು ಮೊದಲ ಬಾರಿಗೆ ಗಮನಿಸಿದೆ.

– ಡಾನ್ಸ್ ಮಾಡ್ತಿಯಾ? ...ಮೆ ಬಿ ವಿತ್ ಹರ್! ...ವಿಲೀ ಕೇಳಿದ.

ಅವರಿಬ್ಬರೂ ತುಂಬಾ ಲಘುವಾದ ಪಾದಗಳನ್ನು ಇಡುತ್ತಾ ಕುಣಿಯುತ್ತಿದ್ದರು,

ವೃತ್ತಾಕಾರದಲ್ಲಿ. ಯಾರ ಮುಖ ನನ್ನ ಕಿವಿಯ ಹತ್ತಿರ ಬರುತ್ತಿತ್ತೋ ಅವರು ಏನಾದರೂ ಹೇಳುತ್ತಿದ್ದರು.

ಇವಳ ಸಾಥಿಗಳು ಅಲ್ಲಿ ಕುಳಿತಿದ್ದಾರೆ... ಇವಳ ಜೊತೆಗೆ ನನ್ನನ್ನು ನೋಡಿ ಹೊಟ್ಟೆ ಉರಿಯಿಂದ ಸಾಯ್ತಾರೆ ಮಕ್ಕಳು – ವಿಲೀ ಹೇಳಿದ.

– ನೀನು ಡಾನ್ಸ್ ಮಾಡೋಲ್ವೇನು? ...ಮೆ ಬಿ ವಿತ್ ಮಿ – ಹುಡುಗಿ ಹೇಳಿದಳು.

– ಆ ಇಟಾಲಿಯನ್ ಬೇಡ ಎನ್ನುತ್ತಿದ್ದ – ನಾನು ವಿಲೀಗೆ ಹೇಳಿದೆ.

– ಅವನು ಸಾಯಲಿ ಬಿಡು, ವಿಲೀ ಹೇಳಿದ.

ಆರ್ಕೆಸ್ಟ್ರಾದ ಆ ಅಬ್ಬರದ ಧಾಟಿಯಲ್ಲಿ ಅದು ಹೇಗೆ ಮೋತ್ಸಾರ್ಟನ 'ಲಿಟಲ್ ಸೈಟ್' ದಂತಹ ಸಂಗೀತದ ಮಧುರ ನಾದ ಮೂಡಿ ಬರಲು ಸಾಧ್ಯವಾಗುತ್ತಿತ್ತೋ ನನಗೆ ತಿಳಿಯದು. ಅದು ಕೇವಲ ಅರ್ಧ ಸಿಮಿಷದ ಮಟ್ಟಿಗೆ ಮಾತ್ರ. ನನ್ನ ಉಸಿರನ್ನು ಕೈಬೆರಳುಗಳಿಂದ ಸುತ್ತಿ ಯಾರೋ ಮುಂದಕ್ಕೆ ಎಳೆಯುತ್ತಿರುವುದಾಗಿ ನನಗೆ ಆ ಸಮಯದಲ್ಲಿ ಭಾಸವಾಗುತ್ತಿತ್ತು.

– ಜಿನ್ ಕುಡಿಯುತ್ತೀಯೇನು? ಇವಳು ದುಡ್ಡು ಕೊಡುತ್ತಾಳೆ... ವಿಲೀ ಮೆಲುದನಿಯಲ್ಲಿ ಪಿಸುಗುಟ್ಟುತ್ತಾ ಹೇಳಿದ.

– ಮೆ ಬಿ ವಿತ್ ಮಿ ...ಹುಡುಗಿ ಅಷ್ಟೇ ಉದಾಸೀನ ಸ್ವರದಲ್ಲಿ ಹೇಳಿದಳು.

ಇದಕ್ಕೆ ಮೊದಲು ನಾನು ಏನಾದರೂ ಹೇಳುವ ಸ್ಥಿತಿಯಲ್ಲಿದ್ದೆ. ಆದರೆ ಈಗ ನೃತ್ಯದಲ್ಲಿ ತೊಡಗಿದ್ದ ಜೊತೆಗಳ ಸಮೂಹ ಹೆಚ್ಚಿದ್ದುದರಿಂದ ಅವರು ನನ್ನಿಂದ ದೂರ ಹೋಗಬೇಕಾಯಿತು. ಅವರು ಇದ್ದಕ್ಕಿದ್ದಂತೆ ಕಣ್ಮರೆಯಾಗಿ ಹೋದರು.

ನನ್ನ ತಲೆ ಇನ್ನೂ ಸುತ್ತುತ್ತಿತ್ತು. ಆದರೆ ಈ ಸುತ್ತುವಿಕೆ ಟಾಯ್ಲೆಟ್‌ಗೆ ಹೋಗುವುದಕ್ಕೆ ಮೊದಲು ಇದ್ದಂತೆ ಇರದೆ ಅದರಲ್ಲಿ ಈಗ ಒಂದು ವಿಚಿತ್ರ ಹಗುರತ್ವ ಇತ್ತು. ಮಳೆ ಬಿಟ್ಟುಹೋದ ಮೇಲೆ ಮೋಡಗಳು ಚದುರಿಕೊಂಡು ಆಕಾಶ ನಿರ್ಮಲವಾಗಿದ್ದರೆ ಹೇಗೆ ಕಾಣುತ್ತದೆಯೋ ಆ ರೀತಿಯ ಹಗುರತ್ವ ಇತ್ತು.

ಆ ಜನಜಂಗುಳಿಯ ಮಧ್ಯೆ ದಾರಿ ಮಾಡಿಕೊಂಡು ಹೋಗುವುದು ಸುಲಭವಾಗಿರಲಿಲ್ಲ. ಬೇಸ್‌ಮೆಂಟಿನ ಮೆಟ್ಟಲುಗಳ ಬಳಿಗೆ ಹೋಗಿ ನಾನು ನಿಂತುಬಿಟ್ಟೆ. ಅಲ್ಲೇ ಮೆಟ್ಟಲುಗಳ ಮೇಲೆ ಮಲಗಿ ನಿದ್ದೆಹೋಗಬೇಕು ಎನಿಸಿತು. ಅದೊಂದು ಅದಮ್ಯ ಆಸೆಯಂತಾಗಿತ್ತು.

– ಹೆಲೋ!... ನನ್ನ ಕೈಯನ್ನು ಯಾರೋ ಬಲವಾಗಿ ಹಿಡಿದಿದ್ದರು. ಹಿಂದೆ ತಿರುಗಿ ನೋಡಿದಾಗ ಪಬ್ಬಿನ ಮಾಲಿಕ ಇಟಾಲಿಯನ್ ನಿಂತಿದ್ದುದು ಕಂಡುಬಂತು. ಪ್ರಾಯಶಃ ದೂರದಿಂದ ನನ್ನನ್ನು ನೋಡಿ ಅವನು ಓಡಿ ಬಂದಿರಬೇಕು. ಅವನ ಷರ್ಟಿನ ಮಡಚಿದ ತೋಳುಗಳು ಈಗ ಬಿಚ್ಚಿಕೊಂಡು ನೇತಾಡುತ್ತಿದ್ದುವು. ಸುತ್ತಲಿನ ಗಾಳಿ ಅವನಿಗೆ ಸಾಕಿಲ್ಲವೆಂಬಂತೆ ಬಹಳ ಕಷ್ಟದಿಂದ ಉಸಿರಾಡುತ್ತಾ ಏದುತ್ತಿದ್ದ.

– ಇಲ್ಲಿ ಕೇಳು, ಅವನು ನಿನ್ನ ಸ್ನೇಹಿತ ತಾನೇ?

ನಾನು ಭುಜಗಳನ್ನು ಕುಣಿಸಿದೆ, ಅಷ್ಟೆ.

– ನೀನು ಅವನನ್ನು ಕರೆದುಕೊಂಡು ಹೋಗಲು ಸಾಧ್ಯವಿಲ್ಲವೇ? ...ನಾನು ಹೇಳುವುದು ಈ ಸ್ಥಳದಿಂದ?

ನಮ್ಮ ನಾಲ್ಕೂ ಕಡೆ ನೃತ್ಯದಲ್ಲಿ ತೊಡಗಿದ್ದವರ ಗುಂಪು ಒಮ್ಮೊಮ್ಮೆ ಬಹಳ ನಿಧಾನವಾಗುತ್ತಿತ್ತು. ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಹರಡಿಕೊಳ್ಳುತಿತ್ತು. ಬ್ಯಾಂಡಿನ ಮುಂಭಾಗದಲ್ಲಿ ಒಬ್ಬ ವ್ಯಕ್ತಿ ಲೌಡ್‌ಸ್ಪೀಕರ್ ಹಿಡಿದು ಹಾಡತೊಡಗಿದ್ದ.

ನಮ್ಮಿಬ್ಬರ ಮಧ್ಯೆ ನಮ್ಮ ಪರಸ್ಪರ ದೃಷ್ಟಿ ಬಿಟ್ಟು ಬೇರೆ ಏನೂ ಇರಲಿಲ್ಲ.

...ನೀನೇ ಏತಕ್ಕೆ ಹೇಳಿಬಿಡಬಾರದು – ನಾನು ಕೇಳಿದೆ.

...ನಾನು ಅವನಿಗೆ ಏನೂ ಹೇಳಲಾರೆ ...ಅವನು ಯಾವತ್ತೂ ನನ್ನ ಮಾತಿಗೆ ಒಪ್ಪುವಂತಿಲ್ಲ.

...ಆದರೆ ಅವನು ಯಾಕೆ ಹೋಗಬೇಕು? ...ಅವನು ಇರುವುದರಿಂದ ಆಗುವ ತೊಂದರೆ ಏನು?

...ಈ ಸ್ಥಳ ಅವನಿಗೆ ಒಳ್ಳೆಯದಲ್ಲ... ಅವನ ಧ್ವನಿಯಲ್ಲಿ ಒಂದು ಗಂಭೀರ ಕಾತರತೆ ಕಾಣುತ್ತಿತ್ತು... ನಾನು ಹಿಂದೆಯೂ ಹಲವು ಬಾರಿ ಇಲ್ಲಿ ಬರುವುದು ಬೇಡ ಎಂದಿದ್ದೇನೆ.

ಆ ಮೆಟ್ಟಲುಗಳ ಮೇಲೆ ಹಾಯಾಗಿ ಮಲಗಬೇಕೆಂಬ ಪ್ರಬಲ ಇಚ್ಛೆ ಮರುಕಳಿಸಿತು.

...ನೋಡು, ಈ ವಿಷಯದಲ್ಲಿ ನಾನೇನನ್ನೂ ಮಾಡಲಾರೆ. ನಮ್ಮ ಭೇಟಿ ಕೂಡ ಕೆಲವೇ ಗಂಟೆಗಳಿಗೆ ಮೊದಲು ಆಗಿದೆ ಎಂದು ಹೇಳಿದೆ. ನಿಮಗೆ ವಿಶ್ವಾಸ ಬರಲಾರದು, ಒಂದು ಘಳಿಗೆಯ ಮಟ್ಟಿಗೆ ಅಯ್ಯೋ ಎನಿಸುತ್ತಿದ್ದ ಅವನ ಮುಖ ನೋಡಿ 'ಥೂ, ಇವನ ಮುಖ ನೋಡಬಾರದು' ಎನಿಸಿಹೋಯಿತು. ನೀರುನೀರಾಗಿರುವ ಯಾವುದಾದರೂ ವಸ್ತುವನ್ನು ಮುಟ್ಟಿದರೆ ಹೇಗಾಗುತ್ತದೆಯೋ ಹಾಗಾಯಿತು. ನಾನು ಹೇಳಿದೆ – ನೋಡು ನನಗೆ ಅವನ ಪೂರ್ತಿ ಹೆಸರು ಕೂಡ ತಿಳಿಯದು, ಅಷ್ಟು ಚೆನ್ನಾಗಿ ಅವನ ವಿಚಾರ ಗೊತ್ತೇ ಇಲ್ಲ... ಜೀವನದಲ್ಲಿ ಪೂರ್ತಿ ಹೆಸರು ತಿಳಿದಿರುವುದು ಬಹಳ ಮಹತ್ವಪೂರ್ಣ ಎನ್ನುವ ರೀತಿಯಲ್ಲಿ ನಾನು ಅವನಿಗೆ ಹೇಳಿದ್ದೆ – ಪೂರ್ತಿ ಹೆಸರು ತಿಳಿಯದೆ ಏನೂ ಸಾಧ್ಯವಿಲ್ಲ ಎನ್ನುವ ರೀತಿಯಲ್ಲಿ.

ಅವನು ಇದ್ದಕ್ಕಿದ್ದಂತೆ ನನ್ನ ಎರಡೂ ಕೈಗಳನ್ನು ಹಿಡಿದುಕೊಂಡ. ತುಂಬಾ ಸನಿಹಕ್ಕೆ ಬಂದು ಹೇಳಿದ – ನೀನು... ನೀನು ಇಲ್ಲಿಯೇ ಇರುತ್ತೀಯೇನು?

...ಹಾಂ. ನಾನು ತಲೆಯಲ್ಲಾಡಿಸಿದೆ... ಎಲ್ಲಿಯ ವರೆಗೆ ನೀನು ನನ್ನನ್ನು ಹೊರಕ್ಕೆ ಹಾಕುವುದಿಲ್ಲವೋ ಅಲ್ಲಿಯ ವರೆಗೆ.

ಅವನ ಕೈ ಹಿಡಿತ ಈಗ ಸಡಿಲಾಯಿತು. ಆದರೆ ಈಗಲೂ ಅವನ ಕಣ್ಣುಗಳು ನನ್ನನ್ನು ಅನುಮಾನದಿಂದಲೇ ನೋಡುತ್ತಿದ್ದುವು. ನಾನು ಮೆಟ್ಟಲುಗಳನ್ನು ಹತ್ತತೊಡಗಿದೆ... ಈಗಲೂ ಅವನು ಹಿಂದಿನಿಂದ ನನ್ನನ್ನು ಹಿಡಿದಿದ್ದಾನೆ ಎಂದೇ ನನಗೆ ಭಾಸವಾಗುತ್ತಿತ್ತು...

ದೇವರೇ. ಈಗ ಒಂದು ಸಿಗರೇಟ್ ಸೇದಲು ಸಾಧ್ಯವಾಗಿದ್ದರೆ! ...ನಾನು ಸಿಗರೇಟ್ ಸೇದಿ ಯುಗಗಳೇ ಆಗಿರಬಹುದು.

ಈಗ ನಾನು ಇತರರ ಕಾಲುಕಾಲಿಗೆ ಸಿಗುತ್ತಾ, ನನ್ನ ಸಾಮರ್ಥ್ಯಕ್ಕನುಸಾರವಾಗಿ ಇತರರನ್ನು ಟಕರಾಯಿಸುತ್ತಾ ನನ್ನ ಮೇಜಿನ ಬಳಿಗೆ ಬಂದೆ. ನೋಡುತ್ತೇನೆ, ಯಾವ ಗೊಡವೆಯೂ ಇಲ್ಲದೆ ಜಾರ್ಜ್ ಹಾಯಾಗಿ ಮಲಗಿ ನಿದ್ದೆಮಾಡುತ್ತಿದ್ದಾನೆ. ಅವನ ತಲೆ ಮೇಜಿನ ಅಂಚಿನ ಆಸರೆಯಲ್ಲಿದೆ. ಅವನ ದೇಹ ಕುರ್ಚಿಯಲ್ಲಿ ಮುದುಡಿಕೊಂಡಿದೆ. ಅರ್ಧ ಮುಚ್ಚಿದ ಕಣ್ಣುಗಳ ಮಧ್ಯದಿಂದ ಬಿಳಿಯ ಗುಡ್ಡೆಗಳು ಮಲಿನ ಹತ್ತಿಯ ಪದರದಂತೆ ಎದ್ದು ಕಾಣುತ್ತಿವೆ. ಅವನು ನನ್ನನ್ನು ನೋಡುತ್ತಿದ್ದಾನೆ ಎಂಬ ಭ್ರಮೆ ಅನಂತರ ಸುಳ್ಳಾಯಿತು. ಅವನ ತುಟಿಗಳ ಅಂಚಿನಲ್ಲಿ ಜೊಲ್ಲು ಹರಿದುಬಂದಿತ್ತು – ಚಾಕ್‌ಪೀಸಿನಿಂದ ಎಳೆದ ಒಂದು ಒಣಗಿದ ಬಿಳಿ ರೇಖೆಯಂತೆ. ಯಾರಿಗೂ ಕಾಣದಂತೆ ನಾನು ಅದನ್ನು ಕರ್ಚೀಫಿನಿಂದ ಹಾಗೆಯೇ ಮೃದುವಾಗಿ ಒರೆಸಿದೆ.

ಅವನು ವಯಸ್ಸಿನಲ್ಲಿ ತೀರ ಚಿಕ್ಕವನೆಂದು ಆಗ ಮೊದಲ ಬಾರಿಗೆ ನನಗೆ ಆ ರಾತ್ರೆ ತಿಳಿಯಿತು – ತೀರ ಚಿಕ್ಕವ ಮತ್ತು ಇನ್ನೂ ಪ್ರೌಢ ಸ್ಥಿತಿಗೆ ಬಾರದವನಾಗಿದ್ದ.

ನನ್ನ ಗ್ಲಾಸು ಖಾಲಿಯಾಗಿತ್ತು ...ಅವನ ಗ್ಲಾಸಿನಿಂದ ಸ್ವಲ್ಪ ಲಾಗರನ್ನು ನನ್ನ ಗ್ಲಾಸಿಗೆ ಹಾಕಿಕೊಂಡೆ. ಅವನು ಆಗ ಅರ್ಧ ಮುಚ್ಚಿದ ಕಣ್ಣುಗಳಿಂದ ನನ್ನನ್ನು ನೋಡುತ್ತಿದ್ದು ಮುಗುಳ್ನಗುತ್ತಿದ್ದಾನೆಂದು ಒಂದು ಕ್ಷಣದ ಮಟ್ಟಿಗೆ ಭ್ರಮೆಯಾಯಿತು... ಅಷ್ಟೇ ಅಲ್ಲ, ಆ ಮುಗುಳ್ನಗೆಯಲ್ಲಿ ಒಂದಿಷ್ಟು ವ್ಯಂಗ್ಯವೂ ಬೆರತಿದೆ ಎನ್ನುವಂತಾಯಿತು. ಅವನು ನನ್ನನ್ನು ನೋಡುತ್ತಿದ್ದಾನೆ ಎನಿಸಿತು. ಅದೂ ಸಹ ನನ್ನ ಭ್ರಮೆಯೇ ಆಗಿರಬೇಕು. ಎಂದುಕೊಂಡು ನಾನು ಕುಡಿಯತೊಡಗಿದೆ. ಆಮೇಲೆ ನನಗೆ ಒಂಟಿತನ ಬೇಸರವಾಯಿತು. ನನಗೆ ನನ್ನ ಸ್ನೇಹಿತನಿಗೆ ಫೋನ್ ಮಾಡಲೇ ಎಂದೂ ಮನಸ್ಸಾಯಿತು. ಅವನ ಗರ್ಲ್-ಫ್ರೆಂಡ್ ಹೊರಟುಹೋಗಿದ್ದರೆ ನಾನು ಹೋಗಿ ಅವನ ಕೋಣೆಯಲ್ಲಿ ಮಲಗಬಹುದು. ಆದರೆ ಅವಳಿನ್ನೂ ಹೋಗದೆ ಇದ್ದರೆ ಕೆಡುಕೆನಿಸುತ್ತದೆ. ಇವನನ್ನಾದರೂ ಏಳಿಸಲೇ? ಎಷ್ಟು ಹೊತ್ತು ಹೀಗೆ ಮಲಗಿದ್ದಾನು? ಈ ವಯಸ್ಸಿನಲ್ಲಿ ಮನೆಯನ್ನು ಜ್ಞಾಪಿಸಿಕೊಂಡಿರಬೇಕು ಎಂದುಕೊಂಡೆ. ಯೂರಪಿಗೆ ಹೋಗುವ ಮೊದಲು ನಾನು ಮನೆಯಲ್ಲಿ ಕಳೆದಿದ್ದ ಕೊನೆಯ ರಾತ್ರಿ ಜ್ಞಾಪಕಕ್ಕೆ ಬಂತು. ತಾಯಿ ಬಾರಿಬಾರಿಗೂ ಎದ್ದು ನೀರು ಕುಡಿಯುವ ನೆಪದಲ್ಲಿ ನನ್ನನ್ನು ನೋಡುತ್ತಿದ್ದಳು. ಅದು ಜುಲೈ ತಿಂಗಳ ರಾತ್ರಿಯಾಗಿತ್ತು. ನಮ್ಮ ಮನೆಯಲ್ಲಿ ಅದೇ ನನ್ನ ಕೊನೆಯ ರಾತ್ರಿ – ಮಾರನೆಯ ದಿನ ನಾನು ಹೊರಡಲಿದ್ದೆ. ...ನನ್ನ ತಂದೆ ನನ್ನ ಹಾಸಿಗೆಯ ಹತ್ತಿರ ನಿಂತಿದ್ದರು; ನಾನು ನಿದ್ದೆ ಮಾಡುತ್ತಿದ್ದೇನೆ ಎಂದು ಅವನು ತಿಳಿದುಕೊಂಡಿದ್ದರು ...ನನಗೆ ಎಲ್ಲ ಕಾಣುತ್ತಿತ್ತು... ನಮ್ಮ ಶಹರಿನಲ್ಲಿ ಜುಲೈ ತಿಂಗಳ ರಾತ್ರಿಗಳು ಬೆಳಕಾಗಿಯೇ ಇರುತ್ತವೆ ...ಕಣ್ಣು ಮುಚ್ಚಿದ್ದರೂ ಎಲ್ಲ ಕಾಣುತ್ತಿರುತ್ತದೆ... ನನಗೆ ಸ್ವಲ್ಪ ಹೊತ್ತಿನಲ್ಲಿಯೇ ಹೊರಗೆ ಹೋಗ

ಬೇಕೆಂದು ಇಚ್ಛೆಯಾಯಿತು. ...ಇದು ಬಹಳ ಸುಲಭವಾಗಿತ್ತು. ಮೊದಲು ನಾನು ನನ್ನ ಕುರ್ಚಿಯಿಂದ ಎದ್ದು ನಿಂತುಕೊಳ್ಳುತ್ತೇನೆ, ಆಮೇಲೆ ಬಾಗಿಲು ತೆಗೆಯುತ್ತೇನೆ, ಅನಂತರ ಹೊರಗೆ ಹೊರಟುಹೋಗುತ್ತೇನೆ... ಜಸ್ಟ್ ಟು ಕಮ್ ಔಟ್... ಇಂದು ದೊಡ್ಡ ವಿಚಾರವೆಂದೇ ನಾನು ಭಾವಿಸಿದೆ... ಅವನ ಬಾಯಿಂದ ಮತ್ತೆ ಜೊಲ್ಲು ಹರಿದು ಕೊಂಡು ಬಂದಿದೆ, ತುಟಿಗಳಿಂದ ಹಿಡಿದು ಗಲ್ಲದ ವರೆಗೆ ಮುಳ್ಳಿನಂತೆ ಗಡ್ಡ ಬೆಳೆದಿರುವ ಆ ನೀಲಿ ಭಾಗದ ವರೆಗೆ... ಮತ್ತೆ ಕರ್ಚೀಫಿನಿಂದ ನಾನು ಅದನ್ನು ಒರೆಸಿಬಿಟ್ಟು...

ಶಬ್ದಗಳು... ಜೊತೆಗೆ ಅವಾಕ್ ಚೀತ್ಕಾರ!...

ಬೇಸ್‌ಮೆಂಟಿನ ಗೋಡೆಯ ಮೇಲೆ ನೆರಳುಗಳ ಚಲನವಲನ ಕಾಣುತ್ತಿದೆ—ಎಲ್ಲವೂ ಯಾವುದೋ ಕೆಟ್ಟ ಕನಸಿನಂತೆ ನಡೆದುಹೋಗುತ್ತಿದೆ. ಕುರ್ಚಿಗಳನ್ನು ಎಳೆಯುತ್ತಿರುವ ಶಬ್ದ, ಮಧ್ಯೆ ಮಧ್ಯೆ ವಿಕಟ ನಗೆ... ಆದರೆ ಅಂಥದೇನೂ ಇಲ್ಲ, ನಾನು ಏಳದೆಯೇ ಕುಳಿತಿದ್ದೇನೆ... ಗ್ಲಾಸಿನಲ್ಲಿ ಈಗಲೂ ಲಾಗರ್ ಇದೆ... ನಾನು ಏಳಲಾರೆ... ಇದ್ದಕ್ಕಿದ್ದಂತೆ ಈಗ ನನಗೆ ಒಂದು ರೀತಿಯ ವಿಚಿತ್ರ ಮನಶ್ಶಾಂತಿ ದೊರಕಿದೆ... ದಟ್ಟವಾಗಿ ಹರಡಿ ಕೊಂಡು ಭಣಭಣ ಎನ್ನುತ್ತಿರುವ ಕಾದ ಮರಳುಗಾಡಿನ ಶಾಂತಿಯಂತಿರುವ ಅದನ್ನು ಆಶ್ರಯಿಸಿ ಕುಳಿತಿದ್ದೇನೆ...

ಜಸ್ಟ್ ಟು ಕಮ್ ಔಟ್... ಜಸ್ಟ ಟು...

ನನ್ನ ಶಕ್ತಿಯನ್ನೆಲ್ಲ ಪ್ರಯೋಗಿಸಿ ಜಾರ್ಜನ ಮೈ ಕುಲುಕಿ ಅವನನ್ನು ಏಳಿಸುತ್ತಿದ್ದೇನೆ.

ಅವನು ಹಠಾತ್ತನೆ ಗಾಬರಿಬಿದ್ದುಕೊಂಡು ಎದ್ದು ಕುಳಿತುಕೊಳ್ಳುತ್ತಾನೆ. ಮತ್ತು ದಿಙ್ಮೂಢನಾಗಿ ನನ್ನನ್ನು ನೋಡುತ್ತಿದ್ದಾನೆ—ತರಬೇತಿ ಪಡೆದ ಪ್ರಾಣಿ ಸರ್ಕಸ್ಸಿನಲ್ಲಿ ಆಟದ ಸಮಯಕ್ಕೆ ಸರಿಯಾಗಿ ತಾನು ಕಲಿತಿರುವುದನ್ನು ಮರೆತು ಹತ್ತಿರ ತನ್ನ ಮಾಸ್ಟರ್ ಕಡೆಗೆ ನೋಡುತ್ತಾ ನಿಂತುಬಿಡುವ ಹಾಗೆ. ಆಮೇಲೆ ಬಹುಬೇಗ ಅವನ ಕಣ್ಣುಗಳು ವಿಚಿತ್ರ ರೀತಿಯಲ್ಲಿ ಭಯಗ್ರಸ್ತವಾದುವು.

—ಏನು ವಿಷಯ?

—ನಡಿ... ನಾವಿಲ್ಲಿಂದ ಇನ್ನು ಹೊರಟುಬಿಡಬೇಕು.

—ಆದರೆ... ಈಗಲೇ ಹೊರಡಬೇಕೆ?

ಅವನಿಗೊಂದೂ ಗೊತ್ತಾಗಲಿಲ್ಲ. ಹೊರಡುವ ಆತುರದಲ್ಲಿ ಅವನಿಗೆ ವಿಷಯ ತಿಳಿಸು ವುದೋ ಬೇಡವೋ ಎಂಬುದನ್ನು ನಿರ್ಧರಿಸುವ ಸ್ಥಿತಿಯಲ್ಲಿ ನಾನಿರಲಿಲ್ಲ.

—ಏನು, ನಾನು ನಿದ್ದೆಹೋಗಿದ್ದನೇ? —ಅವನು ಕೇಳಿದ. ನನ್ನ ಮುಖದಲ್ಲಿ ಅವನು ಏನು ಕಂಡನೋ ಏನೋ ಅಂತೂ ಅವನಿಗೆ ಸಂದೇಹ ಈಗ ಬಲವಾಗಿತ್ತು.

—ಈ ಗದ್ದಲ ಏನು?

ನಾವು ಸೋಡಾ ಫ್ಯಾಕ್ಟರಿಯ ಹೊರಗೆ ಕತ್ತಲೆಯಲ್ಲಿ ನಿಂತಿದ್ದಾಗ ಅವನ ಮುಖ

ಯಾವ ರೀತಿಯಾಗಿತ್ತೋ ಅದೇ ರೀತಿ ಈಗಲೂ ಆಗಿತ್ತು... ಈಗ ಆ ಸನ್ನಿವೇಶದ ನೆನಪು ತುಂಬಾ ಹಳೆಯದಾಗಿತ್ತು ಮತ್ತು ಅಪ್ರಾಸಂಗಿಕವಾಗಿತ್ತು.

– ನಾವೀಗ ಹೊರಗೆ ಹೋಗಬೇಕು ...ಹೊರಗೆ.

– ಹೊರಗೆ ಲಂಡನ್ನಿನ ರಾತ್ರಿ ...ನಮ್ಮ ನಿರೀಕ್ಷೆಯಲ್ಲಿದೆ... ಹೊರಗೆ ಹೊರಟು ಬಿಡುವ ಆತುರದಲ್ಲಿ ನಾವೀಗ ಇದ್ದೇವೆ.

– ವಿಲೀ ಎಲ್ಲಿದ್ದಾನೆ? ...ಅವನಿಲ್ಲದೆ ನಾವು ಹೇಗೆ ಹೋಗಲು ಸಾಧ್ಯ?

– ಅವನಾ? ...ಅವನೀಗ ಬರಲಾರ.

ಪಬ್ಬಿನ ಬಾಗಿಲು ತೆರೆಯುತ್ತದೆ... ಕೆಲವು ಜನ ಧಿಡೀರನೆ ಒಳಗೆ ನುಗ್ಗಿ ಬರುತ್ತಾರೆ.

ದೇ ಆರ್ ದೇರ್... ದಿ ಡ್ಯಾಮ್ಡ್... ಒಂದು ಕೆಟ್ಟ ಬೈಗುಳ. ಇನ್ನು ಅವರು ಮಾಡುತ್ತಿದ್ದ ಗದ್ದಲ ಮುತ್ತಿಕೊಂಡಿರುವ ನೊಣಗಳ ಶಬ್ದದಂತೆ ಅರ್ಥಹೀನ.

ನಾನು ಅವನ ಕೈ ಹಿಡಿದು ಎಳೆಯುತ್ತೇನೆ.

– ನಾನು ಹೋಗುವುದಿಲ್ಲ.

– ನಿನಗೆ ಹುಚ್ಚು ಹಿಡಿದಿಲ್ಲ ತಾನೇ?

– ಅವರೆಲ್ಲಿದ್ದಾರೆ?...

– ಅವರು ...ಮತ್ತೆ ಅದೇ ಪದ, ನನಗೆ ಅವನ ಮೇಲೆ ಕೋಪ ಬಂತು. ಏಳು ಎಂದೆ. ಅವನು ಎದ್ದು ನಿಂತುಕೊಂಡ, ನನಗೆ ಎದುರಾಗಿ... ಅವರು ಎಂದರೆ ಯಾರು, ಹೇಳು... ನಾನು ಅವನ ಭುಜ ಹಿಡಿದು ಜಗ್ಗಿ ಕೇಳುತ್ತೇನೆ ಮತ್ತು ಅವನು...

– ಹೇಳು, ಅವರು ಎಂದರೆ ಯಾರು?

– ಯೂ ಆರ್ ಡ್ರಂಕ್! ಎಂದು ಹೇಳಿ ನನ್ನ ಹಿಡಿತದಿಂದ ಒಮ್ಮೆ ಝಾಡಿಸಿ ಬಿಡಿಸಿಕೊಂಡ.

ಅವನು ಹೇಳಿದ್ದೂ ನಿಜವಿರಬೇಕೆಂದು ನಾನು ಯೋಚಿಸಿದೆ... ನಾನು ಬಹಳ ಕುಡಿದಿರಬೇಕು – ಈ ರೀತಿ ವಿಚಾರ ಮಾಡಿ ನಾನು ಸಮಾಧಾನಗೊಂಡೆ.

– ನೀನು ಇಲ್ಲಿಯೇ ಇರುತ್ತೀಯೇನು?

– ನಾನು ಎಲ್ಲಾದರೂ ಇರುತ್ತೇನೆ ...ಅವನು ಹೇಳಿದ.

– ನೋಡು ...ಮಧ್ಯದ ಕುರ್ಚಿಯನ್ನು ಪಕ್ಕಕ್ಕೆ ಜರುಗಿಸಲು ನಾನು ಪ್ರಯತ್ನಿಸುತ್ತೇನೆ.

– ಯೂ ಆರ್ ಡ್ರಂಕ್! ...ಹಾಗೆ ಹೇಳಿ ಅವನು ಹಿಂದೆ ಸರಿದುಕೊಂಡ.

ನಾನು ಹೊರಟೆ. ಅವನೂ ಹೊರಟ, ಆದರೆ ನನ್ನಿಂದ ಪ್ರತ್ಯೇಕವಾಗಿ. ನನಗೆ ಇದೊಂದು ಆಟವಾಗಿ ಕಂಡಿತು. ಇಬ್ಬರು ಕಣ್ಣಿಗೆ ಪಟ್ಟಿ ಕಟ್ಟಿಕೊಂಡು ಒಬ್ಬರಿಂದ ಇನ್ನೊಬ್ಬರು ದೂರ ಹೋಗುತ್ತಿರುವಂತೆ ಹೋಗುತ್ತಾರೆ; ಆದರೆ ವಾಸ್ತವವಾಗಿ ಅವರಿಬ್ಬರೂ ಪರಸ್ಪರ ಇನ್ನಷ್ಟು ಹತ್ತಿರ ಹತ್ತಿರ ಬರುತ್ತಿದ್ದಾರೆ, ಎನ್ನುವಂತೆ.

ಬಾಗಿಲ ಕಡೆಗೆ... ಮೊದಲು ಮೇಜುಗಳು ಸಿಗುತ್ತವೆ, ಆಮೇಲೆ ಅರ್ಧ ಸೇದಿರುವ ಸಿಗರೇಟಿನ ತುಂಡುಗಳು, ಖಾಲಿ ಗ್ಲಾಸುಗಳು ಮತ್ತು ಬಾಟ್ಲಿಗಳು, ಕುರ್ಚಿಗಳಲ್ಲಿ ಬಿದ್ದಿರುವ ಸಂಜೆಯ ವರ್ತಮಾನ ಪತ್ರಿಕೆಗಳು, ಕಾರ್ಪೆಟ್ಟಿನ ಒಂದು ಮೂಲೆಯಲ್ಲಿ ಬಿದ್ದಿರುವ ಲಿಪ್‌ಸ್ಟಿಕ್ – ಗಡಿಬಿಡಿಯಲ್ಲಿ ಯಾರೋ ಹೆಂಗಸು ಬಿಟ್ಟುಹೋಗಿರಬೇಕು – ಇದೆಲ್ಲ ನೋಡಿ ನನಗೆ ಏನೋ ಅನಿರೀಕ್ಷಿತ ಘಟನೆ ನಡೆದಿದೆ, ಸಂಪೂರ್ಣ ಅನಿರೀಕ್ಷಿತ ರೀತಿಯಲ್ಲಿ – ಜನ ಅಲ್ಲಿಂದ ಸದ್ಯ ಓಡಿದರೆ ಸಾಕು ಎಂದು ಎಲ್ಲವನ್ನೂ ಅಲ್ಲಲ್ಲೇ ಬಿಟ್ಟು ಓಡಿರುವಂತಿದೆ. ಹಾಗೆ ಓಡಿಹೋಗುವವರ ನೂಕುನುಗ್ಗಲಿನ ಮಧ್ಯೆ ಸಿಕ್ಕಿ ಹಲವರು ಫಜೀತಿಪಟ್ಟಿರಲೂ ಸಾಕು.

ಎಲೀ ಎಲ್ಲಿದ್ದಾನೆ?

ಮತ್ತು ಈ ಇಟಾಲಿಯನ್...

ಮುಂದೆ ಯೋಚಿಸುವುದು ಸಾಧ್ಯವಾಗಲಿಲ್ಲ. ಧಿಡೀರನೆ ಬಾಗಿಲು ತೆರೆದಿತ್ತು. ಜಾರ್ಜ್ ನನ್ನನ್ನು ತಳ್ಳಿಕೊಂಡು ಪರಾರಿಯಾಗಿದ್ದ. ಅವನನ್ನು ಬಿಗಿಯಾಗಿ ಹಿಡಿದುಕೊಂಡಿರಲು ನಾನು ಪ್ರಯತ್ನಪಟ್ಟಿದ್ದೆ – ಒಂದು ಅಮೂಲ್ಯ ವಸ್ತುವನ್ನು ಬಿಗಿದು ಹಿಡಿದುಕೊಂಡಿರುವ ರೀತಿಯಲ್ಲಿ. ಆದರೆ ನನ್ನ ತಲೆ ತಿರುಗಿಬಂದಂತಾಗಿ ಕೆಳಗೆ ಜೋತುಬಿತ್ತು. ಜಾರ್ಜನನ್ನು ಹಿಡಿಯಲು ನಾನು ಚಾಚಿದ್ದ ಕೈ ಅಷ್ಟಕ್ಕೆ ಮುದುರಿಕೊಳ್ಳುತ್ತಿತ್ತು. ಮೇಲ್ಛಾವಣಿ... ಅಲ್ಲ, ಅದು ಮೇಲ್ಛಾವಣಿಯಲ್ಲ, ದೀಪ. ಒಂದು ವಿಶಿಷ್ಟ ರೀತಿಯಲ್ಲಿ ನೋಡುತ್ತಿರುವ ವಿದ್ಯುದ್ದೀಪ, ಬಲ್ಬು. ನನ್ನ ಕೈ ಮುದುಡುತ್ತಿತ್ತು. (ಡೋನ್ಟ್ ಲೆಟ್ ದೆಮ್ ಎಸ್ಕೇಪ್ – ಯಾರೋ ಜೋರಾಗಿ ಕೂಗಿದ ಶಬ್ದ – ಆನಂತರ ಅದೂ ಇಲ್ಲ) ನನ್ನ ಕೈ ಒಂದು ಹಲಗೆಯ ರೀತಿಯಲ್ಲಿ ನಡುಗುತ್ತಿತ್ತು. ನಾನದನ್ನು ನೋಡುವುದು ಸಾಧ್ಯವಿತ್ತು... ನಡುಗುತ್ತಾ... ಅದು ನನ್ನ ಕೈಯೇ ಅಲ್ಲವೆನ್ನುವಂತೆ. ಯಾರೋ ಗಟ್ಟಿಯಾಗಿ ಅದನ್ನು ಕಟ್ಟುತ್ತಿದ್ದಾರೆ. ಎಲ್ಲಿಯ ತನಕ ಎಳೆದು ಕಟ್ಟುವುದಕ್ಕೆ ಸಾಧ್ಯವೋ ಅಲ್ಲಿಯ ವರೆಗೆ ...ನನ್ನ ದೇಹದಿಂದ ಇನ್ನೇನು ಕಿತ್ತುಹೋಗುವುದು ಎನ್ನುವ ಹಾಗೆ... ಇಲ್ಲ, ನೋವೇನೂ ಇಲ್ಲ... ನೋವಿನ ಘಟ್ಟ ಮುಗಿದಿರಬೇಕು, ನೋವಿನ ಒಂದು ಘಟ್ಟ ಮುಗಿದಮೇಲೆ ನೋವು ಗೊತ್ತೇ ಆಗುವುದಿಲ್ಲ...

ಐ ಸೇ... ಲೀವ್ ಹಿಮ್ ಎಲೋನ್... ಇದು ಇಟಾಲಿಯನ್ ಧ್ವನಿ ಇರಬೇಕಲ್ಲವೇ? ನನಗೆ ಸ್ವಲ್ಪ ಆಶ್ಚರ್ಯವೇ ಆಯಿತು. ನನ್ನನ್ನು ಮುತ್ತಿಕೊಂಡಿದ್ದು ನನ್ನ ಮೇಲೆ ಬಾಗಿ ನಿಂತಿದ್ದ ಮುಖಗಳು ಒಂದೊಂದಾಗಿ ಮರೆಯಾಗುತ್ತಿವೆ... ಆದರೆ ನಾನು ಅವರನ್ನು ನೋಡಲಾರೆ... ಅವರು ಬಿಡುತ್ತಿರುವ ಬಿಸಿ ಉಸಿರು ನನ್ನ ಕತ್ತಿಗೆ ಪದೇ ಪದೇ ಬಂದು ತಾಗುತ್ತಿದೆ... ಸ್ವಲ್ಪ ಹೊತ್ತಿನ ಮೇಲೆ ಅದೂ ಇಲ್ಲ.

– ನಿನ್ನಿಂದ ಏಳುವುದು ಸಾಧ್ಯವೇ?

ನಾನು ನನ್ನ ತೋಳಿನ ಕಡೆ ನೋಡುತ್ತೇನೆ... ಅದು ಇನ್ನೂ ಜಮಖಾನೆಯ ಮೇಲೆ ಬಿದ್ದುಕೊಂಡಿದೆ... ಆಶ್ಚರ್ಯದ ಮಾತೆಂದರೆ ಅದು ಇನ್ನೂ ನನ್ನ ದೇಹಕ್ಕೆ ಸೇರಿಕೊಂಡೇ ಇದೆ.

ನಾನೀಗ ಎದ್ದು ಕುಳಿತಿದ್ದೇನೆ. ಅನಾಯಾಸವಾಗಿ ನನ್ನ ಕೈಗಳು ಈಗ ನನ್ನ ಕೆನ್ನೆಗಳ ಮೇಲೆ ಹೋಗುತ್ತಿವೆ. ಅವು ಒದ್ದೆಯಾಗಿವೆ... ಪ್ರಾಯಶಃ ಕಣ್ಣೀರಿನ ಕಾರಣವಾಗಿರ ಬೇಕು. ಆದರೆ ನನಗೆ ವಿಶ್ವಾಸವಾಗುತ್ತಿಲ್ಲ... ನನ್ನ ಅರಿವು ಇಲ್ಲದೆಯೇ ಅವು ತಾನೇ ತಾನಾಗಿ ಹರಿದಿರಬೇಕು... ಬೆಳಗ್ಗೆ ಎದ್ದು ನೋಡಿದಾಗ ಹಾಸಿಗೆ ಒದ್ದೆಯಾಗಿರುತ್ತದೆ, ತಾನೇ ಅದನ್ನು ಒದ್ದೆ ಮಾಡಿರುವುದಾಗಿ ಅವನು ನಂಬಲಾರ... ಹಾಗೆ

...ಏನಾದರೂ ಕುಡಿಯುತ್ತೀಯೇನು?... ಇಟಾಲಿಯನ್ ನನ್ನ ಹಿಂದು-ಮುಂದು ಅಡ್ಡಾಡುತ್ತಿದ್ದಾನೆ.

...ಎಲ್ಲೀ ಎಲ್ಲಿದ್ದಾನೆ? – ನಾನು ಕೇಳಿದೆ.

– ಅವರು ಅವನನ್ನು ಹೊಡೆದುಬಿಡುತ್ತಾರೆ... ನಾನು ನಿನಗೆ ಹೇಳಿರಲಿಲ್ಲವೆ? – ಅವನ ಗಂಟಲು ವಿಚಿತ್ರ ರೀತಿಯಲ್ಲಿ ಬಿಗಿದುಕೊಂಡಿದೆ.

– ಏನು ಹೇಳಿದ್ದೆ ನೀನು, ನನಗೆ ಈಗ ಒಂದೂ ನೆನಪಿಗೆ ಬರುತ್ತಿಲ್ಲ.

– ನಿನಗೆ ಗೊತ್ತಿದೆ... ನೀನು ಅವನನ್ನು ಕರೆದುಕೊಂಡು ಹೊರಟುಹೋಗಿದ್ದರೆ ಏನೂ ಆಗುತ್ತಿರಲಿಲ್ಲ.

– ಏನೂ ಆಗುತ್ತಿರಲಿಲ್ಲ... ಆದರೆ ಆಗಿರುವುದನ್ನು ಯಾರಾದರೂ ತಪ್ಪಿಸಲು ಸಾಧ್ಯವೇ? ಇದು ಯಾರಿಗೂ ಗೊತ್ತಿಲ್ಲ.

..................

– ನಾನು ಈಗ ಹೋಗುತ್ತೇನೆ, ನಾನು ಹೇಳಿದೆ.

– ಎಲ್ಲಿಗೆ? ...ಇಟಾಲಿಯನ್ ಬಾಗಿಲ ಎದುರಿಗೆ ನಿಂತಿದ್ದ.

– ಎಲ್ಲಿಗಾದರೂ... ಹೊರಗೆ ನಾಲ್ಕೂ ಕಡೆ ನೋಡಿದೆ, ಜಾರ್ಜ್ ಎಲ್ಲಿಯೂ ಇರಲಿಲ್ಲ. ಇದರಿಂದ ನನಗೆ ಸಮಾಧಾನವಾಗಿದೆ.

– ಹೊರಗೆ? ...ಇಟಾಲಿಯನ್‌ಗೆ ಪ್ರಾಯಶಃ ಆ ಭರವಸೆ ಇರಲಿಲ್ಲ... ನಾನು ಯಾವ ಹದ್ದಿನ ವರೆಗೆ ಕುಡಿದಿದ್ದೇನೆ ಎಂದು ಅಂದಾಜು ಮಾಡಲು ಅಸಮರ್ಥನಾಗಿದ್ದಂತೆ ತೋರಿತು...

– ಈಗ ಬೇಡ, ಅವರು ಹೊರಗೆ ನಿಂತಿದ್ದಾರೆ.

– ನೋಡು, ನಾನೇನೂ ಮಾಡುವುದಿಲ್ಲ, ನೆಟ್ಟಗೆ ಮನೆಗೆ ಹೊರಟು ಹೋಗುತ್ತೇನೆ... ಸಹಜವಾಗಿಯೇ ನಾನು ಹೇಳಿದೆ.

– ಎಂತಹ ಮಾತನಾಡುತ್ತಿ? ...ಈ ಸಲ ಅವನು ಸ್ವಲ್ಪ ತಾಳ್ಮೆಗೆಟ್ಟವನಂತೆಯೇ

ಹೇಳಿದ... ನೀನು ವಿಲೀ ಜೊತೆಗೆ ಬಂದವನೆಂಬುದು ಅವರಿಗೆ ಗೊತ್ತಿದೆ... ಅವರಿಂದ ಪಾರಾಗಿ ನೀನು ಹೋಗಲಾರೆ.

ಅವನೊಡನೆ ಚರ್ಚೆ ಮಾಡುವುದು ವ್ಯರ್ಥ, ಅವನು ಒಪ್ಪುವುದಿಲ್ಲ.

ಹೊರಗಡೆ ಇದ್ದಕ್ಕಿದ್ದಂತೆ ಕೋಲಾಹಲ ಹೆಚ್ಚಾಗಿದೆ.... ಒಂದು ಕ್ಷಣದ ಮಟ್ಟಿಗೆ ನನ್ನ ಬೆನ್ನಿನ ಮೇಲೆ ಏನೋ ಹರಿದಂತಾಯಿತು. – ಮಂಜಿನ ಗಡ್ಡೆಯಂತೆ ತಣ್ಣಗೆ ಮತ್ತು ಸೊಟ್ಟಗೆ... ಇದನ್ನು ನಾನು ಗುರುತಿಸಬಲ್ಲೆ. ಇದಕ್ಕೆ ಹೆದರಿಕೆ ಎನ್ನುವುದು... ಬಹಳ ಹಿಂದಿನಿಂದ ಬಂದಿರುವ ಹೆದರಿಕೆ, ಒಂದು ರೀತಿಯ ಅವ್ಯಕ್ತ ಹಾಗೂ ಮೂಕ ಹೆದರಿಕೆ...

ನಾನು ಮುಗುಳ್ನಗುತ್ತಿರುವಂತೆ ನನಗೆ ಭಾಸವಾಯಿತು.

...ನೋಡು ...ನನಗೆ ಸಣ್ಣ ಪ್ರಮಾಣದ ವಿಸ್ಕೀ ಕೊಡುತ್ತೀಯ?

...ನಿನ್ನನ್ನು ಇಲ್ಲಿ ಬಿಟ್ಟು ನಾನು ಹೋಗಲಾರೆ, ಅವನು ಹೋದ.

ಬೆವರಿನಲ್ಲಿ ತೋಯ್ದು ಹೋಗಿದ್ದ ಅವನ ಆ ದುಂಡು ಹಾಗೂ ತುಂಬಿಕೊಂಡ ಮುಖವನ್ನು ಒಂದೊಂದು ಚೂರು ಮಾಡಿಬಿಡಲೇ ಎನಿಸಿತು... ಆದರೆ ನಾನು ಹಿಂದಿನಂತೆಯೇ ಮುಗುಳ್ನಗುತ್ತಿದ್ದೆ.

– ನಾನು ಇಲ್ಲಿಯೇ ಇರುತ್ತೇನೆ... ನಿನಗಾಗಿ ಅಲ್ಲದಿದ್ದರೂ ನೀನು ಕೊಡುವ ವಿಸ್ಕೀಗಾಗಿ. ಇಷ್ಟು ನನ್ನಲ್ಲಿ ವಿಶ್ವಾಸವಿಲ್ಲವೆ?

ಈ ಸಲ ಅವನ ಮುಖದಲ್ಲಿ ನಗು ತಾನೇ ತಾನಾಗಿ ಹರಡಿಕೊಂಡಿತು. ಆ ನಗುವಿನಲ್ಲಿ ಒಂದು ಹತಾಶ ಭಾವನೆ ಅಡಗಿತ್ತು. ನನ್ನಲ್ಲಿ ಅವನಿಗೆ ನಂಬಿಕೆ ಇಲ್ಲ ಎನ್ನುವುದಕ್ಕೆ ಆ ನಗುವಿನ ಹಿಂದೆ ಮರೆಮಾಚುತ್ತಿದ್ದಾನೆ ಎಂಬುದು ಸ್ಪಷ್ಟವಿತ್ತು.

ಅವನು ಕೌಂಟರಿನ ಕಡೆಗೆ ಹೋದ. ಅಲ್ಲಿ ವಿವಿಧ ಜಾತಿಯ ಮದ್ಯಗಳನ್ನೂ ಬೀರನ್ನೂ ಸೂಚಿಸುವ ಬಾಟ್ಲಿಗಳನ್ನು ಇಡಲಾಗಿತ್ತು. ಪದೇ ಪದೇ ಅವನು ನನ್ನ ಕಡೆ ತಿರುಗಿ ನೋಡುತ್ತಿದ್ದ.

ನಾನು ನಿಂತೇ ಇದ್ದೆ.

ಸ್ಕಾಚ್ ಬಾಟ್ಲಿಯೊಂದನ್ನು ತೆಗೆದು ಅವನು ಕೌಂಟರ್ ಮೇಲೆ ಇಟ್ಟ. ಆಮೇಲೆ ನಮ್ಮಿಬ್ಬರ ಮಧ್ಯೆ ರಹಸ್ಯ ಒಪ್ಪಂದವೊಂದು ಆಗಿದೆ ಎನ್ನುವ ರೀತಿಯಲ್ಲಿ, ನನ್ನ ಕಡೆ ನೋಡಿದ.

ನಮ್ಮ ಮೌನ ಅಲ್ಲಿ ಕೇಳುತ್ತಿದ್ದ ಶಬ್ದಗಳಿಗಿಂತ ಹೆಚ್ಚು ಗಡುತರವಾಗಿತ್ತು. ಆ ಶಬ್ದಗಳೋ ಅಲೆಗಳು ಬಂದು ಬಡಿಯುವಂತೆ ಬಾಗಿಲಿಗೆ ಬಡಿಯುತ್ತಿದ್ದು ಮತ್ತೆ ಹೊರಗಿನ ಅಂತ್ಯರಹಿತ ಅಂಧಕಾರದಲ್ಲಿ ಹೋಗಿ ಲೀನವಾಗುತ್ತಿದ್ದುವು.

ಅವನು ಗ್ಲಾಸು ತೊಳೆಯುತ್ತಿದ್ದ. ನಲ್ಲಿಯಲ್ಲಿ ನೀರು ಬರುತ್ತಿತ್ತು... ಹೊಳೆಯುತ್ತಿದ್ದ ಆ ಗ್ಲಾಸಿನ ಮೇಲೆ ಜಾರುತ್ತಿದ್ದ ನೀರಿನ ಹನಿಗಳು ...ನಾನು ಆ ಹನಿಗಳ ಕಡೆಗೇ ನೋಡುತ್ತಿದ್ದೆ ಮತ್ತು ಅವುಗಳನ್ನು ನೋಡುತ್ತಿದ್ದಂತೆ ನನಗೆ ಇನ್ನೇನು ವಾಂತಿಯಾಗುತ್ತದೆ

ಎಂದು ಭಾಸವಾಗುತ್ತಿತ್ತು. ಗಾಜಿನ ಮೇಲೆ ಹರಿಯುವ ನೀರನ್ನು ನಾನು ನೋಡಲಾರೆ... ...ಒಳಗೇ ಒಂದು ವಿಚಿತ್ರ ಕಂಪನವನ್ನು ನಾನು ಅನುಭವಿಸುತ್ತಿದ್ದೆ... ನಾನು ಬಾಗಿಲ ಕಡೆಗೆ ಕಾಲಿಡುತ್ತೇನೆ... ಅವನು ಇನ್ನೂ ನನ್ನ ಕಡೆಗೆ ಬೆನ್ನುಮಾಡಿಕೊಂಡಿದ್ದಾನೆ... ನಲ್ಲಿಯಿಂದ ಬರುತ್ತಿದ್ದ ನೀರು ನನ್ನ ಮನಸ್ಸಿನ ದುಗುಡವನ್ನು ಇನ್ನಷ್ಟು ಪ್ರಬಲಗೊಳಿಸು ತ್ತಿತ್ತು... ಆ ಸಮಯದಲ್ಲಿ ನನಗೆ ಅನಿಸಿತು, ನಾನೀಗ ಅಪೇಕ್ಷಿಸಿದರೂ ಹಿಂದಿರುಗಲಾರೆ, ನನ್ನ ಕಾಲುಗಳ ಮೇಲಿನ ಸ್ವಾಧೀನವನ್ನು ನಾನು ಸಂಪೂರ್ಣ ಕಳೆದುಕೊಂಡಿದ್ದೇನೆ... ನನ್ನ ಮೇಲಿನ ನಿಯಂತ್ರಣಶಕ್ತಿಯೇ ನನ್ನಲ್ಲೀಗ ಇಲ್ಲ... ನಾನು ಅಂತಹ ನಿಯಂತ್ರಣ ದಿಂದ ಸಂಪೂರ್ಣ ಮುಕ್ತನಾಗಿದ್ದೇನೆ.

ಬಾಗಿಲು ತೆರಯಿತು... ಮುಂದಿನ ಘಳಿಗೆಯಲ್ಲಿ ನಾನು ಹೊರಗಡೆ ಇದ್ದೆ.

ಹೊರಗಡೆ... ಕತ್ತಲೆಯಲ್ಲಿ.

ಜಸ್ಟ್ ಟು ವೆಟ್... ನನಗೆ ನಾನೇ ಹೇಳಿಕೊಂಡೆ.

ಅದು ಬಿಸಿಲುಗಾಲದ ಒಂದು ಪ್ರಶಾಂತ ರಾತ್ರಿಯಾಗಿತ್ತು. ಬೆಳಿಗ್ಗೆಯೆಲ್ಲ ದಣಿದು ಹಾಯಾಗಿ ಬಿದ್ದುಕೊಂಡಿರುವ ವಿರಾಟ್ ವನ್ಯಜಂತುವಿನಂತೆ ಗಂಭೀರವಾಗಿದೆ; ಸುತ್ತಲೂ ಮಹಾಮೌನ.

ಬೆವರು ಆರುತ್ತಿತ್ತು. ನಾನು ಒಮ್ಮೆ ಮನಸ್ಸು ತೃಪ್ತಿಯಾಗುವ ತನಕ ದೀರ್ಘವಾಗಿ ಉಸಿರೆಳೆದೆ... ಎರಡು ಬಾರಿ... ಲಘು ಪಶ್ಚಾತ್ತಾಪ... ವಿಸ್ಕೀ ಬಿಟ್ಟುಬಂದೆನಲ್ಲ ಎಂದು... ಈ ಸಮಯದಲ್ಲಿ ಅದು ಹೊಟ್ಟೆ ಸೇರಿದ್ದರೆ... ಮತ್ತೆ ದೀರ್ಘವಾಗಿ ಉಸಿರು ಎಳೆಯುತ್ತೇನೆ... ನಾನು ಈಗ ಒಂದು ಸಿಗರೇಟ್ ಸೇದುವುದು ಸಾಧ್ಯವಾಗಿದ್ದರೆ!... ನಾನು ದೊಡ್ಡ ರಸ್ತೆ ಬಿಟ್ಟು ಒಂದು ಗಲ್ಲಿಯನ್ನು ಪ್ರವೇಶಿಸಿದ್ದೇನೆ... ಚಿಕ್ಕ ಚಿಕ್ಕ ಬೀದಿಗಳ ಮೂಲೆಗಳಲ್ಲಿ ಸಾಧಾರಣವಾಗಿ ಸಿಗರೇಟ್‌ನ ಆಟೋಮೆಷೀನ್‌ಗಳು ಇರುತ್ತವೆ...

...ಹಿಯರ್ ಹೀ ಈಜ್ ದಟ್ ಸನ್ ಆಫ್ ಎ ಬಿಚ್!

ನಾನು ಅಲ್ಲಿಯೇ ನಿಲ್ಲುತ್ತೇನೆ... ಇಲ್ಲ, ಇದು ಹೆದರಿಕೆಯಿಂದಾಗಲ್ಲ... ನಾನು ಬಹಳ ಶಾಂತನಾಗಿಯೇ ಇದ್ದೇನೆ. ತಣ್ಣಗಿರುವ ಏನೋ ವಸ್ತು ನನ್ನ ಬೆನ್ನುಮೂಳೆಯ ಮೇಲೆ ಈಗ ಹರಿಯುತ್ತಿದೆ... ನೀರುನೀರಾಗಿ ಒಂದು ಹಲ್ಲಿಯ ರೀತಿಯಲ್ಲಿ ತಟಸ್ಥವಾಗಿ.

ಅವರು ಅಲ್ಲ ಇದ್ದರು... ಗೋಡೆಯ ಬದಿಗೆ ಇದ್ದ ನೆರಳುಗಳು ಈಗ ಮುಂದಕ್ಕೆ ಸರಿಯುತ್ತವೆ.

–ಹೋಲ್ಡ್ ಹಿಮ್!... ಯಾರೋ ಅಲ್ಲಿಂದಲೇ ಕಿರುಚಿದ ಶಬ್ದ... ನಾನು ನನಗೇ ಅರಿಯದಂತೆ ಹಿಂದಕ್ಕೆ ತಿರುಗಿಬಿಟ್ಟಿದ್ದೇನೆ.... ನನ್ನ ಪಕ್ಕದಲ್ಲಿ ಗಾಳಿ ಬೀಸಿದಂತೆ ಆಗುತ್ತದೆ.

ಡ್ಯಾಮ್ಡ್ ನಿಗರ್...

ವೇಟ್, ಜಸ್ಟ್ ವೇಟ್...

ಅವನು ಹಿಂದಿನಿಂದ ಬಂದಿದ್ದ... ನನ್ನ ತಲೆ ಹಿಂದಕ್ಕೆ ವಾಲಿಕೊಳ್ಳುತ್ತಿದೆಯೆಂಬುದರ ಅರಿವೂ ನನಗಿಲ್ಲ... ಇನ್ನೊಂದು ಕ್ಷಣ... ನಾನು ಎರಡು ಹೋಳಾಗುತ್ತೇನೆ.

ನಾನು ಅವನನ್ನು ನೋಡುವುದು ಸಾಧ್ಯವಾದರೆ!

ಕೈ ಇದೆ, ಅದು ಮೆತ್ತಗಿದೆ... ನನ್ನ ಹಣೆಯ ಆ ಕಡೆ ಈ ಕಡೆ ಕಪಾಲ ಭಾಗದಿಂದ ರಕ್ತ ಸರ್-ಸರ್ ಸುರಿದು ಹೋಗುತ್ತಿದೆ – ನಾನು ಸ್ವಲ್ಪ ಅಲ್ಲಾಡುತ್ತೇನೆ... ಸ್ವಲ್ಪ–ಮುಂಭಾಗಕ್ಕೆ ಸರಿಯುತ್ತೇನೆ... ಅವನೂ ನನ್ನ ಜೊತೆಗೆ ಮುಂದೆ ಸರಿಯುತ್ತಿದ್ದಾನೆ... ಇನ್ನೊಬ್ಬ ವ್ಯಕ್ತಿ ನನ್ನ ಕೈಗಳನ್ನಷ್ಟೇ ಬಿಗಿಯುತ್ತಿದ್ದಾನೆ. ಒಂದು ಕ್ಷಣದ ಮಟ್ಟಿಗೆ ನನಗೆ ತುಂಬಾ ಆಶ್ಚರ್ಯವಾಗುತ್ತದೆ. ...ಹೀಗೆ ಥರ ಥರ ಎನ್ನುತ್ತಿರುವುದು ನನ್ನ ದೇಹ ವೇನು, ಎಂದು.

– ಯೂ ...ಸ್ವೈನ್!

ನಾನು ಬಿಡಿಸಿಕೊಳ್ಳಲು ಒಮ್ಮೆ ಬಲವಾಗಿ ಪ್ರಯತ್ನಿಸುತ್ತೇನೆ. ...ಆದರೆ ನನ್ನ ಕೂದಲು ...ನನ್ನ ಕೂದಲನ್ನು ಅವನು ಬಿಗಿಹಿಡಿದಿದ್ದಾನೆ... ಅವನ ಬರಿಗೈ ನನ್ನ ಕಣ್ಣಮುಂದೆ ಸುಳಿಯುತ್ತದೆ... ನಾನು ಅನಾಯಾಸವಾಗಿ ಅವನ ಕೈಯನ್ನು ಬಿಗಿಯಾಗಿ ಕಚ್ಚುತ್ತೇನೆ... ಹಲ್ಲುಗಳು ಚೆನ್ನಾಗಿ ಊರಿವೆ... ಓಹ್, ಲೀವ್ ಇಟ್, ಬಗರ್... ಒಂದು ನಿಟ್ಟುಸಿರು... ಅವನು ನನ್ನನ್ನು ಹಿಡಿದು ಜಗ್ಗಾಡುತ್ತಾನೆ... ಒಂದು ಬಾರಿ, ಎರಡು ಬಾರಿ– ಪ್ರತಿ ಸಲವೂ ನಾನು ಕುಡಿದವನಂತೆ ಅವನ ಕೈಮೇಲೆ ಜೋತುಬೀಳು ತ್ತೇನೆ.

– ಲೀವ್ ಹಿಮ್ ಎಲೋನ್ ಯೂ ಸನ್ ಆಫ್ ಎ ವೈಟ್ ಹೋರ್!

ಏನು, ಇದು ವಿಲೀಯ ಧ್ವನಿಯಂತಿದೆ!... ನನ್ನ ಪೂರ್ತಿ ಶಕ್ತಿ ಬಿಟ್ಟು ಕೂಗುಹಾಕಲು ಪ್ರಯತ್ನಿಸುತ್ತೇನೆ... ಆದರೆ ಘುರ್ ಘುರ್ ಎನ್ನುವ ವಿಕೃತ ಸ್ವರವೊಂದು ಬಿಟ್ಟರೆ ನನ್ನ ಬಾಯಿಂದ ಏನೂ ಹೊರಡುತ್ತಿಲ್ಲ.

ಸ್ವಲ್ಪ ಹೊತ್ತಿನಲ್ಲಿ ಅವನ ಹಿಡಿತ ಸ್ವಲ್ಪ ಸಡಿಲವಾದಂತಾಗಿ ನಾನು ಈಗ ಬಿಡಿಸಿ ಕೊಳ್ಳಬಲ್ಲೆ ಎಂಬ ಭರವಸೆ ಬಂತು. ನನ್ನ ಕಣ್ಣು ಈಗ ಬಿಟ್ಟಿವೆ. ಅಂಧಕಾರದ ಒಂದು ನೀಲಿ ಸಮುದ್ರ ನನ್ನ ಕಣ್ಮುಂದೆ ಹಾದು ಬರುವಂತಿದೆ; ಅದರ ಮೇಲೆ ಕೆಂಪು. ಹಸಿರು. ಗುಲಾಬಿ ಮಚ್ಚೆಗಳು ತೇಲಿಬರುತ್ತಿವೆ. ನಾನು ಅವುಗಳನ್ನು ಹಿಂದೆ ನೋಡಿದ್ದೇನೆ. ಬಹಳ ಹಿಂದೆ. ಇದೆಲ್ಲ ಒಂದು ಪರಿಚಿತ ದುಃಸ್ವಪ್ನದಂತೆ ನನ್ನ ಕಣ್ಮುಂದೆ ಮರುಕಳಿಸಿ ಬರು ತ್ತಿದೆ.... ಮೇಲಿಂದ ಕೊನೆಯ ವರೆಗೆ.

ನನ್ನಿಂದ ಸುಮಾರು ಎರಡು ಗಜದಷ್ಟು ಫಾಸಲೆಯಲ್ಲಿ ಅವನು ನಿಂತಿದ್ದಾನೆ... ಗೋಡೆಯ ಪಕ್ಕಕ್ಕೆ. ಸ್ವಲ್ಪ ಸಮಯದ ಹಿಂದೆ ಯಾರೊಡನೆ ನಾನು ಲಾಗರ್ ಕುಡಿಯು ತ್ತಿದ್ದೆನೋ ಅದೇ ವಿಲೀ ಇಲ್ಲಿ ನಿಂತಿದ್ದಾನೆಂದು ಕ್ಷಣಕಾಲ ನನಗೆ ನಂಬಲಾಗಲಿಲ್ಲ.

ಅವನು ನನ್ನ ಗುರುತುಹಿಡಿಯುತ್ತಾನೆಯೇ?

ಮತ್ತು ಆ ಸುಂದರ ಹುಡುಗಿ?... ಮತ್ತು ಜಾರ್ಜ್? ನಮ್ಮನ್ನು ನಾವೇ ಮರೆತು ಬಿಡುವಂತಹ ರಾತ್ರಿ, ಇದು. ನಮ್ಮನ್ನು ಇಲ್ಲಿ ಬಿಟ್ಟು ಅವರು ಎಲ್ಲಾದರೂ ಗುಮ್ ಆಗಿದ್ದಾರೋ, ನಮ್ಮನ್ನು ಮರೆತುಬಿಟ್ಟಿದ್ದಾರೋ...?

ಇನ್ನು ಕೇವಲ ಎರಡು ಗಜಗಳಷ್ಟು ದೂರದ ಕತ್ತಲೆಯಲ್ಲಿ...

ಜನರ ಗುಂಪು, ಅರ್ಧ ಅರ್ಧ ಕಾಣುತ್ತಿರುವ ಮುಖಗಳು, ಅವರ ಪೈಕಿ ಒಬ್ಬ ಎತ್ತರದ ಯುವಕ – ಅವನು ವಿಲಿಯ ಮೇಲೆ ಬಾಗಿ ನಿಂತಿದ್ದಾನೆ... ವಿಲೀಯ ಷರ್ಟಿನ ಕಾಲರನ್ನು ಕೈಯಲ್ಲಿ ಬಿಗಿಹಿಡಿದುಕೊಂಡು ವಿಲೀಯನ್ನು ಗೋಡೆಯ ಪಕ್ಕಕ್ಕೆ ಎಳೆದು ತಂದಿದ್ದಾನೆ... ಫಟೀರ್... ಫಟೀರ್.

ಆ ಸ್ಕಾರ್ಫ್... ಸ್ಕಾರ್ಫನ್ನು ಆ ಉದ್ದನೆಯ ವ್ಯಕ್ತಿ ತನ್ನ ಕತ್ತಿನಲ್ಲಿ ಕಟ್ಟಿ ನೋಡಿದ್ದಾನೆ... ಬಣ್ಣಬಣ್ಣದ್ದು... ಅದರ ಮೇಲೆ ಗುಲಾಬಿಹೂಗಳು ಅಚ್ಚಾಗಿವೆ...

ಗುಲಾಬಿಹೂಗಳು... ಜೊತೆಗೆ ರಕ್ತ, ವಿಲೀಯ ತುಟಿಗಳಿಂದ ಅವನ 'ಗೋಟಿ'ಯ ವರೆಗೆ ಹರಿದುಬಂದಿರುವ ರಕ್ತ...

ರಾತ್ರಿಯ ಮಬ್ಬಿನ ಆ ಕೆಲವು ಕ್ಷಣಗಳಲ್ಲಿ ಎಲ್ಲವೂ ಒಟ್ಟುಗೂಡಿ ಬಂದಂತಾಗಿದೆ... ಶಬ್ದಗಳು, ಹುಳಿಹುಳಿಯಾಗಿ ವಾಸನೆ ಬರುತ್ತಿರುವ ಬೆವರು... ಮತ್ತು ನಗು...

ಅವನು ಆಗತಾನೇ ಬಂದಿದ್ದ... ಕುಳ್ಳನೆಯ ವ್ಯಕ್ತಿ... ಈ ತನಕ ಅವನು ಇದೇ ಜನರ ಮಧ್ಯೆ ಅವಿತುಕೊಂಡಿದ್ದ. ಅವನ ದಟ್ಟವಾದ ಹುಬ್ಬುಗಳ ಮಧ್ಯೆ ಚಿಕ್ಕ ಚಿಕ್ಕ ಕಣ್ಣುಗಳು ಅಸ್ಥಿರ ರೀತಿಯಲ್ಲಿ ಮಿನುಗುತ್ತಿದ್ದುವು... ಆ ಹುಬ್ಬುಗಳು ಎಷ್ಟು ದಟ್ಟವಾಗಿದ್ದುವು ಎಂದರೆ ಅದರ ಕೂದಲು ಸೊಂಪಾಗಿ ಬೆಳೆದಿದ್ದು ಕಣ್ಣಿನ ಮೇಲೆ ಬಂದು ಬೀಳುತ್ತಿದ್ದುವು... ಅವನು ಜೂಲುನಾಯಿಯ ಮಾಸ್ಕ್-ಮುಖವಾಡ ಹಾಕಿಕೊಂಡಿದ್ದಾನೊ ಏನೋ ಎನ್ನುವ ಹಾಗೆ...

ಅವನು ಬಹಳ ನಿಧಾನವಾದ ಹೆಜ್ಜೆಗಳನ್ನು ಹಾಕುತ್ತಾ ವಿಲೀ ಇದ್ದ ಕಡೆಗೆ ಬರುತ್ತಾನೆ...

– ನಿನ್ನ ಡಾರ್ಲಿಂಗ್ ಎಲ್ಲಿ ಹೋಗಿದ್ದಾಳೆ?... ಅವನು ಒರಟಾಗಿ ವಿಲೀಯ ಗಲ್ಲವನ್ನು ಮೇಲಕ್ಕೆ ಎತ್ತಿ ಕೇಳುತ್ತಾನೆ.

– ಹೇಳು, ಎಲ್ಲಿ ಹೋದಳು?

ಪ್ರತಿ ಸಲ "ಎಲ್ಲಿ ಹೋದಳು?" ಎಂದು ಕೇಳುವಾಗಲೆಲ್ಲ ವಿಲೀಯ ತಲೆಯನ್ನು ಗೋಡೆಗೆ ಬಡಿಯುತ್ತಿದ್ದ... ಪ್ರತಿಸಲ ವಿಲೀಯ ತಲೆ ಒಬ್ಬ ಕುಡುಕನ ತಲೆ ಜೋತು ಬೀಳುವ ರೀತಿಯಲ್ಲಿ ಜೋತುಬೀಳುತ್ತಿತ್ತು.

ಅವರು ಅವನನ್ನು ನೋಡಿ ನಗುತ್ತಿದ್ದರು!...

...ಡ್ಯಾಮ್ ಹಿಮ್ ದೇರ್!... ಇನ್ನೊಬ್ಬ ತನ್ನ... ಕಡೆಗೆ ಸಂಜ್ಞೆಮಾಡಿದ... ಖಟ್ ಖಟ್ ಗೋಡೆಗೆ ಬಡಿಯುವ ಶಬ್ದ... ಖಟ್ ಖಟ್ ನನ್ನ ಭಯಗ್ರಸ್ತ ಹೃದಯದ

ಬಡಿತದ ಶಬ್ದ... ಚಿವರು ಮತ್ತು ರಕ್ತದಿಂದ ತೊಯ್ದು ಹೋಗಿರುವ ಷರ್ಟು ಮತ್ತು ಕೊನೆಯಿಲ್ಲವೇನೋ ಎಂಬಂತೆ ಫಟೀರ್ ಫಟೀರ್ ಮತ್ತು ಆ ರಾಕ್ಷಸೀ ವಿಕಟ ನಗೆ.

...ಹೇಳು, ಎಲ್ಲಿ ಹೋದಳು?... ಸ್ಪೀಕ್! ಸ್ಪೀಕ್! ಸ್ಪೀಕ್ ಯು ಫಿಲ್ತೀ... ಹಾ-ಹಾ-ಹಾ... ಫಟೀರ್, ಫಟೀರ್, ಫಟೀರ್...

ಸ್ಕಾರ್ಫಿನಲ್ಲಿ ತೂರಾಡುತ್ತಿದ್ದ ಆ ಬಣ್ಣದ ಗುಲಾಬಿಹೂಗಳು...

ನನಗೆ ಈಗ ಒಂದೂ ನೆನಪಿಲ್ಲ... ನಾನೇ ಹಾಗೆ ಚೀರಿದ್ದೆನೋ ಅಥವಾ ಹೊರಗಿನ ಆ ಚೀತ್ಕಾರ ನನ್ನನ್ನು ಆ ರೀತಿ ದಂಗುಬಡಿಸಿತ್ತೋ ತಿಳಿಯದು (ಇಲ್ಲಿ... ನನ್ನ ಗಂಟಲಿಂದ ಅಷ್ಟು ದೊಡ್ಡ ಭಯಭೀತ ಚೀತ್ಕಾರ ಬಂದಿತ್ತೆಂದು ಇವೊತ್ತಿಗೂ ನಾನು ನಂಬಲಾರೆ) ನಾನು ಒಂದು ವಿಚಿತ್ರ ರೀತಿಯಲ್ಲಿ ಉಸಿರಾಡುತ್ತಿದ್ದೆ ಎಂಬುದಷ್ಟೇ ನನಗೆ ಗೊತ್ತು... ದಿಕ್ಕು ಕಾಣದ ಬಾವಲಿಯೊಂದು ಫಡಫಡಾಯಿಸುತ್ತಾ ಹಾರಿ ಬಂದು ನನ್ನ ಎದೆಗೆ ಬಡಿದಂತೆ ಆಗಿತ್ತು ಮಾತ್ರ... ನಾನು ಒಂದು ಸಲ ನನ್ನ ಶಕ್ತಿಯನ್ನೆಲ್ಲ ಬಿಟ್ಟು ರಫಟಕ್ಕನೆ ಆ ಕೈಗಳಿಂದ ನನ್ನ ಕತ್ತನ್ನು ಬಿಡಿಸಿಕೊಂಡಿದ್ದೆ... ಈ ತನಕ ಆ ಕೈಗಳು ನನ್ನ ತಲೆಯನ್ನು ಬಿಗಿದು ಹಿಡಿದಿದ್ದುವು. ಅವನ್ನೀಗ ಬಿಡಿಸಿಕೊಂಡಿದ್ದೆ...

ಕೇವಲ ಎರಡು ಗಜ... ಅಷ್ಟು ದೂರದೊಳಗಿನ ಅಂಧಕಾರ.

ಬಿಡಿಸಿಕೊಂಡು ನಾನು ವಿಲೀಯ ಕಡೆಗೆ ಹೋಗಿದ್ದೆ. ಅವನಿಗೆ ಏನೋ ಹೇಳಬೇಕೆಂದಿದ್ದೆ... ಅವನನ್ನು ಮುಟ್ಟಬೇಕೆಂದಿದ್ದೆ... ಅವನು ಬಹಳ ಮಹತ್ವಪೂರ್ಣ ವ್ಯಕ್ತಿ ಎಂದು ತಿಳಿಯುತ್ತದೆ.

ಮಧ್ಯದ ಅಂಧಕಾರ... ಆ ತಣ್ಣಗೆ ಕೊರೆಯುವ ಕೈಗಳು ಮತ್ತು ಆಗ ಆದ ಚೀತ್ಕಾರ...

ನನ್ನ ತಲೆ ಆ ಅದೃಶ್ಯ ವ್ಯಕ್ತಿಯ ಗಲ್ಲಕ್ಕೆ ಟಕರಾಯಿಸಿತ್ತು. ಆ ಮನುಷ್ಯ ನನ್ನನ್ನು ಮಧ್ಯದಲ್ಲಿಯೇ ಹಿಡಿದು ನಿಲ್ಲಿಸಿದ್ದ. ಎರಡನೆಯ ಕೈಯಿಂದ ಅವನು ನನ್ನ ತಲೆಗೆ ಕೈ ಹಾಕಿದ್ದ... ನನ್ನ ಮುಖ ಅವನ ಷರ್ಟಿನ ಕಡೆಗೆ ಎಳೆಯಲ್ಪಡುತ್ತಿತ್ತು. ಐ ವಿಲ್ ಟೀಚ್ ಯು... ಹೌ ಟು ರನ್... ಬಾಸ್ಟರ್ಡ್... ನನ್ನ ಎರಡು ಕಾಲುಗಳನ್ನೂ ಏಕೆ ಹಾಗೆ ಗಾಳಿಯಲ್ಲಿ ನಾನು ಮೂರ್ಛೆಬಂದವರು ಆಡಿಸುವಂತೆ ಆಡಿಸುತ್ತಿದ್ದೆನೋ ತಿಳಿಯದು... ಏನೂ ಆಗದು... ನಾನು ಹಾಗೇ ಯೋಚಿಸಿದೆ... ಅವನು ನನ್ನನ್ನು ಬಿಡುವುದಿಲ್ಲ... ನನಗೀಗ ಉಸಿರಾಡುವುದೇ ಕಷ್ಟವೆನಿಸಿತು... ಪ್ರತಿಯೊಂದು ಸಲವೂ ಇದು ನನ್ನ ಕೊನೆಯ ಉಸಿರು ಎನಿಸುತ್ತಿತ್ತು. ಮತ್ತೊಂದು ಸಲ ನಾನು ಆ ಹಿಂದಿನ ಉಸಿರಾಟದ ಬಂಧನದಿಂದ ಬಿಡಿಸಿಕೊಂಡು ಉಸಿರಾಡುತ್ತಿರುವಂತೆ... ಹೀಗೆ ಯಾವುದೂ ಕೊನೆಯುಸಿರಾಗುತ್ತಿಲ್ಲ; ಪ್ರತಿ ಸಲವೂ ಬಹಳ ಕಷ್ಟದಿಂದ ಉಸಿರಾಡುತ್ತಿದ್ದೇನೆ, ಅಷ್ಟೇ. ಹೀಗೆ ಮತ್ತೊಮ್ಮೆ ಉಸಿರಾಡಲು ಸಾಧ್ಯವಾದಾಗ ಒಂದು ರೀತಿಯ ಭಯಭೀತ ಸಂಕೇತವೂ ಆಗುತ್ತದೆ... ಸದ್ಯ ಬದುಕಿದೆ ಎನ್ನುವಂತಹ ಸಮಾಧಾನದ ಒಂದು ಘಳಿಗೆ

ಬರುತ್ತದೆ... ಅದಕ್ಕಾಗಿ ಹಾತೊರೆಯುತ್ತಿದೆ... ಮುಂದೆ ಇಷ್ಟು ಸಂಕಟದ ಇನ್ನೊಂದು ಘಳಿಗೆ ಪ್ರಾಯಶಃ ಬರಲಾರದು... ನಾನು ಒಬ್ಬನೇ ಇದ್ದೇನೆಂಬುದನ್ನು ನಾನು ಮರೆತ್ತಿದ್ದೆ... ನನ್ನನ್ನು ಒಂಟಿಯಾಗಿ ಅವರು ಬಿಡುವುದಿಲ್ಲ. ನಾನು ಉಳಿಯಲಾರೆ ಎಂದು ತಿಳಿದಿದ್ದೆ. ಒಬ್ಬಂಟಿಗನಾದ ಮಾತ್ರಕ್ಕೆ ಸಾಲದು, ಎಂದು ಆ ರಾತ್ರಿ ನನಗೆ ತಿಳಿಯಿತು... ಏಕೆಂದರೆ ಅವರು ಪ್ರತಿಯೊಂದು ಕಡೆ ಇರುತ್ತಾರೆ ಎಂದು ತಿಳಿದಿದ್ದೆ. ಅವರು ಒಂದು ದಿನ ನನ್ನ ಮೇಲೆ ಹೀಗೆ ಆಕ್ರಮಣ ನಡೆಸಿಯಾರು ಎಂದು ಮಾತ್ರ ಗೊತ್ತಿರಲಿಲ್ಲ... ನನ್ನ ಹೆದರಿಕೆ ಮೊದಲಿನಂತೆ ಈಗ ಆಕಾರರಹಿತವಾಗಿರದೆ ಸಾಕಾರವಾಗಿತ್ತು... ನನ್ನಷ್ಟೇ ದೊಡ್ಡದು ಹಾಗೂ ಸೀಮಿತ ಆಕಾರದ್ದು... ನಾವಿಬ್ಬರೂ ಕತ್ತಲೆಯಲ್ಲಿ ಜಾನುವಾರುಗಳಂತೆ ಉಸಿರಾಡುತ್ತಿದ್ದೆವು... ನನ್ನ ಕಾಲುಗಳು ಹೀಗೆಯೇ ಗಾಳಿಯಲ್ಲಿ ತೂರಾಡುತ್ತಿರುವಂತೆ ನನಗೆ ಭಾಸವಾಯಿತು. ...ಓಹ್ ಡಿಯರ್ ಹೌ ಫನಿ ಇಟ್ ಈಜ್ ...ಹೌ ಫನೀ! ಗುದ್ದಾಟ... ಬೈಗಳು ಮತ್ತು ಅದೇ ವಕ್ರನಗು.

ಅವರು ನನ್ನನ್ನು ದರದರ ಎಳೆದುಕೊಂಡು ಹೋಗಿದ್ದಾರೆ... ಬೀದಿಯ ಕೊನೆಯ ತನಕ.

ನಾನು ಏಳಲು ಪ್ರಯತ್ನಿಸುತ್ತೇನೆ; ಆಗದೆ ಅಲ್ಲೇ ಕುಳಿತುಬಿಡುತ್ತೇನೆ. ಅಲ್ಲೇ ಮಲಗಿಬಿಡಲೇ ಎಂದೂ ಆಗುತ್ತದೆ. ಆದರೆ ಕಣ್ಣುಮುಚ್ಚಿದಕೂಡಲೇ ಹಬೆಯಂತೆ ಮೇಲೆ ಏನೋ ಏಳುವಂತಾಗುತ್ತದೆ. ನನ್ನ ಕಾಲುಗಳಲ್ಲಿ ಎದೆಯಲ್ಲಿ ಮತ್ತು ಬಾಹುಗಳ ಕೀಲುಗಳಲ್ಲಿ... ಆ ಹಬೆ ಮೇಲೇಳುತ್ತದೆ ಮತ್ತು ಅಲ್ಲೇ ಅಡಗುತ್ತದೆ... ಇದೊಂದು ರೋಗವಿರಬಹುದೇ? ಆದರೆ ಜೀವನದ ಇಷ್ಟು ವರ್ಷಗಳನ್ನು ಕಳೆದಿದ್ದೇನೆ, ಯಾವತ್ತೂ ಇಂತಹ ಅನುಭವ ಆಗಿಲ್ಲ. ನನ್ನ ಚೇತನ ಈಗ ಆ ರೋಗದ ಸೆರಗನ್ನು ಹಿಡಿದು ಎಳೆಯುತ್ತದೆ ಎಂದು ಭಾಸವಾಗುತ್ತಿದೆ. ... ಚೇತನ ಅದರ ಸಂಪರ್ಕ ಬಿಟ್ಟಿರುವಾಗ ಏನನ್ನೋ ನಾನು ಬಿಟ್ಟಿರುವಂತೆ ಭಾಸವಾಗುತ್ತದೆ... ಮಳೆ ಬಂದಿರುವ ಸಂಜೆ... ರಸ್ತೆಯ ಒಂದು ಕೊನೆಯಿಂದ ಇನ್ನೊಂದು ಕೊನೆಯ ವರೆಗೆ ನಾನು ಎರಡನೆಯ ಬಾರಿಗೆ ಓಡುತ್ತಿದ್ದೇನೆ... ಒಂದು ಚಿಕ್ಕ ಹಳ್ಳ ನನ್ನ ಮುಂದೆ ಬಾಯಿ ತೆರೆದುಕೊಂಡಿದೆ – ಇದರಲ್ಲಿ ನಾನು ಬಚ್ಚಿಟ್ಟುಕೊಳ್ಳಲೇ ಎಂಬ ಒಂದು ಉತ್ಕಟ ಅಪೇಕ್ಷೆ ಆ ಸಮಯದಲ್ಲಿ ಉಂಟಾಗುತ್ತದೆ... ಇದರಲ್ಲಿ ಬಚ್ಚಿಟ್ಟುಕೊಂಡರೆ ಎಲ್ಲ ಸರಿಹೋಗುತ್ತದೆ, ಎಲ್ಲ ಸರಿಹೋಗುತ್ತದೆ... ಆದರೆ ಇದು ಹಳ್ಳ ಅಲ್ಲ... ಇದು ಒಂದು ರೀತಿಯ ಪೀಡೆ, ರೋಗ– ಸಂಪೂರ್ಣ ಹೊಸ ಬಗೆಯ ನೋವು – ಪರಿಪೂರ್ಣ ರೀತಿಯ ನೋವು. (ಹೌ ಫನೀ ಇಟ್ ಈಜ್, ಹೌ ವಂಡರ್‌ಫುಲ್... ಫನೀ) ಮಧ್ಯೆ ಮಧ್ಯೆ ನನ್ನ ಚೇತನದ ಮುಂದೆ ಇರುವ ಪರ್ದೆ ಬೀಳುತ್ತದೆ... ನಾನು ಇದ್ದೇನೆಂದು ನನಗೆ ಆಶ್ಚರ್ಯವಾಗುತ್ತದೆ – ನಾನು ಹೊರಗೆ ಬಂದಿದ್ದೇನೆಂದು ನಂಬುವುದಕ್ಕೇ ನನಗಾಗುವುದಿಲ್ಲ... ನನ್ನಿಂದ ಹೊರಗೆ ಬಂದಿರುವ ನನ್ನ ಚೇತನ... ನನ್ನನ್ನು ಉಳಿಸಲು ಇನ್ನು ಯಾರಿಂದಲೂ ಸಾಧ್ಯವಿಲ್ಲ.

ಕತ್ತಲೆಯ ಹೊರಗೆ... ಅವರಿರುವ ಕಡೆ.

ಅದು ಆಗಸ್ಟ್ ತಿಂಗಳ ಪ್ರಾರಂಭದ ಒಂದು ರಾತ್ರಿ. ಅವರು ನನ್ನನ್ನು ಒಂದು ಗಲೀಜು ಮೂಲೆಯಲ್ಲಿ ಬಿಟ್ಟುಹೋಗಿದ್ದಾರೆ. ಎಷ್ಟು ಹೊತ್ತಿನಿಂದ ನಾನು ಅಲ್ಲಿ ಬಿದ್ದುಕೊಂಡಿದ್ದೆ ಎಂಬುದು ನನಗೆ ನೆನಪಿಲ್ಲ. ಮಧ್ಯೆ ಮಧ್ಯೆ ನಾನು ಕಣ್ಣು ಬಿಟ್ಟು ನೋಡುತ್ತಿದ್ದೆ. ಧೂಳಿನ ಒಂದು ಮಂದ ಪರದೆಯ ಹಿಂದೆ ಲಂಡನ್ನಿನ ಆಕಾಶ ಕಾಣುತ್ತಿತ್ತು. ಮತ್ತೆ ಕಣ್ಣು ಮುಚ್ಚಿ ಕೊಳ್ಳುತ್ತಿತ್ತು... ಒಂದು ಅಂಧಕಾರದಿಂದ ಇನ್ನೊಂದು ಅಂಧಕಾರಕ್ಕೆ ಬಂದಿದ್ದೇನೆ ಅನಿಸುತ್ತಿತ್ತು.

ಬಹಳ ಹೊತ್ತು ಹೀಗೆಯೇ ಇದ್ದೆ. ಆಮೇಲೆ ಪ್ರಜ್ಞೆ ಬಂತು. ಯಾರೋ ಹತ್ತಿರ ಬಂದಂತಹ ಕಾಲಿನ ಸಪ್ಪಳ. ಬಹಳ ಮಂದಗತಿಯಲ್ಲಿ ಕೇಳುತ್ತಿತ್ತು. ನನಗೆ ನಿದ್ದೆ ಬಂದು ತೂಕಡಿಸುತ್ತಿದ್ದೆ. ಪ್ರಾಯಶಃ ಇದೆಲ್ಲ ಒಂದು ಕನಸಿರಬೇಕು. ಯಾರೋ ನನ್ನ ಭುಜ ಗಳನ್ನು ಹಿಡಿದು ಜಗ್ಗಿಸುತ್ತಿದ್ದಾರೆ ಎಂದು ಬಹಳ ಹೊತ್ತಿನ ಮೇಲೆ ನನಗೆ ಗೊತ್ತಾ ಯಿತು...

...ತುಂಬಾ ಏಟು ಬಿದ್ದಿದೆಯೇನು?

...ಇಲ್ಲ, ಅಷ್ಟೇನೂ ಆಗಿಲ್ಲ – ನನ್ನ ಕಣ್ಣುಗಳು ಈಗ ತೆರೆದಿದ್ದುವು. ನನ್ನ ಮೇಲೆ ಜಾರ್ಜನ ಮುಖ ಕಾಣುತ್ತಿತ್ತು. ಲಾಗರಿನ ಲಘು ವಾಸನೆ ನನ್ನ ಮೂಗಿಗೆ ಬಡಿಯಿತು. ಈ ವಾಸನೆಯ ಜೊತೆಗೆ ಒಂದು ಹಳೆಯ ನೆನಪು ಏಕೆ ಬಂತೋ ತಿಳಿಯದು – ಮೋತ್ಸಾ ರ್ಟನ ಸೆರೆನಾಡ್‌— ಒಂದು ಹಳೆಯ ರಾಗ ಕೂಡ ಅಲ್ಲ, ಅದರ ಒಂದು ತುಣುಕು ಮಾತ್ರ; ಕೆಲಸಮಯದ ಹಿಂದೆ ಅದನ್ನು 'ಪಬ್'ನಲ್ಲಿ ಗುರುತಿಸಿದ್ದೆ...

ನೀನು ಇಲ್ಲಿದ್ದೀಯೇನು?

– ಅವರು ನಿನ್ನನ್ನು ಇಲ್ಲಿಗೆ ತಂದಿರುತ್ತಾರೆ ಎಂಬುದು ನನಗೆ ಗೊತ್ತಿತ್ತು. ನಾನು ನೋಡುತ್ತಿದ್ದೆ – ಅವನು ಹೇಳಿದ.

– ವಿಲೀ ಎಲ್ಲಿದ್ದಾನೆ?

– ಲೆಟ್ ಹಿಂ ಗೋ ಟು ಹೆಲ್... ಅವನು ಇಲ್ಲದಿದ್ದರೆ ಇದೊಂದೂ ಆಗುತ್ತಿರಲಿಲ್ಲ.

– ಏನಾಗುತ್ತಿರಲಿಲ್ಲ?

ಇದ್ದಕ್ಕಿದ್ದಂತೆ ದೊಡ್ಡ ರಸ್ತೆಯಿಂದ ಒಂದು ಕಾರು ಈ ಕಡೆಗೆ ಬಂತು. ಕಣ್ಣು ಮುಚ್ಚಿ ಕೊಳ್ಳುವಂತಾಯಿತು ಅದರ ಲೈಟಿನ ಪ್ರಕಾಶಕ್ಕೆ. ಆ ಬೆಳಕಿನಲ್ಲಿ ಪ್ರಥಮ ಬಾರಿಗೆ ನನ್ನ ಗಮನ ನನ್ನ ಕಡೆ ಹೋಯಿತು. – ಷರ್ಟಿನ ಕಾಲರ್ ಮೇಲುಭಾಗ ಹರಿದುಹೋಗಿದೆ. ಹೊಟ್ಟೆಯ ಮೇಲೆ ಧೂಳು ಹಾಗೂ ಬೀರಿನ ಮಚ್ಚೆಗಳು ಬಿದ್ದಿವೆ, ಬೆವರಿಗೆ ಮೈಗೆ ಅಂಟಿ ಕೊಂಡಿರುವ ಬನಿಯನ್‌ನಿಂದ ಒಂದು ರೀತಿಯ ಭಾರವಾದ ಶಾಖ ಬರುತ್ತಿದೆ.

– ನೀನು ಯಾಕೆ ವಾಪಸ್ಸು ಬಂದೆ?

– ನಾನು ಒಳಗೆ ನೀವಿದ್ದಲ್ಲಿ ಬರಬೇಕೆಂದಿದ್ದೆ; ಆದರೆ ನಿಮಗೆ ಗೊತ್ತು—

– ಇಟ್ ಈಜ್ ಆಲ್‌ರೈಟ್ ಜಾರ್ಜ್, ಎಂದು ನಾನು ಬಾಯಿಹಾಕಿ ಮುಂದೆ ಏನೂ ಹೇಳದಂತೆ ಮಾಡಿದೆ. ಒಂದು ದೀರ್ಘಕಾಲದ ಜ್ವರದಿಂದ ಎದ್ದಂತಾಗಿತ್ತು, ನನ್ನ ಸ್ಥಿತಿ. ಹತ್ತಿರದಲ್ಲಿಯೇ ಲ್ಯಾಂಪ್‌ಪೋಸ್ಟಿನ ಕೆಳಗೆ ಹಳದಿ ಬಣ್ಣದ ಗುರುತು ಹಾಕಿದ ಭಾಗ ಇತ್ತು. ಆ ದುಂಡು ವೃತ್ತದಲ್ಲಿ ನಾನು ಉಗುಳಿದೆ. ...ಕೆಂಪೆಂದರೆ ಕೆಂಪು. ತಾಂಬೂಲ ಉಗುಳಿದ ಹಾಗಿತ್ತು. ಅದು ರಕ್ತ... ನನಗೆ ಆಶ್ಚರ್ಯವಾಯಿತು. ಮತ್ತೊಮ್ಮೆ ಹಾಗೆಯೇ ಉಗುಳಿದೆ, ನನ್ನ ರಕ್ತವನ್ನು ಇನ್ನೊಮ್ಮೆ ನೋಡುವ ಸಾಹಸ ನನ್ನಿಂದ ಆಗದೆಹೋಯಿತು.

– ನಿನಗೆ ಪೆಟ್ಟು ಹೆಚ್ಚಾಗಿ ತಗಲಿಲ್ಲತಾನೇ? – ಜಾರ್ಜ್ ಕೇಳಿದ. ಅವನ ಸ್ವರದಲ್ಲಿ ಒಂದು ಆತಂಕ ಇತ್ತು. ಅದು ನನಗೆ ಆಶ್ಚರ್ಯವನ್ನುಂಟುಮಾಡಿತು.

ನಾನು ಸುಮ್ಮನಿದ್ದೆ. ಒಂದು ಕ್ಷಣ ಹಾಗೆಯೇ ನನ್ನ ತಲೆಯನ್ನು ಬೀದಿಯ ಲ್ಯಾಂಪ್–ಪೋಸ್ಟಿಗೆ ಒರಗಿಸಿಕೊಂಡು ನಿಂತಿದ್ದೆ.

ಫಟೀರ್... ಫಟೀರ್... ಫಟೀರ್.

ಆಗಲೂ ನನ್ನ ಕಿವಿಯಲ್ಲಿ ಆ ಶಬ್ದ ನರಗಳ ಮೇಲೆ ಬಡಿಯುತ್ತಿತ್ತು.

ನಾವು ಮೌನವಾಗಿ ಟ್ಯೂಬ್-ಸ್ಟೇಷನ್ ಕಡೆಗೆ ಕಾಲುಹಾಕುತ್ತಿದ್ದೆವು. ನನ್ನ ಜೇಬಿನಲ್ಲಿ ಇನ್ನೂ ಎರಡು ಷಿಲಿಂಗ್‌ಗಳ ನಾಣ್ಯ ಬಿದ್ದಿತ್ತು. ನಡುಗುತ್ತಿದ್ದ ನನ್ನ ಕೈ ಬೆರಳುಗಳು ಅನಾಯಾಸವಾಗಿ ಆಡುತ್ತಿದ್ದುವು.

ಹೊರಗೆ ರಸ್ತೆಯಲ್ಲಿ ಆಗಸ್ಟ್ ತಿಂಗಳ ಎಲೆಗಳು ಉದುರಿಬಿದ್ದಿದ್ದುವು... ಲಂಡನ್ನಿನ ರಾತ್ರಿ ಕಳೆಯುತ್ತಿರುವಂತೆ ಗಿರಣಿಗಳ ಹೊಗೆ ಕೂಡ ಇಳಿಮುಖವಾಗುತ್ತಿತ್ತು.

...ನೀನು ನಂಬುವುದಿಲ್ಲ... ನೀನು ತಿಳಿಯುತ್ತೀಯೆ... ಜಾರ್ಜ್ ಬಲವಂತದಿಂದ ನನ್ನ ಭುಜ ಹಿಡಿದುಕೊಂಡ.

ಇಟ್ ಈಜ್ ಆಲ್‌ರೈಟ್... ಅವನ ಕೈಯನ್ನು ಭುಜದಿಂದ ತೆಗೆದೆ. ಅವನು ಈ ಸಮಯದಲ್ಲಿ ನನ್ನ ಜೊತೆಗೆ ಇಲ್ಲದಿದ್ದರೆ...

ನಾವು ಟ್ಯೂಬ್ ಸ್ಟೇಷನ್ನಿನ ಮೆಟ್ಟಲುಗಳನ್ನು ಇಳಿಯುತ್ತಿದ್ದೆವು.

ಪ್ಲ್ಯಾಟ್‌ಫಾರಂನಲ್ಲಿ ಜನ ಇರಲಿಲ್ಲ. ಬೆಂಚುಗಳ ಮೇಲೆ ಅಲ್ಲಿ ಇಲ್ಲಿ ಒಬ್ಬಿಬ್ಬರು ತೂಕಡಿಸುತ್ತಿದ್ದರು. ನಮಗೆ ತುಂಬ ಸಮೀಪದಲ್ಲಿ ಗೋಡೆಗೆ ಒರಗಿಕೊಂಡು ಒಂದು ಗಂಡು... ಹೆಣ್ಣಿನ ಜೊತೆ ನಿಂತಿತ್ತು... ಹುಡುಗಿ ತನ್ನ ಕೂದಲ ಮೇಲೆ ಪದೇ ಪದೇ ಕೈ ಆಡಿಸುತ್ತಿದೆ. ಅವಳ ಮುಂದೆ ನಿಂತಿರುವ ಯುವಕ ಮೆಲುದನಿಯಲ್ಲಿ ಏನನ್ನೋ ಪಿಸುಗುಟ್ಟುತ್ತಿದ್ದಾನೆ. ಹುಡುಗಿ ಮತ್ತೆ ಮತ್ತೆ ನಗುತ್ತಿದ್ದಾಳೆ. ಮತ್ತು ಬೆಚ್ಚಿಬಿದ್ದು ಆ ಕಡೆ ಈ ಕಡೆ ನೋಡುತ್ತಾಳೆ.

ಟಿಕೆಟ್ ತೆಗೆದುಕೊಂಡು ನಾವು ಸಮೀಪದ ಖಾಲಿ ಬೆಂಚಿನ ಮೇಲೆ ಕುಳಿತುಕೊಂಡೆವು.

– ನೀನು ಲಂಡನ್ನಿನಲ್ಲಿಯೇ ಇರುತ್ತೀಯೇನು?

ಅವನು ಸುಮ್ಮನಿದ್ದ. ಅವನ ದೃಷ್ಟಿ ದೀಪಗಳ ಆಚೆ, ಅಂಡರ್‌ಗ್ರೌಂಡ್ ರೈಲಿನ ಸುರಂಗದ ಕಡೆಗೆ ಇತ್ತು – ಸುರಂಗದ ಕತ್ತಲೆ ಪಟ್ಟಣದ ಕತ್ತಲೆಯಿಂದ ಪ್ರತ್ಯೇಕವಾದಂತೆ ಇದೆ... ಕೊಳಕು ನೀರು ನಿಂತಿರುವ ಒಂದು ಹಳ್ಳದ ಹಾಗೆ ಪ್ರತ್ಯೇಕ.

– ಎಲೀ ಎಲ್ಲಿ ಹೋದನೋ?

– ಎಲೀ... ನಾನು ಅವನನ್ನು ನೋಡಲಿಲ್ಲ... ಅವನು ಹೇಳಿದ.

– ಹೊರಗಡೆ ನಿಂತಿದ್ದೆ, ಎಂದು ಈಗತಾನೇ ಹೇಳಿದೆ?

– ನಾನೇನನ್ನೂ ನೋಡಲಿಲ್ಲ.

ನಾವು ಮತ್ತೆ ಸುಮ್ಮನಾಗಿಬಿಟ್ಟೆವು. ಆದರೆ ಆ ಮೌನದಲ್ಲಿ ಒಂದು ರೀತಿಯ ಚೇಷ್ಟೆ ಇತ್ತು, ಒತ್ತಡವಿತ್ತು. ಪದೇ ಪದೇ ಒಂದು ವಿಚಾರ ನಮ್ಮ ಮುಂದೆ ಬರುತ್ತಿರುವ ಹಾಗೆ, ನಾವು ಹಿಂದಕ್ಕೆ ಅದನ್ನು ಅಟ್ಟುತ್ತಿರುವ ಹಾಗೆ.

– ನಾನು ಸುಳ್ಳು ಹೇಳುತ್ತಿದ್ದೇನೆ ಎಂದು ಭಾವಿಸಿದ್ದೀಯಲ್ಲವೆ?

ನಾನು ಬೇರೆ ಕಡೆ ಮುಖಮಾಡಿಕೊಂಡೆ.

ನೀನು ಏನಾದರೂ ತಿಳಿದುಕೊ... ಅದರ ಚಿಂತೆ ನನಗಿಲ್ಲ, ಎಂದು ಹೇಳಿದ.

– ಡೋಂಟ್ ಬಿ ಸಿಲ್ಲಿ... ನಾನು ಹೇಳಿದೆ.

– ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವೇ ಇಲ್ಲ, ಅವನು ನನ್ನ ಕಡೆ ನೋಡಿದ.

– ನಾನು ಓಡಿಹೋಗಿದ್ದೆ ಎಂದು ನೀನು ಭಾವಿಸಿದ್ದೀಯೆ... ಈ ಸಲ ಅವನ ತುಟಿ ನಡುಗುತ್ತಿತ್ತು.

– ಡ್ಯಾಮ್ ಇಟ್, ಐ ಸೇ ಡ್ಯಾಮ್ ಇಟ್.

– ಅವರು ನನ್ನನ್ನು ಹಿಡಿದಿಟ್ಟಿದ್ದರು... ನಾನು ನಿನ್ನ ಬಳಿಗೆ...

– ಇಟ್ ಈಜ್ ಆಲ್‌ರೈಟ್, ಜಾರ್ಜ್.

– ಓಹ್, ನೋ... ಇಟ್ ಈಜ್ ನಾಟ್ ಆಲ್‌ರೈಟ್ – ಅವನು ಕಿರುಚುವ ರೀತಿಯಲ್ಲಿ ಹೇಳಿದ.

ಪಕ್ಕದ ಬೆಂಚಿನಲ್ಲಿ ತೂಕಡಿಸುತ್ತಾ ಇದ್ದ ಮನುಷ್ಯ ಎದ್ದು ಕುಳಿತ. ಮತ್ತು, ನಮ್ಮ ಕಡೆ ನೋಡತೊಡಗಿದ.

– ಜಾರ್ಜ್, ಇಲ್ಲಿ ಕೇಳು... ನಾನು ಅವನ ಭುಜದ ಮೇಲೆ ಕೈ ಇಟ್ಟು ಹೇಳಿದೆ. ಬೆಂಚಿನ ಕೈಮೇಲೆ ಎರಡೂ ಕೈಗಳಲ್ಲಿ ಹುದುಗಿದ್ದ ಅವನ ಮುಖವನ್ನು ಅವನು ಆಗಾಗ ಮೇಲಕ್ಕೆತ್ತುತ್ತಿದ್ದ.

– ಐ ವಾಜ್ ಅಫ್ರೇಡ್, ಟೆರಿಬ್ಲಿ ಅಫ್ರೇಡ್.

ನಾವಿಬ್ಬರೂ ಹೆದರಿ ನಡುಗುತ್ತಿದ್ದೆವು.

– ಅಫ್ರೇಡ್...

ನಾನು ಮುಂದುಗಡೆ ನೋಡುತ್ತಿದ್ದೆ... ಅಂಡರ್ ಗ್ರೌಂಡಿನ ಕತ್ತಲೆ ಸ್ವಲ್ಪ ಸ್ವಲ್ಪ

ಸರಿಯುತ್ತಿತ್ತು.... ಪರದೆ ಏರುವ ರೀತಿಯಲ್ಲಿ ಇನ್ನೇನು ಸಂಪೂರ್ಣ ಸರಿದುಹೋಗು ತ್ತದೆ. ನಾನು ಆ ಕ್ಷಣದಲ್ಲಿ ಜಾರ್ಜನ ಬಗ್ಗೆ ಹೆದರತೊಡಗಿದೆ. ನನ್ನನ್ನು ನೋಡಿ ನನಗೇ ಹೆದರಿಕೆಯಾಯಿತು. ಯಾವತ್ತೂ ಅವನ ಕಡೆ ನಾನಿನ್ನು ನೋಡಲಾರೆ ಎಂಬಷ್ಟು ಹೆದರಿಕೆಯಾಯಿತು. ಆ ಕ್ಷಣದಲ್ಲಿ ನಾನು ಭಯಂಕರ ಕೆಲಸ ಮಾಡಬಹುದಿತ್ತು.... ಅವನಿಗೆ ನಾನು ಹೇಳುವುದು ಬಹಳ ಇತ್ತು, ಹೇಳಬೇಕೆಂದಿದ್ದೆ ಏನಾದರೂ... ಆದರೆ ನಾವಿಬ್ಬರೂ ಒಟ್ಟಿಗೆ ಇದ್ದೂ ನಾವು ಒಬ್ಬಂಟಿಗರಾಗಿದ್ದೆವು... ಅವನು ಅಳುತ್ತಿದ್ದ, ನಾನು ಏನು ಮಾಡಲೂ ಅಸಮರ್ಥನಾಗಿದ್ದೆ... ಇಷ್ಟು ಭಯಂಕರ ಸ್ಥಿತಿ ಇನ್ನೊಂದು ಇರಲಾರದು. ಇಬ್ಬರು ವ್ಯಕ್ತಿಗಳು ಒಟ್ಟಿಗೆ ಇದ್ದುಕೊಂಡು ಒಬ್ಬರನ್ನೊಬ್ಬರು ಉಳಿಸಲು ಅಸಮರ್ಥರಾಗಿರುವಂತಹ ಪರಿಸ್ಥಿತಿ, ಅದು. ಕಳೆದ ಘಟನೆಗಳ ಒಂದು ಸ್ಮೃತಿ ಕೂಡ ಈಗ......

ಆಗ ನಾವು ಗಾಬರಿಬಿದ್ದು ನೋಡುತ್ತೇವೆ. ಮುಂದಿನ ಪ್ಲಾಟ್‌ಫಾರಂನಲ್ಲಿ ವಾರನ್ ಸ್ಟ್ರೀಟ್‌ಗೆ ಹೋಗುವ ಟ್ಯೂಬ್‌ರೈಲು ಬರುತ್ತಿದೆ. ಜಾರ್ಜ್ ಅದನ್ನು ಹಿಡಿದೇ ಹೋಗ ಬೇಕಾಗಿತ್ತು. ನಮ್ಮ ಅಕ್ಕಪಕ್ಕದ ಬೆಂಚುಗಳಲ್ಲಿ ತೂಕಡಿಸುತ್ತಾ ಕುಳಿತಿದ್ದ ಜನ ಥಟಕ್ಕನೆ ಎದ್ದು ನಿಂತರು. ಟ್ಯೂಬ್‌ಲೈಟಿನ ಆ ಬೆಳಕಿನಲ್ಲಿ ನ್ಯೂ ಆಕ್ಸನ್‌ಗೆ ಹೋಗುವ ಮುಂದಿನ ಸುರಂಗದ ಕತ್ತಲೆ ಸ್ವಲ್ಪ ಸರಿಯಿತು. ಓಡೋಡಿ ಕೆಲವರು ಮೆಟ್ಟಲುಗಳನ್ನು ಇಳಿದು ಕೆಳಗಿನ ಪ್ಲಾಟ್‌ಫಾರಮ್ಮಿಗೆ ಹೋಗುತ್ತಿದ್ದರು – ಅದು ವಾರನ್‌ಸ್ಟ್ರೀಟ್‌ಗೆ ಹೋಗುವ ಕೊನೆಯ ರೈಲನ್ನು ಹಿಡಿದರೆ ಸಾಕೆಂಬ ಆತುರದಲ್ಲಿ.

ಜಾರ್ಜ್ ಎದ್ದುನಿಂತ. ಅವನು ಒಮ್ಮೆಯೂ ನನ್ನ ಕಡೆ ನೋಡಲಿಲ್ಲ. ಮುಂದಿನ ಕ್ಷಣದಲ್ಲಿ ಅವನೂ ಇತರರೊಂದಿಗೆ ಟ್ಯೂಬ್‌ರೈಲಿನ ಕಡೆಗೆ ಓಡತೊಡಗಿದ. ಟ್ಯೂಬ್ ರೈಲಿನ ಡಬ್ಬಗಳ ಬಾಗಿಲುಗಳು ತೆರೆದುವು. ನುಗ್ಗಿಬಂದ ಜನಸಮೂಹವನ್ನು ಒಳಗೆ ಸೇರಿಸಿಕೊಂಡು ಬಾಗಿಲುಗಳು ಕ್ಷಣಮಾತ್ರದಲ್ಲಿ ಮುಚ್ಚಿಕೊಂಡುವು.

ಕಂಬಿಗಳ ಮೇಲೆ ರೈಲು ಓಡುತ್ತಿದ್ದುದರ ಶಬ್ದ ಕ್ರಮೇಣ ಕಡಿಮೆಯಾ ಮತ್ತೆ ಎಲ್ಲವೂ ಹಿಂದಿನಂತೆ ಶಾಂತವಾಯಿತು. ರೈಲಿನ ಹೆಡ್‌ಲೈಟ್ ಸುರಂಗದ ಕತ್ತಲೆಯನ್ನು ಹೋಗಲಾಡಿಸಿತ್ತೋ ಆ ಕತ್ತಲೆ ಮತ್ತೆ ಬಂದಿತ್ತು.

ಪ್ಲ್ಯಾಟ್‌ಫಾರಮಿನ ಮೇಲಿನ ಛಾವಣಿಯ ಆಚೆ ಕಾಣುತ್ತಿದ್ದ ನ್ಯೂ ಆ: ದೀಪಗಳು ಕತ್ತಲೆಯಲ್ಲಿ ತಮ್ಮಷ್ಟಕ್ಕೆ ತಾವು ಮಿನುಗುತ್ತಿದ್ದುವು.

ಕಂಭದ ಮರೆಯಲ್ಲಿದ್ದ ಹುಡುಗ ಹೇಳಿದ ...ಮುಂದಿನ ಗಾಡಿಹಿಡಿದು ಹೋ ರಾಯಿತು... ಹಾಗೆ ಹೇಳಿ ಅವಳನ್ನು ಚುಂಬಿಸಿದ. ಹುಡುಗಿಯ ಕಣ್ಣುಗಳು ಹಾಗೇ ಮುಚ್ಚಿಕೊಂಡುವು...

ಅವಳು ನೋಡಲೂ ಇಲ್ಲ...

ಸಿಗರೇಟು ಸೇದಿ ಎಷ್ಟು ವರ್ಷಗಳಾದುವೋ ಎನಿಸಿತು ನನಗೆ.

## ಸುವಾಸನೆ

ಸುಮೇರಾನಿಗೆ ರಿಕ್ಷಾ ಈಗ ತನ್ನದೇ ಒಂದು ಅಂಗವಾಗಿ ಭಾಸವಾಗುತ್ತಿದೆ. ಎದ್ದಿರುವಾಗಲಿ ಮಲಗಿರುವಾಗಲಿ ಅದು ತನ್ನಿಂದ ಪ್ರತ್ಯೇಕವಾಗುವ ಹಾಗೆಯೇ ಇಲ್ಲ. ಅದರ ಟ್ರಿನ್ ಟ್ರಿನ್ ಗಂಟೆಯ ಶಬ್ದ ಅವನ ಮಟ್ಟಿಗೆ ಗೆಜ್ಜೆಯ ಝುಂಕಾರ. ಎಲ್ಲಿಲ್ಲದ ಸ್ಫೂರ್ತಿ ಕೊಡುತ್ತದೆ. ಪೆಡಲ್ ತುಳಿಯುವುದನ್ನು ನಿಲ್ಲಿಸಿದಾಗ ಹಿಂದಿನ ಚಕ್ರ ಹಾಗೂ ಫ್ರೀವ್ಹಿಲ್‌ನಿಂದ ಬರುತ್ತಿದ್ದ ಕಿರ್-ಕಿರ್ ಶಬ್ದ ಅವನ ನರಗಳ ಮೇಲೆ ಗರಗಸದಂತೆ ಕೆಲಸಮಾಡುತ್ತದೆ. ಮತ್ತೆ ಅವನು ತನ್ನ ಸೀಟಿನ ಮೇಲೆ ಕುಳಿತರೆ ಸಾಕು ಈ ಲೋಕದ ಜ್ಞಾನ ಅವನಿಗಿರುವುದಿಲ್ಲ. ಅವನ ಮನಸ್ಸು ಅಲ್ಲೋಲಕಲ್ಲೋಲವಾಗುತ್ತದೆ, ಅವನಿಗೆ ಇದೊಂದು ಮಾನಸಿಕ ರೋಗ. ಅವನ ಮನಸ್ಸಿನಲ್ಲಿ ಒಮ್ಮೆಲೆ ಹಲವು ಬಗೆಯ ವಿಚಿತ್ರ ನೆನಪುಗಳು ಸುಳಿಯುತ್ತವೆ; ಒಂದಕ್ಕೊಂದು ಸಂಬಂಧವೇ ಇಲ್ಲದಂತಹ ವಿಚಾರಗಳು ಬರುತ್ತವೆ. ತನ್ನ ಈ ಮಾನಸಿಕ ಸ್ಥಿತಿಯೇ ಅವನಿಗೊಂದು ದೊಡ್ಡ ಚಿಂತೆ.

ಈ ಇಬ್ಬರು ಸವಾರಿಗಳನ್ನು ಕೂರಿಸಿಕೊಂಡಾಗಿನಿಂದಲೂ ಅವನ ಮನಸ್ಸಿನಲ್ಲಿ ಯಾವುದೋ ಹಳೆಯ ನೆನಪು ಸುಳಿಯುತ್ತಿದೆ. ಹಿಂದಿನ ಅನುಭವವೊಂದರ ಪುನರಾವೃತ್ತಿಯಾದಂತೆ ಅವನಿಗೆ ಭಾಸವಾಗುತ್ತಿವೆ. ಅವನ ರಿಕ್ಷಾದ ಫುಟ್‌ಬೋರ್ಡಿನ ಮೇಲೆ ಬಿದ್ದಿರುವ ಬಿಳಿಯ ಬಣ್ಣದ ಕರವಸ್ತ್ರವನ್ನು ನೋಡಿ ಅವನು ಬೆಚ್ಚಿಬಿದ್ದ, ಒಂದು ಜೀವಂತ ಜಂತುವನ್ನು ಕಂಡನೇನೋ ಎನ್ನುವಂತೆ. ರಿಕ್ಷಾದಲ್ಲಿ ಕುಳಿತಿದ್ದ ಮುದುಕಿ ಅದನ್ನು ತನ್ನ ಕೈಯಲ್ಲಿ ಉಂಡೆಮಾಡಿ ಹಿಡಿದುಕೊಂಡಿದ್ದುದರಿಂದ ಅದು ಗುಂಡಗೆ ಒಂದು ಚೆಂಡಿನಂತಾಗಿ ಬಿದ್ದಿತ್ತು. ಅದನ್ನವನು ಎತ್ತಿಕೊಂಡ. ಓಡಿ ಹೋಗಿ ಅದನ್ನು ಮುದುಕಿಗೆ ಕೊಟ್ಟು ಬರಲೇ ಎಂದುಕೊಂಡ. ಆದರೆ ಆಮೇಲೆ ಇದ್ದಕ್ಕಿದ್ದಂತೆಯೇ ಅವನ ಕೈ ಮೂಗಿನ ತನಕ ಹೋಯಿತು. ಆದರೆ ಇದೇ ಕರ್ಚೀಫಿನಿಂದ ಅವಳು ಮುದುಕನ ಜೊಲ್ಲನ್ನು ಒರೆಸಿದ್ದಳು ಎಂಬುದನ್ನು ನೆನಸಿಕೊಂಡಾಗ ಹೇಸಿಗೆಯಾಗಿ ಛೀ ಛೀ ಎಂದುಕೊಂಡ. ಕೆಂಡ ಮುಟ್ಟಿದನೇನೋ ಎನ್ನುವ ರೀತಿಯಲ್ಲಿ ಅದನ್ನು ಕೈಯಿಂದ ಬಿಟ್ಟುಬಿಟ್ಟ. ಬಿದ್ದಿರಲಿ ಗ್ರೀಸ್ ಒರೆಸಲೋ ಮಸಿ ಒರೆಸಲೋ ಕೆಲಸಕ್ಕೆ ಬರುತ್ತೆ ಎಂಬ ಯೋಚನೆಯೂ ಜೊತೆಗೆ ಬಂದು ಅದನ್ನು ಸೀಟಿನ ಕೆಳಗೆ ಹಾಕಿಡಲು ಹೋದಾಗ ಕರ್ಚೀಫಿನಲ್ಲಿ ಲಘು ಸುವಾಸನೆಯೂ ಇದೆ ಎಂದು ಅವನಿಗೆ ತಿಳಿಯಿತು.

ತನ್ನ ವಾಹನವನ್ನು ಏರಿ ಕುಳಿತುಕೊಳ್ಳಬೇಕು ಎಂದು ಒಂದು ಕಾಲನ್ನು ಪೆಡಲಿನ ಮೇಲೆ ಇಟ್ಟುಕೊಂಡೇ ಅವನು ಬೀಡಿ ಹಚ್ಚುತ್ತಾ ಹಾಗೆಯೇ ಯೋಚಿಸಿದ – ಹಿಂದೆ ಯಾವಾಗ ಇಂತಹ ಪ್ರಸಂಗ ಬಂದಿತ್ತು ಎಂದು. ಯಾವುದೋ ಒಂದು ಹಳೆಯ ನೆನಪು

ಅವನನ್ನು ಕಾಡುತ್ತಿದೆ. ಎಷ್ಟೋ ವರ್ಷಗಳಿಂದ ಪ್ರತಿದಿನವೂ ಹತ್ತಾರು ಸವಾರಿಗಳು ತನ್ನ ರಿಕ್ಷಾದಲ್ಲಿ ಹತ್ತುತ್ತಿವೆ, ಇಳಿಯುತ್ತಿವೆ. ಈ ಬಾರಿ ಏಕೆ ಹಳೆಯ ನೆನಪು ಒತ್ತಿ ಬರುತ್ತಿದೆ? ಇವೊತ್ತೇ ಅವನಿಗೆ ಆ ಪಾರದ ಕಳ್ಳತನ ನೆನಪಿಗೆ ಬರುತ್ತಿದೆ. ಇತ್ತೀಚೆಗೆ ಅವನು ಅದನ್ನು ಮರೆತೇಹೋಗಿದ್ದ. ಈದಿನ ಅವನು ತನ್ನ ರಿಕ್ಷಾದಲ್ಲಿ ಕೂರಿಸಿಕೊಂಡು ಬಂದಿದ್ದ ಮುದುಕರ ಜೋಡಿ ಅದನ್ನು ನೆನಪಿಗೆ ತರಬೇಕೆ? ಎಂದೇ, ಅವನು ಅವರನ್ನು ಪದೇ ಪದೇ ಕಣ್ಣು ಹೊರಳಿಸಿ ಅವರ ಕಡೆ ಆಸಕ್ತಿಯಿಂದ ನೋಡಿದ್ದ.

ಮುದುಕ ಹೋಗಿ ದೂರ ನಿಂತಿದ್ದ. ಮುದುಕಿ ಬೀದಿಯ ಕಡೆ ಬೆನ್ನುಮಾಡಿಕೊಂಡು ಬಾಗಿಲು ಬಂದುಮಾಡುತ್ತಿದ್ದಳು. ಇಬ್ಬರಿಗೂ ೬೦–೭೦ ವರ್ಷ ವಯಸ್ಸಾದಂತೆ ಇತ್ತು. ಇಸ್ತ್ರಿಯಿಲ್ಲದೆ ಮುದುಡಿಕೊಂಡಿರುವ ಹಳೆಯ ಕೋಟು-ಶರಾಯಿ, ಯಾವಾಗಲೋ ಒದ್ದೆಯಾಗಿ ಆಕಾರ ಕೆಟ್ಟಿರುವ ಉಣ್ಣೆಯ ಅಗಲವಾದ ಹ್ಯಾಟು, ಹೆಜ್ಜೆಹೆಜ್ಜೆಗೂ ಮರಳಿನ ಭೂಮಿಯ ಮೇಲೆ ಗೀರೆಳೆದುಕೊಂಡು ಹೋಗುತ್ತಿರುವ ಕೋಲು,– ನೋಡುವುದಕ್ಕೆ ಪೀತವರ್ಣದ ಜಪಾನಿ ಗೊಂಬೆಯಂತೆ ಆ ಮುದುಕ ಕಾಣುತ್ತಿದ್ದ. ಮುದುಕಿ ಕೆಂಪು-ಬಿಳಿ ಬಣ್ಣದ ದೊಡ್ಡ ದೊಡ್ಡ ಹೂವುಗಳಿದ್ದ ಫ್ರಾಕನ್ನು ಉಟ್ಟಿದ್ದಳು. ಅವಳ ನಗ್ನವಾದ ಕಾಲುಗಳು ಕಮಾನಿನಂತೆ ಬಗ್ಗಿದ್ದುವು. ಬಾಗಿಲು ಹಾಕಿದ ಮೇಲೆ ಮುದುಕಿ ಮುದುಕನ ಬಳಿಗೆ ಬಂದು ಅವನ ತೋಳಲ್ಲಿ ತೋಳು ಹಾಕಿಕೊಂಡು ಆ ಹಳದಿ ಬಣ್ಣದ ಮನೆಯ ಕಡೆಗೆ ಇಬ್ಬರೂ ಹೊರಟರು. ಗಾಳಿಯಲ್ಲಿ ತೂರಿಕೊಂಡು ಹೋಗುತ್ತಿದ್ದ ಅವರಿಬ್ಬರನ್ನೂ ಅವರ ಹಿಂದೆ ಬಿದ್ದಿದ್ದ ಅವರ ನೆರಳುಗಳನ್ನೂ ಕುತೂಹಲ ದಿಂದ ಸುಮ್ಮನೇ ನೋಡುತ್ತಾ ನಿಂತಿದ್ದ. ಎರಡು ಬೊಂಬೆಗಳು ಒಂದರ ಮೇಲೆ ಒಂದು ಬಿದ್ದುಕೊಂಡು, ಓಲಾಡಿಕೊಂಡು ಹೋಗುತ್ತಿರುವಂತೆ ಅವನಿಗೆ ಅವರು ಕಾಣಿಸಿದರು. ಅದನ್ನು ಕಂಡ ಅವನ ತುಟಿಗಳ ಮೇಲೆ ಮೃದುವಾದ ನಗು ಸುಳಿಯಿತು. ತನ್ನ ಮನಸ್ಸಿನಲ್ಲಿ ಎದ್ದಿದ್ದ ಭಾವನೆಗಳ ಕಚಕುಳಿಯನ್ನು ಬೇರೆ ಯಾವ ರೀತಿಯಲ್ಲಿಯೂ ಪ್ರಕಟಿಸಲಾಗದೆ ಅವನು ಟ್ರನ್ ಟ್ರನ್ ಎಂದು ತನ್ನ ರಿಕ್ಷಾದ ಗಂಟೆ ಬಾರಿಸುತ್ತಿರುವಂತೆಯೇ ಅವನ ಕೈ ಹಠಾತ್ತನೆ ನಿಂತುಬಿಟ್ಟಿತು. ಅವನ ಕಣ್ಣುಗಳ ಮುಂದೆ ಮತ್ತೆ ಆ ಹಾರದ ಚಿತ್ರ ಮೂಡಿ ಬಂತು. ಹಿಂದೆ ಯಾರೋ ಕೂತಿದ್ದಾರೆ, ತನ್ನ ಟ್ರನ್ ಟ್ರನ್ ಶಬ್ದದಿಂದಾಗಿ ಅವರಿಗೆ ತ್ರಾಸ ಆಗಿರಬೇಕು ಎಂದೂ ಭಾಸವಾಯಿತು.

ರಿಕ್ಷಾ ಬೇರೆ ರಸ್ತೆಗೆ ತಿರುಗುವ ತನಕ ಯಾಕೋ ಏನೋ ಅವನಿಗೆ ತನ್ನ ರಿಕ್ಷಾದಲ್ಲಿ ಇನ್ನೂ ಅದೇ ಸವಾರಿ ಕುಳಿತಿರುವ ಹಾಗೆ ಮತ್ತು ಈಗ ತಾನೇ ಅವನೊಂದು ಒಳ್ಳೆಯ ಕೆಲಸ ಮಾಡಿದ್ದಾನೆ ಎನ್ನುವ ಹಾಗೆ ಅನಿಸುತ್ತಿತ್ತು. ಮನಸ್ಸಿಗೆ ಏನೋ ಒಂದು ರೀತಿಯ ಸಮಾಧಾನ; ಆದರೆ ಅದನ್ನು ಹೇಗೆ ತೋರಿಸಿಕೊಂಡಾನು? ಯಾರೊಡನೆಯೂ ಹೇಳಿಕೊಳ್ಳುವಂತಹ ಮಹತ್ವದ ವಿಷಯವೂ ಅಲ್ಲ. ಬಾಬೂ ಕೇಳಿದರೆ ಈ ಪ್ರಾಣಿ ಹುಚ್ಚಾಸ್ಪತ್ರೆಗೆ ಸೇರುವುದು ಖಂಡಿತ ಎಂದುಬಿಡುತ್ತಾನೆ.

ಅಲ್ಲಿಯೇ ಎದುರುಗಡೆ ಮುದುಕ-ಮುದುಕಿ ನಿಂತಿದ್ದರು. ಅವರನ್ನು ಕಂಡು ರಿಕ್ಷಾದ ವೇಗವನ್ನು ಕಡಿಮೆಮಾಡಿ ಕೇಳಿದ್ದ: "ಮೇಮ್ ಸಾಹೇಬ್, ರಿಕ್ಷಾ?"

"ಕ್ಯಾರಿಟಿಗೆ ಬರ್ತೀಯೇನು? ಎಷ್ಟು ಬಾಡಿಗೆ ತಕೊಳ್ತೀ?" ಎಂದು ಮುದುಕಿ ತನ್ನ ನಡುಗುವ ಕತ್ತನ್ನು ಬಿಗಿಯಾಗಿ ನಿಲ್ಲಿಸುವ ಪ್ರಯಾಸ ಮಾಡುತ್ತಾ ಕೇಳಿದ್ದಳು.

ಒಮ್ಮೆ ಅವರ ಕಡೆ ನೋಡಿಯೇ ಸುಮೇರಾ ನಿರ್ಧರಿಸಿಕೊಂಡಿದ್ದ, "ಕ್ರೈಸ್ತರು ಇಲ್ಲವೇ ಆಂಗ್ಲೋ-ಇಂಡಿಯನ್‌ರಂತಿದ್ದಾರೆ; ಹೊರಗಿಂದ ಪ್ರವಾಸ ಬಂದಿರುವವರಲ್ಲ."

ರಿಕ್ಷಾದಿಂದ ಕೆಳಗಿಳಿದು ತಲೆಗೆ ಕಟ್ಟಿಕೊಂಡಿದ್ದ ಬಟ್ಟೆಯನ್ನು ತೆಗೆದು ಕುಳಿತುಕೊಳ್ಳಲು ಆಮಂತ್ರಿಸುವಂತೆ ರಿಕ್ಷಾದ ಸೀಟನ್ನು ಒಂದು ಬಾರಿ ಒರೆಸಿದ... "ಖುಷಿ ಬಂದಷ್ಟು ಕೊಡಿ ಮೇಮ್‌ಸಾಬ್, ನೀವೇನು ಹೊಸಬರೆ?"

ಅಲ್ಲಿ ತಾನು ನಿಂತೇ ಇಲ್ಲವೆನ್ನುವಂತೆ ಮುದುಕ ನಿಂತಿದ್ದ. ಆದರೆ ಮುದುಕಿಯ ಮುಖದ ಮೇಲೆ ಏನೋ ಆಕರ್ಷಣೆ ಇತ್ತು–ಅದು ಅವನನ್ನು ಎಳೆಯುತ್ತಿತ್ತು.

"ಇಲ್ಲ, ಆಮೇಲೆ ಜಗಳ ಆಡ್ತಿ."

ಆದರೆ ಅವನ ಧ್ವನಿಯಿಂದಲೇ ಅವಳಿಗೆ ಗೊತ್ತಾಗಿತ್ತು, ಅವನು ಜಗಳ ಆಡುವವನಲ್ಲ ಎಂದು. ಪ್ರಾಯಶಃ ಅವರು ಬಹಳ ಹೊತ್ತಿನಿಂದ ಅಲ್ಲಿ ಕಾದು ನಿಂತಿರಬೇಕು. ಮುದುಕನ ರಟ್ಟೆಯಲ್ಲಿ ರಟ್ಟೆ ಸೇರಿಸಿಕೊಂಡು ಅವನನ್ನು ರಿಕ್ಷಾದ ಬಳಿಗೆ ಕರೆತಂದಳು.

ಇಲ್ಲ ಮೇಮ್‌ಸಾಬ್, ನಾವು ಆ ವರ್ಗಕ್ಕೆ ಸೇರಿದವರಲ್ಲ, ಎಲ್ಲೆಲ್ಲಿಂದಲೋ ಬಂದಿರುತ್ತಾರಲ್ಲ, ಅವರು ಜಗಳ ಆಡ್ತಾರೆ. 'ಸವಾರಿ'ಗಳನ್ನು ಹಿಂಸಿಸುತ್ತಾರೆ. ಇಂತಹ ನಯವಾದ ಮಾತುಗಳನ್ನಾಡಿಯೇ ಟೂರಿಸ್ಟರಿಂದ ಐದ್ಹೈದು ರೂಪಾಯಿ ಬಕ್ಷೀಸು ಪಡೆದಿರುವುದೂ ಉಂಟು. ಆದರೆ ಈಗ ಇಲ್ಲಿ ಅಂತಹ ಲಾಭದ ನಿರೀಕ್ಷೆ ಅವನಿಗಿರಲಿಲ್ಲ. ಮುದುಕ ಕುರುಡನಾಗಿದ್ದರೂ ಇರಬಹುದು ಎಂದು ಅನುಮಾನ ಬಂದು ಒಮ್ಮೆ ಅವನ ಕಡೆಗೆ ನೋಡಿದ. ಅವರಿಬ್ಬರದೂ ಗೋಧಿ ಬಣ್ಣ. ಮುದುಕಿಯ ಇಡೀ ಮುಖ ಅಲ್ಲಲ್ಲೇ ಸುಕ್ಕು ಹಿಡಿದಿದೆ. ಮುದುಕನ ಮುಖದ ಮೇಲೆ ಮೂಗಿನ ಈ ಕಡೆ-ಆ ಕಡೆ ಕಣ್ಣಿನ ಕೆಳಭಾಗಕ್ಕೆ ಕೆನ್ನೆಗಳ ಮೇಲೆ ಎರಡು ಗೆರೆಗಳು, ಓರೆಯಾಗಿ ತ್ರಿಕೋಣಾಕಾರದಲ್ಲಿ ಇಳಿದು ತುಟಿಗಳ ಅಂಚಿನಲ್ಲಿ ಕೊನೆಯಾಗಿವೆ. ಆ ಗೆರೆಗಳಿಗೆ ಹೊಂದಿಕೊಂಡು ಕೆನ್ನೆಗಳು ಜೋತುಬಿದ್ದಿದೆ, ಮುದುಕನ ಕನ್ನಡಕ ನೋಡಿದಾಗಲೇ ಮುದುಕನಿಗೆ ಮೋತಿ ಬಿಂದು ಶಸ್ತ್ರಚಿಕಿತ್ಸೆ ತುಂಬಾ ಹಿಂದೆ ನಡೆದಿರಬೇಕೆಂದು ಸ್ಪಷ್ಟವಾಗಿಹೋಯಿತು. ಕಿವಿ ಕೂಡ ಕೇಳುವುದಿಲ್ಲವೆಂದೇ ಕಿವಿಯಲ್ಲಿ ಕೇಳುವ ಸಾಧನ ಇದೆ. ಅದರ ದಾರಗಳು ಆ ಕೊಳಕು ಸೂಟಿನ ಕಾಲರನ್ನು ಹಾದುಕೊಂಡು ಶರ್ಟಿನ ಜೇಬಿಗೆ ಹೋಗಿವೆ. ಅಲ್ಲಿ ಅದರ ಬ್ಯಾಟರಿ ಇರಬೇಕು. ಮುದುಕ ಏನೂ ತಿಳಿಯದ ಹೆಡ್ಡನಂತೆ ತಾನು ಯಾವ ಕಡೆಗೆ ನೋಡಿದರೂ ಸಾಕು ಆ ಕಡೆಗೇ ಹೊರಟು ಹೋಗುತ್ತಿದ್ದ. ಅವನನ್ನು ನೋಡಿದಕೂಡಲೇ ಸುಮೇರಾನಿಗೆ ಒಂದು ವಿಚಾರ ಹೊಳೆಯಿತು. ಇವರೂ ಇನ್ನೇನು ಡೇರೆ ಎತ್ತುವವರೇ;

ಮುಗಿಯುತ್ತಿದೆ ಕಥೆ. ಬ್ಯಾಂಕಿನಿಂದ ಪೆನ್‌ಷನ್ ಹಣ ತೆಗೆದುಕೊಂಡು ಹೋಗಲು ಬಂದಿರಬೇಕು ಪಾಪ. ಮುದುಕಿಯನ್ನು ನೋಡಿದ ಮೇಲೆ ಅವನ ವಿಚಾರಧಾರೆ ಅಲ್ಲಿಗೇ ನಿಂತುಹೋಗಿತ್ತು.

ತನ್ನ ಕೋಲಿನ ಸಹಾಯದಿಂದ ರಿಕ್ಷಾ ಹತ್ತಲು ಮುದುಕ ಒಂದೆರಡು ಬಾರಿ ಪ್ರಯತ್ನಿಸಿದ. ಆದರೆ ರಿಕ್ಷಾ ಇದ್ದ ಎತ್ತರದ ಅರ್ಧಕ್ಕೆ ಮಾತ್ರ ಕಾಲು ಎಟುಕುತ್ತಿತ್ತು. ಕಾಲಿಟ್ಟು ಹತ್ತಲು ಸಾಧ್ಯವಾಗಲಿಲ್ಲ. ಸಹಾಯ ಮಾಡಲು ಸುಮೇರಾ ಮುಂದೆ ಬಂದಾಗ "ನೀನು ಮುಟ್ಟಬೇಡ" ಎನ್ನುವ ರೀತಿಯಲ್ಲಿ ಮುದುಕಿ ಮಧ್ಯೆ ತೂರಿಕೊಂಡು ಬಂದು ಮುದುಕನ ಕೈಯಿಂದ ಕೋಲನ್ನು ಈಸಿಕೊಂಡಳು. ತನ್ನ ಭುಜವನ್ನು ಆಸರೆಗಾಗಿ ಕೊಟ್ಟಳು. ಮುದುಕ ತನ್ನ ತೋಳನ್ನು ಅವಳ ಹೆಗಲ ಮೇಲೆ ಬಳಸಿ ಹಾಕಿಕೊಂಡಮೇಲೆ ಮುದುಕಿ ಅವನ ಕಂಕುಳಿಗೆ ಕೈಕೊಟ್ಟು ಒಂದು ಗಾಜಿನ ಬೊಂಬೆಯನ್ನು ಬಹಳ ಹುಷಾರಾಗಿ ಎತ್ತಿ ಇಡುತ್ತಿರುವಂತೆ ಅವನನ್ನು ಮೃದುವಾಗಿ ಮೇಲಕ್ಕೆತ್ತಿ ಕೂರಿಸಿದಳು. ಒಂದು ಮಗುವನ್ನು ಎತ್ತಿ ಕೂರಿಸಿದ್ದರೆ ಅಷ್ಟು ಸಂತೋಷ ಹಾಗೂ ಸಮಾಧಾನ ಅವಳಿಗಾಗಿ ಮುಖದಲ್ಲಿ ಆ ಸಂತಸ ಕಾಣುತ್ತಿದೆ. ಸುಮೇರಾ ಅವಳ ಕಡೆ ನೋಡಿದಾಗ ಇಬ್ಬರ ದೃಷ್ಟಿಯೂ ಪರಸ್ಪರ ಸಂಧಿಸಿ ಕ್ಷಮಾಯಾಚನೆಯ ರೀತಿಯಲ್ಲಿ ಅವಳು ಮುಗುಳ್ನಕ್ಕು "ಏನು ಮಾಡುವುದು, ಪಾಪ, ಮುದುಕರು, ಹತ್ತುವುದಕ್ಕಾಗುವುದಿಲ್ಲ" ಎಂದು ಹೇಳಿದಂತಾಯಿತು. ಸುಮೇರಾ ಮಂತ್ರಮುಗ್ಧನಾಗಿ ಅವಳ ಮುಖಭಾವದ ಕಡೆಗೆ ನೋಡುತ್ತಾ ನಿಂತುಬಿಟ್ಟ. ಆಗ ಅವಳ ಕತ್ತಿನಲ್ಲಿ ಅವನು ಕಂಡ ಸಣ್ಣ ಎಳೆಯ ಹಾರದಿಂದಾಗಿ ಅವನಿಗೆ ಹಳೆಯ ಹಾರದ ನೆನಪು ಒತ್ತರಿಸಿ ಬಂದು ಅವನು ಬೆಚ್ಚಿಬಿದ್ದಂತಾಯಿತು. ಬೆಲೆಬಾಳುವ ಯಾವುದೋ ವಸ್ತುವನ್ನು ಕದ್ದಿರುವಾಗ ಸಿಕ್ಕಿಬಿದ್ದ ರೀತಿಯಲ್ಲಿ ಅವನ ಗತಿಯಾಗಿತ್ತು, ಆ ಸಮಯದಲ್ಲಿ.

"ಬಿಸಿಲು ಜೋರಾಗಿದೆ; ಹುಡ್ ಹಾಕಿಬಿಡು" – ಎಂದು ಹೇಳಿಕೊಂಡು ಇನ್ನೊಂದು ಬದಿಯಿಂದ ಮುದುಕಿ ಬಂದು ಮುದುಕನ ಪಕ್ಕದಲ್ಲಿ ಕುಳಿತುಕೊಂಡಳು.

ಮತ್ತೆ ಸುಮೇರಾ ಆತಂಕಗೊಂಡನು. ಹಿಂದೆ ಒಮ್ಮೆ ಅವನು ಕೇಳಿದ್ದ ಮಾತನ್ನೇ ಮತ್ತೆ ಕೇಳಿದಂತಾಗಿ ಅವನು ಬೆದರಿದ. ಹಿಂದಿನಿಂದ ಅವನು ಹುಡ್ಡನ್ನು ಬಿಚ್ಚುತ್ತಾ ಹಾಗೆಯೇ ಯೋಚಿಸಿದ. ಯಾರು ಯಾವ ಸಂದರ್ಭದಲ್ಲಿ ಇದೇ ರೀತಿ ಹೇಳಿದ್ದರು? ಹಿಂದೊಮ್ಮೆ ತಾನು ಕೇಳಿದ್ದ ಒಂದು ಮಾತನ್ನೇ ಈಗ ಮತ್ತೆ ಕೇಳುತ್ತಿರುವಂತೆ ಅವನಿಗೆ ಭಾಸವಾಗಿತ್ತು. ಮುದುಕಿ ಈಗ ಮುದುಕನ ಉಸ್ತುವಾರಿಗೆ ಗಮನ ಕೊಡುತ್ತಾ ಪಕ್ಕದಲ್ಲಿಯೇ ಕುಳಿತಿದ್ದಳು; ದಶಹರಾ ಹಬ್ಬದ ಸಮಯದಲ್ಲಿ ಜನ 'ಟೇಸು' ವಿಸರ್ಜನೆಗೆ ಹೋಗುವಾಗ ಅದನ್ನು ಮುತುವರ್ಜಿಯಿಂದ ನೋಡಿಕೊಳ್ಳುವ ರೀತಿಯಲ್ಲೇ ಅವಳು ಕುಳಿತಿರುವಂತೆ ಕಂಡಿತು. ಅವನು ಮುಂದೆ ಬಂದು ನಿಂತು ತನ್ನ ಎರಡು ಕಾಲುಗಳನ್ನೂ ಒಂದಾದಮೇಲೊಂದರಂತೆ ಎತ್ತಿ ಎತ್ತಿ ಅಂಗವಸ್ತ್ರದಿಂದ ಮೊಣಕಾಲ ಮೇಲಿನ ವರೆಗೂ

ಫಟ್ ಫಟ್ ಎಂದು ಧೂಳು ಝಾಡಿಸಿಕೊಂಡ. ಮೊಣಕಾಲ ವರೆಗೂ ಧೋತಿ ಉಟ್ಟಿದ್ದ ಅವನ ಕಾಲುಗಳು ನಗ್ನವಾಗಿದ್ದುವು. ಈ ರೀತಿ ಮಾಡುವಾಗ ಒಮ್ಮೆ ಆ ಮುದುಕನ ಕಡೆಗೂ ದೃಷ್ಟಿ ಹಾಯಿಸಿದ. ದಶಹರೆಯ ಗೊಂಬೆ 'ಟೇಸ್ತು' ಕುಳಿತಂತೆಯೇ ಮುದುಕ ಕೂತಿದ್ದ. ಈ ಪ್ರಸಂಗವನ್ನು ಸಂಜೆ ಬಾಬೂಗೆ ತಿಳಿಸಬೇಕು. ಹಾಗೆ ಯೋಚಿಸಿಕೊಂಡು ಬಹಿರಂಗಕ್ಕೆ ಹೇಳಿದ:

"ಹೊರಡೋಣವೇ – ಮೇಮ್‌ಸಾಬ್?"

"ಜೋರಾಗಿ ಹೋಗುವುದು ಬೇಡ, ನಿಧಾನವಾಗಿ ಹೋಗು."

ಮುದುಕಿ ಕುಳಿತಲ್ಲೇ ಸ್ವಲ್ಪ ಎದ್ದು ತನ್ನ ಕೆಳಗೆ ಸಿಕ್ಕಿಕೊಂಡಿದ್ದ ಮುದುಕನ ಕೋಟಿನ ಭಾಗವನ್ನು ಹೊರಕ್ಕೆ ತೆಗೆದಳು. ಮತ್ತು, ಆಸರೆ ಕೊಡುವ ರೀತಿಯಲ್ಲಿ ತನ್ನ ಕೈಯನ್ನು ಮುದುಕನ ಬೆನ್ನಿನ ಮೇಲೆ ಬಳಸಿ ಹಾಕಿಕೊಂಡಳು.

ಮತ್ತೆ ಅದೇ ರೀತಿ... ಇದೇ ರೀತಿ ಒಂದೊಮ್ಮೆ ನಡೆದಿತ್ತು. ಎಲ್ಲಿ? ಪದೇ ಪದೇ ಅವನು ರಿಕ್ಷಾದ ವೇಗವನ್ನು ಕಡಿಮೆ ಮಾಡುತ್ತಾ ಹಾಗೆಯೇ ಯೋಚಿಸಿ ನೋಡುತ್ತಿದ್ದ. ಒಂದೆ ತಿರುಗಿ ಅವರ ಮುಖ ನೋಡಬೇಕೆನಿಸುತ್ತಿತ್ತು. ಅವನನ್ನು ಪದೇ ಪದೇ ಆಕರ್ಷಿಸುವ ವಸ್ತುವಾದರೂ ಅಲ್ಲಿ ಏನಿತ್ತು? ಒಂದೆ ತಿರುಗಿ ನೋಡಬೇಕೆಂಬ ತನ್ನ ಇಚ್ಛೆಯನ್ನು ಬಾಲ್ಯದ ದಿನಗಳಲ್ಲಿ ತಾನು ಹಾಡುತ್ತಿದ್ದ ಒಂದು ಹಾಡನ್ನು ಗುನಗುನಾಯಿಸುವುದರ ಮೂಲಕ ಪೂರೈಸಿಕೊಳ್ಳಲು ಪ್ರಯತ್ನಿಸುತ್ತಿರುವಂತೆ ಕಂಡಿತು. "ಟೇಸುರಾರೇ, ಟೇಸೂರಾ... ಟಿಸುರಾಕಿ ಸಾತ್ ಬಹೂಂರಿಯಾ... ನೌ ಮನ್‌ವೀಸೇಂ, ದಸ್ ಮನ್ ಖಾಯೇಂ... ಬಡೇ ಮಲ್ಲಸೆ ಜೂಝುನ್ ಜಾಯೇಂ..." ಬಾಲ್ಯದಲ್ಲಿ ದೀಪ ಹಚ್ಚಿ ಮನೆಮನೆಗೆ ಹೋಗಿ ಟೇಸು ಹಾಡು ಹಾಡುವ ಆ ದಿನಗಳು ಅವನ ನೆನಪಿಗೆ ಬಂದುವು. ಅವನ ಮನಸ್ಸು ಇದರಿಂದ ತುಂಬಾ ಪ್ರಸನ್ನಗೊಂಡಿತ್ತು. ಅವನ ಮುಖದಲ್ಲಿ ಗೆಲುವು ಇತ್ತು; ಮುಗುಳ್ನಗೆ ಇತ್ತು. ಒಮ್ಮೆ ಹಿಂದಿರುಗಿ ಅವರ ಕಡೆ ನೋಡಿ ಹೇಳಿದ: "ಮೇಮ್ ಸಾಬ್, ಬಿಸಿಲು ಬೀಳುತ್ತಿಲ್ಲತಾನೇ?"

ಯಾರದೇ ಮುಖದ ಮೇಲೆ ಚರ್ಮ ಸುಕ್ಕುಹಿಡಿದು ಗೆರೆಗಳು ಕಾಣಿಸಿಕೊಂಡರೂ ಅದನ್ನು ನೋಡಿದ ಸುಮೇರಾನ ಮನಸ್ಸಿನಲ್ಲಿ ಹಲವು ಪ್ರಶ್ನೆಗಳು ಏಳುತ್ತಿದ್ದುವು. ಒಂದೊಂದು ವರ್ಷದಲ್ಲೂ ಒಂದೊಂದು ಗೆರೆ ಹೀಗೆ ಮೂಡುತ್ತದೆ: ಮನುಷ್ಯ ತನ್ನ ಜೀವಮಾನದಲ್ಲಿ ಮುಖದ ತುಂಬಾ ಹೀಗೆ ಸುಕ್ಕಿನ ಗೆರೆಗಳನ್ನು ಸಂಪಾದಿಸುತ್ತಾನೆ. ಆದರೆ ಇವರಿಂದ ಏನು ಪ್ರತಿಫಲ ಬಂದಹಾಗಾಯಿತು, ನೀವೇ ಹೇಳಿ. ಹಣ, ಐಶ್ವರ್ಯ, ಮನೆ-ಮಠ, ಹೆಂಡತಿ-ಮಕ್ಕಳು? ಅಥವಾ ಇಡೀ ಜೀವಮಾನದ ಕೊರಗು, ಕಷ್ಟ ಕಾರ್ಪಣ್ಯ?... ರಾತ್ರಿಯೆಲ್ಲ ಬೀಡಿ ಸೇದುತ್ತಾ ನಿದ್ದೆ ಕೆಡುವುದು, ತಪ್ಪಿದರೆ ರಾತ್ರಿಯೆಲ್ಲ ಕುಡಿದು ನಾಲೆಗಳಲ್ಲಿ ಬಿದ್ದಿರುವುದು? ಇಪ್ಪತ್ತು ವರ್ಷಗಳ ನಂತರ ತನ್ನ ಮುಖದ ಮೇಲೂ ಇದೇ ರೀತಿ ಸುಕ್ಕಿನ ಗೆರೆಗಳು ಬಂದಾಗಲೂ ರಿಕ್ಷಾ ತುಳಿಯುತ್ತಿರಲು

ಸಾಧ್ಯವೇ? ಆಗಲೂ ಅರ್ಧ ರಾತ್ರಿ ಹೊತ್ತಿಗೆ ಮನೆಗೆ ಹೋಗಿ ತನ್ನ ಹೆಂಡತಿಯನ್ನು ಬಡಿಯುತ್ತಿರುವಂತೆ ಬಡಿಯಲು ಸಾಧ್ಯವೇ? ಆಗಲೂ ಒಂದಲ್ಲ ಒಂದು ವಸ್ತುವಿನ ಅಗತ್ಯ ಇರುತ್ತದೆಯೇ?... ಇರುತ್ತದೆ... ಇಲ್ಲ, ಅಷ್ಟು ಹೊತ್ತಿಗೆ ತನ್ನ ಮಗ ಧೀರಾ ದೊಡ್ಡವನಾಗಿರುತ್ತಾನೆ. ಆದರೆ, ನಾನು ಮಗನಾಗಿ ನನ್ನ ತಂದೆಗೆ ಏನು ಸುಖ ಕೊಟ್ಟಿದ್ದೇನೆ? ಇವೊತ್ತಿಗೂ ತನ್ನ ಮುದಿ ತಂದೆ ಜೀವನೋಪಾಯಕ್ಕಾಗಿ ಗಾರೆ ಕೆಲಸಕ್ಕೆ ಹೋಗುತ್ತಾನೆ.

ಆರೇಳು ದಿನಗಳ ಹಿಂದಿನ ಮಾತು. ಬೀದಿಯ ನಲ್ಲಿ ಕೆಳಗೆ ತಲೆ ಕೊಟ್ಟು ಅವನು ಮೈ ತೊಳೆದುಕೊಳ್ಳುತ್ತಿದ್ದ. ನೀರು ತುಂಬಿಕೊಂಡು ಹೋಗಲು ಅಲ್ಲಿಗೆ ಬಂದ ಬೋಧಾನ್ ಸೊಸೆ ಹೇಳಿದ್ದಳು: "ಲಾಲ್, ಎಷ್ಟು ಬಡಕಲಾಗಿದ್ದೀಯ, ಪಕ್ಕೆಲುಬೆಲ್ಲ ಕಾಣುತ್ತಿದೆ ನೋಡು." ತಾನು ಮೈಗೆ ಸಾಬೂನು ತಿಕ್ಕುತಿದ್ದುದನ್ನು ನಿಲ್ಲಿಸಿ ಪಕ್ಕೆಗಳ ಮೇಲೆ ಕೈಯಾಡಿಸಿ ಎಲುಬುಗಳನ್ನು ಎಣಿಸತೊಡಗಿದ್ದ. ಬಹಳ ಹೊತ್ತು ಹೀಗೇ ಎಣಿಸುತ್ತಿದ್ದ. ಇತ್ತೀಚೆಗೆ ದೇಹ ದುರ್ಬಲಗೊಂಡಿದೆ. ಆಯಾಸ ಕಂಡುಬರುತ್ತಿದೆ. ಮುಖದ ಮೇಲೂ ಹಿಂದಿದ್ದ ಆರೋಗ್ಯದ ಲಕ್ಷಣ ಇಲ್ಲ. ಯಾರಿಗೆ ಗೊತ್ತು, ಮುಖದ ಚರ್ಮ ಸುಕ್ಕು ಹಿಡಿಯುವ ಸಿದ್ಧತೆಯಲ್ಲಿರಬಹುದು... ಅವನ ಮುಖದ ಚರ್ಮ ಕೂಡ, ಒಂದು ದಿನ ಈ ಮುದುಕಿಯ ಮುಖದಂತೆಯೇ, ಸುಕ್ಕುಸುಕ್ಕಾಗಿ ಸುಕ್ಕಿನ ಗೆರೆಗಳು ಕಾಣಿಸಿಕೊಳ್ಳಬಹುದು. ಅಥವಾ ಆ ಮುದುಕನಂತೆ ತಾನೂ ಆಗಬಹುದು. ಕೂಡಲೇ ಒಂದು ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಳ್ಳಬೇಕೆಂದಾಯಿತು. ಅವನ ರಿಕ್ಷಾದ ಮುಂಭಾಗದಲ್ಲಿಯೂ ಕನ್ನಡಿ ಒಂದು ಕಾಲದಲ್ಲಿ ಇತ್ತು. ಬೆಲೂನುಗಳೂ ಹಾರುತ್ತಿದ್ದುವು. ಚಕ್ರಕ್ಕೆ ಬಣ್ಣ ಬಣ್ಣದ ಹೂವಿನ ಅಲಂಕಾರ ಕೂಡ ನಡೆದಿರುತ್ತಿತ್ತು. ಈಗ ಬಿಡಿ, ಈಗ ರಿಕ್ಷಾದ ಎಲ್ಲ ಭಾಗಗಳೂ ಶಿಥಿಲವಾಗಿವೆ. ಹೋಗುತ್ತಿರುವಾಗಲೇ ಒಮ್ಮೊಮ್ಮೆ ಬಾಲ್‌ಪಿನ್ ಕಳಚಿಕೊಳ್ಳುತ್ತದೆ, ಫ್ರೀವ್ಹೀಲ್ ಹಿಡಿತವಿಲ್ಲದೆ ತಿರುಗತೊಡಗುತ್ತದೆ. ಗಾಡಿ ಪಂಚೇರಾಗಿ ನಿಲ್ಲುತ್ತದೆ, ಸವಾರಿಗಳು ಶಪಿಸುತ್ತಾರೆ. ಮಧ್ಯ ದಾರಿಯಲ್ಲಿ ನಿಂತು ಕೈಗೆ ಸಿಕ್ಕುವ ಇಟ್ಟಿಗೆಯಿಂದಲೋ ಕಲ್ಲಿನಿಂದಲೋ ಬಾಲ್‌ಪಿನ್ ಬಡಿದು ಸರಿಮಾಡಬೇಕಾಗುತ್ತದೆ. ಇಲ್ಲವೇ ಕಳಚಿಕೊಂಡ ಚೈನನ್ನು ಕೈ ಮಸಿಮಾಡಿಕೊಂಡು ಮತ್ತೆ ಕೂಡಿಸಬೇಕಾಗುತ್ತದೆ. ಇಂತಹ ಪ್ರಸಂಗಗಳು ಬಂದಾಗ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ. ಇನ್ನು ಈ ರಿಕ್ಷಾವನ್ನು ಕಾಮನಹಬ್ಬದ ದಿನ ಬೆಂಕಿಗೆ ಆಹುತಿ ಕೊಟ್ಟುಬಿಡಬೇಕೆನ್ನಿಸುತ್ತದೆ. ಹುಡ್ಡಿನ ಬಟ್ಟೆಯೆಲ್ಲ ಹರಿದುಹೋಗಿದ್ದು ಬಾವುಟ ಹಾರಿದಂತೆ ಪಟಪಟ ಶಬ್ದ ಮಾಡುತ್ತದೆ. ಬಲಗಡೆಯ ಚಕ್ರ, ಟಾಂಗಾ ಜೊತೆಗೆ ಟಕರಾಯಿಸಿದಾಗಿನಿಂದ, ಈಗಲೂ ಆ ಕಡೆ-ಈ ಕಡೆ ವಾಲಿಕೊಂಡೇ ಉರುಳುತ್ತಿರುತ್ತದೆ. ಅದರ ಆಕಾರ ಇನ್ನೂ ಸರಿ ಹೋಗಿಲ್ಲ. ಅದನ್ನು ಸರಿಮಾಡಿಸುವುದೋ, ಲಚ್ಚೀ ಸಾಲ ತೀರಿಸುವುದೋ – ತಿಳಿಯುತ್ತಿಲ್ಲ. ಇನ್ನೂ ಒಂದು ಸೋಜಿಗದ ವಿಚಾರ ಅಂದರೆ, ಇದು... ತನ್ನ ಶರೀರದ

ಯೋಚನೆ ಬಂದಾಗಲೇ ತನ್ನ ದೃಷ್ಟಿ ರಿಕ್ಷಾ ಇರುವ ಶಿಥಿಲ ಸ್ಥಿತಿ ಕಡೆ ಹೋಗಬೇಕೆ?... ಇವೆರಡಕ್ಕೂ ಅದೇನು ಸಾಮ್ಯ?

ಟ್ರಿನ್ ಟ್ರಿನ್... ಟಾಂಗಾ ಜೊತೆಗೆ ತನ್ನ ರಿಕ್ಷಾ ಟಕರಾಯಿಸಿದ್ದ ನೆನಪು ಬಂದೊಡನೆಯೇ ತಾನೇ ತಾನಾಗಿ ತನ್ನ ಕೈ ಬೆಲ್ ಮೇಲೆ ಹೋಯಿತು. ಆದರೆ ಕೂಡಲೇ ಪರಿಸ್ಥಿತಿಯ ಅರಿವು ಆಗಿ ಕೈ ಸೆಳೆದುಕೊಂಡ. ಅನಾವಶ್ಯಕವಾಗಿ ಟ್ರಿನ್ ಟ್ರಿನ್ ಶಬ್ದ ಮಾಡಿದ ಕಾರಣದಿಂದಾಗಿ ಸವಾರಿಗಳು ಎಲ್ಲಿ ಬೇಸರಪಟ್ಟುಕೊಂಡರೋ ಎಂದು ಒಮ್ಮೆ ತಿರುಗಿ ನೋಡಿದ. ತನ್ನ ಟ್ರಿನ್ ಟ್ರಿನ್ ಶಬ್ದ ಎಷ್ಟು ಕರ್ಣಕಠೋರ ಎಂಬುದು ಆಗ ಮೊದಲ ಬಾರಿಗೆ ಅವನಿಗೆ ಅರ್ಥವಾಯಿತು. ಆ ಸಮಯದಲ್ಲಿ ಮುದುಕಿ ತುಂಬಾ ಪ್ರೀತಿಯಿಂದ ಮುದುಕನ ಕಾಲರ್ ಸರಿಮಾಡುತ್ತಿದ್ದಳು. ಕಿವಿಯಿಂದ ನೇತಾಡುತ್ತಿದ್ದ ಆಧಾರಗಳನ್ನು ನೋಡಿ, ಈ ಕೆಪ್ಪನಿಗೆ ನನ್ನ ಬೆಲ್ಲಿನ ಶಬ್ದದಿಂದ ಏನು ತೊಂದರೆಯಾಗಿರಬಹುದು, ಎಂದುಕೊಂಡ. ಕಿವಿಯೇ ಕೇಳುವುದಿಲ್ಲ!... ಅದು ಸರಿ, ಈ ಮುದುಕ ಕಣ್ಣು ಮುಚ್ಚಿದ ಎಂದರೆ ಈ ಮುದುಕಿಯ ಗತಿ ಏನಾಗಬಹುದು, ಎಂದು ಹಾಗೆಯೇ ಯೋಚಿಸಿದ. ತುಂಬಾ ನೊಂದುಕೊಳ್ಳುತ್ತಾಳೆ, ನಿಜ. ಮನೆಯಲ್ಲಿ ಮಕ್ಕಳೂ ಇರಬಹುದೇನೋ! ಆದರೂ ದೇವರೇ ಕಾಪಾಡಬೇಕು. ಇವೊತ್ತು ಯಾರು ತಾನೇ ತಮ್ಮ ತಾಯಿ ತಂದೆಗಳ ಬಗ್ಗೆ ಯೋಚಿಸುತ್ತಾರೆ? ಸುಮ್ಮೇರಾಗೆ ಈಗ ತನ್ನ ತಂದೆಯ ನೆನಪೂ ಬಂತು. ಹೋಗಿ ಅವನ ಕಾಲಮೇಲೆ ಬಿದ್ದು ಕ್ಷಮಿಸಿಬಿಡು ಎನ್ನಬೇಕು ಎಂದು ಅವನೆಷ್ಟು ಬಾರಿ ಯೋಚಿಸಿಲ್ಲ?... ಆದದ್ದು ಆಗಿ ಹೋಯಿತು, ಇನ್ನು ಕ್ಷಮಿಸಿಬಿಡು ಎನ್ನಬೇಕು. ಇನ್ನು ನೀನು ಆರಾಮವಾಗಿ ಕುಳಿತು ದೇವರ ಧ್ಯಾನ ಮಾಡು, ನಾನು ನಿನ್ನ ಸೇವೆ ಮಾಡುತ್ತೇನೆ, ಎನ್ನಬೇಕು... ಆದರೆ ಅವನಿಗೆ ತನ್ನ ತಂದೆಯ ಏಟುಗಳು ನೆನಪಿಗೆ ಬಂದು ಕೂಡಲೇ ಎಲ್ಲ ಕೋಮಲ ಭಾವನೆಗಳೂ ಮಾಯವಾಗುತ್ತಿದ್ದುವು. ಹೊಡೆಯುವುದು ಹಾಗಿರಲಿ, ಅವನೇನು ಕಮ್ಮಿ ಬೈಯುತ್ತಿದ್ದನೇ? ಹಲ್ಲು ಕಟಕಟ ಎನ್ನುವ ಚಳಿಗಾಲದ ಮಧ್ಯರಾತ್ರಿ ಸಮಯದಲ್ಲಿ ತನಗೆ ಧನಾಧನ್ ಬೀಳುತ್ತಿದ್ದ ಒದೆಗಳು ಮತ್ತು ಏಟುಗಳ ಜೊತೆಗೆ ಕೆಟ್ಟ ಕೆಟ್ಟ ಬೈಗಳಗಳನ್ನೂ ಅವನು ಕೇಳಬೇಕಾಗಿತ್ತು. ಕಿವಿಗಳ ಮೇಲೆ ದೊಡ್ಡ ಆಘಾತ. "ಕಮಜಾತ್ ಸೂಳೇಮಗನೇ,.... ನಿನಗವಳು ತಾಯಿ ಹಾಗಿದ್ದಾಳೆ, ಅವಳ ಮೇಲೆ ಕಣ್ಣು ಹಾಕ್ತೀಯಾ... ನಿನ್ನ ಮೈಯೆಲ್ಲ ಹುಳಬೀಳುತ್ತೆ... ಅಷ್ಟೇ ಯೌವನ ಬಾದಿದ್ದರೆ ಹೋಗು ಎಲ್ಲಿಗಾದರೂ. ತೀರಿಸಿಕೊಂಡು ಬರೋದಕ್ಕೆ.... ನಿನ್ನ ಚರ್ಮ ಸುಲಿದು ಬಿಟ್ಟೇನು ಹುಷಾರ್,.... ಇವೊತ್ತಿನಿಂದ ಮನೆಯಲ್ಲಿ ಕಾಲಿಟ್ಟೀಯೆ... ಹಾಗೆಯೇ ಸಿಗಿದು ತುಂಡುತುಂಡುಮಾಡಿ ನಾಯಿ ನರಿಗಳಿಗೆ ಹಾಕಿಬಿಟ್ಟೇನು" ಈ ಪ್ರಸಂಗ ನಡೆದಾದ ಮೇಲೆ ಅವನು ಭಿಂದವಾಡಿಗೆ ಹೋಗುವ ಮೊದಲ ಗಾಡಿ ಓಡಿದು ಹೊರಟು ಬಂದಿದ್ದ. ಹಾರದ ಪ್ರಸಂಗ ನಡೆದಿದ್ದುದಾದರೂ ಅಲ್ಲಿಯೇ.

ರಸ್ತೆ ಸಾಗುತ್ತಿತ್ತು; ಚೈನು ಕಿರ್ ಕಿರ್ ಎನ್ನುತ್ತಿತ್ತು.

ಅವನಿಗೆ ಮುದುಕಿಯ ಕತ್ತಿನಲ್ಲಿದ್ದ ಸರದ ನೆನಪು ಬಂತು. ಮತ್ತೆ ಹಿಂದಿರುಗಿ ಒಮ್ಮೆ ನೋಡಿದ. ತನ್ನ ತಂದೆಯ ನೆನಪು ಬಂದಹಾಗೆ ಅವನಿಗೆ ಈ ಇಬ್ಬರು ಮುದುಕ-ಮುದುಕಿಯ ಮೇಲೆ ಏಕೆ ದಯೆ ಮೂಡುತ್ತಿತ್ತೋ ತಿಳಿಯದು. ಇಬ್ಬರ ಮುಖದಲ್ಲಿಯೂ ಅದೆಷ್ಟು ತೃಪ್ತಿ ಇತ್ತು, ಸಂತೋಷ ಇತ್ತು! ಮತ್ತು ಈಗಲೇ ತೀರ್ಥ ಯಾತ್ರೆ ಮುಗಿಸಿ ಬಂದಿರುವಷ್ಟು ಸಂತಸ, ಗೆಲುವು – ಅವರ ಮುಖದಲ್ಲಿತ್ತು. ಇವರು ಸುಖವಾಗಿ ಬಾಳಿರ ಬೇಕು, ಎಂದು ನೋಡುತ್ತಲೇ ಗೊತ್ತಾಗುತ್ತದೆ. ಅವನೂ ಇದ್ದಾನೆ... ಈ ಮಟಮಟ ಮಧ್ಯಾಹ್ನದಲ್ಲಿ ಯಾವುದೋ ಮನೆಯ ಮುಂದೆ ಗಾರೆ ಕಲಸಿಕೊಂಡು ಇಟ್ಟಿಗೆಗಳನ್ನು ಜೋಡಿಸುವ ಕೆಲಸ ಮಾಡುತ್ತಿರಬೇಕು, ಈ ವೃದ್ಧಾಪ್ಯದಲ್ಲೂ... ಅವನು ಹೊಡೆದದ್ದು ದೊಡ್ಡ ವಿಷಯವಲ್ಲ... ತಪ್ಪು ಮಾಡಿದ್ದೆ... ಚಟ ತೀರಿಸಿಕೊಂಡಿದ್ದೆ... ವಯಸ್ಸಿನ ಪ್ರಭಾವ... ನಡೆದುಹೋಯಿತು. ಇನ್ನು ಆ ಹಾರದ ಪ್ರಸಂಗ... ಇವೆರಡೂ ವಿಚಾರ ಗಳ ಆಘಾತ ಅವನ ಮನಸ್ಸಿನ ಮೇಲೆ ಇದ್ದೇ ಇರುತ್ತದೆ...

ಇದ್ದಕ್ಕಿದ್ದಂತೆ ಅವನು ಬೆಚ್ಚಿಬಿದ್ದಂತಾಗಿ ಹಿಂದಿರುಗಿ ನೋಡಿದ. ಈ ಮುದುಕ – ಮುದುಕಿ ಆ ಮಾಲ್‌ಬಾಬು ಮತ್ತು ಅವನ ಹೆಂಡತಿಯೇ ಆಗಿದ್ದರೆ! ಛೇ, ಎಲ್ಲಿ ಬಂತು. ಅವರು ಹಿಂದುಗಳು. ಬಗ್ಗಿ ತನ್ನ ಮೊಣಕಾಲು ಕೆರೆಯತೊಡಗಿದ. ನಿಜ ಹೇಳುವು ದಾದರೆ ಮನಸ್ಸಿನಲ್ಲಿ ಅವನಿಗೆ ಹೆದರಿಕೆ ಇದ್ದೇ ಇತ್ತು. ಮಾಲ್‌ಬಾಬು ಯಾವತ್ತಾದರೂ ಕಣ್ಣಿಗೆ ಬಿದ್ದರೆ ಏನ್ ಗತಿ?... ಅವರಿಗೆ ನನ್ನ ಗುರುತಿಲ್ಲ ಸಿಗಬೇಕು... ಈಗಲೂ ಅದೇ ಸ್ಟೇಷನ್ನಿನಲ್ಲಿ ಇರಲು ಸಾಧ್ಯವೇ. ವರ್ಗವಾಗಿ ಎಲ್ಲೆಲ್ಲಿಗೆ ಹೋಗಿದ್ದಾರೋ! ಅವರ ಕೈಕೆಳಗೆ ನನ್ನ ಹಾಗೆ ಅದೆಷ್ಟು ಜನ ಕೂಲಿ ಕೆಲಸ ಮಾಡಿ ಹೋಗಿದ್ದಾರೋ ಏನೋ!

ಮುಖ್ಯ ರಸ್ತೆ ಹಾಗೂ ಕಾಲುದಾರಿ ಸೇರುವ ಕಡೆ ಆಲದ ಮರ ಇದೆಯಲ್ಲ, ಅಲ್ಲಿ ಕೆಳಗೆ ಒಂದು ಹನುಮಂತನ ವಿಗ್ರಹ ಇದೆ. ಸುಣ್ಣ ಬಣ್ಣ ಹಚ್ಚಿದ ಒಂದು ಗೂಡು, ಅದರಲ್ಲಿ ವಿಗ್ರಹ, ಅದರ ಮುಂದೆಯೇ ಅವನು ಪ್ರತಿ ದಿನ ಒಂದಲ್ಲ ಒಂದು ಸಲ ಹಾದು ಹೋಗಬೇಕಾಗುತ್ತದೆ. ಆಗ ಅವನಿಗೆ ಹಾರದ ಪ್ರಸಂಗ ನೆನಪಿಗೆ ಬರುತ್ತದೆ. ಮಾಲ್ ಬಾಬುವಿನ ಹೆಂಡತಿಯ ಬಾಯಿಗೆ ಬಟ್ಟೆ ಕಟ್ಟಿ, ಅವಳ ಕತ್ತಿನಿಂದ ಹಾರವನ್ನು ಹಾರಿಸಿ, ಎರಡು ತಿಂಗಳು ಅದನ್ನು ಬಚ್ಚಿಟ್ಟಿದ್ದುದು, ಆಮೇಲೆ ತಾಯಿ ಕಾಯಿಲೆ ಎಂಬ ನೆಪ ಹಾಕಿ ಇಲ್ಲಿಗೆ ಬಂದು ಮಂಗಿ ಜೊತೆ ಸೇರಿಕೊಂಡು ಅವನು ಹಾರವನ್ನು ಕರಗಿಸಿದ್ದ... ರಾತ್ರೆಯೇ ರಾತ್ರೆ... ಇದೆಲ್ಲ ಆ ಕ್ಷಣದಲ್ಲಿ ಅವನ ಕಣ್ಮುಂದೆ ಸುಳಿಯುತ್ತಿದೆ. ಹಾರದ ಮಾತು ಈ ರಿಕ್ಷಾ ಇರುವ ತನಕ ಮರೆಯುವಂತಿಲ್ಲ. ಅದು ಇಲ್ಲವಾಗಿದ್ದಿದ್ದರೆ ತಾನೂ ಮಂಗಿಯಂತೆಯೇ ಇಂದು ಅವರಿವರಿಂದ ಬಾಡಿಗೆಗೆ ರಿಕ್ಷಾ ತರಬೇಕಾಗಿತ್ತು. ಇಲ್ಲವೇ ಕೈಯಲ್ಲಿ ಗಾರೆ ಕೆಲಸದ ಸಲಕರಣೆಗಳನ್ನು ಹಿಡಿದುಕೊಂಡು ಹೋಗಬೇಕಾಗಿತ್ತು.... ಆದರೂ ಈ ರಿಕ್ಷಾ ತನ್ನದಲ್ಲವೆಂದು ಅವನಿಗನಿಸುತ್ತದೆ... ಸಾಲದ ಹಣದಿಂದ ಇದನ್ನು ಮಾಡಿಸಿರುವುದಾಗಿ ಭಾಸವಾಗುತ್ತದೆ.

ಒಮ್ಮೊಮ್ಮೆ ಅವನ ಮನಸ್ಸಿನಲ್ಲಿ ಒಂದು ರೀತಿಯ ವಿಚಿತ್ರ ಭಾವನೆ ಬರುತ್ತದೆ. ಹೇಗಾದರೂ ಮಾಡಿ ಹಣ ಉಳಿಸಬೇಕು, ಅಂಥದೇ ಒಂದು ಹಾರ ಮಾಡಿಸಬೇಕು, ಹೋಗಿ ಮಾಲ್‌ಬಾಬುಗಳ ಕಾಲು ಹಿಡಿದುಕೊಂಡು ನನ್ನಿಂದ ತಪ್ಪಾಗಿಹೋಯಿತು ಕ್ಷಮಿಸಿ... ನಾನು ಕುರುಡನಾಗಿದ್ದೆ, ಕ್ಷಮಿಸಿಬಿಡಿ, ಎನ್ನಬೇಕು...

"ಆ ಮುಂದೆ ಕಾಣುವ ಬಾಗಿಲ ಹತ್ತಿರ ನಿಲ್ಲಿಸಿಬಿಡು," ಎಂದು ಹೇಳಿದ ಮಾತು ಅವನ ಕಿವಿಯ ಮೇಲೆ ಇದ್ದಕ್ಕಿದ್ದಂತೆ ಬಿತ್ತು.

ಬಾಗಿಲ ಎದುರು ರಿಕ್ಷಾ ನಿಲ್ಲಿಸಿ ಅವನು ಹಿಂದಕ್ಕೆ ತಿರುಗಿ ನೋಡಿದ. ಮುದುಕಿ ಕರವಸ್ತ್ರದಿಂದ ಬಹಳ ಮುತುವರ್ಜಿ ವಹಿಸಿ ಮುದುಕನ ಬಾಯಿಯ ಎರಡೂ ಅಂಚು ಗಳನ್ನು ಒರೆಸುತ್ತಿದ್ದಳು. ಮಗುವಿಗೆ ಹಾಲು ಕುಡಿಸಿದ ನಂತರ ಬಾಯಿ ಒರೆಸುವುದಿಲ್ಲವೇ ಹಾಗೆ. ಮುದುಕಿಗೆ ಅವನ ಬಗ್ಗೆ ಅದೆಷ್ಟು ಆಸ್ಥೆ ಎಂದುಕೊಂಡ.

ಸ್ಟೇಷನ್ನಿನ ಕಡೆ ಹೋಗುತ್ತಾ ಅವನು ಬಹಳ ಹೊತ್ತು ಆ ಮುದುಕ-ಮುದುಕಿ ಬಗ್ಗೆಯೇ ಯೋಚಿಸುತ್ತಿದ್ದ. ತಾಯಿಯ ನೆನಪಂತೂ ಅವನಿಗೆ ಇಲ್ಲ. ಮಲತಾಯಿ ಒಲೆಯಿಂದ ತೆಗೆದ ಕಟ್ಟಿಗೆ ತುಂಡುಗಳಿಂದ ಅವನನ್ನು ಹೊಡೆಯುತ್ತಿದ್ದ ಪ್ರಸಂಗಗಳ ನೆನಪೂ ಅವನಿಗೆ ಆಗಾಗ ಬರುತ್ತಿತ್ತು. ತಂದೆ ಹಣ ಕೊಟ್ಟು ತನ್ನ ಮೂರನೆಯ ಹೆಂಡತಿ ಯನ್ನು ತಂದಾಗ ಮಾತ್ರ ಅವಳ ಇಂಪು ಧ್ವನಿ ಅವನನ್ನು ಬಹಳ ದಿನಗಳ ವರೆಗೆ ಹುಚ್ಚನನ್ನಾಗಿ ಮಾಡಿತ್ತು. ನನ್ನ ತಂದೆಯದೇ ತಪ್ಪು. ಅದು ನನ್ನ ತಪ್ಪಲ್ಲ ಎಂದು ಕೊಂಡಿದ್ದ. ಆಮೇಲೆ ಹಲವು ಬಾರಿ ಆ ದಿನಗಳಲ್ಲಿ ಅವನು ತಂದೆಯ ವಿದ್ರೋಹಿಯಾಗಿ ವರ್ತಿಸಿಕೊಂಡಿದ್ದ. ವೃದ್ಧಾಪ್ಯ ಬಂದಿದ್ದರೂ ಅದರ ಪ್ರಜ್ಞೆ ಇರಲಿಲ್ಲ, ಅವನ ತಂದೆಗೆ. ಅದು ಹಾಗಿರಲಿ. ಆದದ್ದು ಆಗಿಹೋಯಿತು. ಆದರೆ ಅವನಿಗೆ ಇವೊತ್ತೇ ಏಕೆ ಅದೆಲ್ಲ ನೆನಪಿಗೆ ಬರಬೇಕು? ಏನು ನೋಡಿ, ಅದೆಲ್ಲ ನೆನಪಿಗೆ ಬಂದಿತ್ತು? ತನ್ನ ರಿಕ್ಷಾದಲ್ಲಿ ಸವಾರಿ ಕೂರಿಸಿದ್ದ, ಹಾಗೆ ಕುಳಿತು ಪ್ರಯಾಣ ಮಾಡಿದವರಿಂದ ಹಣವನ್ನೂ ತೆಗೆದು ಕೊಂಡಿದ್ದ. ಆದರೂ ಯಾವುದೋ ಒಳ್ಳೆಯ ಕೆಲಸವನ್ನು ಮಾಡಿದ ಹಾಗೆ ಅವನಿಗೆ ಇಂದು ಅನಿಸುತ್ತಿದೆ. ತನ್ನ ಜೀವಮಾನದಲ್ಲಿ ಹಿಂದೆಂದೂ ಮಾಡದಿದ್ದ ಕೆಲಸವನ್ನು ಇವೊತ್ತು ಮಾಡಿದ ಹಾಗೆ ಆಗುತ್ತಿದೆಯಲ್ಲ! – ಇದಕ್ಕೇನು ಹೇಳಬೇಕು?

ಸ್ಟ್ಯಾಂಡಿನ ಕಂಟ್ರಾಕ್ಟರು ಜೊತೆಗೆ ಜಗಳ ಆಡಿದ್ದಾನೆ. ಅಲ್ಲಿಗೆ ಹೋಗುವಂತಿಲ್ಲ. ಹೊರಗೆ ಈ ಮರದ ಕೆಳಗೆ ರಿಕ್ಷಾ ನಿಲ್ಲಿಸಿದರಾಯಿತು, ಎಂದುಕೊಂಡು ಅಲ್ಲಿಯೇ ನಿಲ್ಲಿಸಿ ಚಕ್ರಕ್ಕೆ ಒಂದು ಕಲ್ಲು ಅಡ್ಡ ಇಟ್ಟು, ಸೀಟಿನ ಮೇಲೆ ಹಾಗೆಯೇ ಮೈ ಮುದುರಿಕೊಂಡು ಮಲಗಿ ಮೇಲೆ ಎಲೆಗಳ ಕಡೆಗೆ ನೋಡತೊಡಗಿದ್ದ. ಸವಾರಿ ಇಲ್ಲಿಯೂ ಸಿಗುತ್ತದೆ. ಅಲ್ಲಿ ಸ್ಟ್ಯಾಂಡಿಗೆ ಹೋಗಿ ನಿಂತು ಅನಾವಶ್ಯಕವಾಗಿ ಅವನಿಗೆ ಒಂದು ಆಣೆ ಕೊಡಬೇಕು, ಜೊತೆಗೆ ನಂಬರ್ ಪ್ರಕಾರ ಗಿರಾಕಿಗಾಗಿ ಕಾದು ನಿಂತಿರಬೇಕು. ಹೀಗಾಗಬಾರದು ಎನಿಸಿ ದಾಗ ಜನ ಪ್ರತಿಭಟನೆಯ ಧ್ವನಿ ಎತ್ತುತ್ತಾರೆ, ಹರತಾಳ ಆಚರಿಸುತ್ತಾರೆ, ಮೆರವಣಿಗೆ

ಹೊರಡಿಸುತ್ತಾರೆ—ಆದರೆ ಈ ಕಂಟ್ರಾಕ್ಟರುಗಳ ವಿರುದ್ಧ ಪೋಲೀಸಿನವರ ವಿರುದ್ಧ ಯಾರೂ ಚಕಾರ ಎತ್ತುವುದಿಲ್ಲವಲ್ಲ ಎನಿಸಿತು. ಇವರು ಲೂಟಿಮಾಡುತ್ತಿದ್ದಾರೆ. ನಮ್ಮ ಮಂಗೀ ಸಾಹೇಬರೂ ಈಗ ಲೀಡರ್ ಆಗಿಬಿಟ್ಟಿದ್ದಾರೆ. ಪಾಯ್‌ಜಾಮ, ಕುರ್ತಾ ಹಾಗೂ ವೇಸ್ಟ್‌ಕೋಟು ಉಟ್ಟು ತಿರುಗುತ್ತಿರುತ್ತಾರೆ. ಹಿಂದೆ ಮನೆ ಮನೆ ಹೋಗಿ ಸುಣ್ಣ ಬಣ್ಣ ಮಾಡಿ ಬರುತ್ತಿದ್ದ ಮನುಷ್ಯ. ಈಗ ಅದೆಷ್ಟು ಬದಲಾಗಿಬಿಟ್ಟಿದ್ದಾನೆ! ಈಗ ಆತ ಮಂಗೀಬಾಬು. ಹಿಂದೊಮ್ಮೆ ನಿನ್ನ ಶೂರಿಟಿ ಇಲ್ಲದೆ ಅವನಿಗೆ ರಿಕ್ಷಾ ಕೊಡುವುದಿಲ್ಲ ಎಂದು ಆ ಸಿಂಧಿ ನಿರಾಕರಿಸಿದ್ದ. ಮಂಗಿ ತನಗೆ ತುಂಬಾ ಬೇಕಾದವನಾಗಿದ್ದ ನಿಜ. ಹೆಣ್ಣು ಹುಡುಕಿ ಮದುವೆ ಮಾಡಿಸಿದ್ದ, ತನ್ನ ಮಾವನಿಂದಲೂ ಅಷ್ಟಿಷ್ಟು ಕೊಡಿಸಿದ್ದ ನಿಜ. ಆದರೂ ಆ ಹಾರವನ್ನು ಕರಗಿಸಿದಾಗ ಚಿನ್ನದಲ್ಲಿ ಅವನಿಗೆ ತಾನು ಪಾಲು ಕೊಟ್ಟಿರಲಿಲ್ಲವೇ?—ಅದರಲ್ಲಿ ಗುಂಜಾಯಿಸಿ ಏನಾದರೂ ಸಾಧ್ಯವಿತ್ತೆ? ಆ ಪಾಲು ಏನೇನೋ ಆಗಿಹೋಗಿರಬಹುದು; ಸಾರಾಯಿ ಕುಡಿದು ಮುಗಿಸಿರಬಹುದು, ಸಿಗರೇಟು—ಸಿನಿಮಾಗಳಿಗೆ ಅದನ್ನು ಹಾಳು ಮಾಡಿರಬೇಕು, ಇನ್ನೂ ಏನೇನೋ ಮಾಡಿರಬೇಕು ವಾರ ವಾರ ಮನೆಗೆ ಹೋಗದೆ ಅಲೆಯುತ್ತಿದ್ದು, ಈ ಕುಡುಕ ನನ್ನ ಮಕ್ಕಳಿಂದ ನಂಬರ್ ಕೇಳುತ್ತಾ ಕುಳಿತಿರಬಹುದು. ಆದರೆ ನಾನು ಇಂಥ ಮೂರ್ಖತನ ಮಾಡಿಲ್ಲ, ಎಂದು ಈ ರೀತಿ ಇರಬೇಕೆ? ನಿನ್ನ ಬಾಯಿಗೂ ಒಂದಷ್ಟು ಹಾಕಿದ್ದಾಯಿತು, ನಿನ್ನ ಆಟ ಎಲ್ಲ ನೋಡಿದ್ದಾಯಿತು, ಈಗಲೂ ನೀನು ಹೇಳಿದಂತೆ ಕೇಳಿಕೊಂಡಿರಬೇಕೇ?...

ಸುಮೇರಾನ ಮುಖ ಹುಳಿಯಾಯಿತು. ಅಯೋಗ್ಯ ಎಲ್ಲಿದ್ದೋ! ತಿಂದ ಮನೆಗೇ ಎರಡು ಬಗೆಯುತ್ತಾನೆ. ರಿಕ್ಷಾದಲ್ಲಿ ಮಲಗಿಕೊಂಡೆ ತನ್ನ ಕೈಯನ್ನು ದುರ್ಬೀನಿನಂತೆ ಮಾಡಿಕೊಂಡು ಮರದ ಎಲೆಗಳ ಕಡೆಗೆ ಮತ್ತು ಆಕಾಶದ ಕಡೆಗೆ ನೋಡತೊಡಗಿದ. ಬಾಲ್ಯದಿಂದಲೂ ಇದು ಅವನಿಗೆ ಒಂದು ರೀತಿಯ ಆಟವಾಗಿತ್ತು. ಹೀಗೆ ಮಾಡುವುದರಿಂದ ಅವನಿಗೆ ತುಂಬಾ ಖುಷಿಯಾಗುತ್ತಿತ್ತು. ಗಂಟೆಗಟ್ಟಲೆ ಹೀಗೆ ನೋಡುತ್ತಾ ಮಲಗಿರುತ್ತಿದ್ದ. ಬೆಳಗ್ಗೆಯೆಲ್ಲ ಅಮೃತಶಿಲೆ ಕಲ್ಲಿನಿಂದ ಆಟಿಕೆ ಸಾಮಾನುಗಳನ್ನು ತಯಾರಿಸುವ ಕಾರ್ಖಾನೆಯಲ್ಲಿ ಕೆಲಸ ಮಾಡುವುದು, ರಾತ್ರಿ ಮಲಗಿ ಆಕಾಶದಲ್ಲಿ ಚಂದ್ರನನ್ನು ನೋಡುತ್ತಾ ಮಲಗಿ ನಿದ್ರೆಹೋಗುವುದು ಅವನ ವಾಡಿಕೆಯಾಗಿತ್ತು... ಚಂದ್ರನಲ್ಲಿ ಮುದುಕಿಯೊಬ್ಬಳು ಕುಳಿತು ಚರಕಾ ನಡೆಸುತ್ತಿರುವಂತೆ ಒಮ್ಮೊಮ್ಮೆ ಕಂಡಿದ್ದರೆ, ಮತ್ತೆ ಕೆಲವೊಮ್ಮೆ ಜಿಂಕೆ ಓಡುತ್ತಿರುವಂತೆ ಕಾಣುತ್ತಿತ್ತು. ಈಗವನು ಮಲಗಿಕೊಂಡು ಹಸಿರು ಎಲೆಗಳ ಕಡೆ ನೋಡುತ್ತಾ ಇದ್ದ—ಬೇವಿನ ಮರದ ಎಲೆಗಳು. ಅವುಗಳ ಮಧ್ಯದಿಂದ ಕಾಣುತ್ತಿದ್ದ ನೀಲಿ ಆಕಾಶದಲ್ಲಿ ಮೋಡಗಳು ಚಲಿಸುತ್ತಿದ್ದುವು. ಬಿಳಿಯ ಬಾತುಗಳಂತೆ ಅವುಗಳ ಚಲನ ಅವನಿಗೆ ಕಾಣುತ್ತಿತ್ತು. ಅವುಗಳನ್ನೇ ಅವನು ದಿಟ್ಟಿಸಿ ನೋಡುತ್ತಿದ್ದ; ಎಲೆಗಳ ಸುಯ್ ಸುಯ್ ಶಬ್ದ ಕೂಡ ಕೇಳುತ್ತಿತ್ತು.

ಹುಂ. ರಾಮದೇಯಿಗಾಗಿ ಮಂಗೀ ಸಾಹೇಬ್ ಕಿವಿಯ ಆಭರಣ ತಂದಿದ್ದರು...

"ರೈಲಿನ ಹರಾಜಿನಲ್ಲಿ ಸಿಕ್ಕಿಕೊಂಡಿದ್ದೆ. ಇನಾಮು ಸಿಕ್ಕುತ್ತದೆಂಬ ನಿರೀಕ್ಷೆಯಲ್ಲಿ ಹೆಚ್ಚು ಹೆಚ್ಚು ಬೆಲೆ ಕೂಗುತ್ತಿದ್ದೆ. ಒಂದು ಸಲ ಹೀಗೆ ಕೂಗಿದಾಗಲೇ ಅವನು ಹರಾಜನ್ನೇ ನಿಲ್ಲಿಸಬೇಕೇ? ನಾನೇನು ಮಾಡಲಿ, ಮೌಜಿ?" ಯಾವಾಗಿನಿಂದ ಅವರ ಈ ರಬಾವು ಸಂಬಂಧ ನಡೆಯುತ್ತಿತ್ತೋ! ಅವನು ಆದಿನ ಹಾಗೆ ರಿಕ್ಷಾದ ಟ್ಯೂಬ್ ಬದಲಾಯಿಸಲು ಇದ್ದಕ್ಕಿದ್ದಂತೆ ಬರದೆ ಇದ್ದಿದ್ದರೆ ಈ ಜನ್ಮದಲ್ಲಿಯೇ ಅದು ಅವನಿಗೆ ತಿಳಿಯುತ್ತಿರಲಿಲ್ಲ. ಕತ್ತಿನ ತನಕ ಕೂದಲು ಬಿಟ್ಟುಕೊಂಡು ಸಿನಿಮಾ ಹಾಡು ಹೇಳಿಕೊಂಡು ತಿರುಗುತ್ತಿದ್ದರೆ ಹೀಗೇ ಆಗೋದು... ರಿಕ್ಷಾ ನಡೆಸುವುದೆಂದರೆ ಹೀಗೆ ನಡೆಸಬೇಕು, ಒಳ್ಳೆ ಸರ್ಕಸ್ ಆಟ ಇರುವ ಹಾಗೆ ಇರಬೇಕು. ರಿಕ್ಷಾ ಅಲ್ಲ ವಿಮಾನ ಹೋಗುತ್ತಿದೆ ಎನ್ನುವ ಹಾಗೆ. ಕಾರನ್ನು ಪಕ್ಕಕ್ಕೆ ತಿರುಗಿಸುವ ಹಾಗೆ ರಿಕ್ಷಾ ತಿರುಗಿಸಬೇಕು... ಸದ್ಯ, ಆ್ಯಕ್ಸಿಡೆಂಟ್ ಆದಾಗ ತಲೆ ಬಡಿಯಿತು. ಅಷ್ಟೆ. ಇಲ್ಲವಾದರೆ ನೇರವಾಗಿ ಸ್ವರ್ಗಕ್ಕೇ ಹೋಗಬೇಕಿತ್ತು. ಮತ್ತೆ "ಘರ ಆಯಾ ಮೇರಾ ಪರದೇಸಿ" ಎನ್ನುವ ಮಾತೇ ಇರುತ್ತಿರಲಿಲ್ಲ. ಆ ಕೆಟ್ಟ ರಂಡೆ ರಾಮುದೇಯಿ. ನ್ಯಾಯವಾಗಿ ನೋಡಿದರೆ ಮತ್ತೆ ಮುಖ ತೋರಿಸಲಾರದೆ ಅವಮಾನದಿಂದ ಸಾಯಬೇಕಾಗಿತ್ತು. ಆದರೆ ಅಂತಹ ಸಂಕೋಚವೇ ಇರಲಿಲ್ಲ ಅವಳಿಗೆ. ಬದಲಾಗಿ ಜಬರ್ನಿಂದಲೇ ಹೇಳಿದಳು: "ಮೊದಲು ನನ್ನ ಕಡೆಯೂ ಸ್ವಲ್ಪ ನೋಡಿ ಬಾಬೂ, ನೀವೇನೂ ನನ್ನನ್ನು ಕೊಂಡುಕೊಂಡೂ ಬಂದಿರಲಿಲ್ಲ. ಓಡಿಸಿಕೊಂಡೂ ಬಂದಿರಲಿಲ್ಲ... ಹಾಗೆ ಬಂದಿದ್ದರೆ ನಿಮ್ಮ ತಾಯಿನೇ ಸರಿ." ಬಾಯಿಬಡುಕಿ. ಇಷ್ಟು ಚೆನ್ನಾಗಿ ಬಾರಿಸಿದೆ. ಆದರೆ ಅವಳು ಬಾಯಿ ಮುಚ್ಚಿದ್ದರೆ! ಅವಳಿಗೆ ಅವಳ ಅಪ್ಪನ ಗರ್ವ ಇದೆ. ಅಪ್ಪ ಸರಪಂಚನಿದ್ದಾನೆ ಎಂಬ ಗರ್ವ... ಇಂತಹ ಅಪ್ಪಂದಿರಿಗೆ ಸರಿಯಾಗಿ ಬುದ್ಧಿ ಕಲಿಸಬೇಕು... ಠಕ್ಕರು... ಎರಡು ಬುಟ್ಟಿ ನಾರಂಗಿ ಛಾಪು ಕೊಟ್ಟರೆ ಸಾಕು, ಎಂತಹ ತೀರ್ಪನ್ನಾದರೂ ಪಡೆಯಬಹುದು. ಇವರೇನು ಪಂಚಾಯತಿ ನಡೆಸಿಯಾರು? ನಡೆಸುವುದೆಲ್ಲ ಲೂಟಿ... ನಮ್ಮಿಂದ ದಂಡದ ಹೆಸರಿನಲ್ಲಿ... ಧೀರಾನ ವ್ಯಾಮೋಹವೊಂದು ಇಲ್ಲದಿದ್ದರೆ ಇಡೀ ಜೀವಮಾನ ಅಪ್ಪನ ಮನೇಲೇ ಬಿದ್ದಿರು ಹೋಗಿ ಎಂದು ಓಡಿಸುತ್ತಿದ್ದೆ, ಬೇರೆ ಮದುವೆ ಮಾಡಿಕೊಳ್ಳುತ್ತಿದ್ದೆ.

ಕೆಲಸಕ್ಕೆ ಬಾರದ ಯೋಚನೆಗಳು – ಯಾಕೆ ಸುಮ್ಮನೆ ಇದೆಲ್ಲ ಯೋಚನೆ ಮಾಡ್ತಾ ಇದೇನೋ, ಏನೋ!..., ಈ ಕೆಮ್ಮಲು ಬೇರೆ... ದೇಹಸ್ಥಿತೀನೇ ಕೆಟ್ಟುಹೋಯ್ತು... ಆಖ್ ಥೂ... ಮಲಗಿಕೊಂಡೇ ಅವನು ಕಫದ ಉಂಡೆಯನ್ನು ಹಿಂಭಾಗಕ್ಕೆ ಅಷ್ಟು ದೂರಕ್ಕೆ ಉಗಿದ. ರಟ್ಟೆಯಿಂದ ತುಟಿಗಳನ್ನು ಒರೆಸಿಕೊಂಡು ಮತ್ತೆ ಆಕಾಶದ ಕಡೆಗೆ ನೋಡತೊಡಗಿದ. ಹೇಗೆ ಒಂದರ ಹಿಂದೆ ಒಂದು ತೇಲಿ ಬರುತ್ತಿದೆ!... ನೀಲಿ ನೀರಿನಲ್ಲಿ ಬಿಳಿಯ ಬಣ್ಣದ ಕರವಸ್ತ್ರಗಳು ತೇಲಿಕೊಂಡು ಬಂದಂತೆ! ...ಹಾಂ, ಈಗ ಜ್ಞಾಪಕಕ್ಕೆ ಬಂತು. ಇನ್ನೊಂದು ಕರವಸ್ತ್ರ ಕೂಡ ಸಿಕ್ಕಿತ್ತು. ಆ ವಿಚಾರವನ್ನೇ ಇಷ್ಟು ಹೊತ್ತೂ ಯೋಚಿಸುತ್ತಾ ಇದ್ದಿದ್ದು, ಮರೆತೇ ಹೋಗಿತ್ತು ಆ ವಿಷಯ. ನನ್ನ ಹತ್ತಿರ ಚೆನ್ನಾಗಿ

ಹೊಡಿಸಿಕೊಂಡು. ರಾಮದೇಯಿ ಗಂಟುಮೂಟೆ ಕಟ್ಟಿಕೊಂಡು, ತಂದೆಮನೆಗೆ ಹೊರಟು ಹೋಗಿದ್ದಾಗ ನಡೆದ ವಿಷಯ... ಅವಳು ಹೋದ ಎರಡು ದಿನ ನಂತರಾನೇ ಈ ವಿಷಯ ನಡೆದಿತ್ತು...

ಬೆಳಿಗ್ಗೆಯಿಂದಲೂ ಅವನ ಮನಸ್ಸು ಹೇಗೋ ಒಂದು ತರಹ ಆಗಿಹೋಗಿತ್ತು. ಸಮಾಧಾನವೇ ಇರಲಿಲ್ಲ. ಬಿದ್ದುಕೊಂಡಲ್ಲಿಂದಲೇ ಕುಟುಕುಟು ಎನ್ನುತ್ತಿದ್ದ ಅಳಿಲುಗಳ ಕಡೆಗೋ ಕಾಲುಗಳಿಂದ ಬೂದಿ ಕೆರೆಯುತ್ತಿದ್ದ ಕೋಳಿ ಹಾಗೂ ಕೋಳಿಮರಿಗಳನ್ನೋ ನೋಡುತ್ತಿದ್ದೆ. ಕಾಲುಗಳನ್ನು ಆರಿಸಿ ಆರಿಸಿ ಕೋಳಿ ಚುಕ್-ಚುಕ್ ಎನ್ನುತ್ತಿದ್ದಹಾಗೆಯೇ ಚಿಕ್ಕ ಚಿಕ್ಕ ಮರಿಗಳು ಹತ್ತಿರ ಬಂದು ಸುತ್ತ ಸೇರಿಕೊಳ್ಳುತ್ತಿದ್ದುವು. ಉಯ್ಯಾಲೆಯಂತಿದ್ದ ಖಾಟ್‌ನಲ್ಲಿ ಬಿದ್ದುಕೊಂಡೇ ಭೂಮಿ ಮುಟ್ಟುತ್ತಿದ್ದೆ, ಕೊಳಕಲು ದಿಂಬಿಗೆ ತಲೆಕೊಟ್ಟು ಮಲಗಿಕೊಂಡೇ 'ಕಿಸ್ಸಾ ತೋತಾ ಮೈನಾ' ಮತ್ತು 'ದಿಲ್ ಬಹಾರ್' ಸಿನಿಮಾ ಹಾಡುಗಳನ್ನು ಹಾಡುತ್ತಿದ್ದೆ. ಆಮೇಲೆ ಅಲ್ಲಿಯೇ ಇದ್ದ ಒಂದು ಕಟ್ಟಿಗೆಯನ್ನು ಬಡಿದು ಒಳ್ಳೆಯ ಬ್ರಷ್ ಮಾಡಿದೆ. ಎಲ್ಲಿಯೂ ಹೋಗಲು ಮನಸ್ಸು ಬರುತ್ತಿರಲಿಲ್ಲ. ಎಲ್ಲಿಗೆ ಹೋಗಿ ಯಾರನ್ನು ಭೇಟಿಮಾಡಿದರೂ ರಾಮದೇಯಿ ನೆನಪು ಬರುತ್ತಿತ್ತು. ತಪ್ಪು ಅವಳದಲ್ಲ ನನ್ನದೇ ಎನಿಸುತ್ತಿತ್ತು. ಎಲ್ಲರೂ ಮೋಸಗಾರರೇ, ಸ್ವಾರ್ಥಿಗಳೇ... ತುಂಬಾ ಕೆಟ್ಟ ಜನ. ಆ ವಸತಿಯ ಎಂಟು ಹತ್ತು ಮನೆಗಳ ಪೈಕಿ ಸ್ವಂತ ರಿಕ್ಷಾ ಇದ್ದುದೂ ನನ್ನ ಬಳಿಯೇ. ಅದನ್ನು ನೋಡಿಯೇ ಇವನ ಬಳಿ ಇಷ್ಟೊಂದು ಹಣ ಎಲ್ಲಿ ಬಂತು ಎಂದು ಯೋಚಿಸ್ತಾರೆ. ಏನೋ ದೊಡ್ಡ ಆಸ್ತಿ ಇರುವಂತೆ ತಿಳಿಯುತ್ತಾರೆ. ಕಣ್ಣು ಕೆಂಪಗೆ ಮಾಡಿಕೊಳ್ಳುತ್ತಾರೆ... ಬಾಂಕಿ ರಿಕ್ಷಾ ಹಾರಿಸಿಕೊಂಡೇ ಹೊರಟುಹೋದ, ಬೇಲನ ಗಂಜದ ಲಾಲಾ ಅವನನ್ನು ಜೈಲಿಗೆ ಹಾಕಿಸಿದ... ತಾನೂ ತನ್ನ ರಿಕ್ಷಾವನ್ನು ಗಂಟೆಗಟ್ಲೆ ಉಜ್ಜಿ ಉಜ್ಜಿ ಫಳ ಫಳ ಎನ್ನುವ ಹಾಗೆ ಮಾಡುತ್ತಿದ್ದ... ಪಕ್ಕದ ಮನೆಯ ಸೊಸೆ ತನ್ನ ಕೈಯನ್ನು ಬಳೆಗಳು ಮಿನುಗುವ ರೀತಿಯಲ್ಲಿ ಆಡಿಸಿಕೊಂಡು ಬಿಸ್ಮಾನ್ ಚಿಕ್ಕಮ್ಮನ ಜೊತೇಲಿ ಜಗಳ ಆಡ್ತಾ ಇದ್ದಾಳೆ. "ಲೋಂಡಿ, ಗಂಡ ಅನ್ನೋ ಕೊಬ್ಬು ನಿನಗೆ. ಅವನು ಇವತ್ತು ಬರ್ಲಿ ಇರು. ಕನ್ನಡಕದ ದುಡ್ಡು ವಸೂಲು ಮಾಡ್ದಿದ್ದರೆ ಕೇಳು... ಬಿಡ್ತೀನೇನು, ಏನೇ ಆಗ್ಲಿ ಇವೊತ್ತು, ಕಳ್ಳ ಮುಂಡೆ ಎಲ್ಲೀದೋ, ಒಂದು ಕೈ ನೋಡಿಯೇ ನೋಡ್ತೀನಿ ಇವೊತ್ತು." ಏನು ಗಂಟಲು ಅವಳದು! ಹೋಗಿ ಹಾಗೇ ಹಿಸುಕಿ ಬರಲೇ ಅನ್ನಿಸ್ತಿದೆ. ಒಂದು ಅರ್ಧಾಣೆ ಮಕ್ಕಳ ಆಟಿಕೆಯ ಕನ್ನಡಕ, ಅದಕ್ಕಿಷ್ಟು ರಂಪ ಮಾಡ್ತಾ ಇದ್ದಾಳೆ. ಮುರಿದು ಹೋದರೆ ಮುರಿದು ಹೋಯಿತು, ಏನು ಮಹಾ. ಅಷ್ಟಕ್ಕೋಸ್ಕರ ಬೆಳಿಗ್ಗೆಯಿಂದ ಶುರುವಾಗಿದೆ ಈ ರಂಪ. ಇಡೀ ದಿನ ಹೀಗೆಯೇ ಒಂದಲ್ಲ ಒಂದು. ಒಂದು ನಿಮಿಷ ಹಾಯಾಗಿ ಬಿದ್ದಿರುವ ಹಾಗಿಲ್ಲ. ಏನು ಜನಾನೋ ಏನೋ, ಹಳ್ಳಿ ಗಮಾರರು.

ಸಿಕಂದರಾದ ಮುಂಭಾಗದಲ್ಲಿ ಆ ದಿನ ರಿಕ್ಷಾ ನಿಲ್ಲಿಸಿದ್ದೆ. ಸಂಜೆ ಆಗಿಹೋಗಿತ್ತು. ಕೆಳಗಿಳಿದು ಒಂದು ಪಕ್ಕಕ್ಕೆ ನಿಂತು ಜೋರಾಗಿ ಹುಕ್ಕಾ ಎಳೆಯುತ್ತಿದ್ದೆ. ಸರ್ರೆಂದು

ಒಂದೆರಡು ಕಾರುಗಳು ಒಳಕ್ಕೆ ಹೋದುವು ಮತ್ತು ಹೊರಕ್ಕೆ ಬಂದುವು. ಈ ಬಿಳೀ ಹುಡುಗೀರೂ ಕೂಡ ಅದೇನು ಕಾರು ನಡೆಸುತ್ತಾರೆ! ತಾಯಿಯ ಹೊಟ್ಟೆಯಿಂದ ಬರುವಾಗಲೇ ಕಾರು ಬಿಡುವುದನ್ನು ಕಲಿತು ಬಂದವರಂತೆ ಓಡಿಸುತ್ತಾರೆ. ಕಾರುಗಳು ತಿರುಗುವ ರೀತಿ, ಸ್ಟಾರ್ಟ್ ಆಗೋದು ಮತ್ತು ಹೊರಡೋದು—ಇವನ್ನೆಲ್ಲ ಅವನು ಮಂತ್ರಮುಗ್ಧನಾಗಿ ನೋಡುತ್ತಾ ಇದ್ದಾನೆ. ನನಗೂ ಡ್ರೈವಿಂಗ್ ಬಂದಿದ್ದರೆ ತಾನೂ ಹೀಗೆಯೇ ಜುಮ್ಮಂತ ಕಾರು ನಡೆಸಿಕೊಂಡು ಹೋಗುತ್ತಿದ್ದೆ. ಹಾಗೆಯೇ ತಾನೂ ತಿರುಗಿಸುತ್ತಿದ್ದೆ. ಆ ರಂಡೆ ರಾಮದೇಯಿಗೂ ಕೂಡಿಸಿ ಒಂದಿಷ್ಟು ತಿರುಗಾಡಿಸಿ ಬಿಡುತ್ತಿದ್ದೆ—ಆಗಲಾದರೂ ಅವನಿಗೊಂದಿಷ್ಟು ಬೆಲೆ ಬರುತ್ತಿತ್ತು ಅವಳ ದೃಷ್ಟೀಲಿ. ಅವನು ಆ ಕಡೆ ನೋಡುತ್ತಾನೆ. ಮೊಣಕಾಲಿನ ತನಕ ಪಂಚೆ, ಬಿಚ್ಚಿದ ಎದೆ, ತಲೆಯ ಮೇಲೆ ದೊಡ್ಡ ಮುಂಡಾಸು ಸುತ್ತಿರುವ ಒಬ್ಬ ಬಾಯಿಬಿಟ್ಟುಕೊಂಡು ಸಿಕಂದರಾದ ಗೋಪುರಗಳನ್ನು ನೋಡ್ತಾ ನಿಂತಿದ್ದು ಪಕ್ಕದಲ್ಲಿರುವವನಿಗೆ ಹೇಳ್ತಾ ಇದ್ದಾನೆ: "ಎಲಾ ಇವ್ನ. ಇಲ್ನೋಡು, ಎಷ್ಟು ಎತ್ತರಕ್ಕೆ ಆಕಾಸಕ್ಕೆ ಹೋಗಿ ಮುಟ್ತಾ ಇವೆ; ಮಸೀದಿ ಇರೋ ಹಂಗದೆ ಅಲ್ಲಾ?"

ಅವನೇ ಸುಮೇರಾ ಕಡೆಗೆ ತಿರುಗಿ ಕೇಳಿದ: "ತಮ್ಮಾ, ಇದಕ್ಕೆ ಅಕಬರಾ ಅಂತಾರೋ ಮಕಬರಾ ಅಂತಾರೋ, ಅದೇನಂತಾರೆ ತಮ್ಮಾ ಇದಕ್ಕೆ?"

ಅಗಿಯುತ್ತಿದ್ದುದನ್ನು ಮರೆತು ಸುಮೇರಾ ಜೋರಾಗಿ ನಕ್ಕುಬಿಟ್ಟ. ಮತ್ತು ಆ ಮನುಷ್ಯನ ಸರಳತೆಯನ್ನು ಮೆಚ್ಚಿಕೊಂಡು ಹೇಳಿದ: "ಇದು ಸಿಕಂದರಾ ಠಾಕುರ್, ಇಲ್ಲಿ ಅಕಬರ್ ಬಾದಶಹನನ್ನು ಹೂತಿದ್ದಾರೆ. ಎಲ್ಲಿಂದ ಬಂದಿದ್ದೀರಿ?" ತರಹೆ ತರಹೆಯ ಜನ ಇದ್ದಂತೆ ಅವನಿಗೆ ಕಂಡಿತು.

ಸುಮೇರಾ ನಗುತ್ತಿದ್ದುದು ಠಾಕೂರನ ಗಮನಕ್ಕೆ ಬಂದಿರಲಿಲ್ಲ. ಬಾಯಿ ಬಿಟ್ಟುಕೊಂಡು ಆಶ್ಚರ್ಯ ವ್ಯಕ್ತಪಡಿಸುತ್ತಾ ಹೇಳಿದ: "ವಾಹ್, ಅಕಬರ್ ಬಾದಶಹ ಕೂಡ ಎಂಥ ಬಾದಶಹ! ಸಾಯೋದಕ್ಕೂ ಇಷ್ಟು ಒಳ್ಳೇ ಸ್ಥಳ ಆರಿಸಿಕೊಂಡಿದ್ದಾನೆ". ಸುಮೇರಾ ಕೇಳಿದ್ದ ಪ್ರಶ್ನೆಗೆ ಉತ್ತರ ಕೊಡಲಿಲ್ಲವಲ್ಲ ಎಂದು ಅವನ ಕ್ಷಮೆ ಕೇಳುತ್ತಾ ಆಮೇಲೆ ಹೇಳಿದ: "ತಮ್ಮಾ, ನಾವು ಭರತ್‌ಪುರದಿಂದ ಬಂದಿದ್ದೇವೆ; ನಾವು ತಾನೇ ಇಂಥಾವನ್ನು ಎಲ್ಲಿ ನೋಡಿರ್ತೀವಿ? ಡೀಂಗ್ ಮಹಲ್ ನೋಡಿದ್ದೀವಿ—ಅಷ್ಟೆ. ಏನೋ ಕೆಲಸದ ಮೇಲ್ ಬಂದಿದ್ವಿ. ಹೀಗೇ ನೋಡ್ಕೊಂಡ್ ಹೋಗೋಣ ಅಂತ ಬಂದ್ವಿ!"

ಠಾಕೂರ್ ಆ ಕಡೆ ಹೋದಮೇಲೆ ಟಾಂಗಾವಾಲಾ ಬುಂದನ್ ಹೇಳಿದ. "ಇವನು ಬಿಡು ಪಾಪ, ಹಳ್ಳಿಯ ಮುಕ್ಕ. ಎಂಥೆಂಥವರನ್ನೋ ಬೇವಕೂಫರನ್ನಾಗಿ ಮಾಡಿ ಕಳಿಸಿದ್ದೇವೆ, ಗೊತ್ತಾದರೆ ತಮ್ಮ ಮೂರ್ಖತನಕ್ಕೆ ತಾವೇ ಅಳ್ತಾರೆ. ಅಂಗ್ರೇಜ್ ಅಮೇರಿಕನ್ನರಾದರೂ ಆದರೆ ಐದು–ಹತ್ತು ರೂ.ಗಳ ಬಕ್ಷೀಸನ್ನಾದರೂ ನಿರೀಕ್ಷಿಸಬಹುದು. ಪಾಪ, ಇಂಥವರಿಂದ ಏನು ನಿರೀಕ್ಷಿಸೋದು? ಗಂಟೆಕಟ್ಲೆ ಚೌಕಾಸಿ ಮಾಡಿ ಕೊನೆ ಸವಕಲು

— ಇಟ್ ಈಜ್ ಆಲ್‌ರೈಟ್ ಜಾರ್ಜ್, ಎಂದು ನಾನು ಬಾಯಿಹಾಕಿ ಮುಂದೆ ಏನೂ ಹೇಳದಂತೆ ಮಾಡಿದೆ. ಒಂದು ದೀರ್ಘಕಾಲದ ಜ್ವರದಿಂದ ಎದ್ದಂತಾಗಿತ್ತು ನನ್ನ ಸ್ಥಿತಿ. ಹತ್ತಿರದಲ್ಲಿಯೇ ಲ್ಯಾಂಪ್‌ಪೋಸ್ಟಿನ ಕೆಳಗೆ ಹಳದಿ ಬಣ್ಣದ ಗುರುತು ಹಾಕಿದ ಭಾಗ ಇತ್ತು. ಆ ದುಂಡು ವೃತ್ತದಲ್ಲಿ ನಾನು ಉಗುಳಿದೆ. ...ಕೆಂಪೆಂದರೆ ಕೆಂಪು. ತಾಂಬೂಲ ಉಗುಳಿದ ಹಾಗಿತ್ತು. ಅದು ರಕ್ತ... ನನಗೆ ಆಶ್ಚರ್ಯವಾಯಿತು. ಮತ್ತೊಮ್ಮೆ ಹಾಗೆಯೇ ಉಗುಳಿದೆ, ನನ್ನ ರಕ್ತವನ್ನು ಇನ್ನೊಮ್ಮೆ ನೋಡುವ ಸಾಹಸ ನನ್ನಿಂದ ಆಗದೆಹೋಯಿತು.

— ನಿನಗೆ ಪೆಟ್ಟು ಹೆಚ್ಚಾಗಿ ತಗಲಿಲ್ಲತಾನೇ? — ಜಾರ್ಜ್ ಕೇಳಿದ. ಅವನ ಸ್ವರದಲ್ಲಿ ಒಂದು ಆತಂಕ ಇತ್ತು. ಅದು ನನಗೆ ಆಶ್ಚರ್ಯವನ್ನುಂಟುಮಾಡಿತು.

ನಾನು ಸುಮ್ಮನಿದ್ದೆ. ಒಂದು ಕ್ಷಣ ಹಾಗೆಯೇ ನನ್ನ ತಲೆಯನ್ನು ಬೀದಿಯ ಲ್ಯಾಂಪ್-ಪೋಸ್ಟಿಗೆ ಒರಗಿಸಿಕೊಂಡು ನಿಂತಿದ್ದೆ.

ಘಟೀರ್... ಘಟೀರ್... ಘಟೀರ್.

ಆಗಲೂ ನನ್ನ ಕಿವಿಯಲ್ಲಿ ಆ ಶಬ್ದ ನರಗಳ ಮೇಲೆ ಬಡಿಯುತ್ತಿತ್ತು.

ನಾವು ಮೌನವಾಗಿ ಟ್ಯೂಬ್-ಸ್ಟೇಷನ್ ಕಡೆಗೆ ಕಾಲುಹಾಕುತ್ತಿದ್ದೆವು. ನನ್ನ ಜೇಬಿನಲ್ಲಿ ಇನ್ನೂ ಎರಡು ಷಿಲಿಂಗ್‌ಗಳ ನಾಣ್ಯ ಬಿದ್ದಿತ್ತು. ನಡುಗುತ್ತಿದ್ದ ನನ್ನ ಕೈ ಬೆರಳುಗಳು ಅನಾಯಾಸವಾಗಿ ಆಡುತ್ತಿದ್ದುವು.

ಹೊರಗೆ ರಸ್ತೆಯಲ್ಲಿ ಆಗಸ್ಟ್ ತಿಂಗಳ ಎಲೆಗಳು ಉದುರಿಬಿದ್ದಿದ್ದುವು... ಲಂಡನ್ನಿನ ರಾತ್ರಿ ಕಳೆಯುತ್ತಿರುವಂತೆ ಗಿರಣಿಗಳ ಹೊಗೆ ಕೂಡ ಇಳಿಮುಖವಾಗುತ್ತಿತ್ತು.

...ನೀನು ನಂಬುವುದಿಲ್ಲ... ನೀನು ತಿಳಿಯುತ್ತೀಯೆ... ಜಾರ್ಜ್ ಬಲವಂತದಿಂದ ನನ್ನ ಭುಜ ಹಿಡಿದುಕೊಂಡ.

ಇಟ್ ಈಜ್ ಆಲ್‌ರೈಟ್... ಅವನ ಕೈಯನ್ನು ಭುಜದಿಂದ ತೆಗೆದೆ. ಅವನು ಈ ಸಮಯದಲ್ಲಿ ನನ್ನ ಜೊತೆಗೆ ಇಲ್ಲದಿದ್ದರೆ...

ನಾವು ಟ್ಯೂಬ್ ಸ್ಟೇಷನ್ನಿನ ಮೆಟ್ಟಲುಗಳನ್ನು ಇಳಿಯುತ್ತಿದ್ದೆವು.

ಪ್ಲ್ಯಾಟ್‌ಫಾರಂನಲ್ಲಿ ಜನ ಇರಲಿಲ್ಲ. ಬೆಂಚುಗಳ ಮೇಲೆ ಅಲ್ಲಿ ಇಲ್ಲಿ ಒಬ್ಬಿಬ್ಬರು ತೂಕಡಿಸುತ್ತಿದ್ದರು. ನಮಗೆ ತುಂಬ ಸಮೀಪದಲ್ಲಿ ಗೋಡೆಗೆ ಒರಗಿಕೊಂಡು ಒಂದು ಗಂಡು... ಹೆಣ್ಣಿನ ಜೊತೆ ನಿಂತಿತ್ತು... ಹುಡುಗಿ ತನ್ನ ಕೂದಲ ಮೇಲೆ ಪದೇ ಪದೇ ಕೈ ಆಡಿಸುತ್ತಿದೆ. ಅವನ ಮುಂದೆ ನಿಂತಿರುವ ಯುವಕ ಮೆಲುದನಿಯಲ್ಲಿ ಏನನ್ನೋ ಪಿಸುಗುಟ್ಟುತ್ತಿದ್ದಾನೆ. ಹುಡುಗಿ ಮತ್ತೆ ಮತ್ತೆ ನಗುತ್ತಿದ್ದಾಳೆ. ಮತ್ತು ಬೆಚ್ಚಿಬಿದ್ದು ಆ ಕಡೆ ಈ ಕಡೆ ನೋಡುತ್ತಾಳೆ.

ಟಿಕೆಟ್ ತೆಗೆದುಕೊಂಡು ನಾವು ಸಮೀಪದ ಖಾಲಿ ಬೆಂಚಿನ ಮೇಲೆ ಕುಳಿತುಕೊಂಡೆವು.

— ನೀನು ಲಂಡನ್ನಿನಲ್ಲಿಯೇ ಇರುತ್ತೀಯೇನು?

ಅವನು ಸುಮ್ಮನಿದ್ದ. ಅವನ ದೃಷ್ಟಿ ದೀಪಗಳ ಆಚೆ, ಅಂಡರ್‌ಗ್ರೌಂಡ್ ರೈಲಿನ ಸುರಂಗದ ಕಡೆಗೆ ಇತ್ತು—ಸುರಂಗದ ಕತ್ತಲೆ ಪಟ್ಟಣದ ಕತ್ತಲೆಯಿಂದ ಪ್ರತ್ಯೇಕವಾದಂತೆ ಇದೆ... ಕೊಳಕು ನೀರು ನಿಂತಿರುವ ಒಂದು ಹಳ್ಳದ ಹಾಗೆ ಪ್ರತ್ಯೇಕ.

—ವಿಲೀ ಎಲ್ಲಿ ಹೋದನೋ?

—ವಿಲೀ... ನಾನು ಅವನನ್ನು ನೋಡಲಿಲ್ಲ... ಅವನು ಹೇಳಿದ.

—ಹೊರಗಡೆ ನಿಂತಿದ್ದೆ, ಎಂದು ಈಗತಾನೇ ಹೇಳಿದೆ?

—ನಾನೇನನ್ನೂ ನೋಡಲಿಲ್ಲ.

ನಾವು ಮತ್ತೆ ಸುಮ್ಮನಾಗಿಬಿಟ್ಟೆವು. ಆದರೆ ಆ ಮೌನದಲ್ಲಿ ಒಂದು ರೀತಿಯ ಚೇಷ್ಟೆ ಇತ್ತು, ಒತ್ತಡವಿತ್ತು. ಪದೇ ಪದೇ ಒಂದು ವಿಚಾರ ನಮ್ಮ ಮುಂದೆ ಬರುತ್ತಿರುವ ಹಾಗೆ, ನಾವು ಹಿಂದಕ್ಕೆ ಅದನ್ನು ಅಟ್ಟುತ್ತಿರುವ ಹಾಗೆ.

—ನಾನು ಸುಳ್ಳು ಹೇಳುತ್ತಿದ್ದೇನೆ ಎಂದು ಭಾವಿಸಿದ್ದೀಯಲ್ಲವೆ?

ನಾನು ಬೇರೆ ಕಡೆ ಮುಖಮಾಡಿಕೊಂಡೆ.

ನೀನು ಏನಾದರೂ ತಿಳಿದುಕೊ... ಅದರ ಚಿಂತೆ ನನಗಿಲ್ಲ, ಎಂದು ಹೇಳಿದ.

—ಡೋಂಟ್ ಬಿ ಸಿಲ್ಲಿ... ನಾನು ಹೇಳಿದೆ.

—ನನ್ನ ಮಾತಿನಲ್ಲಿ ನಿನಗೆ ವಿಶ್ವಾಸವೇ ಇಲ್ಲ, ಅವನು ನನ್ನ ಕಡೆ ನೋಡಿದ.

—ನಾನು ಓಡಿಹೋಗಿದ್ದೆ ಎಂದು ನೀನು ಭಾವಿಸಿದ್ದೀಯೆ... ಈ ಸಲ ಅವನ ತುಟಿ ನಡುಗುತ್ತಿತ್ತು.

—ಡ್ಯಾಮ್ ಇಟ್, ಐ ಸೇ ಡ್ಯಾಮ್ ಇಟ್.

—ಅವರು ನನ್ನನ್ನು ಹಿಡಿದಿಟ್ಟಿದ್ದರು... ನಾನು ನಿನ್ನ ಬಳಿಗೆ...

—ಇಟ್ ಈಜ್ ಅಲ್‌ರೈಟ್, ಜಾರ್ಜ್.

—ಓಹ್, ನೋ... ಇಟ್ ಈಜ್ ನಾಟ್ ಅಲ್‌ರೈಟ್—ಅವನು ಕಿರುಚುವ ರೀತಿಯಲ್ಲಿ ಹೇಳಿದ.

ಪಕ್ಕದ ಬೆಂಚಿನಲ್ಲಿ ತೂಕಡಿಸುತ್ತಾ ಇದ್ದ ಮನುಷ್ಯ ಎದ್ದು ಕುಳಿತ. ಮತ್ತು, ನಮ್ಮ ಕಡೆ ನೋಡತೊಡಗಿದ.

—ಜಾರ್ಜ್, ಇಲ್ಲಿ ಕೇಳು... ನಾನು ಅವನ ಭುಜದ ಮೇಲೆ ಕೈ ಇಟ್ಟು ಹೇಳಿದೆ. ಬೆಂಚಿನ ಕೈಮೇಲೆ ಎರಡೂ ಕೈಗಳಲ್ಲಿ ಹುದುಗಿದ್ದ ಅವನ ಮುಖವನ್ನು ಅವನು ಆಗಾಗ ಮೇಲಕ್ಕೆತ್ತುತ್ತಿದ್ದ.

—ಐ ವಾಜ್ ಅಫ್ರೇಡ್, ಟೆರಿಬ್ಲಿ ಅಫ್ರೇಡ್.

ನಾವಿಬ್ಬರೂ ಹೆದರಿ ನಡುಗುತ್ತಿದ್ದೆವು.

—ಅಫ್ರೇಡ್...

ನಾನು ಮುಂದುಗಡೆ ನೋಡುತ್ತಿದ್ದೆ... ಅಂಡರ್ ಗ್ರೌಂಡಿನ ಕತ್ತಲೆ ಸ್ವಲ್ಪ ಸ್ವಲ್ಪ

ಸರಿಯುತ್ತಿತ್ತು... ಪರದೆ ಏರುವ ರೀತಿಯಲ್ಲಿ ಇನ್ನೇನು ಸಂಪೂರ್ಣ ಸರಿದುಹೋಗು ತ್ತದೆ. ನಾನು ಆ ಕ್ಷಣದಲ್ಲಿ ಜಾರ್ಜನ ಬಗ್ಗೆ ಹೆದರತೊಡಗಿದೆ. ನನ್ನನ್ನು ನೋಡಿ ನನಗೇ ಹೆದರಿಕೆಯಾಯಿತು. ಯಾವತ್ತೂ ಅವನ ಕಡೆ ನಾನಿನ್ನು ನೋಡಲಾರೆ ಎಂಬಷ್ಟು ಹೆದರಿಕೆಯಾಯಿತು. ಆ ಕ್ಷಣದಲ್ಲಿ ನಾನು ಭಯಂಕರ ಕೆಲಸ ಮಾಡಬಹುದಿತ್ತು... ಅವನಿಗೆ ನಾನು ಹೇಳುವುದು ಬಹಳ ಇತ್ತು, ಹೇಳಬೇಕೆಂದಿದ್ದೆ ಏನಾದರೂ... ಆದರೆ ನಾವಿಬ್ಬರೂ ಒಟ್ಟಿಗೆ ಇದ್ದೂ ನಾವು ಒಬ್ಬಂಟಿಗರಾಗಿದ್ದೆವು... ಅವನು ಅಳುತ್ತಿದ್ದ, ನಾನು ಏನು ಮಾಡಲೂ ಅಸಮರ್ಥನಾಗಿದ್ದೆ... ಇಷ್ಟು ಭಯಂಕರ ಸ್ಥಿತಿ ಇನ್ನೊಂದು ಇರಲಾರದು. ಇಬ್ಬರು ವ್ಯಕ್ತಿಗಳು ಒಟ್ಟಿಗೆ ಇದ್ದುಕೊಂಡು ಒಬ್ಬರನ್ನೊಬ್ಬರು ಉಳಿಸಲು ಅಸಮರ್ಥರಾಗಿರುವಂತಹ ಪರಿಸ್ಥಿತಿ, ಅದು. ಕಳೆದ ಘಟನೆಗಳ ಒಂದು ಸ್ಮೃತಿ ಕೂಡ ಈಗ......

ಆಗ ನಾವು ಗಾಬರಿಬಿದ್ದು ನೋಡುತ್ತೇವೆ. ಮುಂದಿನ ಪ್ಲಾಟ್‌ಫಾರಂನಲ್ಲಿ ವಾರನ್ ಸ್ಟ್ರೀಟ್‌ಗೆ ಹೋಗುವ ಟ್ಯೂಬ್‌ರೈಲು ಬರುತ್ತಿದೆ. ಜಾರ್ಜ್ ಅದನ್ನು ಹಿಡಿದೇ ಹೋಗ ಬೇಕಾಗಿತ್ತು. ನಮ್ಮ ಅಕ್ಕಪಕ್ಕದ ಬೆಂಚುಗಳಲ್ಲಿ ತೂಕಡಿಸುತ್ತಾ ಕುಳಿತಿದ್ದ ಜನ ಥಟಕ್ಕನೆ ಎದ್ದು ನಿಂತರು. ಟ್ಯೂಬ್‌ಲೈಟಿನ ಆ ಬೆಳಕಿನಲ್ಲಿ ನ್ಯೂ ಅಕ್ಸನ್‌ಗೆ ಹೋಗುವ ಮುಂದಿನ ಸುರಂಗದ ಕತ್ತಲೆ ಸ್ವಲ್ಪ ಸರಿಯಿತು. ಓಡೋಡಿ ಕೆಲವರು ಮೆಟ್ಟಿಲುಗಳನ್ನು ಇಳಿದು ಕೆಳಗಿನ ಪ್ಲಾಟ್‌ಫಾರಮ್ಮಿಗೆ ಹೋಗುತ್ತಿದ್ದರು – ಅದು ವಾರನ್‌ಸ್ಟ್ರೀಟ್‌ಗೆ ಹೋಗುವ ಕೊನೆಯ ರೈಲನ್ನು ಹಿಡಿದರೆ ಸಾಕೆಂಬ ಆತುರದಲ್ಲಿ.

ಜಾರ್ಜ್ ಎದ್ದುನಿಂತ. ಅವನು ಒಮ್ಮೆಯೂ ನನ್ನ ಕಡೆ ನೋಡಲಿಲ್ಲ. ಮುಂದಿನ ಕ್ಷಣವಲ್ಲಿ ಅವನೂ ಇತರರೊಂದಿಗೆ ಟ್ಯೂಬ್‌ರೈಲಿನ ಕಡೆಗೆ ಓಡತೊಡಗಿದ. ಟ್ಯೂಬ್ ರೈಲಿನ ಡಬ್ಬಿಗಳ ಬಾಗಿಲುಗಳು ತೆರೆದುವು. ನುಗ್ಗಿಬಂದ ಜನಸಮೂಹವನ್ನು ಒಳಗೆ ಸೇರಿಸಿಕೊಂಡು ಬಾಗಿಲುಗಳು ಕ್ಷಣಮಾತ್ರದಲ್ಲಿ ಮುಚ್ಚಿಕೊಂಡುವು.

ಕಂಬಿಗಳ ಮೇಲೆ ರೈಲು ಓಡುತ್ತಿದ್ದುದರ ಶಬ್ದ ಕ್ರಮೇಣ ಕಡಿಮೆಯಾ ಮತ್ತೆ ಎಲ್ಲವೂ ಹಿಂದಿನಂತೆ ಶಾಂತವಾಯಿತು. ರೈಲಿನ ಹೆಡ್‌ಲೈಟ್ ಸುರಂಗದ ಕತ್ತಲೆಯನ್ನು ಹೋಗಲಾಡಿಸಿತ್ತೋ ಆ ಕತ್ತಲೆ ಮತ್ತೆ ಬಂದಿತ್ತು.

ಪ್ಲ್ಯಾಟ್‌ಫಾರಮಿನ ಮೇಲಿನ ಛಾವಣಿಯ ಆಚೆ ಕಾಣುತ್ತಿದ್ದ ನ್ಯೂ ಆ ದೀಪಗಳು ಕತ್ತಲೆಯಲ್ಲಿ ತಮ್ಮಷ್ಟಕ್ಕೆ ತಾವು ಮಿನುಗುತ್ತಿದ್ದುವು.

ಕಂಭದ ಮರೆಯಲ್ಲಿದ್ದ ಹುಡುಗ ಹೇಳಿದ ...ಮುಂದಿನ ಗಾಡಿಹಿಡಿದು ಹೋ ರಾಯಿತು... ಹಾಗೆ ಹೇಳಿ ಅವಳನ್ನು ಚುಂಬಿಸಿದ. ಹುಡುಗಿಯ ಕಣ್ಣುಗಳು ಹಾಗೇ ಮುಚ್ಚಿಕೊಂಡುವು...

ಅವಳು ನೋಡಲೂ ಇಲ್ಲ...

ಸಿಗರೇಟು ಸೇದಿ ಎಷ್ಟು ವರ್ಷಗಳಾದುವೋ ಎನಿಸಿತು ನನಗೆ.

# ಸುವಾಸನೆ

ಸುಮೇರಾನಿಗೆ ರಿಕ್ಷಾ ಈಗ ತನ್ನದೇ ಒಂದು ಅಂಗವಾಗಿ ಭಾಸವಾಗುತ್ತಿದೆ. ಎದ್ದಿರುವಾಗಲಿ ಮಲಗಿರುವಾಗಲಿ ಅದು ತನ್ನಿಂದ ಪ್ರತ್ಯೇಕವಾಗುವ ಹಾಗೆಯೇ ಇಲ್ಲ. ಅದರ ಟ್ರಿನ್ ಟ್ರಿನ್ ಗಂಟೆಯ ಶಬ್ದ ಅವನ ಮಟ್ಟಿಗೆ ಗೆಜ್ಜೆಯ ಝುಂಕಾರ. ಎಲ್ಲಿಲ್ಲದ ಸ್ಫೂರ್ತಿ ಕೊಡುತ್ತದೆ. ಪೆಡಲ್ ತುಳಿಯುವುದನ್ನು ನಿಲ್ಲಿಸಿದಾಗ ಹಿಂದಿನ ಚಕ್ರ ಹಾಗೂ ಫ್ರೀವ್ಹೀಲ್‌ನಿಂದ ಬರುತ್ತಿದ್ದ ಕಿರ್-ಕಿರ್ ಶಬ್ದ ಅವನ ನರಗಳ ಮೇಲೆ ಗರಗಸದಂತೆ ಕೆಲಸಮಾಡುತ್ತದೆ. ಮತ್ತೆ ಅವನು ತನ್ನ ಸೀಟಿನ ಮೇಲೆ ಕುಳಿತರೆ ಸಾಕು ಈ ಲೋಕದ ಜ್ಞಾನ ಅವನಿಗಿರುವುದಿಲ್ಲ. ಅವನ ಮನಸ್ಸು ಅಲ್ಲೋಲಕಲ್ಲೋಲವಾಗುತ್ತದೆ, ಅವನಿಗೆ ಇದೊಂದು ಮಾನಸಿಕ ರೋಗ. ಅವನ ಮನಸ್ಸಿನಲ್ಲಿ ಒಮ್ಮೆಲೆ ಹಲವು ಬಗೆಯ ವಿಚಿತ್ರ ನೆನಪುಗಳು ಸುಳಿಯುತ್ತವೆ; ಒಂದಕ್ಕೊಂದು ಸಂಬಂಧವೇ ಇಲ್ಲದಂತಹ ವಿಚಾರಗಳು ಬರುತ್ತವೆ. ತನ್ನ ಈ ಮಾನಸಿಕ ಸ್ಥಿತಿಯೇ ಅವನಿಗೊಂದು ದೊಡ್ಡ ಚಿಂತೆ.

ಈ ಇಬ್ಬರು ಸವಾರಿಗಳನ್ನು ಕೂರಿಸಿಕೊಂಡಾಗಿನಿಂದಲೂ ಅವನ ಮನಸ್ಸಿನಲ್ಲಿ ಯಾವುದೋ ಹಳೆಯ ನೆನಪು ಸುಳಿಯುತ್ತಿದೆ. ಹಿಂದಿನ ಅನುಭವವೊಂದರ ಪುನರಾವೃತ್ತಿಯಾದಂತೆ ಅವನಿಗೆ ಭಾಸವಾಗುತ್ತಿದೆ. ಅವನ ರಿಕ್ಷಾದ ಫುಟ್‌ಬೋರ್ಡಿನ ಮೇಲೆ ಬಿದ್ದಿರುವ ಬಿಳಿಯ ಬಣ್ಣದ ಕರವಸ್ತ್ರವನ್ನು ನೋಡಿ ಅವನು ಬೆಚ್ಚಿಬಿದ್ದ, ಒಂದು ಜೀವಂತ ಜಂತುವನ್ನು ಕಂಡನೇನೋ ಎನ್ನುವಂತೆ. ರಿಕ್ಷಾದಲ್ಲಿ ಕುಳಿತಿದ್ದ ಮುದುಕಿ ಅದನ್ನು ತನ್ನ ಕೈಯಲ್ಲಿ ಉಂಡೆಮಾಡಿ ಹಿಡಿದುಕೊಂಡಿದ್ದುದರಿಂದ ಅದು ಗುಂಡಗೆ ಒಂದು ಚೆಂಡಿನಂತಾಗಿ ಬಿದ್ದಿತ್ತು. ಅದನ್ನವನು ಎತ್ತಿಕೊಂಡ. ಓಡಿ ಹೋಗಿ ಅದನ್ನು ಮುದುಕಿಗೆ ಕೊಟ್ಟು ಬರಲೇ ಎಂದುಕೊಂಡ. ಆದರೆ ಆಮೇಲೆ ಇದ್ದಕ್ಕಿದ್ದಂತೆಯೇ ಅವನ ಕೈ ಮೂಗಿನ ತನಕ ಹೋಯಿತು. ಆದರೆ ಇದೇ ಕರ್ಚೀಫಿನಿಂದ ಅವಳು ಮುದುಕನ ಜೊಲ್ಲನ್ನು ಒರೆಸಿದ್ದಳು ಎಂಬುದನ್ನು ನೆನಸಿಕೊಂಡಾಗ ಹೇಸಿಗೆಯಾಗಿ ಥೀ ಥೀ ಎಂದುಕೊಂಡ. ಕೆಂಡ ಮುಟ್ಟಿದನೇನೋ ಎನ್ನುವ ರೀತಿಯಲ್ಲಿ ಅದನ್ನು ಕೈಯಿಂದ ಬಿಟ್ಟುಬಿಟ್ಟ. ಬಿದ್ದಿರಲಿ ಗ್ರೀಸ್ ಒರೆಸಲೋ ಮಸಿ ಒಗೆಸಲೋ ಕೆಲಸಕ್ಕೆ ಬರುತ್ತೆ ಎಂಬ ಯೋಚನೆಯೂ ಜೊತೆಗೆ ಬಂದು ಅದನ್ನು ಸೀಟಿನ ಕೆಳಗೆ ಹಾಕಿಡಲು ಹೋದಾಗ ಕರ್ಚೀಫಿನಲ್ಲಿ ಲಘು ಸುವಾಸನೆಯೂ ಇದೆ ಎಂದು ಅವನಿಗೆ ತಿಳಿಯಿತು.

ತನ್ನ ಸಿಂಹಾಸನವನ್ನು ಏರಿ ಕುಳಿತುಕೊಳ್ಳಬೇಕು ಎಂದು ಒಂದು ಕಾಲನ್ನು ಪೆಡಲಿನ ಮೇಲೆ ಇಟ್ಟುಕೊಂಡೇ ಅವನು [illegible] ಪಸ್ತ್ವತ್ತಾ ಹಾಗೆಯೇ ಯೋಚಿಸಿದ – ಹಿಂದೆ ಯಾವಾಗ ಇಂತಹ ಪ್ರಸಂಗ ಬಂದಿತ್ತು ಎಂದು. ಯಾವುದೋ ಒಂದು ಹಳೆಯ ನೆನಪು

ಅವನನ್ನು ಕಾಡುತ್ತಿದೆ. ಎಷ್ಟೋ ವರ್ಷಗಳಿಂದ ಪ್ರತಿದಿನವೂ ಹತ್ತಾರು ಸವಾರಿಗಳು ತನ್ನ ರಿಕ್ಷಾದಲ್ಲಿ ಹತ್ತುತ್ತಿವೆ, ಇಳಿಯುತ್ತಿವೆ. ಈ ಬಾರಿ ಏಕೆ ಹಳೆಯ ನೆನಪು ಒತ್ತಿ ಬರುತ್ತಿದೆ? ಇವೊತ್ತೇ ಅವನಿಗೆ ಆ ಹಾರದ ಕಳ್ಳತನ ನೆನಪಿಗೆ ಬರುತ್ತಿದೆ. ಇತ್ತೀಚೆಗೆ ಅವನು ಅದನ್ನು ಮರೆತೇಹೋಗಿದ್ದ. ಈದಿನ ಅವನು ತನ್ನ ರಿಕ್ಷಾದಲ್ಲಿ ಕೂರಿಸಿಕೊಂಡು ಬಂದಿದ್ದ ಮುದುಕರ ಜೋಡಿ ಅದನ್ನು ನೆನಪಿಗೆ ತರಬೇಕೆ? ಎಂದೇ, ಅವನು ಅವರನ್ನು ಪದೇ ಪದೇ ಕಣ್ಣು ಹೊರಳಿಸಿ ಅವರ ಕಡೆ ಆಸಕ್ತಿಯಿಂದ ನೋಡಿದ್ದ.

ಮುದುಕ ಹೋಗಿ ದೂರ ನಿಂತಿದ್ದ. ಮುದುಕಿ ಬೀದಿಯ ಕಡೆ ಬೆನ್ನುಮಾಡಿಕೊಂಡು ಬಾಗಿಲು ಬಂದುಮಾಡುತ್ತಿದ್ದಳು. ಇಬ್ಬರಿಗೂ ೬೦-೭೦ ವರ್ಷ ವಯಸ್ಸಾದಂತೆ ಇತ್ತು. ಇಸ್ತ್ರಿಯಿಲ್ಲದೆ ಮುದುಡಿಕೊಂಡಿರುವ ಹಳೆಯ ಕೋಟು-ಶರಾಯಿ, ಯಾವಾಗಲೋ ಒದ್ದೆಯಾಗಿ ಆಕಾರ ಕೆಟ್ಟಿರುವ ಉಣ್ಣೆಯ ಅಗಲವಾದ ಹ್ಯಾಟು, ಹೆಜ್ಜೆಹೆಜ್ಜೆಗೂ ಮರಳಿನ ಭೂಮಿಯ ಮೇಲೆ ಗೀರೆಳೆದುಕೊಂಡು ಹೋಗುತ್ತಿರುವ ಕೋಲು,– ನೋಡುವುದಕ್ಕೆ ಪೀತವರ್ಣದ ಜಾಪಾನಿ ಗೊಂಬೆಯಂತೆ ಆ ಮುದುಕ ಕಾಣುತ್ತಿದ್ದ. ಮುದುಕಿ ಕೆಂಪು-ಬಿಳಿ ಬಣ್ಣದ ದೊಡ್ಡ ದೊಡ್ಡ ಹೂವುಗಳಿದ್ದ ಫ್ರಾಕನ್ನು ಉಟ್ಟಿದ್ದಳು. ಅವಳ ನಗ್ನವಾದ ಕಾಲುಗಳು ಕಮಾನಿನಂತೆ ಬಗ್ಗಿದ್ದುವು. ಬಾಗಿಲು ಹಾಕಿದ ಮೇಲೆ ಮುದುಕಿ ಮುದುಕನ ಬಳಿಗೆ ಬಂದು ಅವನ ತೋಳಲ್ಲಿ ತೋಳು ಹಾಕಿಕೊಂಡು ಆ ಹಳದಿ ಬಣ್ಣದ ಮನೆಯ ಕಡೆಗೆ ಇಬ್ಬರೂ ಹೊರಟರು. ಗಾಳಿಯಲ್ಲಿ ತೂರಿಕೊಂಡು ಹೋಗುತ್ತಿದ್ದ ಅವರಿಬ್ಬರನ್ನೂ ಅವರ ಹಿಂದೆ ಬಿದ್ದಿದ್ದ ಅವರ ನೆರಳುಗಳನ್ನೂ ಕುತೂಹಲದಿಂದ ಸುಮ್ಮನೆ ನೋಡುತ್ತಾ ನಿಂತಿದ್ದ. ಎರಡು ಬೊಂಬೆಗಳು ಒಂದರ ಮೇಲೆ ಒಂದು ಬಿದ್ದುಕೊಂಡು, ಓಲಾಡಿಕೊಂಡು ಹೋಗುತ್ತಿರುವಂತೆ ಅವನಿಗೆ ಅವರು ಕಾಣಿಸಿದರು. ಅದನ್ನು ಕಂಡ ಅವನ ತುಟಿಗಳ ಮೇಲೆ ಮೃದುವಾದ ನಗು ಸುಳಿಯಿತು. ತನ್ನ ಮನಸ್ಸಿನಲ್ಲಿ ಎದ್ದಿದ್ದ ಭಾವನೆಗಳ ಕಚಕುಳಿಯನ್ನು ಬೇರೆ ಯಾವ ರೀತಿಯಲ್ಲಿಯೂ ಪ್ರಕಟಿಸಲಾಗದೆ ಅವನು ಟ್ರಿನ್ ಟ್ರಿನ್ ಎಂದು ತನ್ನ ರಿಕ್ಷಾದ ಗಂಟೆ ಬಾರಿಸುತ್ತಿರುವಂತೆಯೇ ಅವನ ಕೈ ಹಠಾತ್ತನೆ ನಿಂತುಬಿಟ್ಟಿತು. ಅವನ ಕಣ್ಣುಗಳ ಮುಂದೆ ಮತ್ತೆ ಆ ಹಾರದ ಚಿತ್ರ ಮೂಡಿ ಬಂತು. ಹಿಂದೆ ಯಾರೋ ಕೂತಿದ್ದಾರೆ, ತನ್ನ ಟ್ರಿನ್ ಟ್ರಿನ್ ಶಬ್ದದಿಂದಾಗಿ ಅವರಿಗೆ ತ್ರಾಸ ಆಗಿರಬೇಕು ಎಂದೂ ಭಾಸವಾಯಿತು.

ರಿಕ್ಷಾ ಬೇರೆ ರಸ್ತೆಗೆ ತಿರುಗುವ ತನಕ ಯಾಕೋ ಏನೋ ಅವನಿಗೆ ತನ್ನ ರಿಕ್ಷಾದಲ್ಲಿ ಇನ್ನೂ ಅದೇ ಸವಾರಿ ಕುಳಿತಿರುವ ಹಾಗೆ ಮತ್ತು ಈಗ ತಾನೇ ಅವನೊಂದು ಒಳ್ಳೆಯ ಕೆಲಸ ಮಾಡಿದ್ದಾನೆ ಎನ್ನುವ ಹಾಗೆ ಅನಿಸುತ್ತಿತ್ತು. ಮನಸ್ಸಿಗೆ ಏನೋ ಒಂದು ರೀತಿಯ ಸಮಾಧಾನ; ಆದರೆ ಅದನ್ನು ಹೇಗೆ ತೋರಿಸಿಕೊಂಡಾನು? ಯಾರೊಡನೆಯೂ ಹೇಳಿಕೊಳ್ಳುವಂತಹ ಮಹತ್ವದ ವಿಷಯವೂ ಅಲ್ಲ. ಬಾಬೂ ಕೇಳಿದರೆ ಈ ಪ್ರಾಣಿ ಹುಚ್ಚಾಸ್ಪತ್ರೆಗೆ ಸೇರುವುದು ಖಂಡಿತ ಎಂದುಬಿಡುತ್ತಾನೆ.

ಅಲ್ಲಿಯೇ ಎದುರುಗಡೆ ಮುದುಕ-ಮುದುಕಿ ನಿಂತಿದ್ದರು. ಅವರನ್ನು ಕಂಡು ರಿಕ್ಷಾದ ವೇಗವನ್ನು ಕಡಿಮೆಮಾಡಿ ಕೇಳಿದ್ದ: "ಮೇಮ್ ಸಾಹೇಬ್, ರಿಕ್ಷಾ?"

"ಕ್ಯಾರಿಟಿಗೆ ಬರ್ತೀಯೇನು? ಎಷ್ಟು ಬಾಡಿಗೆ ತಕೊಳ್ತೀ?" ಎಂದು ಮುದುಕಿ ತನ್ನ ನಡುಗುವ ಕತ್ತನ್ನು ಬಿಗಿಯಾಗಿ ನಿಲ್ಲಿಸುವ ಪ್ರಯಾಸ ಮಾಡುತ್ತಾ ಕೇಳಿದ್ದಳು.

ಒಮ್ಮೆ ಅವರ ಕಡೆ ನೋಡಿಯೇ ಸುಮೇರಾ ನಿರ್ಧರಿಸಿಕೊಂಡಿದ್ದ, "ಕ್ರೈಸ್ತರು ಇಲ್ಲವೇ ಆಂಗ್ಲೋ-ಇಂಡಿಯನ್‌ರಂತಿದ್ದಾರೆ; ಹೊರಗಿಂದ ಪ್ರವಾಸ ಬಂದಿರುವವರಲ್ಲ."

ರಿಕ್ಷಾದಿಂದ ಕೆಳಗಿಳಿದು ತಲೆಗೆ ಕಟ್ಟಿಕೊಂಡಿದ್ದ ಬಟ್ಟೆಯನ್ನು ತೆಗೆದು ಕುಳಿತುಕೊಳ್ಳಲು ಆಮಂತ್ರಿಸುವಂತೆ ರಿಕ್ಷಾದ ಸೀಟನ್ನು ಒಂದು ಬಾರಿ ಒರೆಸಿದ... "ಖುಷಿ ಬಂದಷ್ಟು ಕೊಡಿ ಮೇಮ್‌ಸಾಬ್, ನೀವೇನು ಹೊಸಬರೆ?"

ಅಲ್ಲಿ ತಾನು ನಿಂತೇ ಇಲ್ಲವೆನ್ನುವಂತೆ ಮುದುಕ ನಿಂತಿದ್ದ. ಆದರೆ ಮುದುಕಿಯ ಮುಖದ ಮೇಲೆ ಏನೋ ಆಕರ್ಷಣೆ ಇತ್ತು–ಅದು ಅವನನ್ನು ಎಳೆಯುತ್ತಿತ್ತು.

"ಇಲ್ಲ, ಆಮೇಲೆ ಜಗಳ ಆಡ್ತಿ."

ಆದರೆ ಅವನ ಧ್ವನಿಯಿಂದಲೇ ಅವಳಿಗೆ ಗೊತ್ತಾಗಿತ್ತು ಅವನು ಜಗಳ ಆಡುವವನಲ್ಲ ಎಂದು. ಪ್ರಾಯಶಃ ಅವರು ಬಹಳ ಹೊತ್ತಿನಿಂದ ಅಲ್ಲಿ ಕಾದು ನಿಂತಿರಬೇಕು. ಮುದುಕನ ರಟ್ಟೆಯಲ್ಲಿ ರಟ್ಟೆ ಸೇರಿಸಿಕೊಂಡು ಅವನನ್ನು ರಿಕ್ಷಾದ ಬಳಿಗೆ ಕರೆತಂದಳು.

ಇಲ್ಲ ಮೇಮ್‌ಸಾಬ್, ನಾವು ಆ ವರ್ಗಕ್ಕೆ ಸೇರಿದವರಲ್ಲ, ಎಲ್ಲೆಲ್ಲಿಂದಲೋ ಬಂದಿರುತ್ತಾರಲ್ಲ, ಅವರು ಜಗಳ ಆಡ್ತಾರೆ. 'ಸವಾರಿ'ಗಳನ್ನು ಹಿಂಸಿಸುತ್ತಾರೆ. ಇಂತಹ ನಯವಾದ ಮಾತುಗಳನ್ನಾಡಿಯೇ ಟೂರಿಸ್ಟರಿಂದ ಐದ್ಹೈದು ರೂಪಾಯಿ ಬಕ್ಷೀಸು ಪಡೆದಿರುವುದೂ ಉಂಟು. ಆದರೆ ಈಗ ಇಲ್ಲಿ ಅಂತಹ ಲಾಭದ ನಿರೀಕ್ಷೆ ಅವನಿಗಿರಲಿಲ್ಲ. ಮುದುಕ ಕುರುಡನಾಗಿದ್ದರೂ ಇರಬಹುದು ಎಂದು ಅನುಮಾನ ಬಂದು ಒಮ್ಮೆ ಅವನ ಕಡೆಗೆ ನೋಡಿದ. ಅವರಿಬ್ಬರದೂ ಗೋಧಿ ಬಣ್ಣ. ಮುದುಕಿಯ ಇಡೀ ಮುಖ ಅಲ್ಲಲ್ಲೇ ಸುಕ್ಕು ಹಿಡಿದಿದೆ. ಮುದುಕನ ಮುಖದ ಮೇಲೆ ಮೂಗಿನ ಈ ಕಡೆ-ಆ ಕಡೆ ಕಣ್ಣಿನ ಕೆಳಭಾಗಕ್ಕೆ ಕೆನ್ನೆಗಳ ಮೇಲೆ ಎರಡು ಗೆರೆಗಳು, ಓರೆಯಾಗಿ ತ್ರಿಕೋಣಾಕಾರದಲ್ಲಿ ಇಳಿದು ತುಟಿಗಳ ಅಂಚಿನಲ್ಲಿ ಕೊನೆಯಾಗಿವೆ. ಆ ಗೆರೆಗಳಿಗೆ ಹೊಂದಿಕೊಂಡು ಕೆನ್ನೆಗಳು ಜೋತುಬಿದ್ದಿದೆ, ಮುದುಕನ ಕನ್ನಡಕ ನೋಡಿದಾಗಲೇ ಮುದುಕನಿಗೆ ಮೋತಿ ಬಿಂದು ಶಸ್ತ್ರಚಿಕಿತ್ಸೆ ತುಂಬಾ ಹಿಂದೆ ನಡೆದಿರಬೇಕೆಂದು ಸ್ಪಷ್ಟವಾಗಿಹೋಯಿತು. ಕಿವಿ ಕೂಡ ಕೇಳುವುದಿಲ್ಲವೆಂದೇ ಕಿವಿಯಲ್ಲಿ ಕೇಳುವ ಸಾಧನ ಇದೆ. ಅದರ ದಾರಗಳು ಆ ಕೊಳಕು ಸೂಟಿನ ಕಾಲರನ್ನು ಹಾದುಕೊಂಡು ಶರ್ಟಿನ ಜೇಬಿಗೆ ಹೋಗಿವೆ. ಅಲ್ಲಿ ಅದರ ಬ್ಯಾಟರಿ ಇರಬೇಕು. ಮುದುಕ ಏನೂ ತಿಳಿಯದ ಹೆಡ್ಡನಂತೆ ತಾನು ಯಾವ ಕಡೆಗೆ ನೋಡಿದರೂ ಸಾಕು ಆ ಕಡೆಗೇ ಹೊರಟು ಹೋಗುತ್ತಿದ್ದ. ಅವನನ್ನು ನೋಡಿದಕೂಡಲೇ ಸುಮೇರಾನಿಗೆ ಒಂದು ವಿಚಾರ ಹೊಳೆಯಿತು. ಇವರೂ ಇನ್ನೇನು ಡೇರೆ ಎತ್ತುವವರೇ;

ಮುಗಿಯುತ್ತಿದೆ ಕಥೆ. ಬ್ಯಾಂಕಿನಿಂದ ಪೆನ್‌ಷನ್ ಹಣ ತೆಗೆದುಕೊಂಡು ಹೋಗಲು ಬಂದಿರಬೇಕು ಪಾಪ. ಮುದುಕಿಯನ್ನು ನೋಡಿದ ಮೇಲೆ ಅವನ ವಿಚಾರಧಾರೆ ಅಲ್ಲಿಗೇ ನಿಂತುಹೋಗಿತ್ತು.

ತನ್ನ ಕೋಲಿನ ಸಹಾಯದಿಂದ ರಿಕ್ಷಾ ಹತ್ತಲು ಮುದುಕ ಒಂದೆರಡು ಬಾರಿ ಪ್ರಯತ್ನಿಸಿದ. ಆದರೆ ರಿಕ್ಷಾ ಇದ್ದ ಎತ್ತರದ ಅರ್ಧಕ್ಕೆ ಮಾತ್ರ ಕಾಲು ಎಟುಕುತ್ತಿತ್ತು. ಕಾಲಿಟ್ಟು ಹತ್ತಲು ಸಾಧ್ಯವಾಗಲಿಲ್ಲ. ಸಹಾಯ ಮಾಡಲು ಸುಮೇರಾ ಮುಂದೆ ಬಂದಾಗ "ನೀನು ಮುಟ್ಟಬೇಡ" ಎನ್ನುವ ರೀತಿಯಲ್ಲಿ ಮುದುಕಿ ಮಧ್ಯೆ ತೂರಿಕೊಂಡು ಬಂದು ಮುದುಕನ ಕೈಯಿಂದ ಕೋಲನ್ನು ಈಸಿಕೊಂಡಳು. ತನ್ನ ಭುಜವನ್ನು ಆಸರೆಗಾಗಿ ಕೊಟ್ಟಳು. ಮುದುಕ ತನ್ನ ತೋಳನ್ನು ಅವಳ ಹೆಗಲ ಮೇಲೆ ಬಳಸಿ ಹಾಕಿಕೊಂಡಮೇಲೆ ಮುದುಕಿ ಅವನ ಕಂಕುಳಿಗೆ ಕೈಕೊಟ್ಟು ಒಂದು ಗಾಜಿನ ಬೊಂಬೆಯನ್ನು ಬಹಳ ಹುಷಾರಾಗಿ ಎತ್ತಿ ಇಡುತ್ತಿರುವಂತೆ ಅವನನ್ನು ಮೃದುವಾಗಿ ಮೇಲಕ್ಕೆತ್ತಿ ಕೂರಿಸಿದಳು. ಒಂದು ಮಗುವನ್ನು ಎತ್ತಿ ಕೂರಿಸಿದ್ದರೆ ಅಷ್ಟು ಸಂತೋಷ ಹಾಗೂ ಸಮಾಧಾನ ಅವಳಿಗಾಗಿ ಮುಖದಲ್ಲಿ ಆ ಸಂತಸ ಕಾಣುತ್ತಿದೆ. ಸುಮೇರಾ ಅವಳ ಕಡೆ ನೋಡಿದಾಗ ಇಬ್ಬರ ದೃಷ್ಟಿಯೂ ಪರಸ್ಪರ ಸಂಧಿಸಿ ಕ್ಷಮಾಯಾಚನೆಯ ರೀತಿಯಲ್ಲಿ ಅವಳು ಮುಗುಳ್ನಕ್ಕು "ಏನು ಮಾಡುವುದು, ಪಾಪ, ಮುದುಕರು, ಹತ್ತುವುದಕ್ಕಾಗುವುದಿಲ್ಲ" ಎಂದು ಹೇಳಿದಂತಾಯಿತು. ಸುಮೇರಾ ಮಂತ್ರಮುಗ್ಧನಾಗಿ ಅವಳ ಮುಖಭಾವದ ಕಡೆಗೆ ನೋಡುತ್ತಾ ನಿಂತುಬಿಟ್ಟ. ಆಗ ಅವಳ ಕತ್ತಿನಲ್ಲಿ ಅವನು ಕಂಡ ಸಣ್ಣ ಎಳೆಯ ಹಾರದಿಂದಾಗಿ ಅವನಿಗೆ ಹಳೆಯ ಹಾರದ ನೆನಪು ಒತ್ತರಿಸಿ ಬಂದು ಅವನು ಬೆಚ್ಚಿಬಿದ್ದಂತಾಯಿತು. ಬೆಲೆಬಾಳುವ ಯಾವುದೋ ವಸ್ತುವನ್ನು ಕದ್ದಿರುವಾಗ ಸಿಕ್ಕಿಬಿದ್ದ ರೀತಿಯಲ್ಲಿ ಅವನ ಗತಿಯಾಗಿತ್ತು, ಆ ಸಮಯದಲ್ಲಿ.

"ಬಿಸಿಲು ಜೋರಾಗಿದೆ; ಹುಡ್ ಹಾಕಿಬಿಡು" – ಎಂದು ಹೇಳಿಕೊಂಡು ಇನ್ನೊಂದು ಬದಿಯಿಂದ ಮುದುಕಿ ಬಂದು ಮುದುಕನ ಪಕ್ಕದಲ್ಲಿ ಕುಳಿತುಕೊಂಡಳು.

ಮತ್ತೆ ಸುಮೇರಾ ಆತಂಕಗೊಂಡನು. ಹಿಂದೆ ಒಮ್ಮೆ ಅವನು ಕೇಳಿದ್ದ ಮಾತನ್ನೇ ಮತ್ತೆ ಕೇಳಿದಂತಾಗಿ ಅವನು ಬೆದರಿದ. ಹಿಂದಿನಿಂದ ಅವನು ಹುಡ್ಡನ್ನು ಬಿಚ್ಚುತ್ತಾ ಹಾಗೆಯೇ ಯೋಚಿಸಿದ. ಯಾರು ಯಾವ ಸಂದರ್ಭದಲ್ಲಿ ಇದೇ ರೀತಿ ಹೇಳಿದ್ದರು? ಹಿಂದೊಮ್ಮೆ ತಾನು ಕೇಳಿದ್ದ ಒಂದು ಮಾತನ್ನೇ ಈಗ ಮತ್ತೆ ಕೇಳುತ್ತಿರುವಂತೆ ಅವನಿಗೆ ಭಾಸವಾಗಿತ್ತು. ಮುದುಕಿ ಈಗ ಮುದುಕನ ಉಸ್ತುವಾರಿಗೆ ಗಮನ ಕೊಡುತ್ತಾ ಪಕ್ಕದಲ್ಲಿಯೇ ಕುಳಿತಿದ್ದಳು; ದಶಹರಾ ಹಬ್ಬದ ಸಮಯದಲ್ಲಿ ಜನ 'ಟೀಸು' ವಿಸರ್ಜನೆಗೆ ಹೋಗುವಾಗ ಅದನ್ನು ಮುತುವರ್ಜಿಯಿಂದ ನೋಡಿಕೊಳ್ಳುವ ರೀತಿಯಲ್ಲೇ ಅವಳು ಕುಳಿತಿರುವಂತೆ ಕಂಡಿತು. ಅವನು ಮುಂದೆ ಬಂದು ನಿಂತು ತನ್ನ ಎರಡು ಕಾಲುಗಳನ್ನೂ ಒಂದಾದಮೇಲೊಂದರಂತೆ ಎತ್ತಿ ಎತ್ತಿ ಅಂಗವಸ್ತ್ರದಿಂದ ಮೊಣಕಾಲ ಮೇಲಿನ ವರೆಗೂ

ಫಟ್ ಫಟ್ ಎಂದು ಧೂಳು ಝಾಡಿಸಿಕೊಂಡ. ಮೊಣಕಾಲ ವರೆಗೂ ಧೋತಿ ಉಟ್ಟಿದ್ದ ಅವನ ಕಾಲುಗಳು ನಗ್ನವಾಗಿದ್ದುವು. ಈ ರೀತಿ ಮಾಡುವಾಗ ಒಮ್ಮೆ ಆ ಮುದುಕನ ಕಡೆಗೂ ದೃಷ್ಟಿ ಹಾಯಿಸಿದ. ದಶಪರೆಯ ಗೊಂಬೆ 'ಟೇಸ್ನು' ಕುಳಿತಂತೆಯೇ ಮುದುಕ ಕೂತಿದ್ದ. ಈ ಪ್ರಸಂಗವನ್ನು ಸಂಜೆ ಬಾಬೂಗೆ ತಿಳಿಸಬೇಕು. ಹಾಗೆ ಯೋಚಿಸಿಕೊಂಡು ಬಹಿರಂಗಕ್ಕೆ ಹೇಳಿದ:

"ಹೊರಡೋಣವೇ – ಮೇಮ್‌ಸಾಬ್?"

"ಜೋರಾಗಿ ಹೋಗುವುದು ಬೇಡ, ನಿಧಾನವಾಗಿ ಹೋಗು."

ಮುದುಕಿ ಕುಳಿತಲ್ಲೇ ಸ್ವಲ್ಪ ಎದ್ದು ತನ್ನ ಕೆಳಗೆ ಸಿಕ್ಕಿಕೊಂಡಿದ್ದ ಮುದುಕನ ಕೋಟಿನ ಭಾಗವನ್ನು ಹೊರಕ್ಕೆ ತೆಗೆದಳು. ಮತ್ತು, ಆಸರೆ ಕೊಡುವ ರೀತಿಯಲ್ಲಿ ತನ್ನ ಕೈಯನ್ನು ಮುದುಕನ ಬೆನ್ನಿನ ಮೇಲೆ ಬಳಸಿ ಹಾಕಿಕೊಂಡಳು.

ಮತ್ತೆ ಅದೇ ರೀತಿ... ಇದೇ ರೀತಿ ಒಂದೊಮ್ಮೆ ನಡೆದಿತ್ತು. ಎಲ್ಲಿ? ಪದೇ ಪದೇ ಅವನು ರಿಕ್ಷಾದ ವೇಗವನ್ನು ಕಡಿಮೆ ಮಾಡುತ್ತಾ ಹಾಗೆಯೇ ಯೋಚಿಸಿ ನೋಡುತ್ತಿದ್ದ. ಹಿಂದೆ ತಿರುಗಿ ಅವರ ಮುಖ ನೋಡಬೇಕೆನಿಸುತ್ತಿತ್ತು. ಅವನನ್ನು ಪದೇ ಪದೇ ಆಕರ್ಷಿಸುವ ವಸ್ತುವಾದರೂ ಅಲ್ಲಿ ಏನಿತ್ತು? ಹಿಂದೆ ತಿರುಗಿ ನೋಡಬೇಕೆಂಬ ತನ್ನ ಇಚ್ಛೆಯನ್ನು ಬಾಲ್ಯದ ದಿನಗಳಲ್ಲಿ ತಾನು ಹಾಡುತ್ತಿದ್ದ ಒಂದು ಹಾಡನ್ನು ಗುನಗುನಾಯಿಸುವುದರ ಮೂಲಕ ಪೂರೈಸಿಕೊಳ್ಳಲು ಪ್ರಯತ್ನಿಸುತ್ತಿರುವಂತೆ ಕಂಡಿತು. "ಟೇಸುರಾರೇ, ಟೇಸೂರಾ... ಟಿಸುರಾಕಿ ಸಾತ್ ಬಹೂರಿಯಾ... ನೌ ಮನ್‌ವೀಸೇಂ, ದಸ್ ಮನ್ ಖಾಯೇಂ... ಬಡೇ ಮಲ್ಲಸೆ ಜೂಝುನ್ ಜಾಯೇಂ..." ಬಾಲ್ಯದಲ್ಲಿ ದೀಪ ಹಚ್ಚಿ ಮನೆಮನೆಗೆ ಹೋಗಿ ಟೇಸು ಹಾಡು ಹಾಡುವ ಆ ದಿನಗಳು ಅವನ ನೆನಪಿಗೆ ಬಂದುವು. ಅವನ ಮನಸ್ಸು ಇದರಿಂದ ತುಂಬಾ ಪ್ರಸನ್ನಗೊಂಡಿತ್ತು. ಅವನ ಮುಖದಲ್ಲಿ ಗೆಲುವು ಇತ್ತು; ಮುಗುಳ್ನಗೆ ಇತ್ತು. ಒಮ್ಮೆ ಹಿಂದಿರುಗಿ ಅವರ ಕಡೆ ನೋಡಿ ಹೇಳಿದ: "ಮೇಮ್ ಸಾಬ್, ಬಿಸಿಲು ಬೀಳುತ್ತಿಲ್ಲತಾನೇ?"

ಯಾರದೇ ಮುಖದ ಮೇಲೆ ಚರ್ಮ ಸುಕ್ಕುಹಿಡಿದು ಗೆರೆಗಳು ಕಾಣಿಸಿಕೊಂಡರೂ ಅದನ್ನು ನೋಡಿದ ಸುಮೇರಾನ ಮನಸ್ಸಿನಲ್ಲಿ ಹಲವು ಪ್ರಶ್ನೆಗಳು ಏಳುತ್ತಿದ್ದುವು. ಒಂದೊಂದು ವರ್ಷದಲ್ಲೂ ಒಂದೊಂದು ಗೆರೆ ಹೀಗೆ ಮೂಡುತ್ತದೆ: ಮನುಷ್ಯ ತನ್ನ ಜೀವಮಾನದಲ್ಲಿ ಮುಖದ ತುಂಬಾ ಹೀಗೆ ಸುಕ್ಕಿನ ಗೆರೆಗಳನ್ನು ಸಂಪಾದಿಸುತ್ತಾನೆ. ಆದರೆ ಇವರಿಂದ ಏನು ಪ್ರತಿಫಲ ಬಂದಹಾಗಾಯಿತು, ನೀವೇ ಹೇಳಿ. ಹಣ, ಐಶ್ವರ್ಯ, ಮನೆ-ಮಠ, ಹೆಂಡತಿ-ಮಕ್ಕಳು? ಅಥವಾ ಇಡೀ ಜೀವಮಾನದ ಕೊರಗು, ಕಷ್ಟ ಕಾರ್ಪಣ್ಯ?... ರಾತ್ರಿಯೆಲ್ಲ ಬೀಡಿ ಸೇದುತ್ತಾ ನಿದ್ದೆ ಕೆಡುವುದು, ತಪ್ಪಿದರೆ ರಾತ್ರಿಯೆಲ್ಲ ಕುಡಿದು ನಾಲೆಗಳಲ್ಲಿ ಬಿದ್ದಿರುವುದು? ಇಪ್ಪತ್ತು ವರ್ಷಗಳ ನಂತರ ತನ್ನ ಮುಖದ ಮೇಲೂ ಇದೇ ರೀತಿ ಸುಕ್ಕಿನ ಗೆರೆಗಳು ಬಂದಾಗಲೂ ರಿಕ್ಷಾ ತುಳಿಯುತ್ತಿರಲು

ಸಾಧ್ಯವೇ? ಆಗಲೂ ಅರ್ಧ ರಾತ್ರಿ ಹೊತ್ತಿಗೆ ಮನೆಗೆ ಹೋಗಿ ತನ್ನ ಹೆಂಡತಿಯನ್ನು ಬಡಿಯುತ್ತಿರುವಂತೆ ಬಡಿಯಲು ಸಾಧ್ಯವೇ? ಆಗಲೂ ಒಂದಲ್ಲ ಒಂದು ವಸ್ತುವಿನ ಅಗತ್ಯ ಇರುತ್ತದೆಯೇ?... ಇರುತ್ತದೆ... ಇಲ್ಲ, ಅಷ್ಟು ಹೊತ್ತಿಗೆ ತನ್ನ ಮಗ ಧೀರಾ ದೊಡ್ಡವನಾಗಿರುತ್ತಾನೆ. ಆದರೆ, ನಾನು ಮಗನಾಗಿ ನನ್ನ ತಂದೆಗೆ ಏನು ಸುಖ ಕೊಟ್ಟಿದ್ದೇನೆ? ಇವೊತ್ತಿಗೂ ತನ್ನ ಮುದಿ ತಂದೆ ಜೀವನೋಪಾಯಕ್ಕಾಗಿ ಗಾರೆ ಕೆಲಸಕ್ಕೆ ಹೋಗುತ್ತಾನೆ.

ಆರೇಳು ದಿನಗಳ ಹಿಂದಿನ ಮಾತು. ಬೀದಿಯ ನಲ್ಲಿ ಕೆಳಗೆ ತಲೆ ಕೊಟ್ಟು ಅವನು ಮೈ ತೊಳೆದುಕೊಳ್ಳುತ್ತಿದ್ದ. ನೀರು ತುಂಬಿಕೊಂಡು ಹೋಗಲು ಅಲ್ಲಿಗೆ ಬಂದ ಬೋಧಾನ್ ಸೊಸೆ ಹೇಳಿದ್ದಳು: "ಲಾಲ್, ಎಷ್ಟು ಬಡಕಲಾಗಿದ್ದೀಯ, ಪಕ್ಕೆಲುಬೆಲ್ಲ ಕಾಣುತ್ತಿದೆ ನೋಡು." ತಾನು ಮೈಗೆ ಸಾಬೂನು ತಿಕ್ಕುತಿದ್ದುದನ್ನು ನಿಲ್ಲಿಸಿ ಪಕ್ಕೆಗಳ ಮೇಲೆ ಕೈಯಾಡಿಸಿ ಎಲುಬುಗಳನ್ನು ಎಣಿಸತೊಡಗಿದ್ದ. ಬಹಳ ಹೊತ್ತು ಹೀಗೇ ಎಣಿಸುತ್ತಿದ್ದ. ಇತ್ತೀಚೆಗೆ ದೇಹ ದುರ್ಬಲಗೊಂಡಿದೆ. ಆಯಾಸ ಕಂಡುಬರುತ್ತಿದೆ. ಮುಖದ ಮೇಲೂ ಹಿಂದಿದ್ದ ಆರೋಗ್ಯದ ಲಕ್ಷಣ ಇಲ್ಲ. ಯಾರಿಗೆ ಗೊತ್ತು, ಮುಖದ ಚರ್ಮ ಸುಕ್ಕು ಹಿಡಿಯುವ ಸಿದ್ಧತೆಯಲ್ಲಿರಬಹುದು... ಅವನ ಮುಖದ ಚರ್ಮ ಕೂಡ, ಒಂದು ದಿನ ಈ ಮುದುಕಿಯ ಮುಖದಂತೆಯೇ, ಸುಕ್ಕುಸುಕ್ಕಾಗಿ ಸುಕ್ಕಿನ ಗೆರೆಗಳು ಕಾಣಿಸಿಕೊಳ್ಳಬಹುದು. ಅಥವಾ ಆ ಮುದುಕನಂತೆ ತಾನೂ ಆಗಬಹುದು. ಕೂಡಲೇ ಒಂದು ಕನ್ನಡಿಯಲ್ಲಿ ತನ್ನ ಮುಖ ನೋಡಿಕೊಳ್ಳಬೇಕೆಂದಾಯಿತು. ಅವನ ರಿಕ್ಷಾದ ಮುಂಭಾಗದಲ್ಲಿಯೂ ಕನ್ನಡಿ ಒಂದು ಕಾಲದಲ್ಲಿ ಇತ್ತು. ಬೆಲೂನುಗಳೂ ಹಾರುತ್ತಿದ್ದುವು. ಚಕ್ರಕ್ಕೆ ಬಣ್ಣ ಬಣ್ಣದ ಹೂವಿನ ಅಲಂಕಾರ ಕೂಡ ನಡೆದಿರುತ್ತಿತ್ತು. ಈಗ ಬಿಡಿ, ಈಗ ರಿಕ್ಷಾದ ಎಲ್ಲ ಭಾಗಗಳೂ ಶಿಥಿಲವಾಗಿವೆ. ಹೋಗುತ್ತಿರುವಾಗಲೇ ಒಮ್ಮೊಮ್ಮೆ ಬಾಲ್‌ಪಿನ್ ಕಳಚಿಕೊಳ್ಳುತ್ತದೆ, ಫ್ರೀವ್ಹೀಲ್ ಹಿಡಿತವಿಲ್ಲದೆ ತಿರುಗತೊಡಗುತ್ತದೆ. ಗಾಡಿ ಪಂಚೇರಾಗಿ ನಿಲ್ಲುತ್ತದೆ, ಸವಾರಿಗಳು ಶಪಿಸುತ್ತಾರೆ. ಮಧ್ಯ ದಾರಿಯಲ್ಲಿ ನಿಂತು ಕೈಗೆ ಸಿಕ್ಕುವ ಇಟ್ಟಿಗೆಯಿಂದಲೋ ಕಲ್ಲಿನಿಂದಲೋ ಬಾಲ್‌ಪಿನ್ ಬಡಿದು ಸರಿಮಾಡಬೇಕಾಗುತ್ತದೆ. ಇಲ್ಲವೇ ಕಳಚಿಕೊಂಡ ಚೈನನ್ನು ಕೈ ಮಸಿಮಾಡಿಕೊಂಡು ಮತ್ತೆ ಕೂಡಿಸಬೇಕಾಗುತ್ತದೆ. ಇಂತಹ ಪ್ರಸಂಗಗಳು ಬಂದಾಗ ಮನಸ್ಸಿಗೆ ತುಂಬಾ ಬೇಸರವಾಗುತ್ತದೆ. ಇನ್ನು ಈ ರಿಕ್ಷಾವನ್ನು ಕಾಮನಹಬ್ಬದ ದಿನ ಬೆಂಕಿಗೆ ಆಹುತಿ ಕೊಟ್ಟುಬಿಡಬೇಕೆನ್ನಿಸುತ್ತದೆ. ಹುಡ್ಡಿನ ಬಟ್ಟೆಯೆಲ್ಲ ಹರಿದುಹೋಗಿದ್ದು ಬಾವುಟ ಹಾರಿದಂತೆ ಪಟಪಟ ಶಬ್ದ ಮಾಡುತ್ತದೆ. ಬಲಗಡೆಯ ಚಕ್ರ, ಟಾಂಗಾ ಜೊತೆಗೆ ಟಕರಾಯಿಸಿದಾಗಿನಿಂದ, ಈಗಲೂ ಆ ಕಡೆ-ಈ ಕಡೆ ವಾಲಿಕೊಂಡೇ ಉರುಳುತ್ತಿರುತ್ತದೆ. ಅದರ ಆಕಾರ ಇನ್ನೂ ಸರಿ ಹೋಗಿಲ್ಲ. ಅದನ್ನು ಸರಿಮಾಡಿಸುವುದೋ, ಲಚ್ಛೀ ಸಾಲ ತೀರಿಸುವುದೋ – ತಿಳಿಯುತ್ತಿಲ್ಲ. ಇನ್ನೂ ಒಂದು ಸೋಜಿಗದ ವಿಚಾರ ಅಂದರೆ, ಇದು... ತನ್ನ ಶರೀರದ

ಯೋಚನೆ ಬಂದಾಗಲೇ ತನ್ನ ದೃಷ್ಟಿ ರಿಕ್ಷಾ ಇರುವ ಶಿಥಿಲ ಸ್ಥಿತಿ ಕಡೆ ಹೋಗಬೇಕೆ?... ಇವೆರಡಕ್ಕೂ ಅದೇನು ಸಾಮ್ಯ?

ಟ್ರಿನ್ ಟ್ರಿನ್... ಟಾಂಗಾ ಜೊತೆಗೆ ತನ್ನ ರಿಕ್ಷಾ ಟಕರಾಯಿಸಿದ್ದ ನೆನಪು ಬಂದೊಡನೆಯೇ ತಾನೇ ತಾನಾಗಿ ತನ್ನ ಕೈ ಬೆಲ್ ಮೇಲೆ ಹೋಯಿತು. ಆದರೆ ಕೂಡಲೇ ಪರಿಸ್ಥಿತಿಯ ಅರಿವು ಆಗಿ ಕೈ ಸೆಳೆದುಕೊಂಡ. ಅನಾವಶ್ಯಕವಾಗಿ ಟ್ರಿನ್ ಟ್ರಿನ್ ಶಬ್ದ ಮಾಡಿದ ಕಾರಣದಿಂದಾಗಿ ಸವಾರಿಗಳು ಎಲ್ಲಿ ಬೇಸರಪಟ್ಟುಕೊಂಡರೋ ಎಂದು ಒಮ್ಮೆ ತಿರುಗಿ ನೋಡಿದ. ತನ್ನ ಟ್ರಿನ್ ಟ್ರಿನ್ ಶಬ್ದ ಎಷ್ಟು ಕರ್ಣಕಠೋರ ಎಂಬುದು ಆಗ ಮೊದಲ ಬಾರಿಗೆ ಅವನಿಗೆ ಅರ್ಥವಾಯಿತು. ಆ ಸಮಯದಲ್ಲಿ ಮುದುಕಿ ತುಂಬಾ ಪ್ರೀತಿಯಿಂದ ಮುದುಕನ ಕಾಲರ್ ಸರಿಮಾಡುತ್ತಿದ್ದಳು. ಕಿವಿಯಿಂದ ನೇತಾಡುತ್ತಿದ್ದ ಆಧಾರಗಳನ್ನು ನೋಡಿ, ಈ ಕೆಪ್ಪನಿಗೆ ನನ್ನ ಬೆಲ್ಲಿನ ಶಬ್ದದಿಂದ ಏನು ತೊಂದರೆಯಾಗಿರಬಹುದು, ಎಂದುಕೊಂಡ. ಕಿವಿಯೇ ಕೇಳುವುದಿಲ್ಲ!... ಅದು ಸರಿ, ಈ ಮುದುಕ ಕಣ್ಣು ಮುಚ್ಚಿದ ಎಂದರೆ ಈ ಮುದುಕಿಯ ಗತಿ ಏನಾಗಬಹುದು, ಎಂದು ಹಾಗೆಯೇ ಯೋಚಿಸಿದ. ತುಂಬಾ ನೊಂದುಕೊಳ್ಳುತ್ತಾಳೆ, ನಿಜ. ಮನೆಯಲ್ಲಿ ಮಕ್ಕಳೂ ಇರಬಹುದೇನೋ! ಆದರೂ ದೇವರೇ ಕಾಪಾಡಬೇಕು. ಇವೊತ್ತು ಯಾರು ತಾನೇ ತಮ್ಮ ತಾಯಿ ತಂದೆಗಳ ಬಗ್ಗೆ ಯೋಚಿಸುತ್ತಾರೆ? ಸುಮ್ಮನೇರಾಗೆ ಈಗ ತನ್ನ ತಂದೆಯ ನೆನಪೂ ಬಂತು. ಹೋಗಿ ಅವನ ಕಾಲಮೇಲೆ ಬಿದ್ದು ಕ್ಷಮಿಸಿಬಿಡು ಎನ್ನಬೇಕು ಎಂದು ಅವನೆಷ್ಟು ಬಾರಿ ಯೋಚಿಸಿಲ್ಲ?... ಆದದ್ದು ಆಗಿ ಹೋಯಿತು, ಇನ್ನು ಕ್ಷಮಿಸಿಬಿಡು ಎನ್ನಬೇಕು. ಇನ್ನು ನೀನು ಆರಾಮವಾಗಿ ಕುಳಿತು ದೇವರ ಧ್ಯಾನ ಮಾಡು, ನಾನು ನಿನ್ನ ಸೇವೆ ಮಾಡುತ್ತೇನೆ, ಎನ್ನಬೇಕು... ಆದರೆ ಅವನಿಗೆ ತನ್ನ ತಂದೆಯ ಏಟುಗಳು ನೆನಪಿಗೆ ಬಂದು ಕೂಡಲೇ ಎಲ್ಲ ಕೋಮಲ ಭಾವನೆಗಳೂ ಮಾಯವಾಗುತ್ತಿದ್ದುವು. ಹೊಡೆಯುವುದು ಹಾಗಿರಲಿ, ಅವನೇನು ಕಮ್ಮಿ ಬೈಯುತ್ತಿದ್ದನೇ? ಹಲ್ಲು ಕಟಕಟ ಎನ್ನುವ ಚಳಿಗಾಲದ ಮಧ್ಯರಾತ್ರಿ ಸಮಯದಲ್ಲಿ ತನಗೆ ಧನಾಧನ್ ಬೀಳುತ್ತಿದ್ದ ಒದೆಗಳು ಮತ್ತು ಏಟುಗಳ ಜೊತೆಗೆ ಕೆಟ್ಟ ಕೆಟ್ಟ ಬೈಗಳಗಳನ್ನೂ ಅವನು ಕೇಳಬೇಕಾಗಿತ್ತು. ಕಿವಿಗಳ ಮೇಲೆ ದೊಡ್ಡ ಆಘಾತ. "ಕಮಜಾತ್ ಸೂಳೇಮಗನೇ,... ನಿನಗವಳು ತಾಯಿ ಹಾಗಿದ್ದಾಳೆ, ಅವಳ ಮೇಲೆ ಕಣ್ಣು ಹಾಕ್ತೀಯಾ... ನಿನ್ನ ಮೈಯೆಲ್ಲ ಹುಳಬೀಳುತ್ತೆ... ಅಷ್ಟೇ ಯೌವನ ಬಂದಿದ್ದರೆ ಹೋಗು ಎಲ್ಲಿಗಾದರೂ. ತೀರಿಸಿಕೊಂಡು ಬರೋದಕ್ಕೆ... ನಿನ್ನ ಚರ್ಮ ಸುಲಿದು ಬಿಟ್ಟೇನು ಹುಷಾರ್,... ಇವೊತ್ತಿನಿಂದ ಮನೆಯಲ್ಲಿ ಕಾಲಿಟ್ಟೀಯೆ... ಹಾಗೆಯೇ ನಿನ್ನನು ತುಂಡುತುಂಡುಮಾಡಿ ನಾಯಿ ನರಿಗಳಿಗೆ ಹಾಕಿಬಿಟ್ಟೇನು" ಈ ಪ್ರಸಂಗ ನಡೆದಾದ ಮೇಲೆ ಅವನು ಛಿಂದವಾಡಿಗೆ ಹೋಗುವ ಮೊದಲ ಗಾಡಿ ಓಡಿದು ಹೊರಟು ಬಂದಿದ್ದ. ಹಾರದ ಪ್ರಸಂಗ ನಡೆದಿದ್ದುದಾದರೂ ಅಲ್ಲಿಯೇ.

ರಸ್ತೆ ಸಾಗುತ್ತಿತ್ತು; ಚೈನು ಕಿರ್ ಕಿರ್ ಎನ್ನುತ್ತಿತ್ತು.

ಅವನಿಗೆ ಮುದುಕಿಯ ಕತ್ತಿನಲ್ಲಿದ್ದ ಸರದ ನೆನಪು ಬಂತು. ಮತ್ತೆ ಹಿಂದಿರುಗಿ ಒಮ್ಮೆ ನೋಡಿದ. ತನ್ನ ತಂದೆಯ ನೆನಪು ಬಂದಹಾಗೆ ಅವನಿಗೆ ಈ ಇಬ್ಬರು ಮುದುಕ-ಮುದುಕಿಯ ಮೇಲೆ ಏಕೆ ದಯೆ ಮೂಡುತ್ತಿತ್ತೋ ತಿಳಿಯದು. ಇಬ್ಬರ ಮುಖದಲ್ಲಿಯೂ ಎದೆಷ್ಟು ತೃಪ್ತಿ ಇತ್ತು, ಸಂತೋಷ ಇತ್ತು! ಮತ್ತು ಈಗಲೇ ತೀರ್ಥ ಯಾತ್ರೆ ಮುಗಿಸಿ ಬಂದಿರುವಷ್ಟು ಸಂತಸ, ಗೆಲುವು – ಅವರ ಮುಖದಲ್ಲಿತ್ತು. ಇವರು ಸುಖವಾಗಿ ಬಾಳಿರ ಬೇಕು, ಎಂದು ನೋಡುತ್ತಲೇ ಗೊತ್ತಾಗುತ್ತದೆ. ಅವನೂ ಇದ್ದಾನೆ... ಈ ಮಟಮಟ ಮಧ್ಯಾಹ್ನದಲ್ಲಿ ಯಾವುದೋ ಮನೆಯ ಮುಂದೆ ಗಾರೆ ಕಲಸಿಕೊಂಡು ಇಟ್ಟಿಗೆಗಳನ್ನು ಜೋಡಿಸುವ ಕೆಲಸ ಮಾಡುತ್ತಿರಬೇಕು, ಈ ವೃದ್ಧಾಪ್ಯದಲ್ಲೂ... ಅವನು ಹೊಡೆದದ್ದು ದೊಡ್ಡ ವಿಷಯವಲ್ಲ... ತಪ್ಪು ಮಾಡಿದ್ದೆ... ಚಟ ತೀರಿಸಿಕೊಂಡಿದ್ದೆ... ವಯಸ್ಸಿನ ಪ್ರಭಾವ... ನಡೆದುಹೋಯಿತು. ಇನ್ನು ಆ ಹಾರದ ಪ್ರಸಂಗ... ಇವೆರಡೂ ವಿಚಾರ ಗಳ ಆಘಾತ ಅವನ ಮನಸ್ಸಿನ ಮೇಲೆ ಇದ್ದೇ ಇರುತ್ತದೆ...

ಇದ್ದಕ್ಕಿದ್ದಂತೆ ಅವನು ಬೆಚ್ಚಿಬಿದ್ದಂತಾಗಿ ಹಿಂದಿರುಗಿ ನೋಡಿದ. ಈ ಮುದುಕ–ಮುದುಕಿ ಆ ಮಾಲ್‌ಬಾಬು ಮತ್ತು ಅವನ ಹೆಂಡತಿಯೇ ಆಗಿದ್ದರೆ! ಛೇ, ಎಲ್ಲಿ ಬಂತು. ಅವರು ಹಿಂದುಗಳು. ಬಗ್ಗಿ ತನ್ನ ಮೊಣಕಾಲು ಕೆರೆಯತೊಡಗಿದ. ನಿಜ ಹೇಳುವು ದಾದರೆ ಮನಸ್ಸಿನಲ್ಲಿ ಅವನಿಗೆ ಹೆದರಿಕೆ ಇದ್ದೇ ಇತ್ತು. ಮಾಲ್‌ಬಾಬು ಯಾವತ್ತಾದರೂ ಕಣ್ಣಿಗೆ ಬಿದ್ದರೆ ಏನ್ ಗತಿ?... ಅವರಿಗೆ ನನ್ನ ಗುರುತೆಲ್ಲಿ ಸಿಗಬೇಕು... ಈಗಲೂ ಅದೇ ಸ್ಟೇಷನ್ನಿನಲ್ಲಿ ಇರಲು ಸಾಧ್ಯವೇ. ವರ್ಗವಾಗಿ ಎಲ್ಲೆಲ್ಲಿಗೆ ಹೋಗಿದ್ದಾರೋ! ಅವರ ಕೈಕೆಳಗೆ ನನ್ನ ಹಾಗೆ ಅದೆಷ್ಟು ಜನ ಕೂಲಿ ಕೆಲಸ ಮಾಡಿ ಹೋಗಿದ್ದಾರೋ ಏನೋ!

ಮುಖ್ಯ ರಸ್ತೆ ಹಾಗೂ ಕಾಲುದಾರಿ ಸೇರುವ ಕಡೆ ಆಲದ ಮರ ಇದೆಯಲ್ಲ, ಅಲ್ಲಿ ಕೆಳಗೆ ಒಂದು ಹನುಮಂತನ ವಿಗ್ರಹ ಇದೆ. ಸುಣ್ಣ ಬಣ್ಣ ಹಚ್ಚಿದ ಒಂದು ಗೂಡು, ಅದರಲ್ಲಿ ವಿಗ್ರಹ, ಅದರ ಮುಂದೆಯೇ ಅವನು ಪ್ರತಿ ದಿನ ಒಂದಲ್ಲ ಒಂದು ಸಲ ಹಾದು ಹೋಗಬೇಕಾಗುತ್ತದೆ. ಆಗ ಅವನಿಗೆ ಹಾರದ ಪ್ರಸಂಗ ನೆನಪಿಗೆ ಬರುತ್ತದೆ. ಮಾಲ್ ಬಾಬುವಿನ ಹೆಂಡತಿಯ ಬಾಯಿಗೆ ಬಟ್ಟೆ ಕಟ್ಟಿ, ಅವಳ ಕತ್ತಿನಿಂದ ಹಾರವನ್ನು ಹಾರಿಸಿ, ಎರಡು ತಿಂಗಳು ಅದನ್ನು ಬಚ್ಚಿಟ್ಟಿದ್ದುದು, ಆಮೇಲೆ ತಾಯಿ ಕಾಯಿಲೆ ಎಂಬ ನೆಪ ಹಾಕಿ ಇಲ್ಲಿಗೆ ಬಂದು ಮಂಗಿ ಜೊತೆ ಸೇರಿಕೊಂಡು ಅವನು ಹಾರವನ್ನು ಕರಗಿಸಿದ್ದ... ರಾತ್ರಿಯೇ ರಾತ್ರಿ... ಇದೆಲ್ಲ ಆ ಕ್ಷಣದಲ್ಲಿ ಅವನ ಕಣ್ಮುಂದೆ ಸುಳಿಯುತ್ತಿದೆ. ಹಾರದ ಮಾತು ಈ ರಿಕ್ಷಾ ಇರುವ ತನಕ ಮರೆಯುವಂತಿಲ್ಲ. ಅದು ಇಲ್ಲವಾಗಿದ್ದಿದ್ದರೆ ತಾನೂ ಮಂಗಿಯಂತೆಯೇ ಇಂಮ ಅವರಿವರಿಂದ ಬಾಡಿಗೆಗೆ ರಿಕ್ಷಾ ತರಬೇಕಾಗಿತ್ತು. ಇಲ್ಲವೇ ಕೈಯಲ್ಲಿ ಗಾರೆ ಕೆಲಸದ ಸಲಕರಣೆಗಳನ್ನು ಹಿಡಿದುಕೊಂಡು ಹೋಗಬೇಕಾಗಿತ್ತು.... ಆದರೂ ಈ ರಿಕ್ಷಾ ತನ್ನದಲ್ಲವೆಂದು ಅವನಿಗನಿಸುತ್ತದೆ... ಸಾಲದ ಹಣದಿಂದ ಇದನ್ನು ಮಾಡಿಸಿರುವುದಾಗಿ ಭಾಸವಾಗುತ್ತದೆ.

ಒಮ್ಮೊಮ್ಮೆ ಅವನ ಮನಸ್ಸಿನಲ್ಲಿ ಒಂದು ರೀತಿಯ ವಿಚಿತ್ರ ಭಾವನೆ ಬರುತ್ತದೆ. ಹೇಗಾದರೂ ಮಾಡಿ ಹಣ ಉಳಿಸಬೇಕು, ಅಂಥದೇ ಒಂದು ಹಾರ ಮಾಡಿಸಬೇಕು, ಹೋಗಿ ಮಾಲ್‌ಬಾಬುಗಳ ಕಾಲು ಹಿಡಿದುಕೊಂಡು ನನ್ನಿಂದ ತಪ್ಪಾಗಿಹೋಯಿತು ಕ್ಷಮಿಸಿ... ನಾನು ಕುರುಡನಾಗಿದ್ದೆ, ಕ್ಷಮಿಸಿಬಿಡಿ, ಎನ್ನಬೇಕು...

"ಆ ಮುಂದೆ ಕಾಣುವ ಬಾಗಿಲ ಹತ್ತಿರ ನಿಲ್ಲಿಸಿಬಿಡು," ಎಂದು ಹೇಳಿದ ಮಾತು ಅವನ ಕಿವಿಯ ಮೇಲೆ ಇದ್ದಕ್ಕಿದ್ದಂತೆ ಬಿತ್ತು.

ಬಾಗಿಲ ಎದುರು ರಿಕ್ಷಾ ನಿಲ್ಲಿಸಿ ಅವನು ಹಿಂದಕ್ಕೆ ತಿರುಗಿ ನೋಡಿದ. ಮುದುಕಿ ಕರವಸ್ತ್ರದಿಂದ ಬಹಳ ಮುತುವರ್ಜಿ ವಹಿಸಿ ಮುದುಕನ ಬಾಯಿಯ ಎರಡೂ ಅಂಚು ಗಳನ್ನು ಒರೆಸುತ್ತಿದ್ದಳು. ಮಗುವಿಗೆ ಹಾಲು ಕುಡಿಸಿದ ನಂತರ ಬಾಯಿ ಒರೆಸುವುದಿಲ್ಲವೇ ಹಾಗೆ. ಮುದುಕಿಗೆ ಅವನ ಬಗ್ಗೆ ಅದೆಷ್ಟು ಆಸ್ಥೆ ಎಂದುಕೊಂಡ.

ಸ್ಟೇಷನ್ನಿನ ಕಡೆ ಹೋಗುತ್ತಾ ಅವನು ಬಹಳ ಹೊತ್ತು ಆ ಮುದುಕ-ಮುದುಕಿ ಬಗ್ಗೆಯೇ ಯೋಚಿಸುತ್ತಿದ್ದ. ತಾಯಿಯ ನೆನಪಂತೂ ಅವನಿಗೆ ಇಲ್ಲ. ಮಲತಾಯಿ ಒಲೆಯಿಂದ ತೆಗೆದ ಕಟ್ಟಿಗೆ ತುಂಡುಗಳಿಂದ ಅವನನ್ನು ಹೊಡೆಯುತ್ತಿದ್ದ ಪ್ರಸಂಗಗಳ ನೆನಪೂ ಅವನಿಗೆ ಆಗಾಗ ಬರುತ್ತಿತ್ತು. ತಂದೆ ಹಣ ಕೊಟ್ಟು ತನ್ನ ಮೂರನೆಯ ಹೆಂಡತಿ ಯನ್ನು ತಂದಾಗ ಮಾತ್ರ ಅವಳ ಇಂಪು ಧ್ವನಿ ಅವನನ್ನು ಬಹಳ ದಿನಗಳ ವರೆಗೆ ಹುಚ್ಚನನ್ನಾಗಿ ಮಾಡಿತ್ತು. ನನ್ನ ತಂದೆಯದೇ ತಪ್ಪು. ಅದು ನನ್ನ ತಪ್ಪಲ್ಲ ಎಂದು ಕೊಂಡಿದ್ದ. ಆಮೇಲೆ ಹಲವು ಬಾರಿ ಆ ದಿನಗಳಲ್ಲಿ ಅವನು ತಂದೆಯ ವಿದ್ರೋಹಿಯಾಗಿ ವರ್ತಿಸಿಕೊಂಡಿದ್ದ. ವೃದ್ಧಾಪ್ಯ ಬಂದಿದ್ದರೂ ಅದರ ಪ್ರಜ್ಞೆ ಇರಲಿಲ್ಲ, ಅವನ ತಂದೆಗೆ. ಅದು ಹಾಗಿರಲಿ. ಆದದ್ದು ಆಗಿಹೋಯಿತು. ಆದರೆ ಅವನಿಗೆ ಇವೊತ್ತೇ ಏಕೆ ಅದೆಲ್ಲ ನೆನಪಿಗೆ ಬರಬೇಕು? ಏನು ನೋಡಿ, ಅದೆಲ್ಲ ನೆನಪಿಗೆ ಬಂದಿತ್ತು? ತನ್ನ ರಿಕ್ಷಾದಲ್ಲಿ ಸವಾರಿ ಕೂರಿಸಿದ್ದ, ಹಾಗೆ ಕುಳಿತು ಪ್ರಯಾಣ ಮಾಡಿದವರಿಂದ ಹಣವನ್ನೂ ತೆಗೆದು ಕೊಂಡಿದ್ದ. ಆದರೂ ಯಾವುದೋ ಒಳ್ಳೆಯ ಕೆಲಸವನ್ನು ಮಾಡಿದ ಹಾಗೆ ಅವನಿಗೆ ಇಂದು ಅನಿಸುತ್ತಿದೆ. ತನ್ನ ಜೀವಮಾನದಲ್ಲಿ ಹಿಂದೆಂದೂ ಮಾಡದಿದ್ದ ಕೆಲಸವನ್ನು ಇವೊತ್ತು ಮಾಡಿದ ಹಾಗೆ ಆಗುತ್ತಿದೆಯಲ್ಲ! – ಇದಕ್ಕೇನು ಹೇಳಬೇಕು?

ಸ್ಟ್ಯಾಂಡಿನ ಕಂಟ್ರಾಕ್ಟರು ಜೊತೆಗೆ ಜಗಳ ಆಡಿದ್ದಾನೆ. ಅಲ್ಲಿಗೆ ಹೋಗುವಂತಿಲ್ಲ. ಹೊರಗೆ ಈ ಮರದ ಕೆಳಗೆ ರಿಕ್ಷಾ ನಿಲ್ಲಿಸಿದರಾಯಿತು. ಎಂದುಕೊಂಡು ಅಲ್ಲಿಯೇ ನಿಲ್ಲಿಸಿ ಚಕ್ರಕ್ಕೆ ಒಂದು ಕಲ್ಲು ಅಡ್ಡ ಇಟ್ಟು, ಸೀಟಿನ ಮೇಲೆ ಹಾಗೆಯೇ ಮೈ ಮುದುರಿಕೊಂಡು ಮಲಗಿ ಮೇಲೆ ಎಲೆಗಳ ಕಡೆಗೆ ನೋಡತೊಡಗಿದ್ದ. ಸವಾರಿ ಇಲ್ಲಿಯೂ ಸಿಗುತ್ತದೆ. ಅಲ್ಲಿ ಸ್ಟ್ಯಾಂಡಿಗೆ ಹೋಗಿ ನಿಂತು ಅನಾವಶ್ಯಕವಾಗಿ ಅವನಿಗೆ ಒಂದು ಆಣೆ ಕೊಡಬೇಕು, ಜೊತೆಗೆ ನಂಬರ್ ಪ್ರಕಾರ ಗಿರಾಕಿಗಾಗಿ ಕಾದು ನಿಂತಿರಬೇಕು. ಹೀಗಾಗಬಾರದು ಎನಿಸಿ ದಾಗ ಜನ ಪ್ರತಿಭಟನೆಯ ಧ್ವನಿ ಎತ್ತುತ್ತಾರೆ, ಹರತಾಳ ಆಚರಿಸುತ್ತಾರೆ, ಮೆರವಣಿಗೆ

ಹೊರಡಿಸುತ್ತಾರೆ—ಆದರೆ ಈ ಕಂಪ್ರಾಕ್ಟರುಗಳ ವಿರುದ್ಧ ಪೊಲೀಸಿನವರ ವಿರುದ್ಧ ಯಾರೂ ಚಕಾರ ಎತ್ತುವುದಿಲ್ಲವಲ್ಲ ಎನಿಸಿತು. ಇವರು ಲೂಟಿಮಾಡುತ್ತಿದ್ದಾರೆ. ನಮ್ಮ ಮಂಗೀ ಸಾಹೇಬರೂ ಈಗ ಲೀಡರ್ ಆಗಿಬಿಟ್ಟಿದ್ದಾರೆ. ಪಾಯ್‌ಜಾಮ, ಕುರ್ತಾ ಹಾಗೂ ವೇಸ್ಟ್‌ಕೋಟು ಉಟ್ಟು ತಿರುಗುತ್ತಿರುತ್ತಾರೆ. ಹಿಂದೆ ಮನೆ ಮನೆ ಹೋಗಿ ಸುಣ್ಣ ಬಣ್ಣ ಮಾಡಿ ಬರುತ್ತಿದ್ದ ಮನುಷ್ಯ. ಈಗ ಅದೆಷ್ಟು ಬದಲಾಗಿಬಿಟ್ಟಿದ್ದಾನೆ! ಈಗ ಆತ ಮಂಗೀಬಾಬು. ಹಿಂದೊಮ್ಮೆ ನಿನ್ನ ಶೂರಿಟಿ ಇಲ್ಲದೆ ಅವನಿಗೆ ರಿಕ್ಷಾ ಕೊಡುವುದಿಲ್ಲ ಎಂದು ಆ ಸಿಂಧಿ ನಿರಾಕರಿಸಿದ್ದ. ಮಂಗಿ ತನಗೆ ತುಂಬಾ ಬೇಕಾದವನಾಗಿದ್ದ ನಿಜ. ಹೆಣ್ಣು ಹುಡುಕಿ ಮದುವೆ ಮಾಡಿಸಿದ್ದ, ತನ್ನ ಮಾವನಿಂದಲೂ ಅಷ್ಟಿಷ್ಟು ಕೊಡಿಸಿದ್ದ ನಿಜ. ಆದರೂ ಆ ಹಾರವನ್ನು ಕರಗಿಸಿದಾಗ ಚಿನ್ನದಲ್ಲಿ ಅವನಿಗೆ ತಾನು ಪಾಲು ಕೊಟ್ಟಿರಲಿಲ್ಲವೇ?—ಅದರಲ್ಲಿ ಗುಂಜಾಯಿಸಿ ಏನಾದರೂ ಸಾಧ್ಯವಿತ್ತೆ? ಆ ಪಾಲು ಏನೇನೋ ಆಗಿಹೋಗಿರಬಹುದು; ಸಾರಾಯಿ ಕುಡಿದು ಮುಗಿಸಿರಬಹುದು, ಸಿಗರೇಟು—ಸಿನಿಮಾಗಳಿಗೆ ಅದನ್ನು ಹಾಳು ಮಾಡಿರಬೇಕು, ಇನ್ನೂ ಏನೇನೋ ಮಾಡಿರಬೇಕು ವಾರ ವಾರ ಮನೆಗೆ ಹೋಗದೆ ಅಲೆಯುತ್ತಿದ್ದು, ಈ ಕುಡುಕ ನನ್ನ ಮಕ್ಕಳಿಂದ ನಂಬರ್ ಕೇಳುತ್ತಾ ಕುಳಿತಿರಬಹುದು. ಆದರೆ ನಾನು ಇಂಥ ಮೂರ್ಖತನ ಮಾಡಿಲ್ಲ, ಎಂದು ಈ ರೀತಿ ಇರಬೇಕೆ? ನಿನ್ನ ಬಾಯಿಗೂ ಒಂದಷ್ಟು ಹಾಕಿದ್ದಾಯಿತು, ನಿನ್ನ ಆಟ ಎಲ್ಲ ನೋಡಿದ್ದಾಯಿತು, ಈಗಲೂ ನೀನು ಹೇಳಿದಂತೆ ಕೇಳಿಕೊಂಡಿರಬೇಕೇ?...

ಸುಮೇರಾನ ಮುಖ ಹುಳಿಯಾಯಿತು. ಅಯೋಗ್ಯ ಎಲ್ಲಿದೋ! ತಿಂದ ಮನೆಗೇ ಎರಡು ಬಗೆಯುತ್ತಾನೆ. ರಿಕ್ಷಾದಲ್ಲಿ ಮಲಗಿಕೊಂಡೆ ತನ್ನ ಕೈಯನ್ನು ದುರ್ಬೀನಿನಂತೆ ಮಾಡಿಕೊಂಡು ಮರದ ಎಲೆಗಳ ಕಡೆಗೆ ಮತ್ತು ಆಕಾಶದ ಕಡೆಗೆ ನೋಡತೊಡಗಿದ. ಬಾಲ್ಯದಿಂದಲೂ ಇದು ಅವನಿಗೆ ಒಂದು ರೀತಿಯ ಆಟವಾಗಿತ್ತು. ಹೀಗೆ ಮಾಡುವುದರಿಂದ ಅವನಿಗೆ ತುಂಬಾ ಖುಷಿಯಾಗುತ್ತಿತ್ತು. ಗಂಟೆಗಟ್ಟಲೆ ಹೀಗೆ ನೋಡುತ್ತಾ ಮಲಗಿರುತ್ತಿದ್ದ. ಬೆಳಿಗ್ಗೆಯೆಲ್ಲ ಅಮೃತಶಿಲೆ ಕಲ್ಲಿನಿಂದ ಆಟಿಕೆ ಸಾಮಾನುಗಳನ್ನು ತಯಾರಿಸುವ ಕಾರ್ಖಾನೆಯಲ್ಲಿ ಕೆಲಸ ಮಾಡುವುದು, ರಾತ್ರಿ ಮಲಗಿ ಆಕಾಶದಲ್ಲಿ ಚಂದ್ರನನ್ನು ನೋಡುತ್ತಾ ಮಲಗಿ ನಿದ್ರೆಹೋಗುವುದು ಅವನ ವಾಡಿಕೆಯಾಗಿತ್ತು... ಚಂದ್ರನಲ್ಲಿ ಮುದುಕಿಯೊಬ್ಬಳು ಕುಳಿತು ಚರಕಾ ನಡೆಸುತ್ತಿರುವಂತೆ ಒಮ್ಮೊಮ್ಮೆ ಕಂಡಿದ್ದರೆ, ಮತ್ತೆ ಕೆಲವೊಮ್ಮೆ ಜಿಂಕೆ ಓಡುತ್ತಿರುವಂತೆ ಕಾಣುತ್ತಿತ್ತು. ಈಗವನು ಮಲಗಿಕೊಂಡು ಹಸಿರು ಎಲೆಗಳ ಕಡೆ ನೋಡುತ್ತಾ ಇದ್ದ—ಬೇವಿನ ಮರದ ಎಲೆಗಳು. ಅವುಗಳ ಮಧ್ಯದಿಂದ ಕಾಣುತ್ತಿದ್ದ ನೀಲಿ ಆಕಾಶದಲ್ಲಿ ಮೋಡಗಳು ಚಲಿಸುತ್ತಿದ್ದುವು. ಬಿಳಿಯ ಬಾತುಗಳಂತೆ ಅವುಗಳ ಚಲನ ಅವನಿಗೆ ಕಾಣುತ್ತಿತ್ತು. ಅವುಗಳನ್ನೇ ಅವನು ದಿಟ್ಟಿಸಿ ನೋಡುತ್ತಿದ್ದ; ಎಲೆಗಳ ಸುಯ್ ಸುಯ್ ಶಬ್ದ ಕೂಡ ಕೇಳುತ್ತಿತ್ತು.

ಹುಂ. ರಾಮದೇಯಿಗಾಗಿ ಮಂಗೀ ಸಾಹೇಬ್ ಕಿವಿಯ ಆಭರಣ ತಂದಿದ್ದರು...

"ರೈಲಿನ ಹರಾಜಿನಲ್ಲಿ ಸಿಕ್ಕಿಕೊಂಡಿದ್ದೆ. ಇನಾಮು ಸಿಕ್ಕುತ್ತದೆಂಬ ನಿರೀಕ್ಷೆಯಲ್ಲಿ ಹೆಚ್ಚು ಹೆಚ್ಚು ಬೆಲೆ ಕೂಗುತ್ತಿದ್ದೆ. ಒಂದು ಸಲ ಹೀಗೆ ಕೂಗಿದಾಗಲೇ ಅವನು ಹರಾಜನ್ನೇ ನಿಲ್ಲಿಸಬೇಕೇ? ನಾನೇನು ಮಾಡಲಿ, ಮೌಜಿ?" ಯಾವಾಗಿನಿಂದ ಅವರ ಈ ರಬಾವು ಸಂಬಂಧ ನಡೆಯುತ್ತಿತ್ತೋ! ಅವನು ಆದಿನ ಹಾಗೆ ರಿಕ್ಷಾದ ಟ್ಯೂಬ್ ಬದಲಾಯಿಸಲು ಇದ್ದಕ್ಕಿದ್ದಂತೆ ಬರದೆ ಇದ್ದಿದ್ದರೆ ಈ ಜನ್ಮದಲ್ಲಿಯೇ ಅದು ಅವನಿಗೆ ತಿಳಿಯುತ್ತಿರಲಿಲ್ಲ. ಕತ್ತಿನ ತನಕ ಕೂದಲು ಬಿಟ್ಟುಕೊಂಡು ಸಿನಿಮಾ ಹಾಡು ಹೇಳಿಕೊಂಡು ತಿರುಗುತ್ತಿದ್ದರೆ ಹೀಗೇ ಆಗೋದು... ರಿಕ್ಷಾ ನಡೆಸುವುದೆಂದರೆ ಹೀಗೆ ನಡೆಸಬೇಕು, ಒಳ್ಳೆ ಸರ್ಕಸ್ ಆಟ ಇರುವ ಹಾಗೆ ಇರಬೇಕು. ರಿಕ್ಷಾ ಅಲ್ಲ ವಿಮಾನ ಹೋಗುತ್ತಿದೆ ಎನ್ನುವ ಹಾಗೆ. ಕಾರನ್ನು ಪಕ್ಕಕ್ಕೆ ತಿರುಗಿಸುವ ಹಾಗೆ ರಿಕ್ಷಾ ತಿರುಗಿಸಬೇಕು... ಸದ್ಯ, ಆ್ಯಕ್ಸಿಡೆಂಟ್ ಆದಾಗ ತಲೆ ಬಡಿಯಿತು. ಅಷ್ಟೆ. ಇಲ್ಲವಾದರೆ ನೇರವಾಗಿ ಸ್ವರ್ಗಕ್ಕೇ ಹೋಗಬೇಕಿತ್ತು. ಮತ್ತೆ "ಘರ ಆಯಾ ಮೇರಾ ಪರದೇಸಿ" ಎನ್ನುವ ಮಾತೇ ಇರುತ್ತಿರಲಿಲ್ಲ. ಆ ಕೆಟ್ಟ ರಂಡೆ ರಾಮದೇಯಿ. ನ್ಯಾಯವಾಗಿ ನೋಡಿದರೆ ಮತ್ತೆ ಮುಖ ತೋರಿಸಲಾರದೆ ಅವಮಾನದಿಂದ ಸಾಯಬೇಕಾಗಿತ್ತು. ಆದರೆ ಅಂತಹ ಸಂಕೋಚವೇ ಇರಲಿಲ್ಲ ಅವಳಿಗೆ. ಬದಲಾಗಿ ಜರ್ಬಿನಿಂದಲೇ ಹೇಳಿದಳು: "ಮೊದಲು ನನ್ನ ಕಡೆಯೂ ಸ್ವಲ್ಪ ನೋಡಿ ಬಾಬೂ, ನೀವೇನೂ ನನ್ನನ್ನು ಕೊಂಡುಕೊಂಡೂ ಬಂದಿರಲಿಲ್ಲ. ಓಡಿಸಿಕೊಂಡೂ ಬಂದಿರಲಿಲ್ಲ... ಹಾಗೆ ಬಂದಿದ್ದರೆ ನಿಮ್ಮ ತಾಯಿನೇ ಸರಿ." ಬಾಯಿಬಡುಕಿ. ಇಷ್ಟು ಚೆನ್ನಾಗಿ ಬಾರಿಸಿದೆ. ಆದರೆ ಅವಳು ಬಾಯಿ ಮುಚ್ಚಿದ್ದರೆ! ಅವಳಿಗೆ ಅವಳ ಅಪ್ಪನ ಗರ್ವ ಇದೆ. ಅಪ್ಪ ಸರಪಂಚನಿದ್ದಾನೆ ಎಂಬ ಗರ್ವ... ಇಂತಹ ಅಪ್ಪಂದಿರಿಗೆ ಸರಿಯಾಗಿ ಬುದ್ಧಿ ಕಲಿಸಬೇಕು... ಠಕ್ಕರು... ಎರಡು ಬುಟ್ಟಿ ನಾರಂಗಿ ಛಾಪು ಕೊಟ್ಟರೆ ಸಾಕು, ಎಂತಹ ತೀರ್ಪನ್ನಾದರೂ ಪಡೆಯಬಹುದು. ಇವರೇನು ಪಂಚಾಯತಿ ನಡೆಸಿಯಾರು? ನಡೆಸುವುದೆಲ್ಲ ಲೂಟಿ... ನಮ್ಮಿಂದ ದಂಡದ ಹೆಸರಿನಲ್ಲಿ... ಧೀರಾನ ವ್ಯಾಮೋಹ ವೊಂದು ಇಲ್ಲದಿದ್ದರೆ ಇಡೀ ಜೀವಮಾನ ಅಪ್ಪನ ಮನೇಲೇ ಬಿದ್ದಿರು ಹೋಗಿ ಎಂದು ಓಡಿಸುತ್ತಿದ್ದೆ, ಬೇರೆ ಮದುವೆ ಮಾಡಿಕೊಳ್ಳುತ್ತಿದ್ದೆ.

ಕೆಲಸಕ್ಕೆ ಬಾರದ ಯೋಚನೆಗಳು—ಯಾಕೆ ಸುಮ್ಮನೆ ಇದೆಲ್ಲ ಯೋಚನೆ ಮಾಡ್ತಾ ಇದೇನೋ, ಏನೋ! .., ಈ ಕೆಮ್ಮಲು ಬೇರೆ... ದೇಹಸ್ಥಿತೀನೇ ಕೆಟ್ಟುಹೋಯ್ತು... ಆಖ್ ಥೂ... ಮಲಗಿಕೊಂಡೇ ಅವನು ಕಫದ ಉಂಡೆಯನ್ನು ಹಿಂಭಾಗಕ್ಕೆ ಅಷ್ಟು ದೂರಕ್ಕೆ ಉಗಿದ. ರಟ್ಟೆಯಿಂದ ತುಟಿಗಳನ್ನು ಒರೆಸಿಕೊಂಡು ಮತ್ತೆ ಆಕಾಶದ ಕಡೆಗೆ ನೋಡತೊಡಗಿದ. ಹೇಗೆ ಒಂದರ ಹಿಂದೆ ಒಂದು ತೇಲಿ ಬರುತ್ತಿದೆ!... ನೀಲಿ ನೀರಿನಲ್ಲಿ ಬಿಳಿಯ ಬಣ್ಣದ ಕರವಸ್ತ್ರಗಳು ತೇಲಿಕೊಂಡು ಬಂದಂತೆ! ...ಹಾಂ, ಈಗ ಜ್ಞಾಪಕಕ್ಕೆ ಬಂತು. ಇನ್ನೊಂದು ಕರವಸ್ತ್ರ ಕೂಡ ಸಿಕ್ಕಿತ್ತು. ಆ ವಿಚಾರವನ್ನೇ ಇಷ್ಟು ಹೊತ್ತೂ ಯೋಚಿಸುತ್ತಾ ಇದ್ದಿದ್ದು, ಮರೆತೇ ಹೋಗಿತ್ತು ಆ ವಿಷಯ. ನನ್ನ ಹತ್ತಿರ ಚೆನ್ನಾಗಿ

ಹೊಡಿಸಿಕೊಂಡು. ರಾಮದೇಯಿ ಗಂಟುಮೂಟೆ ಕಟ್ಟಿಕೊಂಡು, ತಂದೆಮನೆಗೆ ಹೊರಟು ಹೋಗಿದ್ದಾಗ ನಡೆದ ವಿಷಯ... ಅವಳು ಹೋದ ಎರಡು ದಿನ ನಂತರಾನೇ ಈ ವಿಷಯ ನಡೆದಿತ್ತು...

ಬೆಳಗ್ಗೆಯಿಂದಲೂ ಅವನ ಮನಸ್ಸು ಹೇಗೋ ಒಂದು ತರಹ ಆಗಿಹೋಗಿತ್ತು. ಸಮಾಧಾನವೇ ಇರಲಿಲ್ಲ. ಬಿದ್ದುಕೊಂಡಲ್ಲಿಂದಲೇ ಕುಟುಕುಟು ಎನ್ನುತ್ತಿದ್ದ ಅಳಿಲುಗಳ ಕಡೆಗೋ ಕಾಲುಗಳಿಂದ ಬೂದಿ ಕೆರೆಯುತ್ತಿದ್ದ ಕೋಳಿ ಹಾಗೂ ಕೋಳಿಮರಿಗಳನ್ನೋ ನೋಡುತ್ತಿದ್ದೆ. ಕಾಳುಗಳನ್ನು ಆರಿಸಿ ಆರಿಸಿ ಕೋಳಿ ಚುಕ್-ಚುಕ್ ಎನ್ನುತ್ತಿದ್ದಹಾಗೆಯೇ ಚಿಕ್ಕ ಚಿಕ್ಕ ಮರಿಗಳು ಹತ್ತಿರ ಬಂದು ಸುತ್ತ ಸೇರಿಕೊಳ್ಳುತ್ತಿದ್ದುವು. ಉಯ್ಯಾಲೆಯಂತಿದ್ದ ಖಾಟ್‌ನಲ್ಲಿ ಬಿದ್ದುಕೊಂಡೇ ಭೂಮಿ ಮುಟ್ಟುತ್ತಿದ್ದೆ, ಕೊಳಕಲು ದಿಂಬಿಗೆ ತಲೆಕೊಟ್ಟು ಮಲಗಿಕೊಂಡೇ 'ಕಿಸ್ಸಾ ತೋತಾ ಮೈನಾ' ಮತ್ತು 'ದಿಲ್ ಬಹಾರ್' ಸಿನಿಮಾ ಹಾಡು ಗಳನ್ನು ಹಾಡುತ್ತಿದ್ದೆ. ಆಮೇಲೆ ಅಲ್ಲಿಯೇ ಇದ್ದ ಒಂದು ಕಟ್ಟಿಗೆಯನ್ನು ಬಡಿದು ಒಳ್ಳೆಯ ಬ್ರಷ್ ಮಾಡಿದೆ. ಎಲ್ಲಿಯೂ ಹೋಗಲು ಮನಸ್ಸು ಬರುತ್ತಿರಲಿಲ್ಲ. ಎಲ್ಲಿಗೆ ಹೋಗಿ ಯಾರನ್ನು ಭೇಟಿಮಾಡಿದರೂ ರಾಮದೇಯಿ ನೆನಪು ಬರುತ್ತಿತ್ತು. ತಪ್ಪು ಅವಳದಲ್ಲ ನನ್ನದೇ ಎನಿಸುತ್ತಿತ್ತು. ಎಲ್ಲರೂ ಮೋಸಗಾರರೇ, ಸ್ವಾರ್ಥಿಗಳೇ... ತುಂಬಾ ಕೆಟ್ಟ ಜನ. ಆ ವಸತಿಯ ಎಂಟು ಹತ್ತು ಮನೆಗಳ ಪೈಕಿ ಸ್ವಂತ ರಿಕ್ಷಾ ಇದ್ದುದೂ ನನ್ನ ಬಳಿಯೇ. ಅದನ್ನು ನೋಡಿಯೇ ಇವನ ಬಳಿ ಇಷ್ಟೊಂದು ಹಣ ಎಲ್ಲಿ ಬಂತು ಎಂದು ಯೋಚಿಸ್ತಾರೆ. ಏನೋ ದೊಡ್ಡ ಆಸ್ತಿ ಇರುವಂತೆ ತಿಳಿಯುತ್ತಾರೆ. ಕಣ್ಣು ಕೆಂಪಗೆ ಮಾಡಿ ಕೊಳ್ಳುತ್ತಾರೆ... ಬಾಕಿ ರಿಕ್ಷಾ ಪಾರಿಸಿಕೊಂಡೇ ಹೊರಟುಹೋದ, ಬೇಲನ ಗಂಜಪ ಲಾಲಾ ಅವನನ್ನು ಜೈಲಿಗೆ ಹಾಕಿಸಿದ... ತಾನೂ ತನ್ನ ರಿಕ್ಷಾವನ್ನು ಗಂಟೆಗಟ್ಲೆ ಉಜ್ಜಿ ಉಜ್ಜಿ ಫಳ ಫಳ ಎನ್ನುವ ಹಾಗೆ ಮಾಡುತ್ತಿದ್ದ... ಪಕ್ಕದ ಮನೆಯ ಸೊಸೆ ತನ್ನ ಕೈಯನ್ನು ಬಳೆಗಳು ಮಿನುಗುವ ರೀತಿಯಲ್ಲಿ ಆಡಿಸಿಕೊಂಡು ಬಿಸ್ಮಾನ್ ಚಿಕ್ಕಮ್ಮನ ಜೊತೇಲಿ ಜಗಳ ಆಡ್ತಾ ಇದ್ದಾಳೆ. "ಲೋಂಡಿ, ಗಂಡ ಅನ್ನೋ ಕೊಬ್ಬು ನಿನಗೆ. ಅವನು ಇವತ್ತು ಬರ್ಲಿ ಇರು. ಕನ್ನಡಕದ ದುಡ್ಡು ವಸೂಲು ಮಾಡ್ಲಿಲ್ಲದ್ರೆ ಕೇಳು... ಬಿಡ್ತೀನೇನು, ಏನೇ ಆಗ್ಲಿ ಇವೊತ್ತು, ಕಳ್ಳ ಮುಂಡೆ ಎಲ್ಲೀದೋ. ಒಂದು ಕೈ ನೋಡಿಯೇ ನೋಡ್ತೀನಿ ಇವೊತ್ತು." ಏನು ಗಂಟಲು ಅವಳದು! ಹೋಗಿ ಹಾಗೇ ಹಿಸುಕಿ ಬರಲೇ ಅನ್ನಿಸ್ತಿದೆ. ಒಂದು ಅರ್ಧಾಣೆ ಮಕ್ಕಳ ಆಟಿಕೆಯ ಕನ್ನಡಕ, ಅದಕ್ಕಿಷ್ಟು ರಂಪ ಮಾಡ್ತಾ ಇದ್ದಾಳೆ. ಮುರಿದು ಹೋದರೆ ಮುರಿದು ಹೋಯಿತು. ಏನು ಮಹಾ. ಅಷ್ಟಕ್ಕೋಸ್ಕರ ಬೆಳಿಗ್ಗೆಯಿಂದ ಶುರುವಾಗಿದೆ ಈ ರಂಪ. ಇಡೀ ದಿನ ಹೀಗೆಯೇ ಒಂದಲ್ಲ ಒಂದು. ಒಂದು ನಿಮಿಷ ಹಾಯಾಗಿ ಬಿದ್ದಿರುವ ಹಾಗಿಲ್ಲ. ಏನು ಜನಾನೋ ಏನೋ, ಹಳ್ಳಿ ಗಮಾರರು.

ಸಿಕಂದರಾದ ಮುಂಭಾಗದಲ್ಲಿ ಆ ದಿನ ರಿಕ್ಷಾ ನಿಲ್ಲಿಸಿದ್ದೆ. ಸಂಜೆ ಆಗಿಹೋಗಿತ್ತು. ಕೆಳಗಿಳಿದು ಒಂದು ಪಕ್ಕಕ್ಕೆ ನಿಂತು ಜೋರಾಗಿ ಹುಕ್ಕಾ ಎಳೆಯುತ್ತಿದ್ದೆ. ಸರ್ರೆಂದು

ಒಂದೆರಡು ಕಾರುಗಳು ಒಳಕ್ಕೆ ಹೋದುವು ಮತ್ತು ಹೊರಕ್ಕೆ ಬಂದುವು. ಈ ಬಿಳೀ ಹುಡುಗೀರೂ ಕೂಡ ಅದೇನು ಕಾರು ನಡೆಸುತ್ತಾರೆ! ತಾಯಿಯ ಹೊಟ್ಟೆಯಿಂದ ಬರುವಾಗಲೇ ಕಾರು ಬಿಡುವುದನ್ನು ಕಲಿತು ಬಂದವರಂತೆ ಓಡಿಸುತ್ತಾರೆ. ಕಾರುಗಳು ತಿರುಗುವ ರೀತಿ, ಸ್ಟಾರ್ಟ್ ಆಗೋದು ಮತ್ತು ಹೊರಡೋದು–ಇವನ್ನೆಲ್ಲ ಅವನು ಮಂತ್ರಮುಗ್ಧನಾಗಿ ನೋಡುತ್ತಾ ಇದ್ದಾನೆ. ನನಗೂ ಡ್ರೈವಿಂಗ್ ಬಂದಿದ್ದರೆ ತಾನೂ ಹೀಗೆಯೇ ಜುಮ್ಮಂತ ಕಾರು ನಡೆಸಿಕೊಂಡು ಹೋಗುತ್ತಿದ್ದೆ. ಹಾಗೆಯೇ ತಾನೂ ತಿರುಗಿಸುತ್ತಿದ್ದೆ. ಆ ರಂಡೆ ರಾಮದೇಯಿಗೂ ಕೂಡಿಸಿ ಒಂದಿಷ್ಟು ತಿರುಗಾಡಿಸಿ ಬಿಡುತ್ತಿದ್ದೆ–ಆಗಲಾದರೂ ಅವನಿಗೊಂದಿಷ್ಟು ಬೆಲೆ ಬರುತ್ತಿತ್ತು ಅವಳ ದೃಷ್ಟೀಲಿ. ಅವನು ಆ ಕಡೆ ನೋಡುತ್ತಾನೆ. ಮೊಣಕಾಲಿನ ತನಕ ಪಂಚೆ, ಬಿಚ್ಚಿದ ಎದೆ, ತಲೆಯ ಮೇಲೆ ದೊಡ್ಡ ಮುಂಡಾಸು ಸುತ್ತಿರುವ ಒಬ್ಬ ಬಾಯಿಬಿಟ್ಟುಕೊಂಡು ಸಿಕಂದರಾದ ಗೋಪುರಗಳನ್ನು ನೋಡ್ತಾ ನಿಂತಿದ್ದು ಪಕ್ಕದಲ್ಲಿರುವವನಿಗೆ ಹೇಳ್ತಾ ಇದ್ದಾನೆ: "ಎಲಾ ಇವ್ನ. ಇಲ್ನೋಡು, ಎಷ್ಟು ಎತ್ತರಕ್ಕೆ ಆಕಾಸಕ್ಕೆ ಹೋಗಿ ಮುಟ್ತಾ ಇವೆ; ಮಸೀದಿ ಇರೋ ಹಂಗದೆ ಅಲ್ಲಾ ?"

ಅವನೇ ಸುಮೇರಾ ಕಡೆಗೆ ತಿರುಗಿ ಕೇಳಿದ: "ತಮ್ಮಾ, ಇದಕ್ಕೆ ಆಕಬರಾ ಅಂತಾರೋ ಮಕಬರಾ ಅಂತಾರೋ, ಅದೇನಂತಾರೆ ತಮ್ಮಾ ಇದಕ್ಕೆ ?"

ಅಗಿಯುತ್ತಿದ್ದುದನ್ನು ಮರೆತು ಸುಮೇರಾ ಜೋರಾಗಿ ನಕ್ಕುಬಿಟ್ಟ. ಮತ್ತು ಆ ಮನುಷ್ಯನ ಸರಳತೆಯನ್ನು ಮೆಚ್ಚಿಕೊಂಡು ಹೇಳಿದ: "ಇದು ಸಿಕಂದರಾ ಠಾಕುರ್, ಇಲ್ಲಿ ಅಕಬರ್ ಬಾದಶಹನನ್ನು ಹೂತಿದ್ದಾರೆ. ಎಲ್ಲಿಂದ ಬಂದಿದ್ದೀರಿ ?" ತರಹೆ ತರಹೆಯ ಜನ ಇದ್ದಂತೆ ಅವನಿಗೆ ಕಂಡಿತು.

ಸುಮೇರಾ ನಗುತ್ತಿದ್ದುದು ಠಾಕೂರನ ಗಮನಕ್ಕೆ ಬಂದಿರಲಿಲ್ಲ. ಬಾಯಿ ಬಿಟ್ಟುಕೊಂಡು ಆಶ್ಚರ್ಯ ವ್ಯಕ್ತಪಡಿಸುತ್ತಾ ಹೇಳಿದ: "ವಾಹ್, ಅಕಬರ್ ಬಾದಶಹ ಕೂಡ ಎಂಥ ಬಾದಶಹ! ಸಾಯೋದಕ್ಕೂ ಇಷ್ಟು ಒಳ್ಳೇ ಸ್ಥಳ ಆರಿಸಿಕೊಂಡಿದ್ದಾನೆ". ಸುಮೇರಾ ಕೇಳಿದ್ದ ಪ್ರಶ್ನೆಗೆ ಉತ್ತರ ಕೊಡಲಿಲ್ಲವಲ್ಲ ಎಂದು ಅವನ ಕ್ಷಮೆ ಕೇಳುತ್ತಾ ಆಮೇಲೆ ಹೇಳಿದ: "ತಮ್ಮಾ, ನಾವು ಭರತ್‌ಪುರದಿಂದ ಬಂದಿದ್ದೇವೆ; ನಾವು ತಾನೇ ಇಂಥಾವನ್ನು ಎಲ್ಲಿ ನೋಡಿರ್ತೀವಿ? ಡೀಂಗ್ ಮಹಲ್ ನೋಡಿದ್ದೀವಿ–ಅಷ್ಟೆ. ಏನೋ ಕೆಲಸದ ಮೇಲ್ ಬಂದಿದ್ವಿ. ಹೀಗೇ ನೋಡ್ಕೊಂಡ್ ಹೋಗೋಣ ಅಂತ ಬಂದ್ವಿ!"

ಠಾಕೂರ್ ಆ ಕಡೆ ಹೋದಮೇಲೆ ಟಾಂಗಾವಾಲಾ ಬುಂದನ್ ಹೇಳಿದ. "ಇವನು ಬಿಡು ಪಾಪ, ಹಳ್ಳಿಯ ಮುಕ್ಕ. ಎಂಥೆಂಥವರನ್ನೋ ಬೇವಕೂಫರನ್ನಾಗಿ ಮಾಡಿ ಕಳಿಸಿದ್ದೇವೆ, ಗೊತ್ತಾದರೆ ತಮ್ಮ ಮೂರ್ಖತನಕ್ಕೆ ತಾವೇ ಅಳ್ತಾರೆ. ಅಂಗ್ರೇಜ್ ಅಮೇರಿಕನ್ನರಾದರೂ ಆದರೆ ಐದು–ಹತ್ತು ರೂ.ಗಳ ಬಕ್ಷೀಸನ್ನಾದರೂ ನಿರೀಕ್ಷಿಸಬಹುದು. ಪಾಪ, ಇಂಥವರಿಂದ ಏನು ನಿರೀಕ್ಷಿಸೋದು? ಗಂಟೆಗಟ್ಲೆ ಚೌಕಾಸಿ ಮಾಡಿ ಕೊನೆ ಸವಕಲು

ಆಣೆ ಕೊಟ್ಟು ಹೋಗೋ ಜನ. ಸ್ಟೇಷನ್ನಿನಲ್ಲಿ ಕೆಲವರು ಕುಳಿತಿದ್ದು. ಎಳ್ಕೊಂಡ್ ಬಂದೆ. ಬಂದು ಸೇಂಟ್ ಜಾನ್ಸ್ ಕಾಲೇಜ್ ಸುತ್ತಮುತ್ತ ತಿರುಗಾಡಿಸಿ, 'ನೋಡಿಕೊಳ್ಳಿ. ಇದೇ ಸಿಕಂದರಾ. ಇವೊತ್ತು ಬಂದ್ ಇದೆ' ಎಂದುಬಿಟ್ಟೆ... ಯಾರು ಅವರನ್ನು 'ಇಲ್ಲೀತನಕ ಕರಕೊಂಡ್ ಬರ್ತಾರೆ ಹೇಳು. ಐದು ರೂಪಾಯಿ ಜೇಬಿಗೆ ಹಾಕಿಕೊಂಡಷ್ಟೇ ಲಾಭ. ನಮ್ಮ ಕೆಲಸ ಮುಗೀತು. ಗೋರಿಗಳಲ್ಲಿ ಅದೇನು ನೋಡಲು ಬರುತ್ತಾರೋ ಈ ಜನ. ನಮಗಂತೂ ಅರ್ಥವಾಗೋಲ್ಲ. ಗೈಡುಗಳು ಹೇಳೋ ಕಥೆ ಕೇಳಿ ಕೇಳಿ ಸಂತೋಷಪಡು ತ್ತಾರೆ, ಈ ಜನ. ದಿನ ಬೆಳಗಾದರೆ ಅದೇ ಕಥೆಗಳು..."

ನಿಜ ಹೇಳಬೇಕೆಂದರೆ, ಇದೇ ಮಾತು ಇವೊತ್ತಿಗೂ ಸುಮೇರಾನ ತಲೇಗೇ ಹತ್ತುತ್ತಿಲ್ಲ. ಇವೊತ್ತಿಗೂ ಅದೊಂದು ಸಮಸ್ಯೆಯೇ.

"ರಿಕ್ಷಾ!"

ಕೂಗುವ ಜೊತೆಗೆ ರಿಕ್ಷಾದ ಗಾಡಿಯೂ ಸದ್ದುಮಾಡಿತು, ಟ್ರನ್, ಟ್ರನ್.

ಸವಾರಿ ಕಣ್ಣಿಗೆ ಬೀಳುವುದೇ ತಡ ಅವನು ಆ ಕಡೆ ರಭಸಕ್ಕನೇ ದೃಷ್ಟಿ ಹೊರಳಿಸಿದ. ಮುಂದೆ ಹೋಗುತ್ತಿದ್ದಂತೆ ಅವನಿಗೆ ಅದೆಷ್ಟೋ ಗರ್ವ. ಎಲ್ಲರ ರಿಕ್ಷಾಗಳಿಗಿಂತ ಅವನದೇ ಹೊಸದು ಮತ್ತು ಫೇಷನಬಲ್. ಸವಾರಿ ಬೇರೆ ಎಲ್ಲಿ ಹೋಗಲು ತಾನೇ ಸಾಧ್ಯ?

ಒಬ್ಬ ಹುಡುಗ ಮತ್ತು ಒಬ್ಬ ಹುಡುಗಿ ನಿಂತಿದ್ದರು. ಹುಡುಗಿ ಒಂದು ತಿಳಿ ಬಣ್ಣದ ಬಟನ್ ಹಾಕಿದ ಜೆಸ್ಟರ್ ಉಟ್ಟಿದ್ದಳು, ಎರಡು ಜಡೆ–ಒಂದು ಮುಂದೆ ಬಿದ್ದಿದೆ ಇನ್ನೊಂದು ಹಿಂದೆ. ಚೆನ್ನಾಗಿದ್ದಾಳೆ. ಉದ್ದನೆಯ ಮುಖ, ಹೊಳೆಯುವ ಕಣ್ಣುಗಳು... ಹುಡುಗಿ ತನ್ನ ಎರಡು ಕೈಗಳನ್ನೂ ಜೆಸ್ಟರಿನ ಜೇಬುಗಳಲ್ಲಿ ಹಾಕಿಕೊಂಡಿದ್ದು ಭಾವ ಪರವಶಳಾಗಿ ಹುಡುಗನಿಗೆ ಏನನ್ನೋ ತೋರಿಸುತ್ತಿದ್ದಾಳೆ. ಹುಡುಗ ಉಲನ್ನಿನ ಜರ್ಕಿನ್ ಮತ್ತು ಪ್ಯಾಂಟ್ ತೊಟ್ಟಿದ್ದಾನೆ. ಗೋಧಿ ಬಣ್ಣ. ಹಣೆಯ ಮೇಲಿನ ಕೂದ ಲನ್ನು ಸರಿಮಾಡಿಕೊಳ್ಳುವ ನೆಪದಿಂದ ಆಗಾಗ ಕೈ ಮೇಲಕ್ಕೆ ಹೋಗುತ್ತಿದೆ ಮತ್ತು ಯಾವುದೋ ಪೇಚಿನಲ್ಲಿರುವಂತಿದೆ ಅವನ ಮುಖಭಾವ. ಏನೋ ಸಮಾಚಾರ ಇದೆ. ಅವರ ರಹಸ್ಯ ತಿಳಿಯುವ ಪ್ರವೃತ್ತಿ ಈಗ ಸುಮೇರಾನಲ್ಲಿ ವಿಚಿತ್ರ ರೀತಿಯಲ್ಲಿ ಪ್ರಬಲ ವಾಗುತ್ತಿದೆ. ಹೊರಗೆ ಅವರಲ್ಲಿ ಕಾಣುತ್ತಿರುವ ನಿಶ್ಚಿಂತತೆ ಹಾಗೂ ನಿರ್ಭಯತೆಗಳು ಕೃತಕವಾಗಿದೆ ಎಂಬುದು ಅವನಿಗೆ ಸ್ಪಷ್ಟವಾಗಿ ಹೋಗಿದೆ. ಒಳಗೊಳಗೇ ಇರುವ ಹೆದರಿಕೆ ಯನ್ನು ಮುಚ್ಚಲು ಈ ಮುಖವಾಡ. ಅವನು ಕೇಳಿದ: "ತಾಜ್‌ಮಹಲ್ ಸಾಬ್?" ತಾಜಮಹಲ್ ಕಡೆ ಹೋದರೆ ಆ ರಂಡೆ ರಾಮದೇಯಿ ಯಾವ ರೀತಿ ಇದ್ದಾಳೆಂಬುದನ್ನು ಹೊರಗಡೆಯಿಂದಲೇ ಒಂದಿಷ್ಟು ತಿಳಿಯಬಹುದು; ಐದು ದಿನ ಆಗಿಹೋಯಿತು ಅವಳನ್ನು ನೋಡಿ.

"ದಯಾಲ್‌ಬಾಗ್", ಹುಡುಗ ಹೇಳಿದ.

"ಕರ್ಲೊಂಡ್ ಹೋಗ್ತೀನಿ ಸಾಬ್", ಎಂದು ಸೀಟಿನ ಮೇಲೆ ಒಮ್ಮೆ ಕೈ ತಟ್ಟಿ ಅವನು ಹೇಳಿದ.

"ನಡೀ ಕುಳಿತುಕೋ," ಹುಡುಗಿಯ ಕೈ ಮುಟ್ಟಿ ಅವನು ಹೇಳಿದ. ಮತ್ತು ಇನ್ನೊಮ್ಮೆ ಎತ್ತರದ ಮರಗಳ ಕಡೆಗೆ ಮತ್ತು ಚಾಯ್‌ವಾಲಾ ಕಡೆಗೆ ನೋಡಿದ.

"ಹುಡ್ ಹಾಕಿಬಿಡು," ಎಂದು ಸುಮೇರಾಗೆ ಹುಡುಗಿ ಹೇಳಿದಳು. ಹುಡುಗಿಯ ಮುಖ ನೋಡುವ ಇಚ್ಛೆ ಸುಮೇರಾನಲ್ಲಿ ಪ್ರಬಲವಾಗುತ್ತಿತ್ತು. ಅವಳ ಧ್ವನಿ ಕೇಳಿ ಅವನು ಬೆಚ್ಚಿಬಿದ್ದ. ಹುಡುಗನ ಜೊತೆಗೆ ಅವಳು ಹೇಳುತ್ತಿದ್ದಳು: ಇವರ ಹತ್ತಿರ ಮೊದಲೇ ಬಾಡಿಗೆ ಗೊತ್ತು ಮಾಡಿಕೊಳ್ಳುವುದು ಒಳ್ಳೆಯದು. ಆಮೇಲೆ ಪ್ರತಿಯೊಬ್ಬನನ್ನೂ ಟೂರಿಸ್ಟ್ ಎಂದು ತಿಳಿದು ತಕರಾರು ಮಾಡುತ್ತಾರೆ." ಹಾಗೆ ಹೇಳಿಕೊಂಡು ಅವಳು ತನ್ನ ಚೆಸ್ಟರ್ ಸರಿಪಡಿಸಿಕೊಂಡು ಕುಳಿತಳು. ಅವಳು ರಿಕ್ಷಾ ಹತ್ತುವಾಗ ಅವಳ ಮೊಣಕಾಲು ಕಾಣಿಸಿಕೊಂಡಿತು. ಅದನ್ನು ನೋಡಿ ಸುಮೇರಾನ ಮನಸ್ಸು ಚಂಚಲವಾಯಿತು. ರಿಕ್ಷಾದ ಹುಡ್ಡನ್ನು ಹಾಕುತ್ತಾ "ಮುಂದೆ ಪರ್ದಾ ಕೂಡ ಹಾಕಲೇ ಮೇಮ್‌ಸಾಬ್ ?", ಎಂದು ಕೇಳಲೇ ಎಂದುಕೊಂಡ. ಮತ್ತೆ ಬೇಡ ಎನಿಸಿತು. ಹೇಳಿದ: "ನಾವು ದುಡ್ಡಿಗಾಗಿ ಜಗಳ ಆಡೋದಲ್ಲ."

ಇಬ್ಬರೂ ಕುಳಿತುಕೊಂಡಿದ್ದರು. ಸುಮೇರಾ ಸ್ವಲ್ಪ ಹಾಗೇ ನೋಡಿದ. ಹುಡುಗಿ ಅವನ ದೃಷ್ಟಿಗೆ ಬೀಳದ ರೀತಿಯಲ್ಲಿ ಮುಖವನ್ನು ಬೇರೆ ಕಡೆ ಮಾಡಿಕೊಂಡಿದ್ದಾಳೆ. ಅವಳ ನಗುಮುಖದ ಪಾರ್ಶ್ವಭಾಗ ಮಾತ್ರ ಅವನಿಗೆ ಕಾಣಿಸುತ್ತಿದೆ. ಅವಳು ಅವನಿಗೆ ಅದೆಷ್ಟು ಚೆನ್ನಾಗಿ ಕಂಡಳು ಎಂದರೆ ಅವನ ಮನಸ್ಸಾಯಿತು... ಅವನ ಹೆಚ್ಚೆಚ್ಚು ಗಂಟೆ ಬಾರಿಸಿತು, ಟ್ರಿನ್ ಟ್ರಿನ್...

"ಸ್ವಲ್ಪ ಒತ್ತರಿಸಿಕೋ, ಕೈಯನ್ನು ಹಿಂದಕ್ಕೆ ಇಟ್ಟುಕೊಳ್ಳುತ್ತೇನೆ," ಹುಡುಗ ಹೇಳುತ್ತಿದ್ದ.

ರಿಕ್ಷಾವನ್ನು ಮಟ್ಟವಾಗಿರುವ ರಸ್ತೆಯ ಮೇಲೆ ತರುತ್ತಾ ಸುಮೇರಾ ಮನಸ್ಸಿನಲ್ಲೇ ಅಂದುಕೊಂಡ, "ಹಾಂ, ಹಾಂ; ಕೈಯನ್ನಷ್ಟೇ ಏಕೆ ಇಟ್ಟುಕೊಳ್ಳುತ್ತೀಯೇ, ನೀನೇ ಮಲಗಿಕೋ ಬೇಕಾದರೆ." ಅರ್ಥವಿಲ್ಲದೆ ಮತ್ತೆ ಅವನು ಗಂಟೆ ಬಾರಿಸಿದ, ಟ್ರಿನ್ ಟ್ರಿನ್.

"ನೋಡಪ್ಪಾ, ಸ್ವಲ್ಪ ಬೇಗ ಹೋಗಬೇಕು," ಹುಡುಗಿಯ ಮೃದುವಾದ ಧ್ವನಿ.

ಈಗ ಮನೆಗೆ ಹೋಗುವ ಆತುರ ಇರಬೇಕು. ಅಮ್ಮ ಹೊಡೆಯುತ್ತಾಳೆ ಅಲ್ಲವೇ ? ಆಗಿನಿಂದಲೂ ಒಳಗೆ ಕುಳಿತು ಮೋಜು ಮಾಡುತ್ತಿರಬೇಕು. ಸುಮೇರಾ ಹೇಳಿದ: "ಇಗೋ ನೋಡಿ, ವಿಮಾನ ಹೋದಹಾಗೆ ಹೋಗ್ತೀನಿ." ಮಟ್ಟವಾದ ರಸ್ತೆಯ ಮೇಲೆ ರಿಕ್ಷಾ ಹರಿಯತೊಡಗುತ್ತಲೇ ಅವನಿಗೆ ಎಲ್ಲಿಲ್ಲದ ಸ್ಫೂರ್ತಿ ಬಂತು. ಉಸಿರು ಬಿಗಿಹಿಡಿದು ಹಲ್ಲು ಕಚ್ಚಿಕೊಂಡು ರಿಕ್ಷಾ ಓಡಿಸತೊಡಗಿದ. ಆಗ ಅವನಿಗೆ ನೆನಪು ಬಂತು, ಪ್ರತಿ ದಿನ ಒಬ್ಬ ಹುಡುಗಿಯನ್ನು ಸ್ಕೂಲಿಗೆ ಕರೆದುಕೊಂಡು ಹೋಗಲು ಮಂಗೀಗೆ ಅವನು

ಗೊತ್ತುಮಾಡಿದ್ದ. ಅವನು ರಿಕ್ಷಾ ಓಡಿಸುತ್ತಿದ್ದ ಜೋರು ನೋಡಿ ಕೊನೆಗೆ ಮೂರನೆಯ ದಿನವೇ, ಅವನಿಗೆ ನಿಧಾನವಾಗಿ ಹೋಗುವಂತೆ ಹೇಳಿದ್ದಳು. ಅದಕ್ಕೆ ಮಂಗೀ ಕೊಟ್ಟಿದ್ದ ಜವಾಬು ಏನು ಗೊತ್ತೆ? ಎತ್ತಿನ ಗಾಡಿಯಲ್ಲಿ ಕುಳಿತುಕೊಳ್ಳಲು ಆಸೆಯಾಗಿದ್ದರೆ ಸುಮೇರಾನ ರಿಕ್ಷಾದಲ್ಲಿ ಕುಳಿತುಕೊಳ್ಳಿ; ನಾನಂತೂ ತೂಫಾನ್ ಮೇಲಿಗಿಂತ ಕಡಿಮೆ ವೇಗದಲ್ಲಿ ಹೋಗುವುದು ಸಾಧ್ಯವೇ ಇಲ್ಲ. ಮೂರ್ಖ ಎಲ್ಲೀದೋ... ಈಗ ಅವನಿಗೆ ತಿಳಿಯಿತು ಮನುಷ್ಯ ಏಕೆ ರಿಕ್ಷಾ ಬೇಗ ಓಡಿಸು ಎಂದು ಹೇಳುತ್ತಾನೆ ಎಂದು. ಅವನ ಕಿವಿ ಅಸಾಧಾರಣ ರೀತಿಯಲ್ಲಿ ಚುರುಕಾಯಿತು.

"ಏನಾದರೂ ಹೇಳು, ರಿಕ್ಷಾದಲ್ಲಿ ಸವಾರಿ ಹೋಗುವುದೇ ಚೆನ್ನಾಗಿರುತ್ತೆ." ಹುಡುಗ ಹೇಳಿದ.

"ಹೀಗೆ ಒತ್ತರಿಸಿಕೊಂಡು ಕುಳಿತುಕೊಳ್ಳೋವಾಗ ಚೆನ್ನಾಗಿರೋಲ್ವೆ ಮತ್ತೆ?", ಎಂದು ಹೇಳಿ ಹುಡುಗಿ ನಗುತ್ತಾಳೆ. ಅವಳು ನಗುವಾಗ ಅವಳ ಕೆನ್ನೆಗಳು ಹೇಗಾಗು ತ್ತಿರಬಹುದು?

ಮತ್ತೆ ಕೇಳಿದ.

"ನೋಡು, ಕೈ ಆ ಕಡೆ ತೆಗೆದುಕೋ, ಬೀದಿಯಲ್ಲಿ ಓಡಾಡುವವರು ನೋಡುತ್ತಾರೆ. ರಿಕ್ಷಾವಾಲಾ ದೃಷ್ಟಿ ಕೂಡ..." ಮುಂದಿನ ಮಾತನ್ನು ಏನೋ ಇಂಗ್ಲೀಷಿನಲ್ಲಿ ಗಿಟ್ ಪಿಟ್ ಎಂದುಕೊಂಡಿದ್ದು ಅವನ ಕಿವಿಗೆ ಬಿತ್ತು.

ರಿಕ್ಷಾವಾಲಾನ ಚಿಂತೆ ಯಾಕೆ ನಿಮಗೆ? ಅಂಧರಾಗುತ್ತಿದ್ದೀರಿ. ಹರಾಮಿಗಳೆಲ್ಲೀವ್ರೋ. ನಿಮ್ಮ ಮಜೆಯಲ್ಲಿ ನೀವು ಇದ್ದೀರಿ. ತಂದೆ ತಾಯಿಗಳ ಕಣ್ಣು ಮರೆಸಿ ಬರೋದು... ನಮಗೆಲ್ಲ ಗೊತ್ತು ನೀವು ಇಲ್ಲಿ ಯಾಕೆ ಬರ್ತೀರಿ ಅಂತ. ದಿನಕ್ಕೆ ಎರಡು ಮೂರು ಸಲ ಆದರೂ ನಿಮ್ಮಂಥವರು ಸಿಗ್ತಾರೆ, ವಿಧಿಯಿಲ್ಲ. ಹುಡುಗಿಯನ್ನು ಎಲ್ಲಿಯೋ ನೋಡಿರು ವುದಾಗಿ ಸುಮೇರಾ ಯೋಚಿಸಿದ. ಆದರೆ ಹುಡುಗ ಇಲ್ಲಿಯವನಲ್ಲ... ಮೆಡಿಕಲ್ ಕಾಲೇಜಿನ ಬಳಿ ಅವನನ್ನು ನೋಡಿರುವುದಾಗಿಯೂ ಜ್ಞಾಪಕ.

"ನಿಜಕ್ಕೂ ಹೊತ್ತಾಗಿಹೋಯಿತು", ಹುಡುಗ ಹೇಳಿದ. "ಆ ಕಡೆ ರಸ್ತೆಯ ಅಂಚಿನಲ್ಲಿ ಒಂದಿಷ್ಟು ಬಿಸಿಲು ಇದೆ ಅಷ್ಟೆ."

"ಹೊತ್ತಾಗಿಹೋಯಿತು ಅಂತ, ಈಗ ಅನ್ನಿಸ್ತಿದೆ ಅಲ್ಲವೆ? ನಾನು ಹೇಳಿದಾಗ 'ಇಷ್ಟು ಬೇಗ? ಇಷ್ಟು ಬೇಗ? – ಇನ್ನೂ ಹೊತ್ತಿದೆ' ಅಂದಿದ್ರಿ", ಎಂದು ಹುಡುಗಿ ಮುನಿದುಕೊಂಡು ಹೇಳಿದಳು.

"ಆಯಿತು, ಈಗ ಈ ಆತುರದಿಂದ ಪ್ರಾಣ ಹೋಗುತ್ತಿದೆ."

"ಮೊತ್ತಗೆ ಹೇಳಬಾರದೆ?" ಹುಡುಗಿ ಹುಡುಗನ ಕೈ ಚಿಗುಟಿದಳು.

"ಹುಂ... ಈಗ ಬೇಗ ಹೋಗಬೇಕು... ಮೊತ್ತಗೆ ಹೇಳಬೇಕು... ಆಗ ಹರಟೆ ಕೊಚ್ಚುತ್ತಾ, ಕುಳಿತಿದ್ದು ಅಂತ ತೋರುತ್ತೆ. ಆಗ ರಿಕ್ಷಾವಾಲಾನ ಯೋಚನೆ ಬಂದಿರ

ಲಾರದು. ರಿಕ್ಷಾ ರಿಕ್ಷಾನೇ, ಅದೇನು ಮೋಟಾರುಕಾರಾಗಲು ಸಾಧ್ಯವೇ? ...ಒಳ್ಳೇದು. ದಿಲ್ಲೀ ಪ್ಯಾಸೆಂಜರ್ ಗಾಡಿ ಬರುತ್ತೇಂತ ಗೇಟ್ ಹಾಕಿರ್ತಾರೆ... ಮನೆಯಲ್ಲಿ ಅಪ್ಪ ಅಮ್ಮ ಕಾಯ್ಕೊಂಡು ಬಿದ್ದಿರ್ತಾರೆ.

"ಹಾಗೇನೂ ಇಲ್ಲ... ಅಂತಹ ಆತುರವಾದರೂ ಏನಿದೆ? ನಿಧಾನವಾಗಿ ಗಾಳಿಸೇವನೆ ಮಾಡ್ತಾ ಹೋದರಾಯಿತು. ದೂರದ ದಾರಿ, ಸುಸ್ತಾಗಿಬಿಡ್ತೀಯೆ."

ಹೌದು, ಹೌದು. ನಿನಗೇನು ಆತುರ ಹೇಳು. ನಿನಗಂತೂ ಸ್ವರ್ಗದಲ್ಲಿರುವಂತೆಯೇ ಇರಬೇಕು, ಮಗನೇ. ಮನೆಗೆ ಹೋದಮೇಲೆ ಶಾಸ್ತಿ ಆಗೋದು ಅವಳಿಗೆ ತಾನೇ? ನಿನಗೇನಾಗಬೇಕು ಹೇಳು. ಯಾರ ಮಗಳನ್ನು ಅಥವಾ ಸೊಸೆಯನ್ನು ಓಡಿಸಿಕೊಂಡು ಬಂದಿದ್ದೀಯೇ! ಈಗ ಅವನಿಗೆ ಹುಡುಗಿಯ ಮೇಲೆ ಕನಿಕರ ಬಂತು. ಆದರೆ ರಿಕ್ಷಾದ ವೇಗವನ್ನು ಅವನು ಕಡಿಮೆ ಮಾಡಿದ.

ಹಿಂದೆ ನಡೆಯುತ್ತಿದ್ದ ಕಿತ್ತಾಟ ಕೇಳಿ ಅವನ ಮನಸ್ಸು ಉದ್ವೇಗದಿಂದ ಕೂಡಿತು. ರಿಕ್ಷಾ ನಿಲ್ಲಿಸಿ ಅವರನ್ನು ಇಳಿಸಿ ಬಿಡಲೇ ಎಂದು ಅವನ ಮನಸ್ಸಿಗೆ ಬಂತು. ನಡೆಯ ಬಾರದ್ದು ನಡೆಯುತ್ತಿದೆ ಮತ್ತು ತಾನು ತಪ್ಪು ಕೆಲಸಕ್ಕೆ ನೆರವಾಗುತ್ತಿರುವುದಾಗಿ ಅವನಿಗೆ ಭಾಸವಾಗುತ್ತಿದೆ. ಅದು ನಡೆಯದಂತೆ ಮಾಡಬೇಕು. ಈ ಹುಡುಗ ನಿಜಕ್ಕೂ ಲುಚ್ಚಾ-ಲಫಂಗ ಇದ್ದಾನೆ. ಹುಡುಗಿಯರು ಯಾವಾಗಲೂ ಹೀಗೇನೆ, ತುಂಬಾ ಸರಳ ಸ್ವಭಾವ ಅವರದು. ನೋಡಿ, ನಿಮ್ಮ ವ್ಯವಹಾರವೆಲ್ಲ ನನಗೆ ಗೊತ್ತಾಗುತ್ತಿದೆ, ಪ್ರತಿಯೊಂದೂ ನನಗೆ ಅರ್ಥವಾಗುತ್ತಿದೆ. ಆದರೂ ಸುಮ್ಮನಿದ್ದೇನೆ—ಎಂದು ಅವರಿಗೆ ಹೇಳಿಬಿಡಲೇ ಎನ್ನುವ ರೀತಿಯಲ್ಲಿ ಮೃದುವಾಗಿ ಪೆಡಲ್ ತುಳಿಯುವುದನ್ನು ನಿಲ್ಲಿಸಿ ಬ್ರೇಕ್ ಹಾಕಿ ಸಾವರಿಸಿಕೊಂಡು ಕುಳಿತು ಯೋಚಿಸಿದ. ಅವನ ಬೆನ್ನಿನ ಒಂದೊಂದು ನರವೂ ಸಿಡಿಯು ತ್ತಿತ್ತು. ಹಿಂದಕ್ಕೆ ತಿರುಗಿ ಒಂದು ಸುತ್ತು ನೋಡಲೇ? ನೋಡೋಣ, ಇಬ್ಬರೂ ಹೇಗೆ ಕುಳಿತಿದ್ದಾರೋ! ತನ್ನ ಕಿವಿಗಳಲ್ಲೇ ಅವನು ತನ್ನ ಕಣ್ಣುಗಳನ್ನು ಜೋಡಿಸಿಕೊಂಡಿದ್ದಂತೆ, ಅವರ ಮಾತುಗಳು ಕಿವಿಗೆ ಬಿದ್ದಹಾಗೆಲ್ಲ ಅವರ ಒಂದೊಂದು ಚಿತ್ರ ಕೂಡ ಅವನ ಕಣ್ಮುಂದೆ ಸುಳಿಯುತ್ತಿತ್ತು. ಈಗ ಇಬ್ಬರೂ ಮೌನವಾಗಿದ್ದಾರೆ. ಈಗ ಹಿಂದಿನಿಂದ ಚೈನಿನ ಕಿರ್ ಕಿರ್ ಶಬ್ದ ಮಾತ್ರ ಕೇಳುತ್ತಿತ್ತು. ಆ ಶಬ್ದ ಈಗ ಅವನ ಕಿವಿಗೆ ಅಭ್ಯಾಸವಾಗಿ ಹೋಗಿದೆ. ಮೊದಮೊದಲು ಅವನು ಅದನ್ನು ಕೇಳಿ ಹಿಂದಿನಿಂದ ಬೇರೆ ಯಾವುದೋ ಸೈಕಲ್ ಬರುತ್ತಿದೆಯೆಂದು ತಿಳಿದು ಬೆಚ್ಚಿಬೀಳುತ್ತಿದ್ದುದೂ ಉಂಟು.

ಅರೆ, ಏನು ನಿಟ್ಟುಸಿರು? ಇಬ್ಬರೂ ಜಗಳ ಆಡಿಕೊಂಡಿಲ್ಲ ತಾನೇ? ಹುಡುಗ ಏನಾ ದರೂ ಅಂದುಬಿಟ್ಟಿರಬೇಕು ಎಂದು ಅವನಿಗೆ ಚಿಂತೆಯಾಗತೊಡಗಿತು. ಸಿನಿಮಾ ನೋಡಿ ನೋಡಿ ಈಗಿನ ಕಾಲದ ಹುಡುಗರಿಗೆ ಅದೇನು ತಲೆಕೆಟ್ಟುಹೋಗುತ್ತದೋ ಏನೋ! ಯಾವ ರೀತಿ ನಡೆದುಕೊಳ್ಳಬೇಕೆಂಬುದೇ ಅವರಿಗೆ ಗೊತ್ತಾಗೋಲ್ಲ. ಹುಡುಗಿಯ ಮನ ಸ್ಸನ್ನು ಗೆಲ್ಲುವುದು ಅಷ್ಟೇನು ಸುಲಭವೇ, ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ಗೆಲ್ಲಬೇಕಾಗುತ್ತದೆ.

ರೈಲಿನ ಗೇಟು ಹಾಕಿದೆಯೆಂದು ದೂರದಿಂದಲೇ ಅವನಿಗೆ ಗೊತ್ತಾಯಿತು: ಹುಡುಗಿಗೆ ಮೊದಲೇ ಹೊತ್ತಾಗಿದೆ, ಈಗ ಇನ್ನಷ್ಟು ಹೊತ್ತಾಗುತ್ತಿದೆ. ಮೇಲೆ ಅದೆಷ್ಟು ಚೆನ್ನಾಗಿ ಮಾತಾಡುತ್ತಿರಲಿ ಅವಳ ಮನಸ್ಸಿನಲ್ಲಿ ಅದೆಷ್ಟು ಗಾಬರಿಯಾಗುತ್ತಿರಬೇಕು!

ಇಷ್ಟು ಹೊತ್ತಿನ ಮೌನ ಮುರಿದು ಹುಡುಗ ಹೇಳಿದ: "ಈ ಬಲಗಡೆ ಕಲ್ಲಿನ ಕುದುರೆ ಇದೆಯಲ್ಲ, ಅದು ಅಮರ್‌ಸಿಂಗ್ ರಾಠೋರನ ಕುದುರೆಯಂತೆ. ಇಂಥದೇ ಒಂದು ಅಲ್ಲಿ ಕೋಟೆಯ ಹತ್ತಿರ ಇದೆ. ಅಲ್ಲಿ ನೆಗೆದು ಇಲ್ಲಿಯವರೆಗೆ ಬಂದು ಇಲ್ಲಿ ಸತ್ತುಹೋಯಿತು; ಹಿಂದಿನಿಂದ ಸೈನ್ಯಗಳು ಬರುತ್ತಿದ್ದುವು...!

"ಹೌದು, ಗೊತ್ತಿದೆ, ನಾನೂ ಒಂದಿಷ್ಟು ಚರಿತ್ರೆ ಓದಿದ್ದೇನೆ" ಎಂದು ಹುಡುಗಿ ಚಟಕ್ಕನೆ ಹೇಳಿದಳು.

ಈಗ ಕೇಳಪ್ಪ... ಇಷ್ಟು ಹೊತ್ತೂ ಮುನಿಸಿಕೊಂಡು ಕುಳಿತಿದ್ದ, ಈಗ ಇದು ಅಮರ ಸಿಂಗ್ ರಾಠೋರನ ಕುದುರೆ ಅಂತ ತೋರಿಸ್ತಾ ಇದ್ದಾನೆ... ಹೌದು, ಇವರ ಅಪ್ಪ ಅಮರ್‌ಸಿಂಗ್ ರಾಠೋರ್...ಎಲ್ಲಾ ತಮಾಷೆ ಹಾಳಾಯಿತು.

ಕುದುರೆ ಯಾರದು ಎಂದು ಸುಮೇರಾಗೂ ಗೊತ್ತಿರಲಿಲ್ಲ. ಅದು ಹುಮಾಯೂನನದು ಎಂದು ಕೆಲವರು ಹೇಳುತ್ತಾರೆ, ಕೆಲವರು ಅಮರಸಿಂಗ್ ರಾಠೋರನದೆಂದು ಹೇಳು ತ್ತಾರೆ.

ದಿಣ್ಣೆಯನ್ನು ಹತ್ತಬೇಕಾಗಿದ್ದುದರಿಂದ ಸುಮೇರಾ ಕೆಳಗಿಳಿದು ರಿಕ್ಷಾವನ್ನು ತಳ್ಳಿ ಕೊಂಡು ಹೋಗುವಾಗ ಅವನ ದೇಹ ಹುಡುಗಿಯ ಸ್ಯಾಂಡಲ್–ಮುಚ್ಚಿದ ಕಾಲಿಗೆ ಆಗಾಗ ತಗಲುತಿತ್ತು. ಅವುಗಳನ್ನು ಕೈಯಿಂದ ಮುಟ್ಟಬೇಕೆಂಬ ಪ್ರಬಲಾಕಾಂಕ್ಷೆಯನ್ನು ಹೇಗೆ ಅದುಮಿಡಲು ಅವನಿಗೆ ಸಾಧ್ಯವಾಗಿತ್ತೋ ಅವನಿಗೇ ಗೊತ್ತು. ಅವರನ್ನು ನೋಡಿ ಅವನಿಗೆ ಅನಿಸಿತು, ಈ ಕರೀಕೊರಮ ಎಲ್ಲಿ, ಅಪ್ಸರೆಯಂತಿರುವ ಅವಳೆಲ್ಲಿ; ಅವಳನ್ನು ಇವನು ಓಡಿಸಿಕೊಂಡು ಬಂದಿದ್ದಾನಲ್ಲ! ಸೆರಗಿನ ಮೇಲೆ ಅವಳ ಕೈ ಆಡುವಾಗ ಅದೆಷ್ಟು ಚೆನ್ನಾಗಿ ಕಾಣುತ್ತವೆ, ಅವಳ ಕೈ ಬೆರಳುಗಳು!

"ನಾವು ಇಳಿದು ಬರೋಣವೇ, ರಿಕ್ಷಾವಾಲಾ?" ಎಂದು ಸೀಟು ಮುಟ್ಟಿ ಇಳಿಯುವ ಸಿದ್ಧತೆಯನ್ನು ಹುಡುಗ ತೋರಿಸುತ್ತಾನೆ.

"ಇಲ್ಲ, ಬೇಡಿ ಸಾಬ್, ಇದೇನು ಮಹಾ ಅಂತಹ ದಿಣ್ಣೆಯೇನೂ ಅಲ್ಲ." ಈಗ ಮತ್ತೆ ಸುಮೇರಾ ಅವರಿಬ್ಬರ ಕಡೆಗೂ ಒಮ್ಮೆ ನೋಡಿದ. ಇಬ್ಬರೂ ಮುನಿದುಕೊಂಡಿದ್ದುದು ಸ್ಪಷ್ಟವಾಗಿತ್ತು. ಏಕೆ, ಏನಾಯಿತು?

"ಮುಗಿಯಿತು ಇವೊತ್ತಿನ ಕಥೆ. ಈಗ ಈ ಗೇಟು ಯಾವಾಗ ತೆಗೀತಾನೋ ಗೊತ್ತಿಲ್ಲ," ಹತಾಶನಾಗಿ ಹುಡುಗ ಹೇಳಿದ, "ಇವೊತ್ತು ಎಲ್ಲರೂ ನಮ್ಮ ಮೇಲೆ ಮುನಿಸಿಕೊಂಡಿರೋ ಹಂಗೆ ಕಾಣುತ್ತೆ."

ಗೇಟು ನಿನಗೆ ಈಗ ಕಾಣತಲ್ಲವೇ? ಮುನಿಸಿಕೊಳ್ಳದೆ ಇನ್ನೇನು ಮಾಡಬೇಕು.

"ನೋಡಮ್ಮಾ, ನೀನು ಹೇಳೋದು ಸರಿಯಲ್ಲ. ಹೀಗೆಯೇ ಕೋಪಿಸಿಕೊಳ್ತಾ ಇದ್ರೆ... ನಾವು ಜಗಳಾನೇ ಆಡ್ತಾ ಇರಬೇಕಾಗುತ್ತೆ. ಈ ನಿನ್ನ ನಡೆವಳಿಕೇನೆ ನನಗೆ ಹಿಡಿಸೋಲ್ಲ..."

"ನಿಮ್ಮ ನಡೆವಳಿಕೆಯೇನು ಬಹಳ ಚೆನ್ನಾಗಿದೆಯೇನೊ!"

ಸುಮೇರಾ ತನ್ನ ಕೈಯಿಂದ ರಿಕ್ಷಾವನ್ನು ಹಿಡಿದು ನಿಲ್ಲಿಸುತ್ತಾ ಹಿಂದಿನ ಚಕ್ರಗಳ ಕೆಳಗೆ ಎರಡು ಇಟ್ಟಿಗೆ ಜೋಡಿಸಹೋದಾಗ ಹುಡುಗಿಯ ತುಂಬು ಧ್ವನಿ ಕೇಳಿಸಿತು: "ಅರೇ ರಿಕ್ಷಾವಾಲಾ, ಸ್ವಲ್ಪ ವಿಚಾರಿಸಿ ನೋಡಪ್ಪ, ಗಾಡಿ ಬರಲು ಇನ್ನೂ ಎಷ್ಟೊತ್ತಾಗುತ್ತೆ ಅಂತ. ಬಹಳ ಹೊತ್ತಾಗೋದಾದರೆ ಆ ಕಡೆಗೆ ಹೋಗಿ ಬೇರೆ ರಿಕ್ಷಾನಾದರೂ ತಗೋ ಬಹುದು."

ಅವಳ ಧ್ವನಿಯಲ್ಲಿ ಇದ್ದ ನಿರಾಸಕ್ತಿಯ ಭಾವವನ್ನು ಗಮನಿಸಿದ ಸುಮೇರಾ ಎಲ್ಲ ತಪ್ಪು ಹುಡುಗನದೇ ಎಂದು ನಿರ್ಧರಿಸಿದ. ಮತ್ತು ಹುಡುಗಿಯ ಬಗ್ಗೆ ಅವನಿಗೆ ಎಲ್ಲಿಲ್ಲದ ಕರುಣೆ ಬಂತು. ಅಲ್ಲಿಯೇ ಹ್ಯಾಂಡಲ್ ಬಳಿ ನಿಂತು ಬೆಲ್ ಬಿಚ್ಚಿ ಅದನ್ನು ಸರಿಮಾಡ ಬೇಕು ಎಂದು ಮೊದಲು ಅಂದುಕೊಂಡಿದ್ದ ಅವನು ಈಗ "ಈಗ್ಲೆ ಬರ್ತಿರಬಹುದು ಸಾಬ್, ಸಿಗ್ನಲ್ ಬಿದ್ದಿದೆ" ಎಂದು ಹೇಳಿ ಗೇಟಿನ ಬಳಿಗೆ ಹೋಗಿ ನಿಂತುಕೊಂಡ. ಒಂದು ಟ್ರಕ್, ಒಂದು ಟಾಂಗಾ, ಎರಡು ಕಾರ್ ಮತ್ತು ಒಂದೆರಡು ರಿಕ್ಷಾಗಳು ಲೈನಿನಲ್ಲಿ ನಿಂತಿದ್ದುವು. ನೀಲಿ ಬಣ್ಣದ ಸಮವಸ್ತ್ರ ಧರಿಸಿ ಕಂಕುಳಲ್ಲಿ ಹಸಿರು ಮತ್ತು ಕೆಂಪು ಬಾವುಟ ಗಳನ್ನು ಸಿಕ್ಕಿಸಿಕೊಂಡಿದ್ದ ಗೇಟಿನ ಜವಾನನಿಗೆ ಹೇಳಿದ: "ಏ, ಪಂಡಿತ್, ಒಂದು ಬೀಡಿ ಕೊಡು ಈ ಕಡೆ."

ಪ್ರತಿ ದಿನವೂ ಇದೇ ದಾರಿಯಾಗಿ ಹೋಗಬೇಕು. ಗೇಟಿನ ಜವಾನ ಇದರಿಂದಾಗಿ ಅವನ ಸ್ನೇಹಿತನಾಗಿದ್ದ. "ಹಾಂ, ಹಾಂ ನಿನ್ನಪ್ಪ ಕೊಟ್ಟು ಮಡಗವ್ನೆ," ಎಂಬಿವೇ ಮೊದಲಾದ ಒಂದೆರಡು ಹುಡುಗಾಟದ ಮಾತುಗಳ ನಂತರ ಇಬ್ಬರೂ ಕಲೆತು ನಿಂತರು ಮತ್ತು ಅದೂ ಇದೂ ಮಾತನಾಡತೊಡಗಿದರು. ಸುಮೇರಾ ಬೀಡಿಯ ಹೊಗೆಯನ್ನು ವಿಚಿತ್ರ ರೀತಿಯಲ್ಲಿ ಎಳೆಯುತ್ತಾ ಮನಸ್ಸಿನೊಳಗಿನ ದುಗುಡವನ್ನು ಹಾಗೆಯೇ ಅದು ಮಲು ಪ್ರಯತ್ನಿಸುತ್ತಿದ್ದ. ಯಾವುದೋ ಒಂದು ವಿಶೇಷ ಪ್ರಸಂಗ ನಡೆಯುತ್ತಿದೆ ಮತ್ತು ತಾನು ಅದರಲ್ಲಿ ಭಾಗಿ ಎಂದು ಯಾರಲ್ಲಿ ಹೇಳಿಕೊಳ್ಳಬೇಕು? ಗೇಟಿನವನೂ ಹಾಗೆಯೇ ಕೇಳಿದ: "ಎಲ್ಲಿಯ ಸವಾರಿ? ತುಂಬಾ ಚೆನ್ನಾಗಿದೆ." ಈಗ ಸುಮೇರಾ ಹೊಗೆಯ ಜೊತೆಗೆ ತನ್ನ ನಗುವನ್ನೂ ಬೆರೆಸಿ ಹೇಳಿದ: "ಅರೇ, ಪಂಡಿತ, ನಮ್ಮ ಕೆಲ್ಸಾನೇ ಹೀಗೆ ಅನ್ನೋದ್ ಗೊತ್ತಿಲ್ಲವೇನು ನಿನಗೆ? ಇದರಲ್ಲಿ ಹೊಸದೇನಿದೆ? ದೂರ ನಿಂತೇ ನಾವು ಈ ಲೋಕದ ತಮಾಷೆ ನೋಡ್ತಿರ್ತೇವೆ." ಇಷ್ಟು ಹೇಳಿದ ನಂತರ ನಿಧಾನವಾಗಿ ಮೆಲು ದನಿಯಲ್ಲಿ ಹೇಳಿದ: ಏನ್ ಹೇಳ್ತಿ, ಈಗ ಬೇಕಾದರೆ ನೆಟ್ಟಗೆ ಪೊಲೀಸು ಸ್ಟೇಷನ್ನಿಗೆ ಕರೆದುಕೊಂಡು ಹೋಗಬಲ್ಲೆ. ಇವರು ಮಿಯಾ-ಬೀಬಿಯೇನೂ ಅಲ್ಲ."

"ಹುಷಾರಾಗಿರೋಲೇ, ನಿನ್ನ ಭೂತ ಬಿಡಿಸ್ತಾರು ಆಮೇಲೆ, ನಿನ್ನ ಮರ್ಯಾದೆ ಕಳ್ಕೊಂಡೀಯೆ. ಈಗಿನ ಕಾಲದ ಗಂಡ-ಹೆಂಡ್ತಿ ಸಹವಾಸ ನಿನಗೆ ಗೊತ್ತಿಲ್ಲ. ನೆಂಟರಿಷ್ಟರೇ ಅವರ ಲೆಕ್ಕಕ್ಕಿರೋಲ್ಲ. ಮಗನೇ, ನಿನ್ನ ಪಾಡಿಗೆ ನೀನು ರಿಕ್ಷಾ ಎಳೀತಿರು, ಈ ಲೋಕ ಯಾವ್ಕಡೆ ಹೋಗ್ತಾ ಇದೆ ಅನ್ನೋದನ್ನ ನೋಡ್ತಾ ಇರು, ಅಷ್ಟೆ." ರೈಲು ಬರುತ್ತಿದ್ದ ಸಪ್ಪಳದಿಂದಾಗಿ ಮಾತು ಅಷ್ಟಕ್ಕೇ ನಿಲ್ಲಬೇಕಾಯಿತು. ಝುಕ್ ಝುಕ್ ಎಂದುಕೊಂಡು ಗೇಟಿನ ಕಂಭಗಳನ್ನು ನಡುಗಿಸುತ್ತಾ ರೈಲು ಗೇಟನ್ನು ದಾಟಿಕೊಂಡು ಮುಂದೆ ಹೋದ ಮೇಲೆ ಸುಮೇರಾ ಜೋಲುಮುಖ ಹಾಕಿಕೊಂಡು ತನ್ನ ರಿಕ್ಷಾದ ಕಡೆಗೆ ಹಿಂದಿರುಗಿದ.

ಈ ಮಧ್ಯೆ ಇಬ್ಬರೂ ರಾಜಿಯಾಗಿರಬೇಕು. ಹುಡುಗಿಯ ಮುಖಭಾವ ಈಗ ಗೆಲುವಿನಿಂದ ಕೂಡಿತ್ತು. ಇದನ್ನು ನೋಡಿ ಸುಮೇರಾ ಮನಸ್ಸಿಗೆ ಹಿತವೆನಿಸಿತು. ಮತ್ತೆ ಅವನಿಗೆ ಅವಳನ್ನೇ ನೋಡುತ್ತಿರಬೇಕೆಂದು ಮನಸ್ಸಾಯಿತು.

"ಈ ರೈಲಿನಲ್ಲೇ ನಿಮ್ಮ ತಂದೆ ಹಿಂದಿರುಗುತ್ತಿದ್ದರೆ?"

ಸುಮೇರಾ ಹ್ಯಾಂಡಲ್ ಹಿಡಿಯಲುದ್ಯುಕ್ತನಾಗುತ್ತಿದ್ದಾಗ ಅವನ ಕಿವಿಗೆ ಹುಡುಗನ ಹುಡುಗಾಟಿಕೆ-ಧ್ವನಿ ಕೇಳಿಸಿತು:

"ಹೋಗಿ ನಿಮ್ಮಮ್ಮನನ್ನು ಕೇಳಿದಾಗ ಗೊತ್ತಾಗುತ್ತೆ ಅವರ ಪ್ರೀತಿಯ ಮಗಳು ಮಿನಾ ಮನೆಗೆ ಹೋಗಿದ್ದಾಳೆ ಅಂತ."

"ಹೊತ್ತಾಗಿಯೋಯಿತು ಅಂತ ಅವಳ ಅಣ್ಣ ಬಿಡಲು ಬಂದಿದ್ದರು ಅಂತ ಹೇಳ್ಬಿಡ್ತೇನೆ."

"ಅವರು ಸಿಕಂದರಾ ಬಳಿ ಇದ್ದರು, ಅಂತಾನೂ ಹೇಳ್ತೀ ಅಲ್ಲ? ಮಿನಾಳ ಅಣ್ಣ ಔಷಧಿಗಳ ಮಾರಾಟದ ಏಜೆಂಟ್, ಬೊಂಬಾಯಿಯಲ್ಲಿದ್ದಾನೆ, ದೆಹಲಿಗೆ ಬಂದಿದ್ದ ಎಂದು ಅವರಿಗೆ ಹೇಗೆ ಗೊತ್ತಾದೀತು, ಅಲ್ಲವೇ?" ಇಬ್ಬರೂ ಮಧ್ಯೆಯೇ ಜೋರಾಗಿ ನಗತೊಡಗಿದರು. ಕತ್ತಲಾಗತೊಡಗಿತ್ತು.

"ನಾವು ರಿಕ್ಷಾ ಹತ್ತಿದಾಗ ಅವನು ನನ್ನ ಕಡೆ ನೋಡಿದ ರೀತಿ ನೋಡಿ, ಎಲ್ಲಿ ಇವನಿಗೆ ಪರಿಚಯ ಇದೆಯೋ ಎಂದು ಗಾಬರಿಯಾಗಿದ್ದೆ..." ಎಂದು ಹುಡುಗಿ ಹೇಳುವಾಗ ಅವಳ ಧ್ವನಿಯಲ್ಲಿ ಭಾವುಕತೆ ಇತ್ತು.

ಅದನ್ನು ಕೇಳಿ ಸುಮೇರಾ ಸುಸ್ತಾಗಿ ಹೋದ. ಅಲ್ಲಾ, ಇವಳ, ತುಂಬಾ ಚಾಲಾಕಿದ್ದಾಳೆ ಹುಡುಗಿ, ಅವನಿಗೆ ಈಗ ರಾಮದೇಯಿ ಮತ್ತು ಮುಂಗಿ ಅವರ ನೆನಪು ಬಂತು. ಈ ಜನ ನೋಡುವುದಕ್ಕೆ ತುಂಬಾ ಸೀದಾ-ಸಾದಾ ಕಾಣುತ್ತಾರೆ. ಮತ್ತೆ ಅವನಿಗೆ ಹುಡುಗಿಯ ವಿಚಾರದಲ್ಲಿ ಅನುಕಂಪ. ಬೊಂಬಾಯಿಯ ಹುಡುಗ ಪಾಪ ಏನೂ ತಿಳಿಯದ ಈ ಹುಡುಗಿಯನ್ನು ತನ್ನ ಬಲೆಗೆ ಹಾಕಿಕೊಂಡಿದ್ದಾನೆ. ಪುಸಲಾಯಿಸಿ ಕರ್ಕೊಂಡ್ ಬಂದಿದಾನೆ. ಇವ ನೋಡುವುದಕ್ಕೂ ಬೊಂಬಾಯಿಯ ಗುಂಡಾ ಹಂಗೇ ಕಾಣ್ತಿದಾನೆ. ಬೊಂಬಾಯಿಯಲ್ಲಿ ತಾನು ನೋಡಿರುವ ಸಿನಿಮಾ ಕಥೆಗಳ ಹಲವು ದೃಶ್ಯಗಳು ಅವನ ಕಣ್ಮುಂದೆ ಬಂದುವು. ಸಿನಿಮಾ ಕಥೆಗಳಲ್ಲಿ ತಾನು ಕಂಡಿರುವ ಬದಮಾಷರ ನಾಯಕ

ರಾಮಸಿಂಗನ ಮುಖಭಾವದಂತೆಯೇ ಇತ್ತು, ಈ ಹುಡುಗನ ಮುಖಭಾವ ಕೂಡ. ಉದ್ದನೆಯ ಇಳಿಜಾರು ರಸ್ತೆಯಲ್ಲಿ ರಿಕ್ಷಾದ ಚಕ್ರಗಳು ಉರುಳುತ್ತಿದ್ದಂತೆ ಹಿಂದೆ ಚೈನಿನ 'ಕಿರ್ ಕಿರ್' ಶಬ್ದ ಮತ್ತೆ ಕೇಳುತ್ತಿತ್ತು. ಅವನು ತನ್ನ ಒಂದು ಕಾಲನ್ನು ಹಾಯಾಗಿ ಫ್ರೇಮಿನ ಮೇಲೆ ಎತ್ತಿಟ್ಟುಕೊಂಡು ಹಾಯಾಗಿ ಕುಳಿತಿದ್ದ. ಹರಾಮಿ ರಾಮದೇಯಿ.

ಪ್-ಚು!

ರಿಕ್ಷಾದ ಬ್ರೇಕುಗಳು ಖಟಕ್ಕನೆ ಬಿದ್ದುವು. ಥುತ್, ಹಾಳಾದ್ದು. ಇದು ರಿಕ್ಷಾನೋ, ಅಥವಾ ಇವರ ಚೆಲ್ಲಾಟಕ್ಕೆ ಸ್ಥಳವೋ! ಅವನು ಲೊಚ್ ಎಂದು ಮುತ್ತಿಟ್ಟಾಗ ಹುಡುಗಿ ಫಟೀರನೆ ಕಪಾಳಕ್ಕೆ ಹೊಡೆಯಬಾರದೆ ಎಂದು ಅವನಿಗೆ ವ್ಯಥೆಯಾಯಿತು.

"ಏಕೆ, ಏನಾಯಿತು?" ರಿಕ್ಷಾ ನಿಂತುದನ್ನು ನೋಡಿ ಇಬ್ಬರೂ ಅವಾಕ್ಕಾದರು. ಬಿಳಿ ಹುಡುಗಿಯ ಮುಖ ಈಗ ಕೆಂಪಾಗಿರಬೇಕು, ಅದು ಹೇಗಿರಬಹುದೆಂದು ಸುಮೇರಾ ಈಗ ಕಲ್ಪಿಸಿಕೊಳ್ಳುತ್ತಿದ್ದ. ಆದರೆ ನೇರವಾಗಿ ಅವಳ ಮುಖ ನೋಡುವ ಧೈರ್ಯ ಇಲ್ಲ.

"ಮುಂದೆ ಚೌಕ ಬರುತ್ತೆ ಸಾಬ್, ಸ್ವಲ್ಪ ದೀಪ ಹಚ್ಚಿಸಿಕೊಳ್ತೇನೆ," ಏನು ಹೇಳಬೇಕೆಂದು ತೋಚದೆ ಪೆಡಲನ್ನು ಹಿಂದಕ್ಕೆ ತಿರುಗಿಸುತ್ತಾ ಹಾಗೆ ಹೇಳಿದ. ಹಿಂದಿನಿಂದ ಬರುತ್ತಿದ್ದ ರಿಕ್ಷಾಗಳು ಹಾಗೂ ಕಾರುಗಳು ಮುಂದೆ ಹಾದು ಹೋದುವು. ಇನ್ನೂ ದೀಪ ಹಚ್ಚುವಷ್ಟು ಕತ್ತಲಾಗಿರಲಿಲ್ಲ. ಆದರೂ ಖಡ್-ಖಡ್ ಶಬ್ದ ಮಾಡುತ್ತಾ ಖಾಲಿ ಹೋಗುತ್ತಿದ್ದ ಒಂದು ರಿಕ್ಷಾ ನಿಲ್ಲಿಸಿ ಅವನಿಂದ ಒಂದು ಬೆಂಕಿಕಡ್ಡಿ ತೆಗೆದುಕೊಂಡು ದೀಪ ಹಚ್ಚಿಕೊಂಡ. "ನೆಟ್ಟಗೆ ತೆಗೆದುಕೊಂಡು ಹೋಗಿ ಪೊಲೀಸು ಸ್ಟೇಷನ್ ಎದುರು ನಿಲ್ಲಿಸಿಬಿಡಲೇ, ತುಂಬಾ ಮಜಾ ಇರುತ್ತೆ, ಎಲ್ಲಾ ಬೀದಿಗೆ ಬರುತ್ತೆ."

"ಅಚ್ಛಾ, ಸಾಕಿನ್ನು ತಮಾಷೆ. ಈಗ ನಾವು ಗಂಭೀರವಾಗಿ ಪ್ರತಿಯೊಂದು ವಿಚಾರವನ್ನೂ ತೀರ್ಮಾನ ಮಾಡಬೇಕು. ತೀರ್ಮಾನ ಎಂದು ಗೊತ್ತಾದ ಮೇಲೆ ನಾನೂ ಎಲ್ಲಾ ಸಿದ್ಧತೆ ಮಾಡಿಕೊಳ್ಳಬೇಕು," ರಿಕ್ಷಾ ಮತ್ತೆ ಹೊರಟಾಗ ಹುಡುಗ ಧ್ವನಿ ಬದಲಾಯಿಸಿ ತುಂಬಾ ಗಂಭೀರವಾಗಿ ಹೇಳಿದ. ಸ್ವಲ್ಪ ಹೊತ್ತು ಉತ್ತರ ನಿರೀಕ್ಷಿಸುತ್ತಾ ಕುಳಿತನಂತರ ಮತ್ತೆ ಹೇಳಿದ: "ಪರೀಕ್ಷೆ ಮುಗಿದಕೂಡಲೇ ನನಗೆ ನೀನು ಬರೆಯಬೇಕು. ಅಷ್ಟು ಹೊತ್ತಿಗೆ ನನ್ನನ್ನು ಬೊಂಬಾಯಿಯಲ್ಲಿ ಇಡುತ್ತಾರೋ, ದೆಹಲಿಯಲ್ಲಿ ಇಡುತ್ತಾರೋ ಅನ್ನೋದು ಗೊತ್ತಾಗುತ್ತೆ. ಮನೆ-ಗಿನೆಯೆಲ್ಲ ಗೊತ್ಮಾಡ್ತೇನೆ. ನಿಮ್ಮ ತಂದೆಯವರಿಗೂ ಹೇಳಿಬಿಡು."

"ಇಲ್ಲಪ್ಪಾ – ಅದಾಗೋಲ್ಲ. ನೀನೇ ಅವರಿಗೆ ಬರೆಯಬೇಕು, ನನ್ನಿಂದಾಗೋಲ್ಲ ಅವರಿಗೆ ಹೇಳೋಕೆ."

"ನೋಡು ಇದೇ ಬೇಡ ಅನ್ನೋದು. ನನ್ನ ಕೆಲಸ ನಾನು ಮಾಡ್ತೇನೆ, ನಿನ್ನ ಕೆಲಸ ನೀನು ಮಾಡು," ಆಜ್ಞೆ ಕೊಡುವ ರೀತಿಯಲ್ಲಿ ಹುಡುಗ ಈ ಸಲ ಹೇಳಿದುದನ್ನು ಕೇಳಿ ಸುಮೇರಾಗೆ ಒಪ್ಪಿಗೆಯಾಯಿತು. ಇದು ಗಂಡಸು ಆಡತಕ್ಕ ಮಾತು.

ಹುಡುಗ ಮುಂದೆ ಹೇಳಿದ: "ನಾನು ಹೇಳೋದು ಕೇಳೋದಾದರೆ ಯಾರಿಗೂ ಹೇಳೋದೂ ಬೇಡ. ಬಿಡೋದೂ ಬೇಡ. ನಮ್ಮಷ್ಟಕ್ಕೆ ನಾವು ಸಿವಿಲ್ ಮ್ಯಾರೇಜ್ ಮಾಡಿಕೊಂಡರೆ ಆಯಿತು. ಮುಂದೆ ಎಲ್ಲ ಸರಿಹೋಗುತ್ತೆ."

ವಾಹ್, ಇವನು ನಿಜಕ್ಕೂ ಬಹಳ ಘಾಟಿ ಇದ್ದಾನೆ. ರುಸ್ತುಂ. ಚರ್ಚಿಗೆ ಹೋಗಿ ಮದುವೆ ಮಾಡಿಕೊಳ್ಳೋದು ಅಂತಿದಾನೆ.

"ಇಲ್ಲ" ಹುಡುಗಿಯೂ ದೃಢ ಸ್ವರದಲ್ಲಿ ಹೇಳಿದಳು. ಸ್ವಲ್ಪ ಹೊತ್ತು ಇಬ್ಬರೂ ಸುಮ್ಮನಿದ್ದರು. ಪರೀಕ್ಷೆ ಇನ್ನೂ ಬಹಳ ದಿನ ಇದೆ. ಅಲ್ಲಿಯ ವರೆಗೆ ಇರುವುದು ಹೇಗೆ? ನನ್ನ ಮನಸ್ಸಿಗೆ ಏಕೋ ತುಂಬಾ ಗಾಬರಿಯಾಗ್ತಾ ಇದೆ. ಏನಾಗುತ್ತದೋ ಏನೋ!... ಒಂದು ಮಾತು...

ಹಾಯ್ ಹಾಯ್, ಎಲ್ಲಾ ಹಾಳುಮಾಡಿಬಿಟ್ಟಳು. ಇವಳೇನು ಹುಡುಗಿಯೋ ಅಥವಾ ಮೇಣದ ಬೊಂಬೇನೊ! ಇಷ್ಟು ಹೊತ್ತು ಎಷ್ಟು ಉತ್ಸಾಹದಿಂದ ಇದ್ದಳು ಈಗ ಹೀಗೆ ಸುಸ್ತಾಗಿಬಿಟ್ಟಳು.

"ಇನ್ನಿರಲು ನನ್ನಿಂದಾಗೊಲ್ಲ. ಖಂಡಿತ. ನಿನ್ನ ಕಾಗದ ಬಂದಾಗಿನಿಂದ ನಾನು ಹುಚ್ಚಿಯಾಗಿ ಹೋಗಿದ್ದೆ – ಏನೊಂದೂ ಮಾಡಲಾಗಲಿಲ್ಲ. ನಾಲ್ಕು ಗಂಟೆಯಾದರೆ ಸಾಕು. ಮಧ್ಯಾಹ್ನ ಕಳೆದರೆ ಸಾಕು ಎನಿಸಿಹೋಗಿತ್ತು. ಗಡಿಯಾರದ ಮೇಲೆ ಅದೆಷ್ಟು ರೇಗು ಬಂದಿತ್ತೋ ಏನೋ ಹೇಳಲಾರೆ. ಎಲ್ಲ ಹುಡುಗೀರೂ ತಮಾಷೆ ಮಾಡ್ತಾ ಇದ್ರು. ಏನಾದ್ರೂ ಆಕ್ಕೊಳ್ಳಿ, ನಾನು ಪರೀಕ್ಷೆಗೂ ಕೂರೊಲ್ಲ. ಪರೀಕ್ಷೆಗೆ ಕೂತು ಫೇಲಾಗಿ ಎಲ್ಲರೂ ಮಾತಾಡೋದಕ್ಕೆ ಏಕೆ ಅವಕಾಶ ಕೊಡಲಿ, ಬೇಡವೇ ಬೇಡ."

ಸುಮೇರಾ ಮನಸ್ಸಿನಲ್ಲಿ ತಾನೊಂದು ನಾಟಕ ನೋಡುತ್ತಿರುವಷ್ಟೇ ತನ್ಮಯನಾಗಿದ್ದವನು ಮನಸ್ಸಿನಲ್ಲೇ ಅಂದುಕೊಂಡ: "ಇಗೋ, ಇದು ಬೊಂಬಾಯಿಯ ಒಂದು ಸಿನಿಮಾದಂತೆಯೇ ಆಗಿಹೋಯಿತು. ಈಗೊಂದು ಹಾಡು ಬರಬೇಕು. ಅಷ್ಟೆ.

"ಅರೇ – ಅರೇ, ಇದೆಂಥ ಮೂರ್ಖತನ ಉಮ್ಮಿ. ಹೀಗ್ಯಾಕೆ ಅಳ್ತಿದೀ. ಬೀದಿಯಲ್ಲಿ ಹೀಗೆ ಅಳ್ತೀಯಲ್ಲ. ಯಾರಾದರೂ ನೋಡಿಕೊಂಡರೆ?... ಅಳಬೇಡ. ಛೇ. ನೋಡು ದೇವರಾಣೆ."

ಟ್ರಿನ್, ಟ್ರಿನ್. ಎಡಗಡೆಗೆ ತಿರುಗುವುದರ ಸಲುವಾಗಿ ಕೈ ತೋರಿಸುತ್ತಾ ಹಿಂದೆ ಯಾವುದಾದರೂ 'ಸವಾರಿ' ಬರುತ್ತಿದೆಯೋ ಎಂದು ನೋಡುವ ನೆಪದಲ್ಲಿ ಹಾಗೆಯೇ ತನ್ನ ಕಣ್ಣಿನ ಅಂಚಿನಿಂದ ಒಂದು ಬಾರಿ ನೋಡಿದ. ಹುಡುಗಿಯ ತಲೆ ನಿಜಕ್ಕೂ ಹುಡುಗನ ಹೆಗಲ ಮೇಲೆ ವಾಲಿತ್ತು. ಅವನು ಕರ್ಚೀಫಿನಿಂದ ಅವಳ ಕಣ್ಣೀರನ್ನು ಒರೆಸುತ್ತಾ ಸಮಾಧಾನ ಹೇಳುತ್ತಿದ್ದ. ಕತ್ತಲೆ ಹಾಗೂ ಹೋಗುವ ಆತುರದಲ್ಲಿ ಅವನಿಗೆ ಮತ್ತೇನೂ ಕಾಣಲಿಲ್ಲ. ಸಿನಿಮಾ ಮುಗಿಯಿತು. ಕಥೆ ಜೋರಾಗಿತ್ತು. ಬಲೆಗೆ ಬಿದ್ದುಹೋದ, ಅಂತೂ. ಅವಳು ತನ್ನ ಮಾಟಗಾತಿತನ ತೋರಿಸಿ ಗೆದ್ದಿದ್ದಳು. ನಾಳೆ ಇನ್ನಾರ ಪಕ್ಕದಲ್ಲಿ ಹೀಗೆ

ಕೂತು ಅಳುತ್ತಾಳೋ ಏನೋ! ...ಮತ್ತೆ ಅವನಿಗೆ ರಾಮದೇಯಿಯ ನೆನಪು ಬಂದು ಮನಸ್ಸು ಕಸಿವಿಸಿಯಾಯಿತು. ಮೂರ್ಖ ಎಲ್ಲೀದೋ, ಶುದ್ಧ ಮೂರ್ಖ. ಅವಳು ಹೇಳಿದ್ದನ್ನೆಲ್ಲ ಹದಿನಾರಾಣೆ ಸತ್ಯ ಅಂತ ತಿಳ್ಕೊಂಡಿದಾನೆ. ಅಯ್ಯೋ ಬೆಪ್ಪೆ, ಒಂದು ಲತ್ತ ಕೊಟ್ಟು ಮನೆಗೆ ಹೋಗಬಾರದೇನೋ? ಅನ್ಯಾಯವಾಗಿ ಅವಳ ಬಲೆಗೆ ಸಿಕ್ಕೊಳ್ಳಿದ್ದೀಯೆ.

"ಸ್ವಲ್ಪ ಪಕ್ಕದ ಬೀದಿ ಕಡೆ ತಿರುಗಿಸಿಕೋ," ಹುಡುಗ ರೈಲಿನ ಸೇತುವೆ ಮೇಲೆ ಬರುತ್ತಿದ್ದಾಗ ಹೇಳಿದ.

ಯಾವ ಕಡೆ ಬೇಕಾದರೂ ತಿರುಗಿಸುತ್ತೇನೆ, ಇವೊತ್ತು ನಿನ್ನಿಂದ ಎರಡು ರೂಪಾಯಿ ದಕ್ಕಿಸಿಕೊಂಡರೆ ಸಾಕು.

"ನೋಡು, ಉಮ್ಮಿ, ಸುಮ್ಮನೆ ಗಾಬರಿಯಾಗಬೇಡ. ಎಲ್ಲ ಸರಿಹೋಗುತ್ತೆ. ನೋಡು, ನಾನು ಹೋಗಿ ತಲಪುವ ಮೊದಲೇ ನಿನ್ನ ಕಾಗದ ತಲಪಿರಬೇಕು—ಹುಂ?"

ಮೃದುವಾಗಿ ಅವಳ ಕೆನ್ನೆ ತಟ್ಟುತ್ತಿರುವ ಶಬ್ದ. "ನೋಡು ಆ ಕಾಡಿನಲ್ಲಿ ನಿನ್ನ ಪ್ರಿಯವಾದ ಆ ಕಾಗದಗಳಿಂದಾಗಿ ನಾನು ಬದುಕಿದ್ದೇನೆ ಎಂದು ತಿಳಿ. ಇಲ್ಲವಾದರೆ ಈ ಔಷಧಿಗಳಿಂದ..."

"ನೀವೇ ತಡವಾಗಿ ಕಾಗದ ಬರೆಯೋದು, ಕಾದು ಕಾದು ಸಾಕಾಗುತ್ತೆ. ನೋಡಿ, ಒಂದು ಮಾತ್ನು ನಾನು ಪರೀಕ್ಷೆಯಲ್ಲಿ ಪಾಸ್ ಮಾಡಬೇಕು ಎಂದು ನಿಮಗೆ ಇಷ್ಟವಿದ್ದರೆ ತಪ್ಪದೆ ಮರು ಟಪ್ಪಾಲಿಗೇ ಒಂದೊಂದು ಕಾಗದ ಹಾಕಿಬಿಡಿ. ಇಲ್ಲವಾದರೆ, ಆಮೇಲೆ ನನ್ನನ್ನು ಆಕ್ಷೇಪಿಸಬೇಡಿ... ನಾನು ಇಲ್ಲಿ ಮೀನಾ ಮನೆಗೆ ಹೋಗಿ ಕಾಗದ ಬಂತೇ ಎಂದು ಕೇಳಿದಾಗ ಅವಳು ಬರಲಿಲ್ಲ ಎಂದರೆ ಎಷ್ಟು ಕೋಪ ಬರುತ್ತೇ ಗೊತ್ತೇ, ಇನ್ನುಮೇಲೆ ಇವರಿಗೆ ಕಾಗದ ಬರೆಯೋದೇ ಬೇಡ ಅನ್ನಿಸಿಬಿಡುತ್ತೆ."

ಹೀಗೆ ತನ್ನ ಜೊತೆಗೂ ಯಾರಾದರೂ ಮಾತಾಡುವ ಹಾಗಿದ್ದರೆ? ಸುಮೇರಾನ ಮನಸ್ಸಿನಲ್ಲಿ ಕೊರಗು ಕಾಣಿಸಿಕೊಂಡಿತು. ಪ್ರಬಲವಾದ ಬಯಕೆಯೊಂದು ಮೂಡಿ ಬಂದಂತಾಯಿತು... ನನಗೂ ಇಂಥದು ಬೇಕು... ಆದರೆ ಏನು ಬೇಕು ಎಂದು ಖಚಿತವಾಗಿ ಅವನು ಹೇಳುವಂತಿರಲಿಲ್ಲ. ಆದರೆ ತಾಯಿಯ ಮೇಲೆಯೇ ತನ್ನ ಕಾಮುಕ ದೃಷ್ಟಿ ಹಾಕುವುದು ಮತ್ತು ಕತ್ತಿನ ಸರವನ್ನು ಲಪಟಾಯಿಸುವುದು—ಇವೆರಡೂ ದೊಡ್ಡ ಅಪರಾಧಗಳು, ಈ ಎರಡು ಅಪರಾಧಗಳೂ ಒಮ್ಮೆಲೆ ಚಕ್ರದ ಕೀಲಿನಂತೆ ಕರ್ ಕರ್ ಎನ್ನತೊಡಗಿದುವು.

"ಹಾಂ, ಈ ಮನೆ ಬಾಗಿಲಿನ ಎದುರು ನಿಲ್ಲಿಸಿಕೋ", ಎಂದು ಹೇಳಿ ಹುಡುಗಿ ರಿಕ್ಷಾ ಸಂಪೂರ್ಣವಾಗಿ ನಿಲ್ಲುವ ಮೊದಲೇ ಅದರಿಂದ ಧುಮುಕಿ ನಿಂತಳು. ಚೈನಿನ ಕಿರ್ ಕಿರ್ ಶಬ್ದ ಕೂಡ ನಿಂತುಹೋಯಿತು.

"ಅಚ್ಛಾ, ನೀವೀಗ ಇಳಿಯುವುದು ಬೇಡ, ಒಳಗಿನಿಂದ ಯಾರಾದರೂ ನೆಟ್ಟಗೆ ಬಂದಾರು."

"ಆಯಿತು, ಹಾಗೇ ಆಗಲಿ," ಎಂದು ಹೇಳಿ ಹುಡುಗ ಅವಳ ಎರಡೂ ಕೈಗಳನ್ನು ತನ್ನ ಎರಡೂ ಕೈಗಳಲ್ಲಿ ತೆಗೆದುಕೊಂಡು ತನ್ನ ತುಟಿಗಳವರೆಗೂ ಪ್ರಾಯಶಃ ಹಾಗೆಯೇ ತೆಗೆದುಕೊಂಡು ಹೋದ.

"ಇನ್ನು ಹೋಗು."

ಹೋಗುತ್ತಿದ್ದ ಹುಡುಗಿ ಹಿಂದಿರುಗಿ ರಿಕ್ಷಾ ಕಡೆಗೆ ನೋಡಿದಾಗ ಸುಮೇರಾ ಅವ ಳನ್ನು ನೋಡಿದ. ಅವಳ ಕಣ್ಣಿನಲ್ಲಿ ಭಯವಾಗಲಿ, ಸಂಕೋಚವಾಗಲಿ, ಆತಂಕವಾಗಲಿ – ಏನೊಂದೂ ಕಾಣಲಿಲ್ಲ. ಆದರೆ ಆ ಮುಖದಲ್ಲಿ ಅವನೇನು ಕಂಡನೋ ಸುಮೇರಾನ ಮನಸ್ಸು ತುಂಬಿಬಂತು. ಒಂದು ಮರದ ಎಲೆ ಕಿತ್ತರೂ ಹೇಗೆ ಇಷ್ಟಿಷ್ಟು ಉದ್ದ ನಾರು ಅದರ ಜೊತೆಗೇ ಎಳೆದುಕೊಂಡು ಬರುತ್ತದೋ ಅಂಥ ನಾರಿನ ಗೆರೆಗಳು ಸೀಳಿಕೊಂಡು ಬರುತ್ತಿರುವುದು ಅವಳ ಮುಖದ ಮೇಲೆ ಅವನಿಗೆ ಕಂಡಿರಬೇಕು. ಅವಳು ನಿಂತು ನಿಂತು ಬಾಗಿಲ ಕಡೆಗೆ ಹೋಗುತ್ತಿದ್ದಳು. ಬಾಗಿಲ ಬಳಿ ಹೋಗಿ ಮತ್ತೆ ಹಿಂದಿರುಗಿ ಒಮ್ಮೆ ನೋಡಿದಳು. ಹುಡುಗನೂ ಹಿಂಭಾಗದ ಹುಡ್-ಎತ್ತಿ ಅವಳ ಕಡೆಗೆ ನೋಡು ತ್ತಿದ್ದ... ನಿಶ್ಯಕ್ತ ಕೈಗಳು ಬಾಗಿಲ ಅಗಳಿಯ ಮೇಲೆ ಹೋದುವು. ಆಗ ರಿಕ್ಷಾ ಕೂಡ ಒಂದಕ್ಕೆ ತಿರುಗಿತು. ಸುಮೇರಾನ ಮನಸ್ಸು ಉದಾಸೀನಗೊಂಡಿತ್ತು.

ಸುಮೇರಾ ಬಾಡಿಗೆಗಾಗಿ ತಕರಾರು ಮಾಡಲಿಲ್ಲ. ಬೀಡಿ ಕೊಂಡುಕೊಳ್ಳುವ ಸಲುವಾಗಿ ಅವನು ಒಂದು ಅಂಗಡಿಯ ಮುಂದೆ ರಿಕ್ಷಾ ನಿಲ್ಲಿಸಿ ಕೆಳಗೆ ಇಳಿಯುವಾಗ ಅವನ ದೃಷ್ಟಿಗೆ ಮೊದಲು ಕಂಡಿದ್ದು ರಿಕ್ಷಾದ ಪಾದಫಲಕದ ಮೇಲೆ ಬಿದ್ದಿದ್ದ ಕರವಸ್ತ್ರ–ಮುದುಡಿ ಕೊಂಡು ಬಿದ್ದಿದ್ದ ಬಿಳಿ ಬಣ್ಣದ ಕರ್ಚೀಫು. ರಿಕ್ಷಾವನ್ನು ಸ್ವಲ್ಪ ಕತ್ತಲಿದ್ದ ಕಡೆಗೆ ತೆಗೆದು ಕೊಂಡು ಹೋಗಿ ನಿಲ್ಲಿಸಿ ಅದನ್ನವನು ಕೈಗೆತ್ತಿಕೊಂಡ. ಬಿಚ್ಚಿ ನೋಡಿದ. ದೊಡ್ಡ ಆಕಾರದ ಆ ಕರವಸ್ತ್ರ ಅಲ್ಲಲ್ಲೇ ಒದ್ದೆಯಾಗಿತ್ತು. ವಾಪಸ್ಸು ತೆಗೆದುಕೊಂಡು ಹೋಗಿ ಕೊಟ್ಟು ಬರಲೇ, ಎಂದು ಯೋಚಿಸಿದ. ತನಗೇ ಅದರ ಅರಿವು ಇಲ್ಲದ ರೀತಿಯಲ್ಲಿ ಮೂಗಿನ ಬಳಿಗೆ ತೆಗೆದುಕೊಂಡು ಹೋದಾಗ ಅದರಿಂದ ಒಳ್ಳೆಯ ಸುವಾಸನೆ ಬರುತ್ತಿತ್ತು. ನೆತ್ತಿಗೆ ಹೋಗಿ ಆ ಸುವಾಸನೆ ತಾಕುತ್ತಿತ್ತು. ಕಮಲದ ಹೂವು ನಗುನಗುತ್ತಾ ಇರುವ ಕೊಳದಲ್ಲಿ ಹೋಗಿ ತಾನು ಮುಳುಗಿರುವುದಾಗಿ ಅವನಿಗೆ ಭಾಸವಾಯಿತು. ಕಣ್ಣುಗಳ ಮುಂದೆ ಹುಡುಗಿಯ ಮುಖ ಕಾಣಿಸಿಕೊಂಡಿತು. ಸುವಾಸನೆಯಲ್ಲಿ ಮುಳುಗಿಹೋಗಿತ್ತು ಅವನ ಮನಸ್ಸು. ಮನಸ್ಸು ಹೇಗೆ ಹೇಗೋ ಆಗುತ್ತಿತ್ತು. ಮತ್ತೆ ರಿಕ್ಷಾ ತುಳಿಯತೊಡ ಗಿದ. ಹಿಂದಿನ ಚಕ್ರದ ಕಡೆ ಅದೇ ಚೈನಿನ ಶಬ್ದ ಕಿರ್ ಕಿರ್ ಎನ್ನುತ್ತಿತ್ತು; ಇಟ್ಟಿಗೆಯ ಮೇಲೆ ಇಟ್ಟಿಗೆ ಒಟ್ಟುತ್ತಿರುವಂತಹ ಶಬ್ದ.

ಕೈಯನ್ನು ದುರ್ಬೀನಿನಂತೆ ಮಾಡಿಕೊಂಡು ಆಕಾಶ ನೋಡುತ್ತಾ ಮಲಗಿದ್ದವನಿಗೆ ಆಕಾಶದಲ್ಲಿನ ಮೋಡಗಳು ಹಾರುತ್ತಿರುವ ಕರವಸ್ತ್ರಗಳಂತೆ ಕಂಡುವೋ ಏನೋ! ಇವೊತ್ತು ಅವನಿಗೆ ಸಿಕ್ಕಿದ ಆ ಮುದುಕಿಯ ಕರವಸ್ತ್ರದಲ್ಲಿಯೂ ಅದೇ ರೀತಿ ಸುವಾಸನೆ ಬರುತ್ತಿರಬೇಕು. ಮತ್ತೆ ಯಾವಾಗಲಾದರೂ ಆ ಹುಡುಗಿ ತನ್ನ ರಿಕ್ಷಾದಲ್ಲಿ ಕುಳಿತು ಕೊಂಡರೆ ವಾಪಸ್ಸು ಕೊಡುವ ಧೈರ್ಯ ಮಾಡೋಣ ಎಂದು ಅವಳ ಕರವಸ್ತ್ರವನ್ನೂ ಅವನು ತನ್ನಲ್ಲಿಯೇ ಇಟ್ಟುಕೊಂಡಿದ್ದ... ಆದರೆ ಕೆಲವು ದಿನಗಳ ನಂತರ ಅವನಿಗೇ ನೆನಪಿಲ್ಲ ಅವನು ಎಲ್ಲಿ ಹೋದನೋ ಏನೊ! ಆದರೆ ಇವೊತ್ತು ಅದೇ ಹಳೆಯ ಸುವಾಸನೆ ಅವನ ಮೂಗಿಗೆ ಬಡಿಯುತ್ತಿದೆ.

ಸುತ್ತ ವಿವಿಧ ಬಗೆಯ ಶಬ್ದ ಕಿವಿಗೆ ಬಿದ್ದಂತಾಗಿ ಅವನು ಗಾಬರಿಬಿದ್ದು ಎದ್ದು ಕುಳಿತ. ಮೂರ್ಛೆ ಬಿದ್ದವರ ಮೂಗಿನ ಬಳಿ ನಿಂತು ಮೂಸಿ ನೋಡಿಸುವ ರೀತಿಯ ಯಾರೋ ಮುಂದೆ ನಿಂತುಕೊಂಡು ತನ್ನ ಮೂಗಿನ ಬಳಿ ಏನನ್ನೋ ಆಡಿಸುತ್ತಾ ಹೇಳುತ್ತಿದ್ದಾನೆ ಮಂತ್ರ ಹಾಕುತ್ತಿರುವ ರೀತಿಯಲ್ಲಿ "ಆಲ್ ತೂ... ಜಲಾಲ್ ತೂ... ಆಯಿ ಬಲಾ ಕೋ ಟಾಲ್ ತೂ..." ತಾನು ಏಳುತ್ತಿದ್ದುದನ್ನು ಕಂಡು ಅವನು ಹೇಳಿದ– "ಏನೋ, ಏಳೋದಿಲ್ಲವೇನು? ಹೀಗೇ ಅಫೀಮು ತಿಂದವರ ಹಾಗೆ ಮಲಗಿಕೊಂಡಿರುತ್ತೀಯೋ, ಕೆಲಸದ ಮೇಲೆ ಹೋಗುತ್ತೀಯೋ? ಪಂಜಾಬ್ ಮೇಲ್ ಬಂದು ಆಗಲೇ ನಿಂತಿದೆ."

ನಿದ್ದೆಗಣ್ಣಿನಿಂದ ಎಚ್ಚತ್ತವನಾಗಿ ನೋಡುತ್ತಾನೆ, ಅವನ ಸ್ನೇಹಿತ ರಿಕ್ಷಾವಾಲಾ ಬಾಬು ನಿಂತಿದ್ದಾನೆ. ಮೈಮುರಿಯುತ್ತಾ ಎದ್ದು ನಿಂತು ಒಮ್ಮೆ ದೀರ್ಘವಾಗಿ ಆಕಳಿಸುತ್ತಾ, ನಾಲ್ಕೂ ಕಡೆ ಕೈಗಳನ್ನು ಬೀಸುತ್ತಾ, ಹೇಳಿದ: ಹೌದೋ, ಹೀಗೇ ಸ್ವಲ್ಪ ನಿದ್ದೆ ಬಂದು ಬಿಟ್ಟಿತ್ತು."

ಸವಾರಿಗಳನ್ನು ಕೂರಿಸಿಕೊಂಡು ನಡೆದಿದ್ದ ರಿಕ್ಷಾ–ಟಾಂಗಾಗಳ ಟ್ರಿನ್ ಟ್ರಿನ್ ಭೋ-ಭೋ ಶಬ್ದ ಒಂದೇ ಸಮನೆ ಸಾಗಿತ್ತು, ಹೊಳೆಯ ಪ್ರವಾಹ ಬಂದ ರೀತಿಯಲ್ಲಿ. ಆಕ್ಷಣ ಅವನಿಗೆ ಎಲ್ಲ ಹೊಸಹೊಸದಾಗಿ ಕಾಣತೊಡಗಿದೆ. ಈಗತಾನೇ ತಾನೂ ರೈಲಿ ನಿಂದ ಇಳಿದು ಇಲ್ಲಿಗೆ ಬಂದಿರುವ ಹಾಗೆ, ಇಲ್ಲಿ ಯಾವುದೂ ತನಗೆ ಪರಿಚಯವಿಲ್ಲದಿರುವ ಹಾಗೆ, ಇಲ್ಲಿಯ ಪ್ರತಿಯೊಂದು ವಸ್ತುವೂ ತನಗೆ ಹೊಸತು... ತನ್ನ ಶರೀರದ ಅಂಗ ದಂತಿದ್ದ ತನ್ನ ರಿಕ್ಷಾ ಕೂಡ...ಎನ್ನುವ ರೀತಿಯಲ್ಲಿ ಸುತ್ತಲೂ ನೋಡುತ್ತಿದ್ದಾನೆ...

# ಅವಳ ರೊಟ್ಟಿ

ಬಸ್ಸು ಬರಲು ಇನ್ನೂ ಬಹಳ ಹೊತ್ತಾಗುತ್ತದೆಂಬುದು ಅವಳಿಗೆ ಗೊತ್ತಿತ್ತು; ಆದರೂ ಆಗಾಗ ತನ್ನ ಸೆರಗಿನಿಂದ ಬೆವರನ್ನು ಒರೆಸಿಕೊಳ್ಳುತ್ತಾ ಬಸ್ಸು ಬರುವ ದಾರಿಯ ಕಡೆ ಕಣ್ಣಿತ್ತಿ ಕಾತರದಿಂದ ನೋಡುತ್ತಿದ್ದಳು. ನಕೋದರ್ ರೋಡಿನ ಆ ಭಾಗದಲ್ಲಿ ನೆರಳು ಕೊಡುವ ಮರಗಳೂ ಸಮೀಪದಲ್ಲಿರಲಿಲ್ಲ. ಅಲ್ಲಿಯ ಭೂಮಿಯೂ ಬಂಜರು ಬಂಜ ರಾಗಿದ್ದು ಏರುತಗ್ಗುಗಳಿಂದ ಕೂಡಿತ್ತು. ಹೊಲಗಳು ಮೂವತ್ತು ನಲವತ್ತು ಗಜ ಗಳಷ್ಟು ಸಮೀಪದಲ್ಲಿದ್ದುವು: ಆದರೆ ಅವುಗಳೂ ಈಗ ಬರಿದುಬರಿದಾಗಿದ್ದುವು. ಕಟಾವಿನ ನಂತರ ಕಳೆಗಳನ್ನೆಲ್ಲ ಕಿತ್ತು ಹದಮಾಡಲಾಗಿತ್ತು. ನಾಲ್ಕೂ ಕಡೆ ಎಲ್ಲೆಲ್ಲೂ ಬತ್ತಲೆ ಭೂಮಿಯೇ ಎದ್ದು ಕಾಣುತ್ತಿತ್ತು. ಬಿಸಿಲಿನ ತಾಪದಿಂದಾಗಿ ಕರಗಿದ್ದ ನಕೋದರ್ ರೋಡಿನ ಆ ಮಾಸಲು ಬಣ್ಣವಷ್ಟೇ ಮಣ್ಣಿನ ಬಣ್ಣಕ್ಕಿಂತ ಸ್ವಲ್ಪ ಬೇರೆಯಾಗಿತ್ತು. ಬೇರೆಲ್ಲ ಕಡೆ, ಎಲ್ಲಿ ನೋಡಿದರಲ್ಲಿ, ಮಣ್ಣೇ ಕಾಣುತ್ತಿತ್ತು. ಆ ಹೆಂಗಸು ನಿಂತಿದ್ದ ಸ್ಥಳಕ್ಕೆ ಸಮೀಪದಲ್ಲಿಯೇ ಒಂದು ಮಳಿಗೆ ಇತ್ತು. ದೊಡ್ಡ ದೊಡ್ಡ ಎರಡು ಮಡಕೆಗಳ ಮುಂದೆ ಒಬ್ಬ ವ್ಯಕ್ತಿ ತೂಕಡಿಸುತ್ತಾ ಕುಳಿತಿದ್ದ. ನಿದ್ದೆಯಿಂದ ಹಾಗೆಯೇ ಮುಂದಕ್ಕೆ ಉರುಳು ವಂತಾದಾಗ ಎಚ್ಚೆತ್ತುಕೊಳ್ಳುತ್ತಿದ್ದ; ಹಾಗೆ ಎಚ್ಚೆತ್ತಾಗ ಒಮ್ಮೆ ಸುತ್ತಲೂ ಶೂನ್ಯವಾದ ದೃಷ್ಟಿಯನ್ನು ಹಾಯಿಸಿ, ತನ್ನ ಅಂಗವಸ್ತ್ರದಿಂದ ಕತ್ತಿನ ಸುತ್ತಲೂ ಬೆವರನ್ನು ಒರೆಸಿ ಕೊಂಡು, ಮತ್ತೆ ಹಿಂದಿನಂತೆ ತೂಕಡಿಸಲು ಆರಂಭಿಸುತ್ತಿದ್ದ. ಆ ಮಳಿಗೆಯ ಪಕ್ಕದಲ್ಲಿ ಮೂರು ಅಡಿಗಳಷ್ಟು ದೂರಕ್ಕೆ ನೆರಳು ಬೀಳುತ್ತಿತ್ತು. ಅಲ್ಲೇ ಒಬ್ಬ ಭಿಕ್ಷುಕ ಮಳಿಗೆಗೆ ಒರಗಿಕೊಂಡು ನಿಂತು ಆ ಹೆಂಗಸಿನ ಕೈಗಳ ಕಡೆಗೇ ಬಯಕೆಯ ದೃಷ್ಟಿಯಿಂದ ನೋಡುತ್ತಾ ನಿಂತಿದ್ದ: ಅವನ ಗಡ್ಡ ಬೆಳೆದಿತ್ತು. ಸಮೀಪದಲ್ಲಿಯೇ ಒಂದು ನಾಯಿ ಕೂಡ ಬಾಲ ಮುದುರಿಕೊಂಡು ಕುಳಿತಿತ್ತು. ಅದರ ದೃಷ್ಟಿ ಕೂಡ ಆ ಹೆಂಗಸಿನ ಕೈಗಳ ಕಡೆಗೇ ಇತ್ತು.

ಹೆಂಗಸು ತನ್ನ ಕೈಯಲ್ಲಿದ್ದ ರೊಟ್ಟಿಯನ್ನು ಒಂದು ಕೊಳೆ ಬಟ್ಟೆಯಲ್ಲಿ ಸುತ್ತಿದ್ದಳು. ಇತರರ ದೃಷ್ಟಿ ಅದರ ಮೇಲೆ ಬೀಳದಂತೆ ನೋಡಿಕೊಳ್ಳುವುದು ಅವಳ ಉದ್ದೇಶ ವಾಗಿತ್ತು. ಆ ರೊಟ್ಟಿಯನ್ನು ಅವಳು ತನ್ನ ಪತಿ ಡ್ರೈವರ್ ಸುಚ್ಚಾಸಿಂಗನಿಗಾಗಿ ತಂದಿ ದ್ದಳು. ತಡವಾಗಿ ಬಂದಿದ್ದ ಕಾರಣ ಸುಚ್ಚಾಸಿಂಗನ ಬಸ್ಸು ಬಂದು ಹೊರಟುಹೋಗಿತ್ತು. ನಕೋದರಕ್ಕೆ ಹೋಗಿರುವ ಬಸ್ಸು ವಾಪಸ್ಸು ಅದೇ ದಾರಿಯಲ್ಲಿ ಬಂದಾಗ ಅವನಿಗೆ ರೊಟ್ಟಿ ಕೊಡಲು ಅವಳು ಹಾದಿ ಕಾಯುತ್ತಾ ನಿಂತಿದ್ದಳು. ಸಮಯಕ್ಕೆ ಸರಿಯಾಗಿ ತಾನು ಬರಲಿಲ್ಲವೆಂಬ ಕಾರಣದಿಂದಾಗಿ ಸುಚ್ಚಾಸಿಂಗನಿಗೆ ತುಂಬಾ ಕೋಪ ಬಂದಿರಬಹು ದೆಂದು ಅವಳಿಗೆ ಗೊತ್ತಿತ್ತು.

ಅವನ ಬಸ್ಸು ಜಲಂಧರದಿಂದ ಹೊರಟು ಎರಡು ಗಂಟೆ ಹೊತ್ತಿಗೆ ಅಲ್ಲಿಗೆ ಬರುತ್ತಿತ್ತು; ನಕೋದರ್ ತಲಪಿ ರೊಟ್ಟಿ ತಿನ್ನಲು ಮೂರು-ಮೂರೂವರೆ ಗಂಟೆ ಆಗಿಬಿಡುತ್ತಿತ್ತು. ರಾತ್ರಿಯ ರೊಟ್ಟಿಯನ್ನೂ ಅವಳು ಅದರ ಜೊತೆಗೇ ಕೊಟ್ಟಿರುತ್ತಿದ್ದಳು; ಅದನ್ನವನು ತನ್ನ ಕೊನೆಯ ಟ್ರಿಪ್ಪಿನ ನಂತರ ನಕೋದರ್ ತಲಪಿ ತಿನ್ನುತ್ತಿದ್ದನು. ವಾರದ ಏಳು ದಿನಗಳ ಪೈಕಿ ಆರು ದಿನಗಳು ಹೀಗೆ ಸುಚ್ಚಾಸಿಂಗನ ಡ್ಯೂಟಿ ಇರುತ್ತಿತ್ತು; ಆ ಆರೂ ದಿನಗಳು ಹೀಗೇ ನಡೆಯುತ್ತಿತ್ತು. ಅವನ ಹೆಂಡತಿ ಪ್ರತಿದಿನ ಒಂದು-ಒಂದೂ ಕಾಲು ಗಂಟೆ ಹೊತ್ತಿಗೆ ರೊಟ್ಟಿಯನ್ನು ತೆಗೆದುಕೊಂಡು ಊರಿನಿಂದ ಹೊರಡುತ್ತಿದ್ದಳು ಮತ್ತು ಬಿಸಿಲಿನಲ್ಲಿ ಒಂದು ಮೈಲಿಯಷ್ಟು ದಾರಿ ನಡೆದು ಎರಡು ಗಂಟೆಯೊಳಗಾಗಿ ಹೆದ್ದಾರಿಯ ಅಂಚಿಗೆ ಬಂದು ತಲಪುತ್ತಿದ್ದಳು. ಅವಳು ಬರುವುದು ನಾಲ್ಕೈದು ನಿಮಿಷ ತಡವಾದರೆ ಒಂದಲ್ಲ ಒಂದು ಕಾರಣ ಹೇಳಿ ಸುಚ್ಚಾಸಿಂಗ್ ಅಲ್ಲಿಯೇ ತನ್ನ ಬಸ್ಸನ್ನು ನಿಲ್ಲಿಸಿರುತ್ತಿದ್ದ. ಮತ್ತು ಅವಳು ಬರುವುದೇ ತಡ ಅವನು ಅವಳ ಮೇಲೆ ರೇಗಾಡುತ್ತಿದ್ದ. "ನಿನ್ನ ನಿರೀಕ್ಷೆಯಲ್ಲಿ ಬಸ್ಸನ್ನು ನಿಲ್ಲಿಸಿಕೊಂಡಿರಲು ನಾನೇನು ನಿನ್ನಪ್ಪನ ಜವಾನ ಎಂದು ತಿಳಿದುಕೊಂಡೆಯಾ? ನಾನು ಸರ್ಕಾರಿ ನೌಕರ." ಅವಳು ತುಟಿ ಪಿಟಕ್ಕೆನ್ನದೆ ಅವನ ರೇಗಾಟದ ಮಾತುಗಳನ್ನೆಲ್ಲ ಕೇಳಿಕೊಳ್ಳುತ್ತಿದ್ದಳು ಮತ್ತು ಅವನಿಗೆ ರೊಟ್ಟಿ ಕೊಟ್ಟು ಹೋಗುತ್ತಿದ್ದಳು.

ಆದರೆ ಇವೊತ್ತು ಅವಳು ನಾಲ್ಕೈದು ನಿಮಿಷಗಳಷ್ಟಲ್ಲ, ಎರಡು ಎರಡೂವರೆ ಗಂಟೆಗಳಷ್ಟು ತಡವಾಗಿ ಬಂದಿದ್ದಳು. ಅಷ್ಟು ತಡವಾಗಿ ಬರುವುದರಿಂದ ಏನೇನೂ ಪ್ರಯೋಜನವಿಲ್ಲೆಂಬುದು ಅವಳಿಗೆ ಗೊತ್ತಿತ್ತು; ಆದರೂ ಅವಳು ಏನೂ ತೋಚದ ಮಾನಸಿಕ ಸ್ಥಿತಿಯಲ್ಲಿ ಮನೆಯಿಂದ ಹೊರಟುಬಿಟ್ಟಿದ್ದಳು. ಎಷ್ಟು ದೀರ್ಘಕಾಲ ಅವಳು ದಾರಿ ಕಾಯುತ್ತಾ ನಿಲ್ಲುತ್ತಾಳೋ, ಸುಚ್ಚಾಸಿಂಗನ ಕೋಪ ಕೂಡ ಅಷ್ಟೇ ಕಡಿಮೆಯಾಗಬಹುದೆಂದೂ ಅವಳು ಯೋಚಿಸುತ್ತಿದ್ದಳು. ಮಧ್ಯಾಹ್ನದ ರೊಟ್ಟಿಯನ್ನು ಸುಚ್ಚಾಸಿಂಗ್ ನಕೋದರ್‌ನಲ್ಲಿಯೇ ಯಾವುದೋ ಖಾನಾವಳಿಯಲ್ಲಿ ತಿಂದಿರಬೇಕು. ರಾತ್ರಿಯ ಊಟಕ್ಕೆ ಅವನಿಗೆ ರೊಟ್ಟಿ ಕೊಡುವುದಂತೂ ಅವಶ್ಯಕವಾಗಿತ್ತು. ಅಷ್ಟೇ ಅಲ್ಲ, ತಾನು ಯಾವ ಕಾರಣದಿಂದಾಗಿ ತಡವಾಗಿ ಬರಬೇಕಾಯಿತು ಎಂಬುದನ್ನು ಅವನಿಗೆ ವಿವರಿಸಿ ಹೇಳಬೇಕಾಗಿತ್ತು. ನಡೆದಿದ್ದ ಘಟನೆಯನ್ನು ತನ್ನ ಮನಸ್ಸಿನಲ್ಲಿಯೇ ಮೆಲುಕುಹಾಕುತ್ತಾ, ಸುಚ್ಚಾಸಿಂಗನಿಗೆ ಯಾವ ರೀತಿ ಅದೆಲ್ಲವನ್ನೂ ತಿಳಿಸಬೇಕು ಎಂಬುದನ್ನೂ ಯೋಚಿಸುತ್ತಿದ್ದಳು. ಎಲ್ಲವನ್ನೂ ಕೇಳಿ ಅವನು ಕೋಪದಲ್ಲಿ ಏನಾದರೂ ಮಾಡಿಬಿಟ್ಟರೆ ಏನು ಗತಿ ಎಂದೂ ಯೋಚಿಸುತ್ತಿದ್ದಳು. ಅವನ ಕೋಪ ಬಹಳ ಕೆಟ್ಟದ್ದು ಎಂಬುದೂ ಅವಳಿಗೆ ತಿಳಿದಿತ್ತು. ತನ್ನ ಕೋಪದ ಭರದಲ್ಲಿ ಅವನು ಜಂಗೀಗೆ ಏನಾದರೂ ಅಂದುಬಿಟ್ಟರೆ? ಅವನೋ ಶುದ್ಧ ಗೂಂಡಾ.

ಜಂಗಿಯ ವಿಷಯದಲ್ಲಿ ಅನೇಕ ಕಥೆಗಳು ಕಿವಿಗೆ ಬಿದ್ದಿದ್ದುವು. ಹಿಂದಿನ ವರ್ಷ ಅವನು ಪಕ್ಕದ ಗ್ರಾಮದ ಒಬ್ಬ ಹೆಂಗಸನ್ನು ಹಾರಿಸಿಕೊಂಡು ಬಂದು ಎಲ್ಲೋ ಯಾರಿಗೋ

ಮಾರಿ ಬಂದಿದ್ದ. ಆನಂತರ ಸಹೋದರ ನಿವಾಸಿ ಜೀವರಾಮನೊಂದಿಗೆ ಅವನ ಜಗಳ ನಡೆದಿತ್ತು; ಇದೇ ಕಾರಣದಿಂದಾಗಿ ಜೀವರಾಮನ ಕೊಲೆಯನ್ನೂ ಮಾಡಿಸಿದ್ದ. ಊರಿನ ಜನ ಅವನಿಂದ ದೂರ ಇರುತ್ತಿದ್ದರು. ಯಾರೂ ಅವನೊಂದಿಗೆ ದ್ವೇಷ ಕಟ್ಟಿಕೊಳ್ಳಲು ಸಿದ್ಧರಿರುತ್ತಿರಲಿಲ್ಲ. ಆ ಮನುಷ್ಯನ ದುಷ್ಟತನದ ಬಗ್ಗೆ ನೂರೊಂದು ಕಥೆಗಳನ್ನು ಅವಳು ಕೇಳಿದ್ದಳಾದರೂ ಹದಿನಾಲ್ಕು ವರ್ಷದ ಜಿಂದಾ ಒಬ್ಬಳೇ ಬರುತ್ತಿರುವಾಗ ಅವಳನ್ನು ಕೆಣಕುವ ಸಾಹಸಕ್ಕೆ ಕೈಹಾಕುವಷ್ಟು ಕೀಳು ಮಟ್ಟಕ್ಕೆ ಇಳಿಯುತ್ತಾನೆಂದು ಅವಳು ತಿಳಿದಿರಲಿಲ್ಲ. ಅವನ ವಯಸ್ಸು ಜಿಂದಾಳ ವಯಸ್ಸಿಗಿಂತ ಮೂರು ಪಟ್ಟು ಹೆಚ್ಚಾಗಿದ್ದು ಮೊನ್ನೆ ಮೊನ್ನೆಯ ವರೆಗೂ ಅವಳನ್ನು 'ಮಗಳೇ–ಮಗಳೇ' ಎಂದು ಕರೆಯುತ್ತಿದ್ದ. ಆದರೆ ಇವೊತ್ತು ಅವಳೊಬ್ಬಳೇ ಹೊಲದ ಮಾರ್ಗವಾಗಿ ಬರುತ್ತಿರುವಾಗ ಅವಳ ಕೈ ಹಿಡಿದುಕೊಳ್ಳುವ ಸಾಹಸಕ್ಕೆ ಕೈಹಾಕುವುದೇ?

ಜಿಂದಾಳನ್ನು ಆದಿನ ಅವಳು ನಂತೀಯ ಮನೆಯಿಂದ ಒಂದಿಷ್ಟು ಬೆರಣಿ ತರಲೆಂದು ಕಳುಹಿಸಿದ್ದಳು. ಗ್ರಾಮದ ಇತರ ಮನೆಗಳು ಹೊಲದ ಈ ಅಂಚಿನಲ್ಲಿದ್ದರೆ ನಂತೀಯ ಮನೆ ಆ ಅಂಚಿನಲ್ಲಿತ್ತು. ರೊಟ್ಟಿಗಾಗಿ ಹಿಟ್ಟನ್ನು ಕಲಸಿ ಹದಮಾಡಿಕೊಂಡು ಬೆರಣಿ ತರುವಳೆಂಬ ನಿರೀಕ್ಷೆಯಲ್ಲಿ ಅವಳು ಕಾದು ಕುಳಿತಿದ್ದಳು. ಬೆರಣಿ ಬಂದರೆ ಬೇಗ ಬೇಗ ರೊಟ್ಟಿಗಳನ್ನು ಮಾಡಿಕೊಂಡು ಹೊತ್ತಿಗೆ ಮುಂಚಿತವಾಗಿಯೇ ಬಸ್ಸು ಬರುವ ದಾರಿಗೆ ಹೋಗಿ ಕಾಯುತ್ತಾ ನಿಲ್ಲಬಹುದೆಂದುಕೊಂಡಿದ್ದಳು. ಆದರೆ ಜಿಂದಾ ಬಂದಾಗ ಅವಳ ಕೈಗಳು ಬರಿದಾಗಿದ್ದುವು. ಮತ್ತು ಅವಳ ಮುಖ ಬಿಳಚಿಕೊಂಡಿತ್ತು. ಇನ್ನೂ ಜಿಂದಾ ಬಂದಿಲ್ಲವಲ್ಲ ಎಂದು ಕೋಪಗೊಂಡಿದ್ದ ಅವಳು, ಅವಳ ಮುಖ ನೋಡಿ ಹೆದರಿದಳು, ಅವಳ ಸಂದೇಹ ಈಗ ಬಲವಾಗಿತ್ತು.

"ಏನಾಯಿತು ಜಿಂದೀ? ಹೀಗೇಕೆ ಹೆದರಿದ್ದೀಯೆ?" ಎಂದು ಅವಳನ್ನೇ ನೋಡುತ್ತಾ ಕೇಳಿದಳು.

ಜಿಂದಾ ಏನೊಂದೂ ಮಾತನಾಡದೆ ಅವಳ ಬಳಿಗೆ ಬಂದು ಕುಳಿತು ತನ್ನ ಎರಡೂ ಕೈಗಳಲ್ಲಿ ಮುಖ ಮುಚ್ಚಿಟ್ಟುಕೊಂಡು ಅಳತೊಡಗಿದಳು.

"ಯಾಕೆ ಮಾತಾಡೋಲ್ವೆ? ಏನಾಯಿತು ನಿನಗೆ, ಬಾಯಿಬಿಟ್ಟು ಹೇಳಬಾರದೆ?"

ಜಿಂದಾ ಏನೂ ಹೇಳಲಿಲ್ಲ. ಅವಳ ಅಳುವು ಮಾತ್ರ ಇನ್ನಷ್ಟು ಹೆಚ್ಚಾಯಿತು.

"ಯಾರು ಏನು ಹೇಳಿದರೇ ನಿನಗೆ?", ಎಂದು ಈಗ ಅವಳ ತಲೆಯನ್ನು ನೇವರಿಸುತ್ತಾ ಕೇಳಿದಳು.

"...ಇನ್ಮೇಲ್ನನ್ನ ...ಬೆರ್ಣಿ ಗಿರ್ಣಿ... ತರಲಿಕ್ಕೆ ಕಳಿಸ್ಬೇಡಾಕ್ಕಾ," ಎಂದು ಜಿಂದಾ ಬಿಕ್ಕಿ ಬಿಕ್ಕಿ ಅಳುತ್ತಾ ಒಂದೊಂದೇ ಮಾತು ಸೇರಿಸಿ ಹೇಳಿದಳು. "ನಾನು ಮನಿ ಬಿಟ್ಟು ಇನ್ನೆಲ್ಲೂ ಹೋಗ್ಲಿಕ್ಕಿಲ್ಲ... ಆ ಜಂಗೀ ಅಯ್ಯಾ ಇವೊತ್ತು..." ಉಕ್ಕಿ ಬಂದ ಅಳುವಿನ ಕಾರಣದಿಂದ ಮುಂದೆ ಏನು ಹೇಳಲೂ ಸಾಧ್ಯವಾಗಲಿಲ್ಲ.

"ಏನ್ ಹೇಳಿದ್ನೇ ನಿನಗೆ?... ಏನು ಹೇಳಿದನೇ... ಹೇಳು... ಬಾಯಿ ಬಿಡು," ಎಂದು ಮತ್ತೆ ಮತ್ತೆ ಒತ್ತಾಯಪೂರ್ವಕವಾಗಿ ಕೇಳಿದಳು. ಅವಳ ಸ್ಥಿತಿಯೋ ಯಾವುದೋ ದೊಡ್ಡ ಭಾರದ ಅಡಿ ಸಿಕ್ಕಿದಂತಾಗಿತ್ತು. "ನನ್ನಾಣೆ, ಹೇಳೆ ಬಾಯಿಬಿಟ್ಟು."

"ಅವನಂತಿದ್ದ...," ಜಿಂದಾ ಅಳುತ್ತಲೇ ತಡವರಿಸಿಕೊಂಡು ಹೇಳಿದಳು, "ಏ ಜಿಂದಾ, ಒಳಗೆ ನಡೀ, ಶರಬತ್ತು ಕುಡೀಯಂತೆ; ನೀನು ಇವೊತ್ತು ಬೋ ಚಂದಾಗಿ ಕಾಣಸ್ತಿದ್ದೀ."

"ಹಾಂ, ಹೀಗ ಹೇಳಿದನಾ!" ಜಿಂದಾ ಹೇಳಿದುದನ್ನು ಕೇಳಿ ಅವಳ ಅಕ್ಕ ಉರಿದೆದ್ದಳು. "ಆ ರಂಡಿ ಮಗನಿಗೆ ಅವನ ಅವ್ವ ಬೋ ಚಂದಾಗಿ ಕಾಣಸ್ಲಿಕಿಲ್ಲೇನು? ಅವನ ಕಣ್ಣಲ್ಲಿ ಹುಳಾ ಬೀಳ, ಅವನ ಕಣ್ಣು ಇಂಗ್ಹೋಗ. ಆ ಕುಲಗೇಡಿ ಮನೇಲಿ ಮಗಳಿದ್ದಿದ್ದರೆ ಇವಳಿಗಿಂತಲೂ ದೊಡ್ಡ ಮಗಳಿರ್ಬೇಕಿತ್ತು. ಅಷ್ಟೂ ಪರಗ್ನೆ ಬೇಡ್ವಾ ರಂಡೀ ಮಗನಿಗೆ... ನೀನೇನು ಹೇಳ್ದಿ!"

"ಇಲ್ಲಾ ಕಕ್ಕಾ, ನನಗೇನೂ ಬಾಯಾರಿಲ್ಲ ಎಂದೆ," ಜಿಂದಾ ಸಾಂತ್ವನಗೊಳ್ಳುತ್ತಾ ಹೇಳಿದಳು.

"ಆಮೇಲೆ?"

"ಬಾಯಾರಿಲ್ದಿದ್ರೇನು ಜಿಂದಾ, ಒಂದು ಗುಟುಕು ಕುಡೀಯಂತ. ನಿನ್ನ ಚಿಕ್ಕಪ್ಪನ ಶರಬತ್ತು ಕುಡ್ದೀ ಅಂದ್ರೇ, ನೀನು ಯಾವೊತ್ತೂ ಮರೀಲಿಕ್ಕಿಲ್ಲ. ಎಂದು ಹೇಳಿ ನನ್ನ ರಟ್ಟೆ ಹಿಡಿದು ಎಳೀಲಿಕ್ಕೆ ಸುರುಮಾಡಿದ."

"ಹಾಂ, ಇವನ ಮನೆ ಹಾಳಾಗ, ಇವನ ಕೈ ಬಿದ್ಹೋಗಾ, ಇವನ್ ನೆಗೆದು ಬಿದ್ದು ಹೋಗಾ..." ಎಂದು ಅವಳು ಹೌಹಾರಿದಳು. "ಸುಬ್ಬಾಸಿಂಗ್ ಬರ್ಲಿ ಮನೀಗೆ; ಇವನ್ನ ಸೀಳ್ಹಾಕಿಸ್ತೀನಿ, ಕೇಳೂವಂತೆ. ಇವನ್ನ ಸಿಗ್ಸಿ ತೋರಣ ಹಾಕಿಸ್ದಿದ್ರೇ ...ಆಮೇಲೆ ಏನಾಯ್ತು?"

"ನಾನ್ ಕೈ ಬಿಡಿಸ್ಕೊಳ್ಳಿಕ್ಹೋದರೆ, ನನಗ್ ಸಿಹಿ ತಿನ್ನೋ ಆಸೆ ತೋರಿಸ್ದಾ... ನನ್ನ ಕೈಲಿದ್ದ ಬೆರಣಿಗಳು ಅಲ್ಲೇ ಬಿದ್ವು; ಅವನ್ನ ಹಾಗೇ ಬಿಟ್ಟು ಓಡಿ ಬಂದೆ."

ಅವಳು ಜಿಂದಾಳನ್ನು ತಲೆಯಿಂದ ಕಾಲಿನ ವರೆಗೆ ಒಮ್ಮೆ ನಿಟ್ಟಿಸಿ ಕೇಳಿದಳು.

"ಅವ ಇನ್ನೇನು ಹೇಳಿದ ಕಣೆ?"

"ನಾನು ಸ್ವಲ್ಪ ದೂರ ಬಂದ್ಬಿಟ್ಟಿದ್ದೆ; ಅವ ನಿಂತಲ್ಲಿಂದಲೇ ಹೀ–ಹೀ–ಹೀ ಎಂದು ಹಲ್ಲು ಕಿರ್ಕೊಂಡ್ ಹೇಳ್ದಾ – "ಮಗಳೇ, ಅಷ್ಟಕ್ಕೇ ತಪ್ಪು ತಿಳ್ಕೊಂಬಿಟ್ಟೆಲ್ಲಾ? ನಿನ್ನ ಬೆರಣಿ ತೆಕ್ಕೊಂಡ್ ಹೋಗು... ನಾನು ಸುಮ್ನೆ ತಮಾಷೆ ಮಾಡಿದೆ, ಅಷ್ಟೂ ತಿಳೀಲಿಲ್ಲ ನಿನಗೆ?... ತೆಕೊಂಡ್ ಹೋಗು ಬಾ, ಬರೋಲ್ವೆ?... ನಾನ್ ಈಗ ಬಂದು ನಿನ್ನ ಅಕ್ಕನ ಹತ್ತಿರ ಚಾಡಿ ಹೇಳ್ತೇನೆ, ನೀನು ತುಂಬಾ ಕೆಟ್ಟವಳಾಗಿಬಿಟ್ಟಿದ್ದೀಯೆ, ಹೇಳೋ ಮಾತು ಕೇಳೋಲ್ಲ ಅಂತ" ಎಂದು ಬಡಬಡಿಸಿದ. ನಾನು ಒಂದಕ್ಕೂ ಜವಾಬು ಕೊಡಲಿಲ್ಲ, ಹಿಂದಿರುಗಿ ನೋಡ್ಲೂ ಇಲ್ಲ, ನೆಟ್ಟಗೆ ಮನೆ ಕಡೆ ಬಂದುಬಿಟ್ಟೆ."

"ಒಳ್ಳೇದು ಮಾಡಿದೆ, ನಾನ್ ಅವನ ಗತಿ ನೆಟ್ಟಗೆ ಮಾಡಿಸ್ತೀನಿ; ಅವನ್ ಮೂಳೆ ಮುರಿಸ್ತೀನಿ... ಸುಚ್ಚಾಸಿಂಗ್ ಬರಲಿ. ನಾನು ಈಗಲೇ ಹೋಗಿ ಅವನಿಗೆ ತಿಳಿಸ್ತೀನಿ. ಜಿಂದಾ ಮೇಲೆ ಕೈ ಹಾಕುವುದಕ್ಕೆ ಮೊದಲು ಅವಳು ಡ್ರೈವರ್ ಸುಚ್ಚಾಸಿಂಗ್‌ನ ನಾದಿನಿ ಅನ್ನೋದನ್ನಾದರೂ ಯೋಚಿಸ್ಬೇಕಾಗಿತ್ತು," ಎಂದು ಹೇಳಿದ ಅವಳು ಸ್ವಲ್ಪ ಯೋಚಿಸಿ ಕೇಳಿದಳು: "ಅಲ್ಲ ನಿನ್ನನ್ನು ಬೇರೆ ಯಾರೂ ನೋಡಿಲ್ಲ ತಾನೇ ?"

"ಇಲ್ಲ. ಹೊಲದ ಈಚೆ ಭಾಗದಲ್ಲಿ ಮರದ ಕೆಳಗೆ ರಾಘು ಚಾಚಾ ಕುಳಿತಿದ್ದ. ನನ್ನನ್ನು ನೋಡಿ ಈ ಬಿಸಿಲು ಹೊತ್ತಿನಲ್ಲಿ ಎಲ್ಲಿ ಹೋಗಿದ್ದೆ ಮಗಳೇ ಎಂದು ಕೇಳಿದ. ಅಕ್ಕನಿಗೆ ಹೊಟ್ಟೆನೋವು, ಹಕೀಮರ ಬಳಿಗೆ ಮದ್ದು ತರೋಣ ಅಂತ ಹೋಗಿದ್ದೆ ಎಂದು ಹೇಳಿದೆ."

"ಒಳ್ಳೇದು ಮಾಡಿದೆ. ಜಂಗಿ ಶುದ್ಧ ಘಟಿಂಗಾ ಇದ್ದಾನೆ. ಅವನ ಹೆಸರು ಹೇಳಿದ್ದರೆ ನಿನ್ನ ಹೆಸರಿಗೇ ಕಳಂಕ ಬರ್ತಿತ್ತು; ಆ ಮನೆಹಾಳನಿಗೇನೂ ನಷ್ಟ ಆಗ್ತಿರ್ಲಿಲ್ಲ. ಜನಕ್ಕೇನು, ಆಡುವುದಕ್ಕೊಂದು ಮಾತಾದರೆ ಸಾಕು."

ಈ ಪ್ರಸಂಗದ ನಂತರ ಬೆರಣಿ ತಂದು ಅಡಿಗೆ ಸಿದ್ಧಮಾಡುವುದಕ್ಕೆ ತುಂಬಾ ಹೊತ್ತಾಗಿ ಹೋಯಿತು. ರೊಟ್ಟಿ ಜೊತೆಗೆ ಆಲೂಗಡ್ಡೆಯ ಪಲ್ಯ ಮತ್ತು ಮಾವಿನ ಉಪ್ಪಿನಕಾಯಿ ಇಟ್ಟು, ಪಾತ್ರೆಯನ್ನು ಬಟ್ಟೆಯಲ್ಲಿ ಸುತ್ತಿಡುವ ಹೊತ್ತಿಗೆ ಎರಡು ಗಂಟೆ ಆಗಿ ಎಷ್ಟೊ ಹೊತ್ತಾಗಿಹೋಗಿತ್ತು; ಮಧ್ಯಾಹ್ನದ ರೊಟ್ಟಿ ಸುಚ್ಚಾಸಿಂಗನಿಗೆ ಈಗ ತಲಪಿಸುವ ಹಾಗೆಯೇ ಇಲ್ಲ ಎಂಬುದು ಅವಳಿಗೆ ಗೊತ್ತಿತ್ತು. ಆದುದರಿಂದಲೇ ಅವಳು ಬುತ್ತಿಯನ್ನು ಒಂದು ಕಡೆ ಇಟ್ಟು ಅದು–ಇದು ಕೆಲಸಕ್ಕೆ ಕೈಹಾಕತೊಡಗಿದಳು. ಎಲ್ಲ ಕೆಲಸ ಮುಗಿದಾಗ, ಬಸ್ ಸಮಯ ನೋಡಿಕೊಂಡು ಮನೆ ಬಿಟ್ಟರಾಯಿತು ಎಂಬುದು ಅವಳಿಗೆ ತೋಚದೆ ಹೋಯಿತು, ಮನಸ್ಸಿಗೆ ನೆಮ್ಮದಿ ಬರಲಿಲ್ಲ. ಮೂರು ನಾಲ್ಕು ಗಂಟೆ ಸಮಯ ಆಗಿದ್ದರೆ ಹೆಚ್ಚು, ಅವಳು ಬಸ್ಸಿನ ದಾರಿ ಕಾಯಲು ಸಿದ್ಧಳಾಗಿ ಹೊರಟಳು. ಅವಳು ಹೊರಡು ವಾಗ ತಂಗಿ ಕೇಳಿದಳು:

"ಅಕ್ಕ, ನೀನು ಎಷ್ಟು ಹೊತ್ತಿಗೆ ಬರುತ್ತೀ ?"

"ಕತ್ತಲೆ ಆಗುವುದಕ್ಕೆ ಮುಂಚೇನೇ ಬಂದುಬಿಡ್ತೀನಿ."

"ಬೇಗ ಬಂದುಬಿಡಕ್ಕಾ, ನಾನು ಒಬ್ಬಳೇ ಇರೋದಕ್ಕೆ ಹೆದರಿಕೆಯಾಗುತ್ತೆ."

"ಹೆದರೋಕ್ಕೇನಿದೆ?" ಅವಳು ಸುಳ್ಳು ಧೈರ್ಯ ಸಾಧಿಸುತ್ತಾ ಹೇಳಿದಳು. "ನಿನ್ನ ಡೆ ಕಣ್ಣೆತ್ತಿ ನೋಡುವ ಸಾಹಸವಾದರೂ ಯಾರಿಗಿದೆ? ಸುಚ್ಚಾಸಿಂಗನ ಕಿವೀಗೆ ಬಿದ್ದರೆ ಅವನು ಅಂಥವರನ್ನು ಹಸಿಹಸಿಯಾಗಿಯೇ ತಿಂದುಬಿಟ್ಟಾನು... ನಾನು ಬರೋದಕ್ಕೆ ಅಂಥಾ ಹೊತ್ತೇನೂ ಆಗೋಲ್ಲ. ಸಂಜೆ ಆಗೋದಕ್ಕೆ ಮುಂಚೇನೆ ಮನೆ ತಲಪಿರುತ್ತೇನೆ. ನೀನು ಒಳಗಿನಿಂದ ಅಗಳಿ ಹಾಕ್ಕೊಂಡಿರು, ತಿಳೀತಾ? ಯಾರಾದರೂ ಬಂದು ಬಾಗಿಲು ಬಡಿದರೆ ಮೊದಲು ಅವರ ಹೆಸರು ತಿಳ್ಕೋ,"–ಸ್ವಲ್ಪ ಯೋಚಿಸಿ ಮತ್ತೆ ಹೇಳಿದಳು:

"ಜಿಂಗಿ ಬಂದೇನಾದರೂ ನಾನು ಎಲ್ಲಿಗೆ ಹೋಗಿದೀನಿ ಅಂತ ಕೇಳಿದರೆ, ಸುಬ್ಬಾಸಿಂಗನನ್ನು ಕರೆತರಲು ಹೋಗಿದೀನಿ ಅಂತ ಹೇಳು. ತಿಳೀತಾ?" ಮತ್ತೆ ಯೋಚಿಸಿ ಹೇಳಿದಳು: "...ಇಲ್ಲ, ನೀನೊಂದೂ ಹೇಳಬೇಡ... ಒಳಗಿನಿಂದ ಜವಾಬೇ ಕೊಡಬೇಡ. ತಿಳೀತಾ?"

ಅವಳು ಹೊಸಲು ದಾಟ್ಟುತ್ತಿರುವಂತೆಯೇ, ಜಿಂದಾ ಹಿಂದಿನಿಂದ ಹೇಳಿದಳು: "ಅಕ್ಕಾ, ನನಗೇಕೋ ಹೆದರಿಕೆ ಆಗ್ತಾ ಇದೆ."

"ಹುಚ್ಚೀ ಎಲ್ಲೀದೋ!" ಪ್ರೀತಿಯ ಧ್ವನಿಯಲ್ಲೇ ಸಮಾಧಾನ ಹೇಳಿದಳು. "ಪಕ್ಕದಲ್ಲಿಯೇ ಊರಿವೆ; ಹೆದರೋದಕ್ಕೇನಿದೆ. ನಿನಗೇನು ವಯಸ್ಸಾಗಿಲ್ಲವೇ, ಹೀಗ್ಯಾಕೆ ಹೆದರ್ತೀಯೆ?"

ಆದರೆ ಜಿಂದಾಗೆ ಧೈರ್ಯ ಹೇಳಿದ ಅವಳಿಗೇ ಸಮಾಧಾನ ಇರಲಿಲ್ಲ, ದಾರಿಯ ಅಂಚನ್ನು ತಲಪಿದ ಸಮಯದಿಂದಲೂ ಏನಾದರೂ ಮಾಡಿ ಆದಷ್ಟು ಬೇಗ ಮನೆಗೆ ಹಿಂದಿರುಗಬೇಕೆಂಬುದು ಅವಳ ಇಚ್ಛೆಯಾಗಿತ್ತು; ರೊಟ್ಟಿಯನ್ನು ತಲಪಿಸಿ ಆದಷ್ಟು ಬೇಗ ವಾಪಸ್ಸು ಬಂದು ಜಿಂದಾ ಜೊತೆಗೆ ಸೇರಿಕೊಳ್ಳಬೇಕು.

"ಏನಪ್ಪ, ಎರಡು ಗಂಟೆಗೆ ಬರುವ ಬಸ್ಸು ಹೋಗಿ ಎಷ್ಟು ಹೊತ್ತಾಯಿತು?" – ಭಿಕ್ಷುಕನನ್ನು ಉದ್ದೇಶಿಸಿ ಅವಳು ಕೇಳಿದಳು. ಅವನ ಕಣ್ಣುಗಳು ಇವಳ ಕೈಯಲ್ಲಿದ್ದ ರೊಟ್ಟಿಯ ಕಡೆಗೇ ಇದ್ದುವು. ಬಿಸಿಲಿನ ತಾಪ ಇನ್ನೂ ಕಡಿಮೆಯಾಗಿರಲಿಲ್ಲ. ಮಳಿಗೆಯ ನೆರಳು ಮಾತ್ರ ಮೊದಲಿಗಿಂತ ಈಗ ದೊಡ್ಡದಾಗಿ ಹರಡಿತ್ತು. ಮಳಿಗೆಯ ಮುಂಭಾಗದ ಹಲಗೆಯ ಅಡಿಯಲ್ಲಿ ಬಿದ್ದಿದ್ದ ನೀರಿಗೆ ಆಗಾಗ ಬಾಯಿ ಹಾಕುತ್ತಿದ್ದ ನಾಯಿ ಅಲ್ಲೇ ಓಡಾಡುತ್ತಲಿತ್ತು.

"ಗೊತ್ತಿಲ್ಲಾ, ತಾಯಿ" ಭಿಕ್ಷುಕ ಹೇಳಿದ, "ಎಷ್ಟೋ ಬಸ್ಸುಗಳು ಬರುತ್ತವೆ, ಎಷ್ಟೋ ಹೋಗುತ್ತವೆ. ಯಾರು ಗಂಟೆ ನೋಡ್ತಾ ಇರ್ತಾರೆ?"

ಈ ಉತ್ತರ ಕೇಳಿ ಆಕೆ ಸುಮ್ಮನಾದಳು. ಒಂದು ಬಸ್ಸು ಸ್ವಲ್ಪ ಹೊತ್ತಿಗಷ್ಟೇ ಮುಂಚೆ ನಕೋದರದ ಕಡೆ ಹೋಗಿತ್ತು. ಧೂಳೆಬ್ಬಿಸಿಕೊಂಡು ಅದು ಹೋಗಿತ್ತು. ಧೂಳಿನ ಆ ಕಡೆ ಒಂದು ಲೋಕ, ಈ ಕಡೆ ಇನ್ನೊಂದು ಲೋಕ ಇರುವಂತೆ ಅವಳಿಗೆ ಭಾಸವಾಯಿತು. ಬಸ್ಸುಗಳು ಒಂದು ಲೋಕದಿಂದ ಇನ್ನೊಂದು ಲೋಕಕ್ಕೆ ಹೋಗುತ್ತಿರುತ್ತವೆ. ಅಲ್ಲೋ ದೊಡ್ಡ ದೊಡ್ಡ ಅಂಗಡಿ ಬೀದಿಗಳು. ವ್ಯಾಪಾರಿ ಮಂಡಿಗಳು; ಪ್ರತಿ ತಿಂಗಳೂ ಡ್ರೈವರನೊಬ್ಬನ ಸಂಬಳದಲ್ಲಿ ಮುಕ್ಕಾಲು ಭಾಗ ಇಲ್ಲಿಯೇ ಖರ್ಚಾಗಿಬಿಡುತ್ತದೆ. ಸುಬ್ಬಾಸಿಂಗನು ನಕೋದರದಲ್ಲಿ ಒಬ್ಬ ಉಪಪತ್ನಿಯನ್ನು ಇಟ್ಟುಕೊಂಡಿರುವುದಾಗಿ ದೇವಿ ಆಗಾಗ ಹೇಳುತ್ತಿದ್ದ. ಹೋಗಿ ಒಮ್ಮೆ ಆ ಹೆಂಗಸನ್ನು ನೋಡಿಬರಬೇಕೆಂದು ಅವಳಿಗೆ ಎಷ್ಟೋ ಬಾರಿ ಅನಿಸಿತ್ತು. ನಕೋದರಕ್ಕೆ ಒಮ್ಮೆ ಕರೆದುಕೊಂಡು ಹೋಗುವಂತೆಯೂ ಅವಳು ಸೂಚಿಸಿದ್ದಳು; ಆದರೆ ಸುಬ್ಬಾಸಿಂಗನು ಗದರಿಕೊಂಡು ಹೇಳಿದ್ದ:

ಯಾಕೆ, ನಿನಗೇನು ಪುಕ್ಕ ಬರುತ್ತಿದೆಯೇನು? ಮನೆಯಲ್ಲಿ ಹಾಯಾಗಿ ಇರೋದಕ್ಕಾಗೋ ಲ್ವೇನೋ! ಹೆಂಡತಿಯ ಕೈ ಹಿಡಿದುಕೊಂಡು ಊರೆಲ್ಲ ಸುತ್ತಾಡಿಸುವ ಗಂಡಂದಿರ ವರ್ಗಕ್ಕೆ ಸುಚ್ಚಾಸಿಂಗ್ ಸೇರಿಲ್ಲ. ಹಾಗೆ ನಿನಗೆ ಅಲೆದಾಡಬೇಕೆಂದೆನಿಸಿದ್ದರೆ ಬೇರೆ ಗಂಡ ನನ್ನು ಹುಡುಕಿಕೋ, ತಿಳೀತೇನು? ನನ್ನ ಕಡೆಯಿಂದ ನಿನಗೆ ಯಾವ ಹರಕತ್ತೂ ಇಲ್ಲ."

ಆ ಮಾತು ಕೇಳಿದಂದಿನಿಂದ ಮತ್ತೆ ಯಾವತ್ತೂ ಅವಳು ಆ ವಿಷಯವನ್ನು ಪ್ರಸ್ತಾಪಿಸ ಲಿಲ್ಲ. ಸುಚ್ಚಾಸಿಂಗ್ ಹೇಗಾದರೂ ಇರಲಿ, ಅವಳ ಮಟ್ಟಿಗೆ ಅವನೇ ಸರ್ವಸ್ವ. ಅವನು ಅವಳನ್ನು ಬೈಯುತ್ತಿದ್ದು, ಹೊಡಿಯುವುದು, ಬಡಿಯುವುದನ್ನೂ ಮಾಡುತ್ತಿದ್ದ; ಪ್ರತಿ ತಿಂಗಳೂ ಸಂಬಳ ಬಂದೊಡನೆ ಇಪ್ಪತ್ತು ರೂಪಾಯಿ ತಂದುಕೊಡುವಷ್ಟು ಪ್ರೀತಿ ಯನ್ನಾದರೂ ಇಟ್ಟುಕೊಂಡಿದ್ದ ಎನ್ನುವಷ್ಟೇ ಅವಳಿಗೆ ಸಮಾಧಾನದ ಸಂಗತಿ. ಅವನು ಸಾವಿರ ತಪ್ಪು ಮಾಡಲಿ, ತನ್ನನ್ನು ಧರ್ಮಪತ್ನಿ ಎಂದು ತಿಳಿದಿದ್ದ. ಅವನ ನಾಲಿಗೆ ಕೆಟ್ಟದ್ದು, ನಿಜ. ಆದರೆ ಅವನ ಮನಸ್ಸು ಒಳ್ಳೆಯದು, ಆ ಖಾತ್ರಿ ಅವಳಿಗಿತ್ತು. ಜಿಂದಾ ಳನ್ನು ಮನೆಯಲ್ಲಿ ಇಟ್ಟುಕೊಂಡಿರುವ ಬಗ್ಗೆ ಅವನು ಆಗಾಗ ಆಕ್ಷೇಪಿಸುತ್ತಿದ್ದ; ಆದರೆ ಹಿಂದಿನ ತಿಂಗಳು ಸಂಬಳ ಬಂದಾಗ ತಾನೇ ಜಿಂದಾಳಿಗೆ ಗಾಜಿನ ಬಳೆಗಳನ್ನೂ ಎರಡೂವರೆ ಗಜಗಳಷ್ಟು ಬಟ್ಟೆಯನ್ನೂ ತಂದುಕೊಟ್ಟಿದ್ದ.

ಒಂದು ಬಸ್ಸು ಧೂಳು ಹಾರಿಸಿಕೊಂಡು ದಿಗಂತದ ಆ ಅಂಚಿನ ಕಡೆಯಿಂದ ಈ ಕಡೆಗೆ ಬರುತ್ತಿತ್ತು. ಅದು ಸುಚ್ಚಾಸಿಂಗ್‌ನ ಬಸ್ ಅಲ್ಲವೆಂದು ಅವಳಿಗೆ ದೂರದಿಂದಲೇ ತಿಳಿ ಯಿತು. ಆದರೂ ಅದು ಹತ್ತಿರಕ್ಕೆ ಬರುವವರೆಗೂ ಉತ್ಸುಕತೆಯಿಂದ ಆ ಕಡೆಗೇ ನೋಡುತ್ತಾ ನಿಂತಿದ್ದಳು. ಬಸ್ಸು ಕುಡಿಯುವ ನೀರು ಕೊಡುವ ಆ ಮಳಿಗೆಯ ಮುಂಭಾ ಗಕ್ಕೆ ಬಂದು ನಿಂತುಕೊಂಡಿತು. ಒಬ್ಬ ವ್ಯಕ್ತಿ ಈರುಳ್ಳಿ ಮತ್ತು ತರಕಾರಿಯ ಮೂಟೆ ಯೊಂದಿಗೆ ಕೆಳಗಿಳಿದ. ಕಂಡಕ್ಟರ್ ಜೋರಾಗಿ ಬಾಗಿಲು ಬಡಿದುಕೊಂಡ ಮತ್ತು ಬಸ್ಸು ಹೊರಟಿತು. ಬಸ್ಸಿನಿಂದ ಇಳಿದ ಮನುಷ್ಯ ನೀರಿನ ಮಳಿಗೆಯ ಬಳಿಗೆ ಹೋಗಿ ಅಲ್ಲಿ ತೂಕಡಿಸುತ್ತಾ ಕುಳಿತಿದ್ದವನನ್ನು ಎಚ್ಚರಿಸಿ ಎರಡು ಬೊಗಸೆ ನೀರನ್ನು ಹಾಕಿಸಿಕೊಂಡು ಕುಡಿದು ಮೀಸೆಯನ್ನು ಒರೆಸಿಕೊಳ್ಳುತ್ತಾ ತನ್ನ ಗಂಟನ್ನು ಇರಿಸಿದ ಕಡೆಗೆ ಬಂದ.

"ಏನಪ್ಪಾ, ನಕೋದರದಿಂದ ಮುಂದಿನ ಬಸ್ಸು ಎಷ್ಟು ಹೊತ್ತಿಗೆ ಬರುತ್ತೆ?" ಎಂದು ಹೆಜ್ಜೆ ಹತ್ತಿರಕ್ಕೆ ಹೋಗಿ ಆಕೆ ಅವನನ್ನು ಉದ್ದೇಶಿಸಿ ಕೇಳಿದಳು.

"ಗಂಟೆ ಗಂಟೆಗೂ ಒಂದೊಂದು ಬಸ್ಸು ಬರುತ್ತದೆ ತಾಯಿ. ನೀನು ಎಲ್ಲಿಗೆ ಹೋಗ ಬೇಕು?"

"ಎಲ್ಲಿಗೂ ಹೋಗಬೇಕಾಗಿಲ್ಲಾಪ್ಪಾ. ಬಸ್ಸಿಗಾಗಿ ಕಾಯಬೇಕು, ಅಷ್ಟೆ. ಸುಚ್ಚಾಸಿಂಗ್ ಡ್ರೈವರ್ ನನ್ನ ಯಜಮಾನ. ಅವನಿಗೆ ರೊಟ್ಟಿ ಕೊಡಬೇಕು."

"ಓಹ್, ಸುಚ್ಚಾಸಿಂಗನೋ!" ಹೀಗೆ ಉದ್ಗಾರ ತೆಗೆದ ಆ ಮನುಷ್ಯನ ತುಟಿಯ ಮೇಲೆ ತುಂಟನಗೆ ಲಾಸ್ಯವಾಡಿತು.

"ಅವನ ಪರಿಚಯ ಇದೆಯೇನು ನಿನಗೆ?"

"ಸಹೋದರರಲ್ಲಿ ಅವನ ಪರಿಚಯ ಇಲ್ಲದಿರುವವರಾದರೂ ಯಾರಿದ್ದಾರೆ?"

ಆ ಮನುಷ್ಯ ಮಾತನಾಡಿದ ರೀತಿ ಅವಳಿಗೆ ಹಿಡಿಸಲಿಲ್ಲ. ಆದುದರಿಂದಲೇ ಮುಂದೆ ಏನನ್ನೂ ಕೇಳದೆ ಸುಮ್ಮನಾದಳು. ಸುಬ್ಬಾಸಿಂಗನ ವಿಷಯದಲ್ಲಿ ಅವಳಿಗೇ ಗೊತ್ತಿದ್ದ ವಿಚಾರಗಳನ್ನು ಬೇರೆಯವರ ಬಾಯಿಂದ ಕೇಳುವುದು ಅವಳಿಗೆ ಬೇಡವಾಗಿತ್ತು. ತನ್ನ ಪತಿಯ ವಿಚಾರದಲ್ಲಿ ಈ ರೀತಿ ಮಾತನಾಡುವ ಹಕ್ಕು ಇತರರಿಗೆ ಏನಿದೆ, ಎಂಬುದು ಅವಳ ಪ್ರಶ್ನೆಯಾಗಿತ್ತು.

"ಸುಬ್ಬಾಸಿಂಗ್ ಪ್ರಾಯಶಃ ಮುಂದಿನ ಬಸ್ಸಿನಲ್ಲಿ ಬರುತ್ತಾನೆ ಎಂದು ಆ ಮನುಷ್ಯ ಹೇಳಿದ.

"ಹೌದು, ಅವನ ಬಸ್ಸೇ ಇದರ ನಂತರ ಬರೋದು."

"ತುಂಬಾ ದುಷ್ಟ, ನಿನ್ನನ್ನು ಹೀಗೆ ಕಾಯಿಸುತ್ತಾನೆ."

"ನಿನ್ನ ದಾರಿ ನೋಡ್ಕೊಂಡ್ ನೀನು ಹೋಗಪ್ಪ." ಎಂದು ಕೋಪದಿಂದಲೇ ಅವಳು ಹೇಳಿದಳು. "ಅವನೇಕೆ ನನ್ನನ್ನು ಕಾಯಿಸ್ತಾನೆ? ನಾನೇ ರೊಟ್ಟಿ ತರೋದಕ್ಕೆ ಹೊತ್ತು ಮಾಡಿದೆ; ಅಷ್ಟು ಹೊತ್ತಿಗೆ ಬಸ್ಸು ಬಂದು ಹೊರಟುಹೋಗಿತ್ತು. ಪಾಪ, ಅವನು ಬೆಳಿಗ್ಗೆಯಿಂದಲೂ ಹಸಿದುಕೊಂಡಿರಬೇಕು."

"ಹಸಿದುಕೊಂಡಿರೋದೆ? ಅದರಲ್ಲೂ ಸುಬ್ಬಾಸಿಂಗ್?" ಎಂದು ಹೇಳಿ ಆ ಮನುಷ್ಯ ಹಲ್ಲು ಕಿರೀತಾ ನಗತೊಡಗಿದ. ಆಕೆ ತನ್ನ ಮುಖವನ್ನು ಬೇರೆ ಕಡೆಗೆ ತಿರುಗಿಸಿಕೊಂಡಳು. "ಸದ್ಗುರುನಾಥಾ" ಎಂದುಕೊಂಡು ಆ ಮನುಷ್ಯ ಗಂಟನ್ನೆತ್ತಿ ತಲೆಯಮೇಲೆ ಇಟ್ಟು ಕೊಂಡು ಹೊಲದ ಹಾದಿ ಹಿಡಿದು ಹೊರಟುಹೋದ. ಅವಳ ಎಡಗಾಲು ಜೋಗು ಹಿಡಿದುಹೋಗಿತ್ತು. ಬೇರೆ ಕಾಲಿನ ಮೇಲೆ ಭಾರ ಹಾಕುತ್ತಾ ಒಂದು ನಿಟ್ಟುಸಿರು ಬಿಟ್ಟು ಆ ಮನುಷ್ಯನು ಹೋದ ಕಡೆಗೇ ನೋಡುತ್ತಿದ್ದಳು.

ಎಷ್ಟೋ ಹೊತ್ತಾದ ಮೇಲೆ ಆಕಾಶದ ಅದೇ ಅಂಚಿನಿಂದ ಇನ್ನೊಂದು ಬಸ್ಸು ತನ್ನ ಕಡೆಗೆ ಬರುತ್ತಿರುವುದು ಕಂಡುಬಂತು. ಅಷ್ಟು ಹೊತ್ತು ಅವಳು ನಿಂತು ನಿಂತು ಅವಳ ಕಾಲಿನ ಹಿಮ್ಮಡಿಗಳು ನೋಯುತ್ತಿದ್ದುವು. ಬಸ್ಸನ್ನು ಕಂಡ ಅವಳು ತನ್ನ ಬುತ್ತಿಯ ಬಟ್ಟೆಯನ್ನು ಸರಿಮಾಡತೊಡಗಿದಳು. ರೊಟ್ಟಿಗಳನ್ನು ಸ್ವಲ್ಪ ನಿಧಾನವಾಗಿ ಮಾಡಿ ತಂದಿದ್ದರೆ ಚೆನ್ನಾಗಿತ್ತು ಎಂದು ಅವಳು ಈಗ ಪಶ್ಚಾತ್ತಾಪ ಪಡತೊಡಗಿದಳು. ಹಾಗೆ ಮಾಡಿದ್ದರೆ ಅವು ರಾತ್ರಿಯ ಹೊತ್ತಿಗೆ ಇನ್ನಷ್ಟು ತಾಜಾ ಇರುತ್ತಿದ್ದುವು. ಸುಬ್ಬಾಸಿಂಗನಿಗೆ 'ಕಡಾಹ ಪ್ರಸಾದ್' ಎಂದರೆ ಬಹಳ ಪ್ರೀತಿ; ಇವೊತ್ತು ಕೊಂಚ ಈ ಸಜ್ಜಿಗೆಯನ್ನಾದರೂ ಮಾಡಿಕೊಂಡು ಬರಲೇಬೇಕೆಂದು ಅವಳಿಗೆ ತೋಚಲಿಲ್ಲವಲ್ಲ! ನಾಳೆ ಹೇಗಿದ್ದರೂ ಗುರುಗಳ ಪುಣ್ಯತಿಥಿ; ನಾಳೆ ಖಂಡಿತ "ಕಡಾಹ ಪ್ರಸಾದ್" ಮಾಡಿಕೊಂಡು ಬರಬೇಕು!...

ದೂರದೂರದ ವರೆಗೆ ಧೂಳನ್ನು ಹಾರಿಸಿಕೊಂಡು ಬಸ್ಸು ತನ್ನ ಸಮೀಪಕ್ಕೆ ಬರುತ್ತಿತ್ತು. ಇಪ್ಪತ್ತು ಗಜಗಳಷ್ಟು ದೂರದಿಂದಲೇ ಸುಚ್ಚಾಸಿಂಗ್ ತುಂಬಾ ಕೋಪಗೊಂಡಿದ್ದಾನೆ ಎಂಬುದು ಅವಳಿಗೆ ತಿಳಿದುಹೋಯಿತು. ಅವಳನ್ನು ಕಂಡು ಸುಚ್ಚಾಸಿಂಗ್‌ನ ಹುಬ್ಬುಗಳು ಗಂಟಿಕ್ಕಿಕೊಂಡುವು; ಅವನು ಅವುಡು ಕಚ್ಚುತ್ತಿದ್ದುದೂ ಅವಳಿಗೆ ಗೋಚರವಾಯಿತು. ಭಯದಿಂದ ಅವಳ ಎದೆ ಧಸಕ್ಕೆಂದಿತು. ಈ ಅವಸ್ಥೆಯಲ್ಲಿ ಅವಳು ರೊಟ್ಟಿ ಹಿಡಿದಿದ್ದ ಕೈಯನ್ನು ಮೇಲೆ ಮಾಡಿ ನಿಂತಳು. ಆದರೆ ಬಸ್ಸು ಅವಳ ಸಮೀಪದಲ್ಲಿ ನಿಲ್ಲದೆ ನೀರಿನ ಮಳಿಗೆಯಿಂದ ಸ್ವಲ್ಪ ದೂರಕ್ಕೆ ಹೋಗಿ ನಿಂತುಕೊಂಡಿತು.

ಒಬ್ಬಿಬ್ಬರು ಬಸ್ಸಿನಿಂದ ಇಳಿಯಬೇಕಾಗಿತ್ತು. ಬಸ್ಸಿನ ಟಾಪಿನ ಮೇಲೆ ಹತ್ತಿದ್ದ ಕಂಡಕ್ಟರ್ ಪ್ರಯಾಣಿಕನೊಬ್ಬನ ಸೈಕಲನ್ನು ಕೆಳಗೆ ಇಳಿಸುತ್ತಿದ್ದ. ಆಕೆ ಆ ಸಮಯದಲ್ಲಿ ಬೇಗ ಹೋಗಿ ಡ್ರೈವರು ಕುಳಿತುಕೊಳ್ಳುವ ಸೀಟಿನ ಪಕ್ಕಕ್ಕೆ ನಿಂತುಕೊಂಡಳು.

"ಸುಚ್ಚಾ ಸ್ಯಾಂ" ಅವಳು ಕೈಯನ್ನು ಎತ್ತರಕ್ಕೆ ಹಿಡಿದು ರೊಟ್ಟಿಯ ಬುತ್ತಿಯನ್ನು ಒಳಗಡೆಗೆ ಕೊಡುವ ಪ್ರಯತ್ನದಲ್ಲಿದ್ದಳು. "ರೊಟ್ಟೀ ತೆಕೋ ಸುಚ್ಚಾ."

"ನಡಿ, ದೂರ ನಡಿ" ಎಂದು ಹೇಳಿ ಸುಚ್ಚಾಸಿಂಗ್ ಅವಳ ಕೈಯನ್ನು ಹೊರಕ್ಕೆ ರಭಾಡಿಸಿದ.

"ಸುಚ್ಚಾ ಸ್ಯಾಂ, ಒಂದು ನಿಮಿಷ ಕೆಳಗೆ ಇಳಿದು ನನ್ನ ಮಾತು ಕೇಳ್ಕೋಬಾರ್ದೆ? ಇವೊತ್ತು ಒಂದು ವಿಷಯ ನಡೀತು. ಇಲ್ಲವಾದರೆ ನಾನು..."

"ಹರಟಬೇಡ, ಹೊರಟುಹೋಗು ಇಲ್ಲಿಂದ," ಎಂದು ಗದರಿಕೊಂಡು ಸುಚ್ಚಾಸಿಂಗ್ ಸಾಮಾನೆಲ್ಲ ಇಳಿಯಿತೋ ಇಲ್ಲವೋ ಎಂದು ಕಂಡಕ್ಟರ ಕೇಳುವಂತೆ ಕೂಗುಹಾಕಿದ.

"ಇನ್ನೊಂದೇ ಪೆಟ್ಟಿಗೆ ಇದೆ; ಅದನ್ನ ಇಳಿಸ್ತಾ ಇದ್ದೇನೆ" ಎಂದು ಕಂಡಕ್ಟರ್ ಅಲ್ಲಿಂದಲೇ ಉತ್ತರ ಕೊಟ್ಟ.

"ಸುಚ್ಚಾ ಸ್ಯಾಂ, ನಾನು ಎರಡು ಗಂಟೆಯಿಂದ ಇಲ್ಲಿ ನಿಂತಿದ್ದೇನೆ," ಎಂದು ಅವಳು ವಿನಮ್ರಭಾವದಿಂದ ಹೇಳಿದಳು. "ನೀನು ಕೆಳಗಿಳಿದು ನನ್ನ ಮಾತನ್ನಾದರೂ ಕೇಳಬಾರದೆ?"

"ಪೆಟ್ಟಿಗೆ ಇಳೀತೇನು?" ಮತ್ತೆ ಸುಚ್ಚಾಸಿಂಗ್ ಕಂಡಕ್ಟರನನ್ನು ಕೇಳಿದ.

"ಹಾಂ, ಇಳೀತು, ನಡಿ," ಎಂದು ಕಂಡಕ್ಟರನ ಧ್ವನಿ ಬಂತು.

"ಸುಚ್ಚಾ ಸ್ಯಾಂ, ನನ್ನ ಮೇಲಿನ ಕೋಪ ಇರಲಿ. ಈ ರೊಟ್ಟಿ ತೆಗೆದುಕೋ. ನೀನು ಮಂಗಳವಾರ ಬಂದಾಗ ನಿನಗೆ ಎಲ್ಲ ವಿಚಾರ ತಿಳಿಸ್ತೀನಿ," ಎಂದು ಅವಳು ತನ್ನ ಕೈಯನ್ನು ಇನ್ನಷ್ಟು ಮೇಲಕ್ಕೆ ಮಾಡಿದಳು.

"ಹಾಂ, ಬರ್ತಾನೆ ಮಂಗಳವಾರ ನಿನ್ನ...", ಎಂದು ಸುಚ್ಚಾ ಸಿಂಗ್ ಒಂದು ಕೆಟ್ಟ ಬೈಗಳ ಬೈದು ಬಸ್ಸನ್ನು ಸ್ಟಾರ್ಟ್ ಮಾಡಿಯೇಬಿಟ್ಟ.

ಸಾಯಂಕಾಲ ಆದಹಾಗೆ ಆಕಾಶದ ಬಣ್ಣ ಬದಲಾಯಿಸತೊಡಗಿತು. ಆಗಾಗ ಒಂದೆರಡು ಪಕ್ಷಿಗಳು ಆಕಾಶದಲ್ಲಿ ಹಾರಿಹೋಗುತ್ತಿದ್ದುವು. ಹೊಲಗಳಲ್ಲಿ ಅಲ್ಲೊಂದು ಇಲ್ಲೊಂದು ಬಣ್ಣದ ಪೇಟಗಳು ಕಣ್ಣಿಗೆ ಬೀಳುತ್ತಿದ್ದುವು. ಆಕೆ ಮಳಿಗೆಯಲ್ಲಿ ಒಂದಿಷ್ಟು ನೀರು ಕೇಳಿ ಕುಡಿದಳು ಮತ್ತು ತಣ್ಣೀರನ್ನು ಕಣ್ಣುಗಳ ಮೇಲೆ ಒಂದಿಷ್ಟು ಎರಚಿಕೊಂಡು ಸೆರಗಿನಿಂದ ಮುಖವನ್ನು ಒರೆಸಿಕೊಂಡಳು. ಮತ್ತೆ ಆ ಮಳಿಗೆಯಿಂದ ಸ್ವಲ್ಪ ದೂರಕ್ಕೆ ಹೋಗಿ ನಿಂತು ಕೊಂಡಳು. ರಾತ್ರಿ ಎಂಟು–ಒಂಭತ್ತು ಗಂಟೆಯ ವರೆಗೆ ಸುಚ್ಚಾಸಿಂಗನ ಬಸ್ಸು ಜಲಂಧರ ದಿಂದ ಬರುವುದಿಲ್ಲವೆಂದು ಅವಳಿಗೆ ಗೊತ್ತಿತ್ತು. ಅಲ್ಲಿಯ ವರೆಗೆ ಅವಳು ದಾರಿ ಕಾಯುತ್ತಾ ನಿಲ್ಲುವುದೇ? ಸುಚ್ಚಾಸಿಂಗ್ ಕೊನೆಗೆ ಕೆಳಗಿಳಿದು ಅವಳ ಮಾತನ್ನಾದರೂ ಕೇಳಬೇಕಾ ಗಿತ್ತು. ಅತ್ತ ಮನೆಯಲ್ಲಿ ಜಿಂದಾ ದಿಗಿಲುಗೊಂಡಿರಬೇಕು. ಆ ಜಿಂಗೀ ಏನಾದರೂ ನೆಪ ಮಾಡಿಕೊಂಡು ಮತ್ತೆ ಬಂದಿದ್ದರೆ? ಸುಚ್ಚಾಸಿಂಗ್ ರೊಟ್ಟಿ ಸ್ವೀಕರಿಸಿಕೊಂಡಿದ್ದರೆ ಇನ್ನೊಂದು ಅರ್ಧ ಗಂಟೆಯೊಳಗಾಗಿ ಅವಳು ಮನೆಯಲ್ಲಿ ಇರುಬಹುದಾಗಿತ್ತು. ಅವನೀಗ ರೊಟ್ಟಿಯನ್ನು ಎಲ್ಲಾದರೂ ತಿಂದುಕೊಳ್ಳುತ್ತಾನೆ; ಹೇಗೋ ಆಗುತ್ತೆ; ಆದರೆ ಅವನ ಕೋಪ ಇಳಿಯುವುದಾದರೂ ಹೇಗೆ? ಅವನ ಕೋಪ ಎಂದರೆ ಸಾಧಾರಣದ ಕೋಪ ಅಲ್ಲ. ಅವನದು ಎಷ್ಟೇ ಆಗಲಿ ದುಡಿಮೆಯ ಜೀವ, ತುಂಬಾ ಹೊಟ್ಟೆ ಹಸಿಯುವುದು ಸಹಜ. ಇನ್ನು ಸ್ವಲ್ಪ ಬೇಡಿಕೊಂಡಿದ್ದರೆ ಅವನು ಖಂಡಿತ ಒಪ್ಪಿಕೊಳ್ಳುತ್ತಿದ್ದ, ಆದರೆ ಈಗ?

ನೀರಿನ ಮಳಿಗೆಯವನು ಮಳಿಗೆಯನ್ನು ಮುಚ್ಚುತ್ತಿದ್ದ. ಭಿಕ್ಷುಕ ಕೂಡ ಯಾವಾಗ ಅಲ್ಲಿಂದೆದ್ದು ಹೊರಟುಹೋಗಿದ್ದನೋ ತಿಳಿಯದು. ನಾಯಿ ಮಾತ್ರ ಈಗಲೂ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಅಡ್ಡಾಡುತ್ತಿತ್ತು. ಬಿಸಿಲು ಕಡಿಮೆಯಾಗಿತ್ತು. ಆಕಾಶದಲ್ಲಿ ಪಕ್ಷಿಗಳು ಗುಂಪಾಗಿ ಹಾರುತ್ತಿದ್ದು ಆ ದೃಶ್ಯ ರಮ್ಯವಾಗಿತ್ತು. ರಸ್ತೆಯ ಅಂಚಿನಷ್ಟು ದೂರಕ್ಕೆ ಬೀಳುತ್ತಿದ್ದ ತನ್ನ ಉದ್ದನೆಯ ನೆರಳನ್ನು ಕಂಡು ಅವಳಿಗೆ ತುಂಬಾ ವಿಲಕ್ಷಣವೆನಿಸಿತು. ಸಮೀಪದ ಹೊಲದಲ್ಲಿ ಯುವಕನೊಬ್ಬ ಧ್ವನಿಯೆತ್ತಿ ಜಾನಪದ ಗೀತೆಯೊಂದನ್ನು ಹಾಡುತ್ತಿದ್ದ:

> "ಬೊಲುಣ ರೀ ಚಾಂ ಕೊಯಿ ನಾಂ ।
> ಜಿಹಡಾ ಸಾನೂಂ ಲಾ ಮೇ ದಿತ್ತಾ,
> ಉಸ ರೋಗ್ ದಾನಾಂ ಕೋಯಿ ನಾಂ ।"

["ನಾನೇನು ಹೇಳಲಿ? ನನ್ನ ಮನಸ್ಸಿನ ವೇದನೆ ಇಂಥದೇ ಎಂದು ಹೇಳುವಂತಿಲ್ಲ, ನಾನೇನು ಮಾಡಲಿ, ನಾನು ಅನುಭವಿಸುತ್ತಿರುವ ರೋಗ (ಹೃದಯದ) ಅಂಥದು"]

ಜಾನಪದ ಗೀತೆಯ ಭಾವಲಹರಿ ಅವಳ ನರ-ನಾಡಿಗಳಲ್ಲೆಲ್ಲ ಹರಿಯುತ್ತಿತ್ತು. ಬಾಲ್ಯ ದಲ್ಲಿ ಅವಳು ಬೇಸಿಗೆಯ ದಿನಗಳಲ್ಲಿ ಇತರ ಮಕ್ಕಳೊಂದಿಗೆ ಸೇರಿಕೊಂಡು ಆಡುತ್ತಿದ್ದ ಆ ಆಟಪಾಟಗಳು! ರಾಟೆಯ ಬಾವಿಯಿಂದ ಬಂದು ಬೀಳುತ್ತಿದ್ದ ನೀರಿನ ಕೆಳಗೆ

ತಲೆಕೊಟ್ಟು ಕುಣಿದಾಡುತ್ತಾ ಮಾಯುತ್ತಿದ್ದಳು. ಆಗಲೂ ಇದೇ ರೀತಿಯ ಜಾನಪದ ಗೀತೆಯ ಭಾವಲಹರಿ ಗಾಳಿಯಲ್ಲಿ ತೇಲಿಬರುತ್ತಿತ್ತು. ಸಾಯಂಕಾಲದ ಮಬ್ಬಿನ ವಾತಾವರಣಕ್ಕೂ ಆ ಭಾವಲಹರಿಗೂ ವಿಶಿಷ್ಟವಾದಂತಹ ಸಂಬಂಧವಿದೆ. ಅವಳು ದೊಡ್ಡವಳಾದಂತೆ ಅವಳ ಜೀವನದ ಜೊತೆಗೆ ಅದರ ಸಂಬಂಧ ಇನ್ನಷ್ಟು ಗಾಢವಾಗುತ್ತಿರುವಂತೆ ಅವಳಿಗೆ ಭಾಸವಾಗುತ್ತಿತ್ತು. ಅವರ ಊರಿನ ಹುಡುಗ ಲಾಲಿ ಒಂದು ವಿಶೇಷ ಗತ್ತಿನಿಂದ ಮಹಿಯಾ ಹಾಡುತ್ತಿದ್ದ. ಊರಿನ ಆಚೆ ಅರಳಿಮರದ ಕೆಳಗೆ, ಕಿವಿಯ ಬಳಿಗೆ ಕೈ ಇಟ್ಟು, ತಲೆಯೆತ್ತಿ ಅವನು ಅದನ್ನು ರಸವತ್ತಾಗಿ ಹಾಡುತ್ತಿದ್ದುದನ್ನು ಅವಳು ಎಷ್ಟೋ ಬಾರಿ ಕಂಡಿದ್ದಳು. ಪುಷ್ಪಾ ಮತ್ತು ಪಾರೋ ಇವರ ಜೊತೆಗೂಡಿ ಅವಳು ಎಷ್ಟೋ ವೇಳೆ ಬಹಳ ಹೊತ್ತು ನಿಂತು ಅದನ್ನು ಕೇಳುತ್ತಿದ್ದಳು. ಕೊನೆಗೊಂದು ದಿನ ಅವಳು ಮನೆಗೆ ಹೋದಾಗ, 'ಈಗ ನೀನು ದೊಡ್ಡವಳಾಗಿಬಿಟ್ಟಿದ್ದೀಯೇ, ಅಷ್ಟಷ್ಟು ಹೊತ್ತು ಅರಳಿಮರದ ಹತ್ತಿರ ನಿಂತಿರಕೂಡದು' ಎಂದು ಅವಳ ತಾಯಿ ಹೇಳಿದಳು. ಅದೇ ಸಮಯದಲ್ಲಿ ಅವಳ ಮದುವೆ ಮಾತುಕತೆ ನಡೆಯಿತು. ಸುಚ್ಚಾಸಿಂಗನೊಡನೆ ಅವಳ ಮದುವೆ ನಿಶ್ಚಿತವಾದ ದಿನ ರಾತ್ರಿ ನಡುರಾತ್ರಿಯ ವರೆಗೂ ಢೋಲಕ್ ಬಾರಿಸಿಕೊಂಡು ಪಾರೋ ಹಾಡುತ್ತಾ ಕುಳಿತಿದ್ದಳು. ಹಾಡುತ್ತಾ ಹಾಡುತ್ತಾ ಅವಳ ಗಂಟಲು ಬಿಗಿದುಕೊಂಡಿತ್ತು. ಆದರೂ ಆಗಾಗ ಢೋಲಕ್ಕನ್ನು ಬದಿಗೆ ಇಟ್ಟು ಅವಳು ತನ್ನನ್ನು ಪ್ರೀತಿಯಿಂದ ಅಪ್ಪಿಕೊಂಡು ಛೇಡಿಸಿ ಮುಂದೆ ಹಾಡುತ್ತಿದ್ದಳು.

> "ಬೀ ಬೀ ಚನ್ನಣ ದೇ ಓಹಲೇ ಓಹಲೇ ಕಿವೂಂ ಖಡೀ"
> ನೀ ಲಾಡೋ ಕಿವೂಂ ಖಡೀ?
> ಮೈ ತಾಂಖಡೀ ಸಾಂ ಬಾಬಲ್ ಜೀ ದೇ ಬಾರ್,
> ಮೈ ಕನಿಯಾ ಕಂವಾರ್,
> ಬಾಬಲ್ ಬರ್ ಲಾಂಡಿಯ
> ನೀಂ ಜಾಯಿಯೇ, ಕಿಹೋಂ ಜಿಹಾ ಬರ್‌ಲಾಂಡಿಯ?
> ಜಿವೂಂ ತಾರಿಯಾಂ ವಿಜೀ ಚಂದ್
> ಚಂದಾ ವಿಚೋ ನಂದ್
> ನಂದಾಂ ವಿಚೋ ಕಾನ್ಹ ಕನ್ಹೈಯಾ ಬರ್‌ಲಾಂಡಿಯೇ...!

[ಓ ಮುಗ್ಧೆ, ಆ ಗಂಧದ ಮರದ ಬಳಿ ಏಕೆ ಹಾಗೆ ನಿಂತಿರುವೆ? ಏಕೆ ನಿಂತಿರುವೆ ಹಾಗೆ, ಮಗಳೇ?... ನಾನಿನ್ನೂ ಹರೆಯದ ಹೆಣ್ಣು, ನಿಂತಿಹೆನು ನನ್ನ ತವರಿನ ಬಾಗಿಲಲ್ಲಿ, ಮದುವೆಯ ನಿರೀಕ್ಷೆಯಲಿ... ನನ್ನ ತಂದೆ ನನಗೊಬ್ಬ ವರನ ಹುಡುಕುತಿಹರು... ಮುಗ್ಧೆ, ನಿನಗೆಂಥ ವರ ಬೇಕು ಹೇಳೆ?... ನನಗೆ ಬೇಕು ನಕ್ಷತ್ರಗಳ ಮಧ್ಯೆ ಪ್ರಕಾಶಿಸುವ ಚಂದ್ರಮನಂತಹ ವರ, ನಂದಗೋಕುಲದಲ್ಲಿಯ ಕೃಷ್ಣಕನ್ಹೈಯನಂತಹ ವರ...]

ಅವನ ವರ ಯಾರು, ಅವನು ಹೇಗಿದ್ದಾನೆ–ಇದೊಂದೂ ಅವಳಿಗೆ ಗೊತ್ತಿರಲಿಲ್ಲ. ಆದರೂ ಹಾಡಿನ ಭಾವಲಹರಿಯಿಂದಾಗಿ ತನ್ನ ಮನಸ್ಸಿನಲ್ಲಿ ಮೂಡಿದ್ದಂತಹ ಮೂರ್ತಿಗೆ ಹೋಲುವ ರೂಪವೇ ಅವನದೂ ಆಗಿರಬೇಕೆಂದು ಅವಳ ಮನಸ್ಸಿಗೆ ಭಾಸವಾಗುತ್ತಿತ್ತು. ಮದುವೆಯ ದಿನ ರಾತ್ರಿ ಸುಚ್ಚಾಸಿಂಗ್ ಅವಳ ಮುಸುಕನ್ನು ತೆಗೆದಾಗ ಅವನನ್ನು ಕಂಡ ಅವಳಿಗೆ ತನ್ನ ಕಲ್ಪನೆ ನಿಜವಾಯಿತೆನಿಸಿತು. ತನ್ನ ಕಲ್ಪನೆಯ ಕೃಷ್ಣಕನ್ಹೈಯಾಗೆ ಹೋಲುವ ರೂಪವೇ ಅವನದಾಗಿತ್ತು. ಸುಚ್ಚಾಸಿಂಗನು ಅವಳ ಗಲ್ಲವನ್ನು ಮೃದುವಾಗಿ ಮುಟ್ಟಿ ಮುಖವನ್ನು ಮೇಲಕ್ಕೆತ್ತಿದಾಗ ತಲೆಯಿಂದ ಕಾಲಿನ ಅಂಗುಷ್ಠದ ವರೆಗೂ ವಿದ್ಯುತ್ ಸಂಚಾರವಾದಂತಾಗಿತ್ತು. ಜೀವನದಲ್ಲಿ ಇನ್ನೆಷ್ಟು ಬಾರಿ ಇಂತಹ ಸುಮಧುರ ಸನ್ನಿವೇಶ ಗಳು ಬಂದು ಅವುಗಳನ್ನು ಪ್ರತಿದಿನವೂ ಅವಳು ಆನಂದದಿಂದ ಅನುಭವಿಸಬೇಕಾಗು ತ್ತದೆಯೋ ಮತ್ತು ಅವುಗಳೆಲ್ಲ ಸವಿನೆನಪುಗಳಾಗಿ ಅವಳ ಮನಸ್ಸಿನಲ್ಲಿ ಉಳಿಯುತ್ತವೆಯೋ ಎಂದು ಅವಳು ಆಗ ಯೋಚಿಸಿದ್ದಳು.

"ನೀ ನನ್ನ ಬಾಳ ಬಂಗಾರ; ನೀ ನನ್ನ ಚಿನ್ನಾ" ಎಂದೆಲ್ಲ ಸುಚ್ಚಾ ಸಿಂಗ್ ಅವಳನ್ನು ತನ್ನ ತೋಳಬಂದಿಯಾಗಿ ಮಾಡಿಕೊಂಡು ಹೇಳಿದ್ದ.

ನೀವು ಯಾವುದನ್ನು ಚಿನ್ನಾ ಎಂದು ಭಾವಿಸಿದ್ದೀರೋ ಅದು ನಿಮ್ಮ ಪಾದಧೂಳಿಗೆ ಸಮಾನ ಎಂದು ಹೇಳಬೇಕೆನ್ನಿಸಿತ್ತು. ಆದರೆ ನಾಚಿಕೆಯಿಂದಾಗಿ ಹಾಗೆ ಹೇಳದೆ ಸುಮ್ಮ ನಾಗಿದ್ದಳು.

"ತಾಯಿ, ಕತ್ತಲೆಯಾಗುತ್ತಿದೆ. ಈಗ ಮನೆಗೆ ಹೋಗು. ಇಲ್ಲಿ ನಿಂತು ಏನು ಮಾಡು ತ್ತೀಯೆ?" ಎಂದು ನೀರಿನ ಮಳಿಗೆಯವನು ತನ್ನ ಕೆಲಸ ಮುಗಿಸಿ ಹೋಗುತ್ತಾ ಹೇಳಿದ.

"ಏನಪ್ಪ, ಈಗ ಹೋದ ಬಸ್ಸು ಎಂಟು–ಒಂಭತ್ತು ಗಂಟೆ ಹೊತ್ತಿಗೆ ಜಲಂಧರದಿಂದ ವಾಪಸ್ಸು ಬರುತ್ತದಲ್ಲಾ?" ಎಂದು ದೈನ್ಯ ಭಾವದಿಂದ ಅವನನ್ನವಳು ಕೇಳಿದಳು.

"ಯಾವಾಗ ಬರುತ್ತದೋ ಏನೋ, ಅದು ಬರೋತನಕ ನೀನು ಇಲ್ಲಿ ಕಾಯುತ್ತಾ ನಿಲ್ತೀಯೇನು?"

"ಅವನ ರೊಟ್ಟಿ ಕೊಡಬೇಕಲ್ಲ."

"ರೊಟ್ಟಿ ಬೇಕಿದ್ದರೆ ಆಗಲೇ ತೆಗೆದುಕೊಳ್ಳುತ್ತಿರಲಿಲ್ಲವೆ? ಯಾವಾಗಲೂ ಹಾಗೇ. ಅವನ ದಿಮಾಕು ಮುಗಿಲೆತ್ತರಕ್ಕಿರುತ್ತೆ."

"ಹಾಗಲ್ಲಪ್ಪ. ಎಷ್ಟೆ ಆಗಲಿ ಗಂಡಸು. ಕೋಪಗೊಳ್ಳುವುದು ಸಹಜ. ಇದರಲ್ಲೇನು ವಿಶೇಷವಿದೆ?"

"ಸರಿ, ಹಾಗಾದರೆ ನಿಂತಿರಮ್ಮ, ನಿನ್ನ ಇಷ್ಟ. ಬಸ್ಸು ಒಂಭತ್ತು ಗಂಟೆಗೆ ಬರೋ ಹಾಗಿಲ್ಲ."

"ಸರಿ. ಯಾವಾಗಲಾದರೂ ಬರಲಿ."

ನೀರಿನ ಮಳಿಗೆಯವನೊಂದಿಗೆ ಮಾತನಾಡುತ್ತಿದ್ದಂತೆಯೇ ಜಲಂಧರದಿಂದ ಬಸ್ಸು ವಾಪಸ್ಸು ಬರುವ ತನಕ ಅಲ್ಲೇ ಕಾದು ನಿಂತಿರತಕ್ಕದ್ದೆಂಬ ತೀರ್ಮಾನಕ್ಕೆ ಅವಳು ಬಂದಿದ್ದಳು. ಜಿಂದಾ ಸ್ವಲ್ಪ ಹೆದರುತ್ತಾಳೆ – ಅಷ್ಟೇ ತಾನೇ? ಈಗ ಎರಡನೆಯ ಬಾರಿಗೆ ಅವಳನ್ನು ಕೆಣಕುವ ಸಾಹಸಕ್ಕೆ ಅವನು ಕೈಹಾಕಲಾರ. ಕೊನೆಗೆ ಊರಿನ ಪಂಚಾಯಿತಿಗಾದರೂ ಅವನು ಹೆದರಬೇಕಷ್ಟೆ. ಬೇರೆಯವರ ಹೆಣ್ಣುಮಕ್ಕಳ ಮೇಲೆ ಕಣ್ಣು ಹಾಕುವುದು ಅಷ್ಟೇನು ಸುಲಭ ಆಯಿತೆ? ಸುಚ್ಚಾಸಿಂಗನಿಗೆ ಗೊತ್ತಾದರೆ ಅವನು ಅವನ ಜುಟ್ಟು ಹಿಡಿದು ಊರಿನ ಮುಂದೆ ಅವನನ್ನು ತಂದು ನಿಲ್ಲಿಸದೆ ಬಿಟ್ಟಾನೆ? ಆದರೆ... ಈ ಮಾತನ್ನು ಸುಚ್ಚಾಸಿಂಗನಿಗೆ ತಿಳಿಸದಿದ್ದರೇ ಒಳ್ಳೆಯದು. ಯಾರಿಗೆ ಗೊತ್ತು – ಒಂದು ಚಿಕ್ಕ ಮಾತಿನಿಂದಾಗಿ ಇಬ್ಬರೂ ತಲೆ ಒಡೆದುಕೊಳ್ಳುವಂತಹ ಪ್ರಸಂಗ ಬಂದರೆ! ಸುಚ್ಚಾಸಿಂಗ್ ಮೊದಲೇ ಮನೆ ಝಂಝಾಟದಿಂದ ಬೇಸತ್ತಿದ್ದಾನೆ. ಅವನ ತಲೆಯನ್ನು ಇನ್ನಷ್ಟು ಕೆಡಿಸುವುದು ಒಳ್ಳೆಯದಲ್ಲ. ಆ ಸಮಯದಲ್ಲಿ ಸುಚ್ಚಾಸಿಂಗ್ ತನ್ನ ಮಾತನ್ನು ಕೇಳದಿದ್ದುದೇ ಒಳ್ಳೆಯದಾಯಿತು. ಮಂಗಳವಾರ ತಾನು ಬರುವುದಿಲ್ಲವೆಂದು ಅವನು ಹೇಳುತ್ತಿದ್ದ. ಅವನು ನಿಜವಾಗಿಯೂ ಬರದೆಹೋದರೆ? ಇಲ್ಲ, ಅವನ ತಲೆಕೆಡಿಸುವ ಯಾವ ಮಾತನ್ನೂ ಅವನಿಗೆ ಹೇಳಲೇಬಾರದು. ಅವನು ನೆಮ್ಮದಿಯಿಂದ ಇರಲಿ. ಮನೆಯ ಝಂಝಾಟವನ್ನೆಲ್ಲ ನಾನೇ ಎದುರಿಸಬೇಕು.

ಅವಳಿಗೆ ಸ್ವಲ್ಪ ಹೆದರಿಕೆಯೂ ಆಯಿತು. ಊರಿನ ಲೋಟುಸಿಂಗ ತನ್ನ ಹೆಂಡತಿಯನ್ನು ಬಿಟ್ಟು ಓಡಿಹೋಗಿದ್ದ. ಅವನು ಹಾಗೆ ಹೋದ ನಂತರ ಅವಳು ಒಂದೊಂದು ರೊಟ್ಟಿಚೂರಿಗಾಗಿ ತ್ರಾಹಿ ತ್ರಾಹಿ ಎನ್ನುವ ಗತಿ ಬಂತು. ಅಂತಹ ಪರಿಸ್ಥಿತಿಯಲ್ಲಿ ಅವಳು ಬಾವಿಗೆ ಹಾರಿಕೊಂಡು ಪ್ರಾಣಬಿಟ್ಟಿದ್ದಳು. ನೀರು ತುಂಬಿಕೊಂಡು ಅವಳ ದೇಹ ಅದೆಷ್ಟು ವಿಕಾರವಾಗಿ ಹೋಗಿತ್ತು.

ಅವಳಿಗೆ ತುಂಬಾ ಆಯಾಸವಾಗತೊಡಗಿತ್ತು. ಇದರಿಂದಾಗಿ ಅವಳು ಹೋಗಿ ನೀರಿನ ಮಳಿಗೆ ಮುಂದಿದ್ದ ಹಲಗೆಯ ಮೇಲೆ ಕುಳಿತುಕೊಂಡಳು. ಕತ್ತಲೆಯಾದಂತೆ ಹೊಲಗಳಲ್ಲಿ ಮತ್ತೆ ಸ್ತಬ್ಧ ವಾತಾವರಣ ಮೂಡತೊಡಗಿತು. ಜಾನಪದ ಗೀತೆಯ ಸ್ಥಾನದಲ್ಲಿ ಈಗ ಜಿರಲೆಗಳ ಸಂಗೀತ ಆರಂಭವಾಗಿತ್ತು. ಒಂದು ಬಸ್ಸು ನಕೋದರದ ಕಡೆಯಿಂದಲೂ ಇನ್ನೊಂದು ಜಲಂಧರದ ಕಡೆಯಿಂದಲೂ ಬಂದು ಹೋಗಿದ್ದುವು. ಜಲಂಧರದಿಂದ ಬರುವ ಕೊನೆಯ ಬಸ್ಸೇ ಸುಚ್ಚಾಸಿಂಗನದು. ಇದಕ್ಕೆ ಮುಂಚೆ ಜಲಂಧರದಿಂದ ಬಸ್ಸಿನ ಡ್ರೈವರನ ಮೂಲಕ ಅವಳು ಇನ್ನು ಒಂದೇ ಒಂದು ಬಸ್ಸು ಜಲಂಧರದಿಂದ ಬರಬೇಕಾಗಿದೆಯೆಂಬುದನ್ನು ತಿಳಿದುಕೊಂಡಿದ್ದಳು. ಈಗ ಯಾವ ಬಸ್ಸಿನ ದೀಪಗಳು ಕಾಣಿಸುತ್ತವೆಯೋ ಅವು ಸುಚ್ಚಾಸಿಂಗನ ಬಸ್ಸಿನ ದೀಪಗಳೇ ಆಗಿರಬೇಕು. ಆಯಾಸದಿಂದಾಗಿ ಅವಳಿಗೆ ನಿದ್ದೆ ಬರುತ್ತಿತ್ತು; ಕಣ್ಣುಗಳು ಮುಚ್ಚಿಕೊಳ್ಳುತ್ತಿದ್ದುವು. ಅವಳು ಪದೇ ಪದೇ ತುಂಬಾ ಪ್ರಯಾಸಪಟ್ಟು ಕಣ್ಣುಗಳನ್ನು ಬಿಟ್ಟು ದೂರ ದೂರದ ವರೆಗೆ ದೃಷ್ಟಿ ಹಾಯಿಸು

ತ್ತಿದ್ದಳು. ಸ್ವಲ್ಪ ಶಬ್ದ ಬಂದರೂ ಸರಿಯೇ ಬಸ್ಸೇ ಬರುತ್ತಿದೆ ಎಂದು ಭ್ರಮಿಸಿ ಗಡಿಬಿಡಿಯಿಂದ ಏಳುತ್ತಿದ್ದಳು. ಆದರೆ ಬಸ್ಸಿನ ಲೈಟುಗಳು ಕಾಣದೆ ನಿಟ್ಟುಸಿರು ಬಿಟ್ಟು ಮತ್ತೆ ಅಲ್ಲೇ ನಿರುತ್ಸಾಹಗೊಂಡು ಕುಳಿತುಬಿಡುತ್ತಿದ್ದಳು. ಒಂದೆರಡು ಬಾರಿ ಬಸ್ಸಿನ ಲೈಟುಗಳ ಬೆಳಕು ತನ್ನ ಮೇಲೆ ನೇರವಾಗಿ ಬೀಳುತ್ತಿದೆ ಎಂದು ಭ್ರಮಿಸಿ ಗಾಬರಿಯಿಂದ ಕಣ್ಣು ಬಿಟ್ಟು ನೋಡುತ್ತಾಳೆ–ಯಾವ ಬಸ್ಸೂ ಇರುವುದಿಲ್ಲ ಅಲ್ಲಿ. ಮತ್ತೆ ಹಾಗೆಯೇ ಕಣ್ಣು ಮುಚ್ಚಿದಾಗ ಅವಳು ತನ್ನ ಮನೆಯಲ್ಲಿರುವಂತೆ ಅವಳಿಗೆ ಭಾಸವಾಯಿತು. ಯಾರೋ ಜೋರಾಗಿ ಬಾಗಿಲು ಬಡಿಯುತ್ತಿದ್ದಾರೆ. ಜಿಂದಾ ಒಳಗೆ ಹೆದರಿಕೊಂಡು ಕುಳಿತಿದ್ದಾಳೆ. ಅವಳ ಮುಖ ಬಿಳಿಚಿಕೊಳ್ಳುತ್ತಿದೆ. ... ಏತದ ಎತ್ತುಗಳು ಒಂದೇ ಸಮನೆ ಸುತ್ತು ಹಾಕುತ್ತಿವೆ. ಅವುಗಳ ಕತ್ತಿನ ಗಂಟೆಗಳ ನಾದಕ್ಕೆ ತಾಳ ಹಾಕಿದಂತೆ ಅರಳಿಮರದ ಕೆಳಗೆ ಕುಳಿತ ಯುವಕ ಕಿವಿಯ ಬಳಿ ಕೈ ಇಟ್ಟುಕೊಂಡು ಧ್ವನಿಯೆತ್ತಿ ಹಾಡುತ್ತಿದ್ದಾನೆ. ಅಷ್ಟರಲ್ಲಿ ಮುಗಿಲೆತ್ತರಕ್ಕೆ ಧೂಳೆದ್ದು ಭೂಮಿ ಮತ್ತು ಆಕಾಶ ಒಂದುಮಾಡಿ ಎಲ್ಲವನ್ನೂ ಹಾರಿಸಿಕೊಂಡು ಹೋಗುತ್ತಿದೆ. ತನ್ನ ಕೈಯಲ್ಲಿರುವ ರೊಟ್ಟಿಯ ಬುತ್ತಿಯನ್ನು ಗಟ್ಟಿಯಾಗಿ ಹಿಡಿದಿರಲು ಪ್ರಯತ್ನಿಸುತ್ತಿದ್ದಾಳೆ; ಆದರೆ ಅದು ಅವಳ ಕೈಯಿಂದ ಜಾರಿಹೋಗುತ್ತಿದೆ... ನೀರಿನ ಮಳಿಗೆಯಲ್ಲಿನ ಗಡಿಗೆಗಳೆಲ್ಲ ಬತ್ತಿಹೋಗಿವೆ. ಒಂದಿಷ್ಟೂ ನೀರಿಲ್ಲ. ಪದೇ ಪದೇ ಅವಳು ತನ್ನ ಲೋಟವನ್ನು ಮಡಕೆಯಲ್ಲಿ ಹಾಕುತ್ತಾಳೆ, ಅದರಲ್ಲಿ ನೀರು ಬಾರದೆ ನಿರಾಶಳಾಗುತ್ತಾಳೆ... ಅವಳ ಕಾಲುಗಳ ನರಗಳು ಸಿಡಿಯುತ್ತಿವೆ; ಅವುಗಳಿಗೆ ಅವಳು ತನ್ನ ಕೈಯಿಂದ ಎಣ್ಣೆ ಸವರುತ್ತಿದ್ದಾಳೆ. ಎಣ್ಣೆ ಸವರಿದ ಹಾಗೆ ಅದು ಅಲ್ಲೇ ಒಣಗಿಹೋಗುತ್ತಿದೆ.... ಜಿಂದಾ ಬಿಡಿಸಿದ ತನ್ನ ತಲೆಗೂದಲನ್ನು ಮುಂದಕ್ಕೆ ಹಾಕಿಕೊಂಡು ಅಳುತ್ತಿದ್ದಾಳೆ. "ನನ್ನನ್ನು ಬಿಟ್ಟು ನೀನು ಏಕೆ ಹೋಗಿದ್ದೆ... ಏಕೆ ಹೋಗಿದ್ದೆ ಹೇಳು?"

ಇದ್ದಕ್ಕಿದ್ದಂತೆ ಅವಳ ಭುಜದ ಮೇಲೆ ಕೈಯಿಟ್ಟು ಯಾರೋ ಮುಟ್ಟಿದ ಪರಿಣಾಮವಾಗಿ ಅವಳು ಗಾಬರಿಯಿಂದ ಎಚ್ಚೆತ್ತಳು.

"ಸುಚ್ಚಾ ಸ್ಯಾಂ" ಅವಳು ಬೇಗ ಕಣ್ಣುಜ್ಜಿಕೊಂಡಳು.

"ನೀನು ಇನ್ನೂ ಮನೆಗೆ ಹೋಗಿಲ್ಲವೇ?" ಎಂದು ಹೇಳಿ ಸುಚ್ಚಾಸಿಂಗ್ ಅಲ್ಲೇ ಆ ಹಲಗೆಯ ಮೇಲೆ ಅವಳ ಬಳಿಯೇ ಕುಳಿತುಕೊಂಡ. ಬಸ್ಸು ಈಗ ನೇರವಾಗಿ ಮುಂದೆ ನಿಂತುಕೊಂಡಿತ್ತು. ಒಬ್ಬ ಪ್ರಯಾಣಿಕನೂ ಈಗ ಅದರಲ್ಲಿ ಇರಲಿಲ್ಲ. ಕಂಡಕ್ಟರನು ಹಿಂದಿನ ಸೀಟಿನಲ್ಲಿ ತೂಕಡಿಸುತ್ತಿದ್ದ.

"ರೊಟ್ಟಿ ಕೊಟ್ಟೇ ಹೋಗುವುದೆಂದು ಕುಳಿತೆ... ಕುಳಿತಲ್ಲೇ ನಿದ್ದೆ ಬಂದುಬಿಟ್ಟಿತು. ನೀನು ಬಂದು ಬಹಳ ಹೊತ್ತಾಗಲಿಲ್ಲ ತಾನೆ?"

"ಇಲ್ಲ. ಈಗ ತಾನೇ ಬಸ್ಸು ನಿಲ್ಲಿಸಿದೆ. ದೂರದಿಂದಲೇ ನಾನು ನಿನ್ನನ್ನು ನೋಡಿದೆ. ನೀನು ರೊಟ್ಟಿ ಕೊಡಲು ಇಷ್ಟು ಹೊತ್ತೂ ಕುಳಿತುಕೊಳ್ಳುವುದೇ, ಎಂಥ ಹುಚ್ಚಿ!"

"ನಾನು ಮತ್ತೇನು ಮಾಡಬೇಕಿತ್ತು. ನೀನೋ ಮನೆಗೇ ಬರೋದಿಲ್ಲ ಎಂದು ಹೇಳಿ ಹೋಗಿದ್ದೆ". ಎಂದು ಹೇಳಿ ಅವಳು ತನ್ನ ಕಣ್ಣುಗಳಲ್ಲಿ ಒತ್ತಿಬರುತ್ತಿದ್ದ ಅಶ್ರುಧಾರೆಯನ್ನು ತಡೆಹಿಡಿಯಲು ಪ್ರಯತ್ನಿಸುತ್ತಿದ್ದಳು.

"ಇರಲಿ, ಈಗ ಕೊಡು ಮತ್ತು ಮನೆಗೆ ಹೋಗು. ಜಿಂದಾ ಅಲ್ಲಿ ಒಬ್ಬಳೇ ಹೆದರುತ್ತಿರಬೇಕು", ಎಂದು ಹೇಳಿ ಅವಳ ಬೆನ್ನು ತಟ್ಟಿ ಸಮಾಧಾನಮಾಡಿ ಎದ್ದುನಿಂತ.

ರೊಟ್ಟಿಯಿದ್ದ ಬಟ್ಟಲನ್ನು ಅವಳಿಂದ ತೆಗೆದುಕೊಂಡು ಸುಚ್ಚಾಸಿಂಗ್ ಅವಳ ಬೆನ್ನಿನ ಮೇಲೆ ಕೈಯಿಟ್ಟುಕೊಂಡು ಬಸ್ಸಿನ ವರೆಗೂ ಅವಳನ್ನು ಕರೆದುಕೊಂಡು ಹೋದ. ಮತ್ತು, ಆ ನಂತರ ತನ್ನ ಸೀಟಿಗೆ ಹಾರಿ ಕುಳಿತುಕೊಂಡು, ಅವನು ಬಸ್ಸನ್ನು ಸ್ಟಾರ್ಟ್ ಮಾಡುವಾಗ ಅವಳು ಹೆದರಿ ಹೆದರಿ ಹೇಳಿದಳು: "ಸುಚ್ಚಾ ಸ್ಯಾಂ, ನೀನು ಮಂಗಳವಾರ ಮನೆಗೆ ಬರುತ್ತೀ ತಾನೇ?"

"ಹಾಂ, ಬರುತ್ತೇನೆ. ಬರುವಾಗ ಪೇಟೆಯಿಂದ ಏನಾದರೂ ತರುವುದಿದ್ದರೆ ಹೇಳು."

"ಇಲ್ಲ, ಏನೂ ಇಲ್ಲ."

ಬಸ್ಸು ಘರ್ ಘರ್ ಎಂದು ಶಬ್ದ ಮಾಡತೊಡಗಿತು. ಅವಳು ಎರಡು ಹೆಜ್ಜೆ ಹಿಂದಕ್ಕೆ ಸರಿದಳು. ಸುಚ್ಚಾಸಿಂಗ್ ತನ್ನ ಗಡ್ಡ ಮೀಸೆಯ ಮೇಲೆ ಒಂದು ಬಾರಿ ಕೈಯಾಡಿಸಿದ. ಒಂದು ಬಾರಿ ತೇಗಿ ಅವಳ ಕಡೆ ನೋಡಿ ಕೇಳಿದ, "ನೀನು ಆಗ ಏನೋ ವಿಚಾರ ಇದೆ ಎಂದೆಯಲ್ಲಾ...?"

"ಇಲ್ಲ. ಅಂತಹ ದೊಡ್ಡ ವಿಚಾರವೇನೂ ಇಲ್ಲ... ನೀನು ಮಂಗಳವಾರ ಮನೆಗೆ ಬರುತ್ತೀಯಲ್ಲ..."

"ಆಗಲಿ... ಈಗ ನೀನು ಬೇಗ ಹೋಗು. ಹೊತ್ತು ಮಾಡಬೇಡ. ಒಂದು ಮೈಲಿ ಹೋಗಬೇಕು."

"ಸುಚ್ಚಾ ಸ್ಯಾಂ. ನಾಳೆ ಗುರುಗಳ ಪುಣ್ಯತಿಥಿ ಇದೆ. ನಾಳೆ 'ಕಡಾಹ ಪರಶಾದ್' ಮಾಡಿ ತರುತ್ತೇನೆ."

"ಆಗಲಿ... ಆಗಲಿ."

ಬಸ್ಸು ಹೊರಟಿತು. ಬಸ್ಸಿನ ಧೂಳು ಸುತ್ತಲೂ ಆವರಿಸಿತು. ಧೂಳು ಕಮ್ಮಿಯಾದ ಮೇಲೆ ಅವಳು ಸೆರಗಿನಿಂದ ಕಣ್ಣು ಒರೆಸಿಕೊಂಡಳು. ಮತ್ತು ಬಸ್ಸಿನ ಹಿಂಭಾಗದ ಕೆಂಪು ದೀಪ ತನ್ನ ಕಣ್ಣಿಗೆ ಕಾಣುವ ವರೆಗೂ ಆ ಕಡೆಗೇ ನೋಡುತ್ತಾ ನಿಂತಳು.

# ಬೇಸಿಗೆಯ ದಿನಗಳು

ಪೌರಸಭೆಯ ಕಚೇರಿಗೆ ಚೆನ್ನಾಗಿ ಸುಣ್ಣ-ಬಣ್ಣ ಆಗಿದೆ. ಅದರ ಬಾಗಿಲಲ್ಲಿ ಬಣ್ಣ ಬಣ್ಣದ ಬೋರ್ಡುಗಳು ಬಂದಿವೆ. ಪೇಂಟರ್ ಸೈಯದ್ ಅಲಿ ಅವುಗಳನ್ನು ತುಂಬಾ ಚೆನ್ನಾಗಿ ಬರೆದಿದ್ದಾನೆ. ಊರಿನಲ್ಲಿ ಇತ್ತೀಚೆಗೆ ಅನೇಕ ಹೊಸ ಅಂಗಡಿಗಳು ತೆರೆದಿವೆ. ಅವುಗಳ ಮೇಲೆಲ್ಲ ಬೋರ್ಡುಗಳು ಬಂದಿವೆ. ಬೋರ್ಡು ತಗಲಿಸುವುದು ಪ್ರತಿಷ್ಠೆ ಹೆಚ್ಚಿಸುವ ಸಲುವಾಗಿ. ಹೆಸರು ಪ್ರಚಾರಕ್ಕೆ ಬರುತ್ತದೆ. ಬಹಳ ಹಿಂದೆ ಮೊದಲ ಬಾರಿ ದೀನಾನಾಥ್ ಹಲ್ವಾಯಿಯು ಅಂಗಡಿಗೆ ಬೋರ್ಡು ಹಾಕಿದಾಗ ಅವನ ಗಿರಾಕಿಗಳ ಸಂಖ್ಯೆ ಇದ್ದಕ್ಕಿದ್ದಂತೆ ಹೆಚ್ಚಾಗಿತ್ತು. ವರಮಾನ ಹೆಚ್ಚಿತು. ಅದು ಹೆಚ್ಚಿದ ಹಾಗೆ ಹೊಸ ಹೊಸ ಆಕರ್ಷಣೆಯ ವಿಧಾನಗಳು ಬಂದುವು. ಹೂವಿನ ಬಳ್ಳಿ ಹಬ್ಬಿಸುವುದು, ಅಲಂಕಾರ ಮಾಡುವುದು – ಇತ್ಯಾದಿ. ಬೋರ್ಡಿನ ಮೇಲಿನ ಒಕ್ಕಣೆ ಕೂಡ ಬದಲಾಯಿತು. ಬೋರ್ಡಿನ ಮೇಲೆ "ಜಯ್ ಹಿಂದ್" ಕಾಣಿಸಿಕೊಂಡಿತು. ಅದು ಮೊದಲ ಸಾಲು. "ಒಮ್ಮೆ ಪರೀಕ್ಷಿಸಿ ನೋಡಿ." 'ಶುದ್ಧ ಅಪ್ಪಟ ತುಪ್ಪದಿಂದ ತಯಾರಾಗುತ್ತದೆ – ಬೆರಕೆ ತುಪ್ಪದಿಂದ ಎಂದು ಸಾಬೀತು ಮಾಡುವವರಿಗೆ ನೂರು ರೂ. ಇನಾಮ್ ಕೊಡಲಾಗುವುದು." ಎಂಬ ವಿನಂತಿ ಅಥವಾ ಘೋಷಣೆಯಿಂದ ಸಮಾಪ್ತಿ.

ಪೌರಸಭೆ ಕಚೇರಿಯ ಹೆಸರನ್ನು ಮೂರು ಭಾಷೆಗಳಲ್ಲಿ ಬರೆಯಲಾಗಿದೆ. ಚೇರ್‌ಮನ್ ಸಾಹೇಬರು ತುಂಬಾ ಬುದ್ಧಿವಂತರು. ಅವರ ದೂರದೃಷ್ಟಿಯ ವಿಚಾರ ಸಾಕಷ್ಟು ಪ್ರಚುರವಾಗಿದೆ ಎಂದೇ, ಪ್ರತಿಯೊಂದು ಬೋರ್ಡನ್ನೂ ಹಿಂದೀ, ಉರ್ದು ಮತ್ತು ಇಂಗ್ಲೀಷು – ಈ ಮೂರು ಭಾಷೆಗಳಲ್ಲಿ ಬರೆಸಲಾಗಿದೆ. ದೂರ ದೂರದಿಂದ ಮುಖಂಡರು ಭಾಷಣ ಮಾಡಲು ಬರುತ್ತಾರೆ, ದೇಶ-ವಿದೇಶಗಳ ಪ್ರವಾಸಿಗರು ಆಗ್ರಾ ನೋಡಲು ಬರುತ್ತಾರೆ ಮತ್ತು ತಾಜಮಹಲ್ ನೋಡಿಕೊಂಡು ಪೂರ್ವದ ಕಡೆ ಹೋಗುವಾಗ ಈ ಹಾದಿಯಿಂದಲೇ ಹೋಗುತ್ತಾರೆ – ಅವರ ಮೇಲೆಲ್ಲ ಇದರ ಪ್ರಭಾವ ಆಗುತ್ತದೆ. ತಮ್ಮಾ. ಆಯಾ ಕಾಲಕ್ಕೆ ಹಾಗೂ ಸಂದರ್ಭಕ್ಕೆ ತಕ್ಕಂತೆ ಪ್ರಚಾರವೂ ಬೇಕಲ್ಲವೆ? ಹಬ್ಬ–ಹುಣ್ಣಿಮೆಯ ದಿನಗಳಲ್ಲಿ ಹಲ್ವಾಯಿ ಅಂಗಡಿಯ ಪ್ರಚಾರ. ಜುಲೈ – ಆಗಸ್ಟ್ ಅವಧಿಯಲ್ಲಿ ನೋಟುಬುಕ್ಕು–ಪಠ್ಯಪುಸ್ತಕ ಇತ್ಯಾದಿಗಳನ್ನು ಮಾರುವ ಅಂಗಡಿಯ ಪ್ರಚಾರ. ಮದುವೆ–ಮುಂಜಿ ಇತ್ಯಾದಿಗಳ ಕಾಲದಲ್ಲಿ ಬಟ್ಟೆ ಅಂಗಡಿಯ ಪ್ರಚಾರ – ಹೀಗೆ ಒಂದೊಂದು ಒಂದೊಂದು ಪ್ರಾಮುಖ್ಯತೆ ಪಡೆಯುತ್ತದೆ. ಹವಾಮಾನ ಕೆಟ್ಟಿರುವ ಕಾಲದಲ್ಲಿ ವೈದ್ಯರು – ಹಕೀಮರ ಸೈನ್‌ಬೋರ್ಡ್‌ಗಳ ಮೇಲೆ ಹೊಸ ಕಳೆ ಬರುತ್ತದೆ. ಶುದ್ಧ ದೇಸಿ ತುಪ್ಪದವರು ತಮ್ಮ ಅಂಗಡಿಯ ಒಳಗೆ ಕೆಮ್ಮಣ್ಣಿನಿಂದ ಬರೆಯುವುದಷ್ಟು

ರಿಂದಲೇ ತೃಪ್ತಿಪಟ್ಟುಕೊಳ್ಳುತ್ತಾರೆ. ಈ ವಿಚಾರದಲ್ಲಿ ಎಲ್ಲರಿಗಿಂತ ಅವರೇ ವಾಸಿ ಎನ್ನ ಬೇಕು. ಹಾಗೆ ಅಂಗಡಿಯೊಳಗಾದರೂ ಬರೆದುಕೊಳ್ಳದೆ ಕೆಲಸ ನಡೆಯುವಂತಿಲ್ಲ. ವೈದ್ಯ ಮಹಾಶಯರು ಈ ವಿಚಾರದಲ್ಲಿ ತಮ್ಮ ವ್ಯಾಖ್ಯೆಯನ್ನು ಕೊಡುತ್ತಾ ಹೇಳಿದರು– ಪೋಸ್ಟರ್ ಹಚ್ಚದೆ ಸಿನಿಮಾದವರ ಕೆಲಸ ಕೂಡ ಸಾಗುವಂತಿಲ್ಲ. ದೊಡ್ಡ ದೊಡ್ಡ ಶಹರು ಗಳಿಗೆ ಹೋಗಿ ನೋಡಿ, ಸೀಮೆಯೆಣ್ಣೆ ಮಾರುವವರು ಕೂಡ ಅಂಗಡಿಯ ಮುಂದೆ ಬೋರ್ಡ್ ಹಚ್ಚಿಕೊಂಡಿರುತ್ತಾರೆ. ಅದಿಲ್ಲದೆ ಆಗುವುದೇ ಇಲ್ಲ. ಚಿಕ್ಕ ಚಿಕ್ಕ ಹುಡುಗರ ಹೆಸರನ್ನೂ ಸೈನ್‌ಬೋರ್ಡುಮೇಲೆ ಹಚ್ಚಿರುತ್ತಾರೆ, ಹಾಗಿಲ್ಲದಿದ್ದರೆ ಹೆಸರಿಡುವ ಅಗತ್ಯ ವಾದರೂ ಏನಿತ್ತು? ಸೈನ್ ಬೋರ್ಡ್ ಹಚ್ಚಿಯೇ ಕಾಂಪೌಂಡರ್ ಸುಖದೇವ್ ಬಾಬು ಡಾಕ್ಟರ್ ಆಗಿಹೋದರು ಮತ್ತು ಕೈಯಲ್ಲಿ ಪೆಟ್ಟಿಗೆ ಹಿಡಿದುಕೊಂಡು ತಿರುಗಾಡತೊಡ ಗಿದರು."

ಅವರ ಹತ್ತಿರವೇ ಕುಳಿತಿದ್ದ ರಾಮಚರಣ್ ಇನ್ನೊಂದು ಹೊಸ ವಿಚಾರದ ಸುದ್ದಿ ತಂದಿದ್ದ–"ನಿನ್ನೆ ಅವರು ಒಂದು ಜಟಕಾಗಾಡಿಯನ್ನೂ ಕೊಂಡುಕೊಂಡರು..."

"ಅದನ್ನು ನಡೆಸುವವರು ಯಾರು?" ಲೋಹದ ಕುರ್ಚಿಯ ಮೇಲೆ ಪ್ರಾಣಾ ಯಾಮದ ಭಂಗಿಯಲ್ಲಿ ಕುಳಿತಿದ್ದ ಪಂಡಿತ್‌ಜೀ ಕೇಳಿದರು.

ವೈದ್ಯಮಹಾಶಯರ ಧ್ಯಾನ ಈಗ ಸುಖದೇವ್ ಬಾಬು ಕೊಂಡುಕೊಂಡಿದ್ದ ಜಟಕಾ ಗಾಡಿಯ ಕಡೆಗೆ ವಿಶೇಷವಾಗಿತ್ತು. ಎಂದೇ ಅವರು ತಮ್ಮ ವ್ಯಾಖ್ಯಾನವನ್ನು ಮುಂದು ವರಿಸಿದರು–"ಇದೆಲ್ಲ ಜೇಬು ಕತ್ತರಿಸುವ ವಿಧಾನ, ಬೇರೇನೂ ಇಲ್ಲ. ರೋಗಿಯಿಂದ ಬಾಡಿಗೆ ವಸೂಲು ಮಾಡುತ್ತಾರೆ. ಕುದುರೆ ನೋಡಿಕೊಳ್ಳಲು ಇರುವ ನೌಕರನಿಗೆ, ದೊಡ್ಡ ದೊಡ್ಡ ಶಹರುಗಳಲ್ಲಿನ ಡಾಕ್ಟರುಗಳು ಮಾಡುವಂತೆ, ಬಕ್ಷೀಸನ್ನೂ ಕೊಡಿಸ ಬಹುದು. ಹೀಗೆಲ್ಲ ಮಾಡುವುದರಿಂದಲೇ ವೃತ್ತಿಗೆ ಕೆಟ್ಟ ಹೆಸರು ಬಂದಿರೋದು! ರೋಗಿಯ ಚಿಕಿತ್ಸೆ ಮುಖ್ಯವೋ, ಇದೆಲ್ಲ ಪ್ರತಿಷ್ಠೆ ತೋರಿಸುವುದು ಮುಖ್ಯವೋ ಎಂದು ಕೇಳಬೇಕು. ಇಂಗ್ಲಿಷ್ ವೈದ್ಯ ಮಾಡುವವರು ರೋಗಿಯನ್ನು ಈ ಕಡೆ ಆ ಕಡೆ ಹೊರಳಿ ಸಿಯೇ ಅರ್ಧಜೀವ ಮಾಡಿಬಿಡುತ್ತಾರೆ. ಆಯುರ್ವೇದ ತಿಳಿದಿರುವವರು ನಾಡಿ ನೋಡಿ ಹೇಳುವುದಿರಲಿ. ದೂರದಿಂದ ಮುಖ ನೋಡಿಯೇ ಇಂಥ ರೋಗವೆಂದು ಹೇಳಿಬಿಡು ತ್ತಾರೆ... ಹಾಗೇ ನೋಡ್ತಾ ಇರಿ, ಅವರ ಕುದುರೆ ಮಾಲೀಷಿಗೆ ಇರುವ ನೌಕರ ಕಾಂಪೌಂಡರ್ ಆಗಿಬಿಡುತ್ತಾನೆ..." ಹೀಗೆ ಹೇಳುತ್ತಾ ವೈದ್ಯಮಹಾಶಯರು ಒಂದು ಒಣ ನಗೆಯನ್ನು ಪ್ರದರ್ಶಿಸಿದರು. ಮತ್ತು ಮುಂದೆ ಹೇಳತೊಡಗಿದರು–"ಏನು ಹೇಳೋದು ಹೇಳಿ? ಡಾಕ್ಟರಿ ವೃತ್ತಿ ಒಂದು ತಮಾಷೆ ಆಗಿಹೋಗಿದೆ. ವಕೀಲರು– ಮುತ್ಸದ್ದಿಗಳ ಮಕ್ಕಳೆಲ್ಲ ಈಗಿನ ಕಾಲದಲ್ಲಿ ಡಾಕ್ಟರ್ ಆಗ್ತಾ ಇದಾರೆ. ಈ ಉದ್ಯೋಗ ರಕ್ತದಿಂದ, ಸಂಸ್ಕಾರದಿಂದ ಬರುತ್ತೆ ಅನ್ನೋದನ್ನೇ ಮರೆತಿದ್ದಾರೆ... ವೈದ್ಯ ಮಗ ವೈದ್ಯ ಆದರೆ ಅವನ ಕೈಗೆ ಒಂದು ವಿಶೇಷ ಗುಣ ಬರುತ್ತೆ, ಹಸ್ತಗುಣ ಚೆನ್ನಾಗಿದೆ ಅಂತ

ಯಾಕೆ ಹೇಳ್ತಾರೆ ಮತ್ತೆ? ಅವನ ಅರ್ಧ ವಿದ್ಯೆ ಚಿಕ್ಕವನಾಗಿರುವಾಗ, ಅವನು ಬೇರು, ಮೂಲಿಕೆ, ಇವುಗಳನ್ನೆಲ್ಲ ಕುಟ್ಟುತ್ತಾ ಪುಡಿಮಾಡುತ್ತಾ ಇರುವಾಗಲೇ ಬಂದಿರುತ್ತದೆ. ತೋಲಾ, ಮಾಷಾ, ರತ್ತೀ – ಹೀಗೆಲ್ಲ ಬೇರೆ ಬೇರೆ ಮಾಪಕ – ಅಂದಾಜು ಅವನಿಗೆ ಗೊತ್ತಾಗಿರುತ್ತದೆ. ಅವನ ಕೈಯಲ್ಲಿ ಔಷಧಿ ಅಶುದ್ಧ ಆಗುವ ಹಾಗೇ ಇಲ್ಲ. ಔಷಧಿಯ ಚಮತ್ಕಾರ ಅದನ್ನು ತಯಾರಿಸುವ ರೀತಿಯಲ್ಲಿದೆ... ಧನ್ವಂತರಿ..." ವೈದ್ಯಮಹಾಶಯರು ಮುಂದೆ ಏನೋ ಹೇಳುವವರಿದ್ದರು. ಅಷ್ಟರಲ್ಲೇ ಯಾರೋ ಒಬ್ಬ ವ್ಯಕ್ತಿ ತಮ್ಮ ಅಂಗಡಿ ಕಡೆ ಬರುತ್ತಿದ್ದುದನ್ನು ಕಂಡು ಸುಮ್ಮನಾದರು. ಮತ್ತು, ತಮ್ಮ ಮುಂದೆ ಬಂದು ಕುಳಿತಿರುವ ಜನ ಸುಮ್ಮನೆ ಹರಟೆಹೊಡೆಯಲು ಬಂದು ಕುಳಿತಿರುವವರಲ್ಲ, ರೋಗಿಗಳು – ಎನ್ನುವ ರೀತಿಯಲ್ಲಿ ಅವರ ಕಡೆ ನೋಡತೊಡಗಿದರು.

ಬಂದ ವ್ಯಕ್ತಿ ಅಂಗಡಿಯ ಮೆಟ್ಟಲು ಹತ್ತುತ್ತಿದ್ದಂತೆಯೇ ವೈದ್ಯಮಹಾಶಯರು ಅವನ ಬಗ್ಗೆ ಅಂದಾಜು ಹಾಕಿ ನೋಡಿ ನಿರುತ್ಸಾಹಗೊಂಡರು. ಆದರೆ ಅಂತರ್ಯುಗದಲ್ಲಿ ಹೇಗೇ ಇರಲಿ, ಹೊರಗಡೆ ಅದನ್ನು ತೋರಿಸಿಕೊಳ್ಳದೆ ವ್ಯವಹಾರ ನಡೆಸಬೇಕಾಗುತ್ತದೆ. ಯಾರಿಗೆ ಗೊತ್ತು, ಇದೇ ಮನುಷ್ಯ ನಾಳೆ ತಮ್ಮ ಬಳಿಗೆ ರೋಗಿಯಾಗಿ ಬರಬಹುದು. ಅವನ ಮನೆಯಲ್ಲಿಯೇ ಯಾರಾದರೂ ಖಾಯಿಲೆ ಬೀಳಬಹುದು.ಆದುದರಿಂದಲೇ ತಮ್ಮ ವೃತ್ತಿಗೆ ತಕ್ಕ ವ್ಯವಹಾರಚತುರತೆ ಆವಶ್ಯಕವಾಗುತ್ತದೆ. ಹೀಗೆ ಮನಸ್ಸನ್ನು ದೃಢಪಡಿಸಿಕೊಂಡು ಕೇಳಿದರು – "ಏನು ತಮ್ಮಾ, ಆರೋಗ್ಯವಾಗಿದ್ದೀ ತಾನೇ?" ಆ ಮನುಷ್ಯ ವೈದ್ಯರ ಪ್ರಶ್ನೆಗೆ ಉತ್ತರ ಕೊಡುತ್ತಾ ತಲೆಯಮೇಲೆ ಹೊತ್ತು ತಂದಿದ್ದ ಒಂದು ಟಿನ್ನನ್ನು ಅವರ ಮುಂದೆ ಇಡುತ್ತಾ, "ಇದನ್ನು ಠಾಕುರ್ ಸಾಹೇಬರು ಕೊಟ್ಟಿದ್ದಾರೆ, ನಿಮ್ಮಲ್ಲಿ ಇಟ್ಟಿರಬೇಕಂತೆ, ಪೇಟೆಯಿಂದ ಹಿಂದಕ್ಕೆ ಹೋಗುವಾಗ ತೆಗೆದುಕೊಂಡು ಹೋಗುತ್ತಾರೆ – ಒಂದು, ಒಂದೂವರೆ ಗಂಟೆ ಹೊತ್ತಿಗೆ."

ತಮ್ಮ ಕಡೆ ಬಂದಿದ್ದ ಈ ಕೆಲಸಕ್ಕೆ ಬಾರದ ಮುಲಾಜಿಯ ಪ್ರಸಂಗದಿಂದ ನಿರುತ್ಸಾಹಗೊಂಡ ವೈದ್ಯ ಮಹಾಶಯರು "ಅಷ್ಟು ಹೊತ್ತಿಗೆ ಅಂಗಡಿ ಮುಚ್ಚಿರುತ್ತದೆ" ಎಂದರು. "ಹಕೀಮರು – ವೈದ್ಯರ ಅಂಗಡಿಗಳು ಯಾವಾಗಲೂ ಬಿಚ್ಚಿರುತ್ತವೆಯೇನು? ನಾವೇನು ವ್ಯಾಪಾರಿಗಳು ಅಂದ್‌ಕೊಂಡೆಯಾ ತಮ್ಮಾ?" ...ಆದರೆ ಇನ್ನೊಂದು ದಿನ ಅದಕ್ಕೆ ಪ್ರತಿಫಲ ದೊರಕಬಹುದೆಂಬ ಆಸೆಯ ಒತ್ತಡದಿಂದ ಮತ್ತೆ ಹೇಳಿದರು – "ಸರಿ. ನಾನು ಹೋಗುವಾಗ ಪಕ್ಕದ ಅಂಗಡಿಯಲ್ಲಿ ಇಟ್ಟು ಹೋಗಿರುತ್ತೇನೆ ಎಂದು ಹೇಳು. ಪರವಾಗಿಲ್ಲ ಎನ್ನುವ ಹಾಗಿದ್ದರೆ ಅಲ್ಲಿಂದ ತೆಗೆದುಕೊಂಡು ಹೋಗಲಿ."

ಆ ಮನುಷ್ಯ ಹೋದಕೂಡಲೇ ವೈದ್ಯಮಹಾಶಯರು ಹೇಳಿದರು. "ಸರ್ಕಾರ ಪಾನ ನಿರೋಧ ಜಾರಿಮಾಡಿದ ಮಾತ್ರಕ್ಕೆ ಏನಾಯಿತು? ಮನೆಮನೆಯಲ್ಲೂ ಕಳ್ಳಬಟ್ಟಿ ತಯಾರಿಸಲು ಆರಂಭಿಸಿದರು. ಹೆಂಡ ತುಪ್ಪದ ಬೆಲೆಗೆ ಮಾರಾಟವಾಗತೊಡಗಿತು. ಇನ್ನು ಈ ಡಾಕ್ಟರುಗಳ ಅಂಗಡಿಗಳ ಕಥೆಯಾದರೂ ಏನು?... ಅವರ ಒಂದೊಂದು

ಅಂಗಡಿಯೂ ಒಂದೊಂದು ಸಣ್ಣ ದೇಶಿ ಸಾರಾಯಿ ತಯಾರಿಸುವ ಕಾರ್ಖಾನೆ ಆಗಿ ಹೋಗಿದೆ... ಔಷಧಿಯ ರೂಪದಲ್ಲಿ ಉಪಯೋಗಿಸಲು ಹೇಗಿದ್ದರೂ ಲೈಸನ್ಸ್ ಸಿಗುತ್ತೆ... ಓಪನ್ ಮಾರ್ಕೆಟ್‌ನಲ್ಲೇ ಟಿಂಜರ್ ಸಿಗುತ್ತೆ – ಯಾರೂ ಕೇಳೋದಿಲ್ಲ. ನಾವು ಭಂಗ್ – ಅಫೀಮಿನ ಒಂದು ಸಣ್ಣ ಪೊಟ್ಟಣ ಇಟ್ಟುಕೊಂಡಿದ್ದರೂ ಸಾಕು ಅದರ ಬಗ್ಗೆ ತಪಶೀಲು ಕೊಡಬೇಕು."

"ಜವಾಬ್ದಾರಿ ಕೆಲಸ...", ಪಂಡಿತ್‌ಜೀ ಹೇಳಿದರು.

"ಈ ಜವಾಬ್ದಾರಿಯೆಲ್ಲಾ ವೈದ್ಯರಿಗಷ್ಟೇ ಅಂತ ತೋರುತ್ತೆ. ಎಲ್ಲರೂ ರಿಜಿಸ್ಟರ್ ಮಾಡಿಸಿಕೋಬೇಕಾಯಿತು. ವೃತ್ತಿಗೆ ಮಧ್ಯ ತೂರಿಕೊಂಡು ಬಂದಿದ್ದವರೆಲ್ಲರ ಕಥೆ ಮುಗೀತು. ಯಾರು ರಿಜಿಸ್ಟರ್ ಮಾಡಿಸಿಕೊಂಡಿದ್ದಾರೋ ಅವರು ಮಾತ್ರ ಈಗ ವೈದ್ಯ ವೃತ್ತಿ ನಡೆಸಬಹುದು. ಅದೂ ಇದೂ ಚೂರ್ಣ ಮಾಡೋದು ಗೊತ್ತಿದ್ದ ಜನ ಕೂಡ ವೈದ್ಯ ಆರಂಭಿಸಿದ್ದು – ಅಂಥವರೆಲ್ಲರ ಕಥೆ ಮುಗೀತು. ಲಖ್ನೋದಲ್ಲಿ ಸರ್ಕಾರ ಒಂದು ತನಿಖೆಯನ್ನೇ ನಡೆಸಿ ಅಂಥವರನ್ನು ಹೊರಕ್ಕೆ ಹಾಕಿದೆ..."

ವೈದ್ಯ ಮಹಾಶಯರ ಮಾತಿನಲ್ಲಿ ಆಸಕ್ತಿ ಹುಟ್ಟಲಿಲ್ಲವಾದ ಕಾರಣ ಪಂಡಿತ್‌ಜೀ ಎದ್ದು ನಿಂತರು. ವೈದ್ಯಮಹಾಶಯರು ಒಳಗಡೆ ಹೋದರು. ಮತ್ತು, ಒಳಗೆ ಔಷಧಾಲಯದ ಬೋರ್ಡು ಬರೆಯುತ್ತಿದ್ದ ಚಂದರನನ್ನು ಉದ್ದೇಶಿಸಿ ಹೇಳಿದರು– "ಆ ಬಿಳಿ ಬಣ್ಣ ಸ್ವಲ್ಪ ಗಾಡಿಯಾಯಿತು. ಬಾಬೂ... ಸ್ವಲ್ಪ ಟರ್ಪೆಂಟೈನ್ ಬೆರೆಸಿಕೋ", ಹಾಗೆ ಹೇಳಿ ಅಶೋಕಾರಿಷ್ಟದ ಲೇಬಲ್ ಹಚ್ಚಿದ್ದ ಒಂದು ಬಾಟ್ಲಿಯನ್ನು ತಂದು ಅವನ ಮುಂದೆ ಇಟ್ಟರು.

ಇದೇ ರೀತಿ ಯಾವ ಯಾವ ಔಷಧಿಗಳ ಶರೀರರೂಪಿ ಬಾಟ್ಲಿಗಳಲ್ಲಿ ಯಾವ ಯಾವ ಆತ್ಮ ಸೇರಿತ್ತೋ ತಿಳಿಯದು. ಮುಂದುಗಡೆ ಇರುವ ಒಂದು ಬೀರುವಿನಲ್ಲಿ ದೊಡ್ಡ ದೊಡ್ಡ ಬಾಟ್ಲಿಗಳನ್ನು ಇಡಲಾಗಿದೆ. ಅವುಗಳ ಮೇಲೆ ಹಲವು ಬಗೆಯ ಅರಿಷ್ಟಗಳ ಹೆಸರುಗಳನ್ನು ಬರೆಯಲಾಗಿದೆ. ಮುಂದಿನ ಸಾಲಿನಲ್ಲಿ ಈ ದೊಡ್ಡ ಶೀಷೆಗಳಿವೆ. ಅವುಗಳ ಹಿಂದೆ ಇತರ ಆವಶ್ಯಕ ಸಾಮಗ್ರಿಗಳಿವೆ. ಮುಂದೆ ಇರುವ ಮೇಜಿನ ಮೇಲೆ ಬಿಳಿಯ ಶೀಷೆಗಳ ಒಂದು ಪಂಕ್ತಿ ಇದೆ. ಅವುಗಳಲ್ಲಿ ಕೆಲವು ಸ್ವಾದಿಷ್ಟ ಚೂರ್ಣಗಳಿವೆ... ಲವಣಭಾಸ್ಕರ ಇತ್ಯಾದಿ. ಉಳಿದ ಶೀಷೆಗಳಲ್ಲಿ ಏನಿದೆ ಎಂಬುದು ವೈದ್ಯಮಹಾಶಯರಿಗೆ ಮಾತ್ರ ಗೊತ್ತು.

ಬಣ್ಣಕ್ಕೆ ಟರ್ಪೆಂಟೈನ್ ಎಣ್ಣೆ ಬೆರೆಸಿ ಚಂದರ್ ಮುಂದೆ ಬರೆಯತೊಡಗಿದ... ಪ್ರೊ। ಕವಿರಾಜ್ ನಿತ್ಯಾನಂದ ತಿವಾರಿ"... ಶ್ರೀ ಧನ್ವಂತರಿ ಔಷಧಾಲಯ ಎಂಬ ಮೇಲಿನ ಪಂಕ್ತಿಯನ್ನು ವೈದ್ಯಮಹಾಶಯರೇ ಸ್ವತಃ ಬರೆದಿದ್ದರು. ಅವರು ಬರೆದಿದ್ದ ಬಿಳಿಯ ಬಣ್ಣದ ಅಕ್ಷರಗಳು ಅರಳೆ ಕಲಸಿದ್ದ ಹಾಗೆ ಕಾಣುತ್ತಿದ್ದುವು. ಮೇಲೆ ಸ್ಥಳ ಖಾಲಿ ಇದ್ದುದನ್ನು ಗಮನಿಸಿದ ವೈದ್ಯಮಹಾಶಯರು ಹೇಳಿದರು – "ಬಾಬೂ,

ಮೇಲುಗಡೆ ಅಲ್ಲಿ ಜಯಹಿಂದ್ ಎಂದು ಬರೆದುಬಿಡಬೇಕು... ಇನ್ನು ಉಳಿದ ಈ ಸ್ಥಳದಲ್ಲಿ ಈ ಕಡೆ ಒಂದು ದ್ರಾಕ್ಷಾಸವದ ಬಾಟ್ಲಿ ಚಿತ್ರ. ಆ ಕಡೆ ಔಷಧಿ ಅರೆಯಲು ಉಪಯೋಗಿಸುವ ಕಲ್ಲಿನ ಚಿತ್ರ...

ಚಂದರ್‌ಗೆ 'ಒಳ್ಳೇ ಬಂದು ಸಿಕ್ಕಿಕೊಂಡೆನಲ್ಲ' ಎನಿಸಿತ್ತು – ಅಕ್ಷರ ಚೆನ್ನಾಗಿ ಬರೆಯುತ್ತೇನೆಂಬ ತಪ್ಪಿಗೆ ಈ ಪುರಸ್ಕಾರ ಸಿಗಬೇಕೆ? ಹೇಳಿದ – "ಯಾರಾದರೂ ಪೇಂಟರ್ ಕೈಯಲ್ಲಿ ಬರೆಸಬೇಕಾಗಿತ್ತು... ಚೆನ್ನಾಗಿ ಗುಂಡಗೆ ಬರೆದುಕೊಡುತ್ತಿದ್ದ. ಅಷ್ಟು ಚೆನ್ನಾಗಿ ಬರೆಯೋಕ್ಕಾಗೋಲ್ಲ..." ಸೆಖೆಗೆ ತನ್ನ ಬೆವರು ಒರೆಸಿಕೊಳ್ಳುತ್ತಾ ಅವನು ಕುಂಚವನ್ನು ಕೆಳಗಿಟ್ಟುಬಿಟ್ಟ.

"ಅಯ್ಯೋ ಇಷ್ಟು ಬರೆಯೋಕೆ ಐದು ರೂಪಾಯಿ ಕೇಳಿದ್ದ, ಬಾಬೂ. ...ಎರಡು ಲೈನು ಬರೀಲಿಕ್ಕೆ ಎರಡು ರೂಪಾಯಿ!... ಸ್ವಲ್ಪ ಕಷ್ಟಪಟ್ಟರೆ ಈ ಸೈನ್‌ಬೋರ್ಡ್ ಅಬ್ಬಬ್ಬ ಅಂದರೆ ಹತ್ತು-ಹನ್ನೆರಡು ಆಣೇಲಿ ಆಗುತ್ತೆ. ಈ ಬಣ್ಣಾನ ಒಬ್ಬ ರೋಗಿ ಕೊಟ್ಟು ಹೋದ. ಎಲೆಕ್ಟ್ರಿಕ್ ಆಫೀಸಿನ ಪೇಂಟರ್ ಅಜೀರ್ಣದಿಂದ ಒದ್ದಾಡುತ್ತಿದ್ದ. ಎರಡು ಪೊಟ್ಟಣ ಔಷಧಿ ಮಾಡಿಕೊಟ್ಟೆ – ಅವನಿಂದ ದುಡ್ಡು ತೆಗೆದುಕೊಳ್ಳಲಿಲ್ಲ. ಅವನು ಎರಡು, ಮೂರು ಬಣ್ಣ ಮತ್ತು ಒಂದಿಷ್ಟು ವಾರ್ನಿಷ್ ತಂದುಕೊಟ್ಟು ಹೋದ. ಅದರಲ್ಲೇ ಎರಡು ಪೆಟ್ಟಿಗೆಗಳಿಗೆ ಬಣ್ಣ ಹಾಕಿದ್ದಾಯಿತು. ಈ ಬೋರ್ಡೂ ಆಗಿ ಹೋಯಿತು ಜೊತೆಗೆ ಒಂದೆರಡು ಕುರ್ಚಿಗೂ ಬಣ್ಣ ಆಗುತ್ತೆ... ನೀನು ಅಕ್ಷರ ಬರೆದುಬಿಡು, ಕೆಂಪು ರಂಗಿನ ಶೇಡನ್ನು ನಾನು ಹಾಕ್ತಾ ಇರ್ತೀನಿ... ಈ ಪಕ್ಕಕ್ಕೆ ರಾಷ್ಟ್ರಧ್ವಜ ಬರೀಬಹುದೇನು? ...", ಎಂದು ವೈದ್ಯ ಮಹಾಶಯರು ಕೇಳಿ ತಮ್ಮ ಸ್ವೀಕೃತಿಯನ್ನೂ ಕೊಟ್ಟುಬಿಟ್ಟರು.

ಚಂದರ್ ಸೆಖೆಯಿಂದ ತತ್ತರಿಸುತ್ತಿದ್ದ. ಮಧ್ಯಾಹ್ನ ಆದಹಾಗೆ ಬೀದಿಯಲ್ಲಿ ಧೂಳು ಮತ್ತು ಲೂನ ತೀವ್ರತೆ ಹೆಚ್ಚಾಗುತ್ತಿತ್ತು. ಅವರ ಮುಲಾಜೆಗೆ ಸಿಕ್ಕಿಕೊಂಡು ಚಂದರ್ ನಿರಾಕರಿಸಲಾರದೆ ಇದ್ದ. ವೈದ್ಯಮಹಾಶಯರು ಬೀಸಣಿಗೆಯ ಪಟ್ಟಿಯಿಂದ ತಮ್ಮ ಬೆನ್ನನ್ನು ಕೆರೆದುಕೊಳ್ಳುತ್ತಾ ಶಾನುಭೋಗರ ಕಡತಗಳು ಹಾಗೂ ಮಜೂರಿ ಲೆಕ್ಕದ ಕಡತಗಳಂತಿದ್ದ ದೊಡ್ಡ ದೊಡ್ಡ ರಿಜಿಸ್ಟರ್‌ಗಳನ್ನು ತಮ್ಮ ಮುಂದೆ ಬಿಡಿಸಿಕೊಂಡು ಕೂರಲು ಆರಂಭಿಸಿದರು.

ಬಿಸಿಲಿನ ತಾಪವನ್ನು ತಪ್ಪಿಸುವ ಸಲುವಾಗಿ ಬೀದಿಯ ಒಂದು ಬಾಗಿಲನ್ನು ಒಂದಿಷ್ಟು ಓರೆಯಾಗಿ ಮಾಡಿ ತಮ್ಮ ಮುಂದೆ ಬಿಚ್ಚಿಕೊಂಡಿದ್ದ ಖಾಲಿ ರಿಜಿಸ್ಟರುಗಳಲ್ಲಿ ಒಬ್ಬೊಬ್ಬರ ಖಾತಾವಿವರಗಳನ್ನೂ ನಕಲು ಮಾಡತೊಡಗಿದರು. ಚಂದರ್ ತನ್ನ ಬೇಸರ ಕಳೆದುಕೊಳ್ಳುವ ಸಲುವಾಗಿ ಕೇಳಿದ – "ವೈದ್ಯಜೀ, ಇದೆಲ್ಲ ಏನು ಬಿಡಿಸಿಕೊಂಡು ಕೂತಿದ್ದೀರಿ?"

ಇದನ್ನು ಕೇಳಿ ವೈದ್ಯಜೀಯವರ ಮುಖ ಬಿಳುಚಿಕೊಂಡಿತು. ಅವರು ಹೇಳಿದರು – "ಸುಮ್ಮನೆ ಕುಳಿತುಕೊಂಡಿರುವುದರಿಂದ ಪ್ರಯೋಜನ ಏನು? ಏನಾದರೂ ಕೆಲಸ

ಮಾಡಿವರೆ ಆಯಿತು. ಈ ಹೊಸದಾಗಿ ಬಂದಿರುವ ಕಾರ್ಯದರ್ಶಿಗಳಿಗೆ ಶಾನುಭೋಗಿಕೆ ಕೆಲಸ ಏನೂ ಬರೋದಿಲ್ಲ. ಪ್ರತಿದಿನ ಕಮಿಟಿ ಅಧ್ಯಕ್ಷರಿಂದಲೋ ಅಧಿಕಾರಿಗಳಿಂದಲೋ ಬೈಯಿಸಿಕೊಳ್ತಾ ಇರ್ತಾರೆ... ಅವರಿವರಿಗೆ ಮುತ್ತು ಕೊಟ್ಟು ಬೇರೆಯವರಿಂದ ಅವರು ಈ ಕೆಲಸ ಮಾಡಿಸಬೇಕಾಗುತ್ತೆ. ಈಗ ಆ ಹಿಂದಿನ ಕಾಲದ ಶ್ಯಾನುಭೋಗರು ಎಲ್ಲಿದ್ದಾರೆ? ಅವರೂ ಅಂದ್ರೆ ಹಳ್ಳಿಯ ವ್ಯವಹಾರದ ಎಲ್ಲ ಕಾಯದೆ-ಖಟ್ಲೆಗಳನ್ನು ತಮ್ಮ ತಲೆಯಲ್ಲೇ ಇಟ್ಟುಕೊಂಡಿರುತ್ತಿದ್ದರು. ಪಾಪ. ಅವರ ಅನ್ನ ಕಿತ್ತುಕೊಂಡರು. ನಿಜ ಹೇಳಬೇಕೆಂದರೆ ಅದೇ ಹಳೆಯ ಶಾನುಭೋಗರು. ಕುಲಕರ್ಣಿಯವರು, ಕರಣಿಕರು ಇವೊತ್ತಿಗೂ ತಮ್ಮ ಕೆಲಸ ನಿಭಾಯಿಸುತ್ತಿದ್ದಾರೆ. ಕಮಿಟಿ ಕಾರ್ಯದರ್ಶಿಗಳು ತಮ್ಮ ಸಂಭಾವನೆಯನ್ನು ಅವರಿಗೇ ಕೊಡುತ್ತಿದ್ದಾರೆ ಮತ್ತು ತಮ್ಮ ಜೀವನಕ್ಕೆ – ಅವರಿಗೂ ಹೊಟ್ಟೆ ಅನ್ನೋದು ಇದೆಯಲ್ಲ – ರೈತರನ್ನು ಕಾಡಿ ಬೇಡಿ ಸಂಪಾದಿಸಿಕೊಂಡು ಬರುತ್ತಾರೆ. ಹಾಗೆ ತರದೆ ಹೋದರೆ ಹೊಟ್ಟೆಗೇನು ತಿಂಪಾರು? ಇಬ್ಬರು–ಮೂವರು ಕಾರ್ಯದರ್ಶಿಗಳು ನನ್ನ ಕಡೇಗೂ ಇದ್ದಾರೆ. ಅಷ್ಟೊ ಇಷ್ಟೊ ಕೆಲಸ ತಂದುಕೊಟ್ಟುಬಿಡುತ್ತಾರೆ. ನಕಲು ಮಾಡುವ ಕೆಲಸ ಇಲ್ಲವೇ ರಿಜಿಸ್ಟರ್ ತುಂಬುವ ಕೆಲಸ."

ಹೊರಗಡೆ ರಸ್ತೆ ನಿರ್ಜನವಾಗುತ್ತಿತ್ತು. ಕಚೇರಿಗಳಿಗೆ ಹೋಗುವ 'ಬಾಬೂ ಲೋಗ್' ತಮ್ಮ ತಮ್ಮ ಕೆಲಸಗಳ ಮೇಲೆ ಹೊರಟುಹೋಗಿದ್ದರು. ಮುಂದುಗಡೆಯ ಪೌರಸಭೆ ಕಚೇರಿಯಲ್ಲಿ ಖಸ್ ಖಸ್ – ಹುಲ್ಲಿನ ತಡಿಕೆಗಳ ಮೇಲೆ ಆಳುಗಳು ನೀರು ಎರಚುತ್ತಿದ್ದರು. ದೂರದಲ್ಲಿ ಬೇವಿನ ಮರಗಳ ಸುಯ್ ಸುಯ್ ಶಬ್ದ ಲೂ ಶಬ್ದದ ಜೊತೆಗೆ ಸೇರಿಕೊಂಡು ಬರುತ್ತಿತ್ತು. ಅಷ್ಟರಲ್ಲಿ ಒಬ್ಬ ಮನುಷ್ಯ ಬಾಗಿಲ ಸಂದಿನ ಮೂಲಕ ಇಣಕು ಹಾಕಿದ. ಇನ್ನು ಸ್ವಲ್ಪ ಹೊತ್ತಿನಲ್ಲಿಯೇ ಕಿವಿಗೆ ಭಾರವಾಗಬಹುದಾಗಿದ್ದ ವೈದ್ಯಮಹಾಶಯರ ಮಾತು ಅಷ್ಟಕ್ಕೇ ನಿಂತುಹೋಯಿತು. ಅವನ ಕಡೆ ನೋಡಿಯೇ ಅವರು ತಿಳಿದುಕೊಂಡರು ಮತ್ತು ಇದ್ದಕ್ಕಿದ್ದಂತೆ ತುಂಬಾ ಗಂಭೀರವಾದರು. ಅವನಿಗೆ ಕೇಳಿಸುವಂತೆ ಕೂಡಲೇ ಹೇಳಿದರು – "ಒಂದು ಬೋರ್ಡಿಗೆ ಆಗ್ರಾದಲ್ಲಿ ಆರ್ಡರ್ ಕೊಟ್ಟಾಗಿದೆ. ಅದು ಬರುವವರೆಗೂ, ಇದರಿಂದ ಕೆಲಸ ಸಾಗುತ್ತದೆ – ಇಂಥ ವಿಷಯಗಳಿಗೆಲ್ಲ ತಲೆ ಕೆಡಿಸಿಕೊಳ್ಳಲು ಪುರಸತ್ತಾದರೂ ಎಲ್ಲಿದೆ?" ಆಮೇಲೆ ಆ ಮನುಷ್ಯನ ಕಡಗೆ ತಿರುಗಿ. "ಏನಪ್ಪಾ, ಏನು ಆಗಬೇಕು?" ಎಂದು ವ್ಯಸ್ತ ಮನಸ್ಕನಾಗಿ ಕೇಳಿದರು.

"ಡಾಕ್ಟರ್ ಸರ್ಟಿಫಿಕೇಟ್ ಬೇಕಾಗಿದೆ. ಕೋಸಮಾ ಟೇಷನ್‌ನಲ್ಲಿ ಖಲಾಸಿ ಕೆಲಸ ಮಾಡ್ತಿದೀನಿ ಸಾಬ್", ರೈಲ್ವೆ ಪೋರ್ಟರಿನ ನೀಲಿ ಸಮವಸ್ತ್ರ ಉಟ್ಟಿದ್ದ ಆ ಮನುಷ್ಯ ಹೇಳಿದ.

ಅವನ ಆವಶ್ಯಕತೆಯ ಪೂರ್ತಿ ಅಂದಾಜು ತೆಗೆಯುತ್ತ ವೈದ್ಯಜೀ ಹೇಳಿದರು – "ಯಾವ ತಾರೀಕಿನಿಂದ ಯಾವ ತಾರೀಕಿನ ವರೆಗೆ ಬೇಕಾಗಿದೆ?"

"ಹದಿನೈದು ದಿನಗಳ ಹಿಂದೆ ಬಂದಿದ್ದು ಸಾಬ್, ಇನ್ನೂ ಏಳು ದಿನಕ್ಕೆ ಬೇಕಾಗಿದೆ."

ಸ್ವಲ್ಪ ಲೆಕ್ಕಾಚಾರ ಹಾಕಿ ವೈದ್ಯಜೀ ಹೇಳಿದರು–"ನೋಡಪ್ಪಾ, ಸರ್ಟಿಫಿಕೇಟ್ ಪಕ್ಕಾ ಮಾಡಿ ಕೊಡ್ತೇನೆ. ಸರ್ಕಾರದ ರಿಜಿಸ್ಟರ್ ನಂ. ಕೊಡ್ತೇನೆ. ಆದರೆ ಅದಕ್ಕೆ ನಾಲ್ಕು ರೂಪಾಯಿ ಕೊಡಬೇಕಾಗುತ್ತೆ" ನಾಲ್ಕು ರೂಪಾಯಿ ಕೊಡಬೇಕು ಅಂತ ಅವನು ಎಲ್ಲಿ ಹಿಂದೇಟು ಹಾಕಬಹುದೋ ಎಂದು ಅವರೇ ಹೆದರಿ ಹೇಳಿದರು–"ಹಿಂದಿನ ದಾಖಲೆ ಬೇಡ ಅಂದ್ರೆ ಎರಡು ರೂಪಾಯಿ ಸಾಕು."

ಖಲಾಸಿ ನಿರಾಶೆಗೊಂಡ. ಆದರೆ ಅವನ ನಿರಾಶೆಗಿಂತ ಹೆಚ್ಚಾಗಿ ವೈದ್ಯಜೀ ಹತಾಶ ರಾದುದನ್ನು ಅವರ ಬೆವತಿದ್ದ ಮುಖದ ಮೇಲಿನ ಅಶಾಂತಿಯಿಂದಲೇ ತಿಳಿಯಬಹು ದಿತ್ತು. ಪೂರ್ಣ ನಿರಪೇಕ್ಷ ಭಾವದಿಂದ ಖಲಾಸಿ ಹೇಳಿದ–"ಸೋಬದನ್ ಸಿಂಗರು ತಮ್ಮಲ್ಲಿಗೆ ಕಳಿಸಿದ್ದಾರೆ." ಅದು ತನ್ನ ಅಗತ್ಯವಲ್ಲ, ಸೋಬರಸಿಂಗನ ಅಗತ್ಯ ಎಂಬುದನ್ನು ತಿಳಿಸಲು ಅವನು ಆ ರೀತಿ ಹೇಳಿದ್ದ. ಆದರೆ ವೈದ್ಯರ ಕೈಗೆ ನಾಡಿ ಸಿಕ್ಕಿತ್ತು–ಎಂದೇ ಅವರು ಹೇಳಿದರು–"ನನಗೆ ಗೊತ್ತು. ಹಾಗೆ ಗುರುತು ಪರಿಚಯ ಇಲ್ಲದೆ ನಾವು ಸರ್ಟಿಫಿಕೇಟ್ ಕೊಡುವುದೇ ಇಲ್ಲ. ಇದು ಮರ್ಯಾದೆ ಹೋಗುವ ಕೆಲಸ. ನೀನು ಎಲ್ಲಿದ್ದೀಯಾ, ಏನ ಕೆಲಸ ಮಾಡ್ತೀಯಾ ಇದೆಲ್ಲ ನಮಗೆ ಹೇಗೆ ಗೊತ್ತು? ವಿಚಾರ ಮಾಡುವಂತಹ ವಿಷಯ ಇದು... ಕೇವಲ ಭರವಸೆ ಮೇಲೆ ಎಲ್ಲ ಆಪತ್ತನ್ನು ತಲೆಯ ಮೇಲೆ ಹಾಕಿಕೊಳ್ಳುತ್ತೇವೆ... ಹದಿನೈದು ದಿನಗಳಿಗೂ ಮುಂಚೆಯೇ ನಿಮ್ಮ ಹೆಸರು ರಿಜಿಸ್ಟರಿನಲ್ಲಿ ದಾಖಲಾಗಿರುವಂತೆ ನೋಡಿಕೊಳ್ಳುತ್ತೇವೆ. ಯಾವ ರೋಗ ಅನ್ನೋ ದನ್ನೂ ಬರೀತೇವೆ... ಅನಂತರ ಪ್ರತಿಯೊಂದು ತಾರೀಕಿನಲ್ಲೂ ನಿಮ್ಮ ಹೆಸರು ದಾಖಲು ಮಾಡುತ್ತೇವೆ... ಅಷ್ಟು ಮಾಡಿದರೆ ಮಾತ್ರ ಸರಿಯಾಗಿ ಮಾಡಿದ ಹಾಗಾಗುತ್ತದೆ. ಈ ಕೆಲಸ ಸ್ವಂತಕ್ಕೆ ಮಾಡುವ ಹೊಲದ ಕೆಲಸದಷ್ಟು ಸುಲಭವಲ್ಲ..." ಹೀಗೆ ಹೇಳುತ್ತಾ ತನ್ನ ವಾದಕ್ಕೆ ಪುಷ್ಟಿಯನ್ನು ಅಪೇಕ್ಷಿಸುವಂತೆ ಚಂದರ್ ಕಡೆ ನೋಡಿದರು. ಅವನೂ ಅದಕ್ಕೆ ಸರಿಯಾಗಿ "ನೀನು ಕಾಯಿಲೆಯೇ ಇದ್ದಿಯೋ ಯಾರದಾದರೂ ಮನೆ ಮನೆಗೆ ಕನ್ನ ಹಾಕುತ್ತಿದ್ದೆಯೋ ಅವರಿಗೇನು ಗೊತ್ತು?... ಇದು ಸರ್ಕಾರಿ ವ್ಯವಹಾರದ ಪ್ರಶ್ನೆ."

"ವ್ಯವಹಾರ ಗೊತ್ತಿರೋ ಡಾಕ್ಟರ್ ಐದು ರೂಪಾಯಿಗೆ ಕಡಿಮೆ ತೆಗೆದುಕೊಳ್ಳುವು ದಿಲ್ಲ..." ಎಂದು ಹೇಳುತ್ತಾ ವೈದ್ಯಜೀ ತಮ್ಮ ಮುಂದಿದ್ದ ಖಾತಾ ರಿಜಿಸ್ಟರನ್ನು ಪಕ್ಕಕ್ಕಿಡುತ್ತಾ ಆವೇಶದಿಂದ ಹೇಳಿದರು–"ಅರೆ, ಹಾಯಾಗಿ ಉಸಿರಾಡೋದಕ್ಕೂ ಸಮಯ ಇಲ್ಲ. ಹೆಸರುಗಳು ಕಾಣಿಸುತ್ತಿವೆ ತಾನೇ?... ರೋಗಿಗಳನ್ನು ನೋಡುವು ದನ್ನು ಬಿಟ್ಟು ಸರ್ಕಾರಕ್ಕೆ ತೋರಿಸುವ ಸಲುವಾಗಿ ಈ ರಿಜಿಸ್ಟರ್‌ಗಳನ್ನು ತುಂಬುತ್ತಾ ಕೂರಬೇಕಾಗುತ್ತದೆ. ಒಬ್ಬೊಬ್ಬ ರೋಗಿಯ ಹೆಸರು, ವಯಸ್ಸು, ವರಮಾನ... ಈ ಪಟ್ಟಿಯಲ್ಲೇ ನಿನ್ನ ಹೆಸರನ್ನೂ ಸೇರಿಸಬೇಕಾಗುತ್ತೆ. ನೀನೇ ಹೇಳು, ರೋಗಿಗಳನ್ನು ನೋಡಿ ಚಿಕಿತ್ಸೆ ಕೊಡುವುದು ಮುಖ್ಯವೋ ನಾಲ್ಕು ರೂಪಾಯಿಗಳಿಗೋಸ್ಕರ ಸರ್ಟಿಫಿಕೇಟ್ ಕೊಟ್ಟು ಇಷ್ಟೆಲ್ಲ ತಲೆನೋವು ಕೊಂಡುಕೊಳ್ಳುವುದು ಮುಖ್ಯವೋ." ಇಷ್ಟು ಹೇಳಿ

ಥಟಕ್ಕನೆ ತಮ್ಮ ಮುಂದಿದ್ದ ತಹಸೀಲಿನ ರಿಜಿಸ್ಟ್ರಿಯನ್ನು ಮುಚ್ಚಿ ಪಕ್ಕಕ್ಕೆ ಹಾಕಿದರು. ಮತ್ತು ತಾವು ಏನಿದ್ದರೂ ಉಪಕಾರ ಮಾಡುವ ಸಲುವಾಗಿ ಸಿದ್ಧರಾಗುವ ಭಂಗಿಯಲ್ಲಿ ಕುಳಿತು ಕೈಯಲ್ಲಿದ್ದ ಲೇಖನಿಯಿಂದ ಕಿವಿಯನ್ನು ಕೆರೆಯತೊಡಗಿದರು.

ರೈಲ್ವೆಗೆ ಸೇರಿದ ಖಲಾಸಿ ಒಂದು ನಿಮಿಷ ಹಾಗೆಯೇ ಯೋಚಿಸುತ್ತಾ ಕುಳಿತು ವೈದ್ಯಜೀ ತಲೆ ತಗ್ಗಿಸಿ ತಮ್ಮ ಕೆಲಸದಲ್ಲಿ ತಾವು ಮಗ್ನರಾಗಿದ್ದುದನ್ನು ಕಂಡು ಅಂಗಡಿಯಿಂದ ಕೆಳಗಿಳಿದು ಹೊರಟುಹೋದನು. ತಾವು ತಪ್ಪು ಮಾಡಿರುವುದಾಗಿ ಕೂಡಲೇ ವೈದ್ಯಜೀ ಅವರಿಗೆ ಅರಿವು ಉಂಟಾಯಿತು. ತಾವು ಯಾವ ಘಟ್ಟದಲ್ಲಿ ಮಾತು ನಿಲ್ಲಿಸಿದರೋ ಅಲ್ಲಿ ನಿಲ್ಲಿಸಬಾರದಿತ್ತು, ಸ್ವಲ್ಪ ಬಗ್ಗಿಸ ಹೋದವರು ಮುರಿದೇಬಿಟ್ಟಿದ್ದರು. ಕೂಡಲೇ ಅವರಿಗೆ ಏನೂ ಹೊಳೆಯಲಿಲ್ಲ. ಅವನಿಗೆ ಕರೆದು ಹೇಳಿದರು – "ಇಲ್ಲಿ ನೋಡು, ಠಾಕುರ್ ಸೋಬರನ್ ಸಿಂಗರಿಗೆ ನನ್ನ ನಮಸ್ಕಾರ ತಿಳಿಸು... ಅವರ ಮಕ್ಕಳು ಮರಿ ಚೆನ್ನಾಗಿದ್ದಾರಲ್ಲ?"

"ಹಾಂ, ಎಲ್ಲರೂ ಚೆನ್ನಾಗಿದ್ದಾರೆ", ನಿಂತು ಖಲಾಸಿ ಹೇಳಿದ.

ಅವನಿಗೆ ಕೇಳಿಸುವಂತೆ ವೈದ್ಯಜೀ ಒಳಗಿನಿಂದಲೇ ಹೇಳಿದರು – "ಹತ್ತಾರು ಊರು ಬಿಟ್ಟು ಸೋಬರನ್ ಸಿಂಗ್ ಅವರು ಔಷಧಿಗಾಗಿ ಇಲ್ಲಿಗೇ ಬರುತ್ತಾರೆ. ನೋಡಪ್ಪಾ, ನಾವೂ ಅವರ ಸೇವೆಗಾಗಿ ಇಲ್ಲಿ ಯಾವಾಗಲೂ ಹಾಜರಿರುತ್ತೇವೆ." ಚಂದರ್ ಬೋರ್ಡಿನ ಮೇಲೆ ಕೊನೆಯ ಅಕ್ಷರವನ್ನು ಮುಗಿಸುತ್ತಾ ಕೇಳಿದ, "ಹೊರಟು ಹೋದನಾ?"

"ಮತ್ತೆ ವಾಪಸ್ಸು ಬರುತ್ತಾನೆ", ತಮ್ಮನ್ನೇ ಸಮಾಧಾನ ಹೇಳಿಕೊಳ್ಳುತ್ತಿರುವಂತೆ ವೈದ್ಯಜೀ ಹೇಳಿದರು. ಅವನು ವಾಪಸ್ಸು ಬರಬಹುದಾದಂತಹ ಅನಿವಾರ್ಯತೆಯನ್ನು ವಿವರಿಸುತ್ತಾ ಹೇಳಿದರು – "ಸಣ್ಣಪುಟ್ಟ ಊರುಗಳ ವೈದ್ಯ ಹಾಗೂ ವಕೀಲ ಇಬ್ಬರೂ ಒಂದೇ. ಸೋಬರನ್ ಸಿಂಗ್ ನಮ್ಮ ಹೆಸರನ್ನು ಅವನಿಗೆ ತಿಳಿಸಿರುವುದೇ ನಿಜವಾದರೆ, ಅವನು ಖಂಡಿತ ವಾಪಸ್ಸು ಬರುತ್ತಾನೆ... ಹಳ್ಳಿಯವರ ತಲೆಗೆ ಹತ್ತುವುದು ಸ್ವಲ್ಪ ನಿಧಾನ. ಒಂದು ಕಡೆ ಕುಳಿತು ಯೋಚನೆ ಮಾಡಿ ಮಾಡಿ ತಲೆ ಕೆಡಿಸಿಕೊಂಡು ಆಮೇಲೆ ಬರ್ತಾನೆ..."

"ಬೇರೆ ಎಲ್ಲಿಂದಾದರೂ ಸರ್ಟಿಫಿಕೇಟ್ ತೆಗೆದುಕೊಳ್ಳುವುದು ಸಾಧ್ಯವಿದ್ದರೆ?" ಎಂದು ಚಂದರ್ ಹೇಳುವುದೇ ತಡ, "ಇಲ್ಲ, ಇಲ್ಲ ಬಾಬೂ" ಎಂದು ಅಷ್ಟಕ್ಕೆ ಅವನ ಮಾತನ್ನು ವೈದ್ಯಜೀಯವರು ತಡೆಯುತ್ತಾ ಬೋರ್ಡಿನ ಕಡೆ ನೋಡಿದರು. ಮತ್ತು, ತಮ್ಮ ಪ್ರಶಂಸೆಯನ್ನು ಸೂಚಿಸುತ್ತಾ ಹೇಳಿದರು – "ವಾಹ್, ಚಂದರ್‌ಬಾಬೂ, ಅಂತೂ ಸೈನ್‌ಬೋರ್ಡ್ ಮುಗಿಸಿಕೊಟ್ಟಿರಿ... ಸಿದ್ಧ ಆದಹಾಗಾಯಿತು... ಸಾಕು, ಇಷ್ಟಾದರೆ ಕೇಸು ನಡೆಯುತ್ತೆ. ಇಲ್ಲ ಅಂತಾದರೆ ಪೇಂಟರ್‌ಗೆ ಐದು ರೂಪಾಯಿ ಕೊಟ್ಟು ಅದನ್ನು ರೋಗಿಗಳಿಂದ ವಸೂಲು ಮಾಡಬೇಕಾಗಿತ್ತು. ಜಟಕಾಗಾಡಿ, ಕುದುರೆ ಇಡುವುದೂ ಒಂದೇ ಇಂತಹ ಖರ್ಚುಗಳಿಗೆ ದುಡ್ಡು ಹಾಕುವುದೂ ಒಂದೇ. ಯಾವ ಕಡೆಯಿಂದ

ಮೂಗು ಹಿಡಿದರೇನು? ಸೈಯದ್ ಆಲಿ ಬೋರ್ಡ್ ಬರೆದು ರೋಗಿಗಳನ್ನೇನೂ ವಾಸಿ ಮಾಡುವುದಿಲ್ಲ. ಒಂದಿಷ್ಟು ಬುದ್ಧಿ ಖರ್ಚುಮಾಡಿ ಆಲೋಚಿಸಬೇಕಾದ ವಿಷಯ, ಇದು" ಎಂದು ಹೇಳುತ್ತಾ ಅವರು ನಗತೊಡಗಿದರು. ತಮ್ಮ ಮಾತಿನ ಅರ್ಥ ತಿಳಿದು ತಮ್ಮನ್ನು ತಾವೇ ನೋಡಿ ನಕ್ಕರೋ, ಇತರರ ಮೂರ್ಖತನವನ್ನು ನೋಡಿ ನಕ್ಕರೋ ತಿಳಿಯದು.

ಆಗತಾನೇ ಒಬ್ಬ ಮನುಷ್ಯ ಒಳಗೆ ಪ್ರವೇಶಿಸಿದ. ಖಲಾಸಿಯೇ ಬಂದಿರಬಹುದೆಂದು ಮೊದಲು ಎಣಿಸಿದರು. ಆದರೆ ಅವನೊಬ್ಬ ಪಾಂಡುರೋಗಿ. ಅವನನ್ನು ನೋಡಿದ ಕೂಡಲೇ ವೈದ್ಯಜೀಯವರ ಮುಖದಲ್ಲಿ ಗೆಲುವು ಕಾಣಿಸಿಕೊಂಡಿತು. ಅವರು ಒಳಗೆ ನಡೆದರು. ಒಂದು ತಾವೀಜನ್ನು ತಮ್ಮ ಜೊತೆಗೆ ತರುತ್ತಾ ಹೇಳಿದರು – "ಈಗ ಇದರ ಫಲ ನೋಡುವಿಯಂತೆ. ಇಪ್ಪತ್ತು ಇಪ್ಪತ್ತೈದು ದಿನಗಳಲ್ಲಿ ಇದರ ಚಮತ್ಕಾರ ನಿನಗೆ ಅರ್ಥವಾಗುತ್ತದೆ." ಪಾಂಡುರೋಗಿಯ ತೋಳಿಗೆ ಯಂತ್ರವನ್ನು ಕಟ್ಟುತ್ತಾ ಅದಕ್ಕೆ ಸಂಭಾವನೆಯಾಗಿ ಅವನು ಕೊಟ್ಟ ಕೆಲವು ಆಣೆಗಳನ್ನು ಜೇಬಿನಲ್ಲಿ ಹಾಕಿಕೊಂಡು ವೈದ್ಯಜೀ ಗಂಭೀರವಾಗಿ ಕುಳಿತರು. ರೋಗಿ ಹೊರಟುಹೋದಮೇಲೆ ಹೇಳಿದರು – "ಈ ವಿದ್ಯೆ ಕೂಡ ನಮ್ಮ ತಂದೆಯವರಲ್ಲಿ ಇತ್ತು. ಅವರು ಬರೆದಿರುವ ಗ್ರಂಥಗಳು ಬಿದ್ದಿವೆ... ಎಷ್ಟೋ ಸಲ ಯೋಚಿಸುತ್ತೇನೆ... ಮತ್ತೆ ಅವುಗಳನ್ನೆಲ್ಲ ನಕಲು ಮಾಡಲೇ ಎಂದು... ತುಂಬಾ ಅನುಭವದ ಮಾತುಗಳಿವೆ. ಇದು ಏನಿದ್ದರೂ ವಿಶ್ವಾಸದ ಮಾತು, ಬಾಬೂ. ಒಟ್ಟಿನಲ್ಲಿ ನಂಬಿಕೆ ಬೇಕು. ಒಂದು ಚಿಟಿಕೆ ಧೂಳು ಕೊಟ್ಟರೂ ರೋಗಿ ಗುಣಮುಖನಾಗಿ ಬಿಡುತ್ತಾನೆ. ಹೋಮಿಯೋಪತಿಯರೂ ಮತ್ತಿನ್ನೇನು? ಒಂದು ಚಿಟಿಕೆ ಸಕ್ಕರೆ. ವಿಶ್ವಾಸ ಇಟ್ಟು ತಗೋಬೇಕು, ಅಷ್ಟೆ."

ಚಂದರ್ ಹೋಗುತ್ತಾ ಹೇಳಿದ – "ಔಷಧಾಲಯ ಮುಚ್ಚುವ ಹೊತ್ತಾಗಿಹೋಯಿತು. ಊಟಕ್ಕೆ ಹೋಗೋದಿಲ್ವೇನು?"

"ನೀನು ಹೋಗು. ನಾನು ಐದು-ಹತ್ತು ನಿಮಿಷ ಬಿಟ್ಟುಕೊಂಡು ಹೋಗುತ್ತೇನೆ," ಎಂದು ಹೇಳಿ ವೈದ್ಯಜೀ ತಹಸೀಲಿಗೆ ಸಂಬಂಧಪಟ್ಟ ಕಡತಗಳನ್ನು ತಮ್ಮ ಮುಂದೆ ಸೆಳೆದುಕೊಂಡರು. ಮತ್ತು ಅಂಗಡಿಯ ಬಾಗಿಲನ್ನು ಸ್ವಲ್ಪ ಮರೆಮಾಡಿಕೊಂಡು ಕೆಲಸ ಮಾಡಲು ಕುಳಿತರು. ಹೊರಗಡೆ ಬಿಸಿಲಿನ ಕಡೆ ನೋಡಿದಾಗ, ಅದರ ಝಳಕ್ಕೆ ಕಣ್ಣು ಬಿಡುವುದು ಕೂಡ ಕಷ್ಟವಾಗುತ್ತಿತ್ತು.

ಪಕ್ಕದ ಅಂಗಡಿಯ ಬಚನ್‌ಲಾಲ್ ತನ್ನ ಅಂಗಡಿಯನ್ನು ಬಂದುಮಾಡಿ ಮನೆಯ ಕಡೆ ಹೋಗುತ್ತಾ ವೈದ್ಯಜೀ ಅವರ ಅಂಗಡಿ ಬಿಚ್ಚಿದ್ದುದನ್ನು ಕಂಡು, "ನೀನು ಊಟಕ್ಕೆ ಹೋಗಲಿಲ್ಲವೇನು?......"

"ಹಾಂ, ಇನ್ನೂ ಹೋಗಿಲ್ಲ, ಸ್ವಲ್ಪ ಜರೂರಿ ಕೆಲಸ ಇತ್ತು. ಇನ್ನೂ ಸ್ವಲ್ಪ ಹೊತ್ತು, ಆಮೇಲೆ ಹೋಗ್ತೇನೆ," ಎಂದು ಹೇಳಿ ನೆಲದ ಮೇಲೆ ಚಾಪೆಯನ್ನು ಹಾಸಿ ಅದರ

ಮೇಲೆ ಕಾಗದ, ರಿಜಿಸ್ಟರುಗಳು – ಇವುಗಳನ್ನೆಲ್ಲಾ ಮೇಜಿನ ಮೇಲಿನಿಂದ ಎತ್ತಿ ಚಾಪೆಯ ಮೇಲೆ ಹರಡಿಕೊಂಡರು. ಆದರೆ ಸೆಖೆಯೋ ಸೆಖೆ, ವಿಪರೀತ... ಬೆವರು ನಿಲ್ಲುವ ಹಾಗೇ ಇರಲಿಲ್ಲ. ಪದೇ ಪದೇ ಬೀಸಣಿಗೆ ಹಾಕಿಕೊಳ್ಳುತ್ತಿದ್ದರು, ಮತ್ತೆ ಬರೆಯತೊಡಗುತ್ತಿದ್ದರು. ಸ್ವಲ್ಪ ಹೊತ್ತು ಮನಸ್ಸು ಗಟ್ಟಿಮಾಡಿಕೊಂಡು ಕೆಲಸ ಮಾಡಿದರು. ಆದರೆ ಮನಸ್ಸಿನ ಸ್ಥಿರತೆ ಹೆಚ್ಚು ಕಾಲ ಉಳಿಯಲಿಲ್ಲ. ಎದ್ದು ಧೂಳು ಮುಚ್ಚಿಕೊಂಡಿದ್ದ ಹಳೆಯ ಶೀಷೆಗಳ ನ್ನೆಲ್ಲ ಒಪ್ಪಮಾಡಿದರು. ಮತ್ತೆ ಅವುಗಳನ್ನು ಸಾಲಾಗಿ ಜೋಡಿಸಿದರು. ಆದರೆ ಬೇಸಿಗೆಯ ಮಧ್ಯಾಹ್ನ... ಹೊತ್ತು ಕಳೆಯುವುದೇ ಕಷ್ಟವಾಗುತ್ತಿತ್ತು. ಒಂದು ಬಾರಿ ಬಾಗಿಲ ಸಂದಿ ನಿಂದ ಹೊರಗಡೆಗೆ ದೃಷ್ಟಿ ಹಾಯಿಸಿ ನೋಡಿದರು. ಅಲ್ಲಿ ಇಲ್ಲಿ ಒಬ್ಬಿಬ್ಬರು ಕಣ್ಣಿಗೆ ಬಿದ್ದರು. ಹಾಗೆ ಓಡಾಡುತ್ತಿದ್ದವರನ್ನು ನೋಡಿ ಮನಸ್ಸಿಗೆ ಸಮಾಧಾನ ತಂದುಕೊಂಡರು. ಒಳಗೆ ಬಂದು ಬೋರ್ಡಿನ ತಂತಿಯನ್ನು ಸರಿಮಾಡಿದರು. ಮತ್ತು ತೆಗೆದುಕೊಂಡು ಹೋಗಿ ಅಂಗಡಿಯ ಮುಂದೆ ನೇತುಹಾಕಿದರು. ಧನ್ವಂತರಿ ಔಷಧಾಲಯದ ಬೋರ್ಡು ಅಂಗ ಡಿಯ ಕತ್ತಿನಲ್ಲಿ ಒಂದು ತಾವೀಜಿನಂತೆ ನೇತಾಡತೊಡಗಿತು.

ಇನ್ನೂ ಸ್ವಲ್ಪ ಹೊತ್ತು ಕಳೆಯಿತು. ಕೊನೆಗೂ ಅವರು ಸಂಕಲ್ಪಮಾಡಿ ಕುಳಿತರು. ಒಂದು ಲೋಟ ನೀರು ಕುಡಿದರು. ಪಂಚೆಯನ್ನು ತೊಡೆಯತನಕ ಎತ್ತಿ ಕಟ್ಟಿಕೊಂಡರು. ಮತ್ತು ಕೆಲಸದಲ್ಲಿ ವಿಶೇಷ ಆಸ್ಥೆಯಿಂದ ತೊಡಗಿದರು. ಹೊರಗಡೆ ಯಾರೋ ಬಂದಂತಾಯಿತು. ಚಿಂತಾಗ್ರಸ್ತರಾಗಿ ನೋಡಿದರು.

ಇವೊತ್ತು ವಿರಾಮ ತೆಗೆದುಕೊಳ್ಳಲು ಮನೆಗೆ ಹೋಗಿಲ್ಲವೇ ವೈದ್ಯಜೀ? ಮನೆಗೆ ಹೋಗುತ್ತಿದ್ದ ಗುರುತು – ಪರಿಚಯದ ಅಂಗಡಿಗಳವರು ಕೇಳಿದರು.

"ಹೋಗಬೇಕೆಂದಿದ್ದೇನೆ... ಸ್ವಲ್ಪ ಕೆಲಸ ಬಾಕಿ ಬಿದ್ದಿದೆ. ಮುಗಿಸಿ ಹೋಗೋಣ ವೆಂದು ಕೂತಿದ್ದೆ", ಎಂದು ಹೇಳಿ ಗೋಡೆಗೊರಗಿ ವೈದ್ಯಜೀ ಕುಳಿತುಬಿಟ್ಟರು. ಅಂಗಿ ತೆಗೆದು ಒಂದು ಕಡೆ ಇಟ್ಟುಬಿಟ್ಟರು. ಅಂಗಡಿ ಬಿಸಿಲಿನ ತಾಪದಿಂದಾಗಿ ಬೆಂಕಿಯಂತೆ ಸುಡುತ್ತಿತ್ತು. ವೈದ್ಯಜೀಯವರ ಕಣ್ಣುಗಳು ನಿದ್ದೆಯಿಂದ ಭಾರವಾಗಿದ್ದುವು. ಹಾಗೆಯೇ ಜೊಂಪು ಹತ್ತಿತು... ಸ್ವಲ್ಪ ಹೆಚ್ಚು ಸಮಯವೇ ನಿದ್ದೆಹೋಗಿದ್ದರೆನ್ನಬೇಕು. ಹಾಗೆಯೇ ಕುಳಿತು ನಿದ್ದೆಹೋಗಲು ಸಾಧ್ಯವಾಗದೆ ಪಕ್ಕದಲ್ಲಿದ್ದ ರಿಜಿಸ್ಟರುಗಳನ್ನೆ ತಲೆದಿಂಬನ್ನಾಗಿ ಮಾಡಿಕೊಂಡು ಹಾಗೆಯೇ ಬೆನ್ನು ನೆಟ್ಟಗೆ ಮಾಡಿದರು. ಆದರೆ ನಿದ್ರೆ ಬಂತೆ?... ಬರು ತ್ತಿತ್ತು. ಹೋಗುತ್ತಿತ್ತು; ಏನಾಗಿತ್ತೋ ತಿಳಿಯದು.

ಬಾಗಿಲಿನ ಬಳಿ ಕಾಲಿನ ಒಂದು ಸಪ್ಪಳ ಕೇಳಿ ಅವರು ಎಚ್ಚರಗೊಂಡರು. ಕಣ್ಣು ತೆರೆದವರು ಹಾಗೆಯೇ ಎದ್ದು ಕುಳಿತರು. ಬಚನ್‌ಲಾಲ್ ಮಧ್ಯಾಹ್ನ ಮನೆಯಲ್ಲಿ ಕಳೆದು ಅಂಗಡಿಗೆ ವಾಪಸ್ಸು ಬಂದಿದ್ದನು.

"ಅದೇ, ಇಷ್ಟು ಹೊತ್ತಾದರೂ ಇವೊತ್ತು ನೀವು ಹೋಗಲೇ ಇಲ್ಲ?" ಎಂದು ಆತ ಕೇಳಿದ.

ವೃದ್ಧಜೀ ಜೋರು ಜೋರಾಗಿ ಬೀಸಣಿಗೆ ಮಾಡಿಕೊಳ್ಳತೊಡಗಿದರು. ಬಚ್ಚನ್‌ಲಾಲ್ ಅಂಗಡಿಯಿಂದ ಇಳಿಯುತ್ತಾ ಕೇಳಿದ, "ಯಾರನ್ನಾದರೂ ನಿರೀಕ್ಷಿಸುತ್ತಿದ್ದೀರೇನು?"

"ಹಾಂ, ಒಬ್ಬ ರೋಗಿ ಬರುವುದಾಗಿ ಹೇಳಿದ್ದ... ಈ ತನಕ ಬರಲೇ...", ಬಚನ್ ಲಾಲ್ ಹೋಗುತ್ತಿದ್ದುದನ್ನು ಕಂಡ ವೃದ್ಧಜೀ ಮಾತನ್ನು ಅಷ್ಟಕ್ಕೇ ನಿಲ್ಲಿಸಿ ಸುಮ್ಮನಾಗಿ ಬಿಟ್ಟರು ಮತ್ತು ತಮ್ಮ ಬವರನ್ನು ಒರಸಿಕೊಳ್ಳತೊಡಗಿದರು.

# ಶವಯಾತ್ರೆ

ಕೇವಲ ಒಂದು ಮಂಚ ಇಡುವಷ್ಟು ಜಾಗ ಇತ್ತು. ಕೊಠಡಿಯಿಂದ ಹೊರಗೆ ಬಂದ ಪೊಲೀಸಿನವ. ಅಲ್ಲಿ ನೆರೆದಿದ್ದ ಜನರನ್ನು ಉದ್ದೇಶಿಸಿ "ಇವಳ ವಾರಸುದಾರರು ಯಾರಾದರೂ ಇದ್ದಾರೆಯೆ?" ಎಂದು ಕೇಳಿದ. ಯಾರಿಂದಲೂ ಅವನಿಗೆ ಉತ್ತರ ದೊರಕದೆ ಹೋದುದನ್ನು ಗಮನಿಸಿ ತನಗೆ ತಾನೇ, ಏನಾದರೂ ವ್ಯವಸ್ಥೆ ಆಗಲೇಬೇಕಲ್ಲಾ ಎಂದುಕೊಂಡ.

ಹಿಂದೂನೋ, ಮುಸಲ್ಮಾನರವಳೋ?

ಸೈಕಲ್ಲಿನ ಸೀಟಿಗೆ ಒರಗಿಕೊಂಡು ನಿಂತಿದ್ದ ಒಬ್ಬ ಹುಡುಗ ಹೇಳಿದ: "ಅವಳೊಬ್ಬ ಸೂಳೆ."

ಗೊತ್ತಿದೆ. ಪೊಲೀಸಿನವನು ಅವನನ್ನು ಗದರಿಸುವ ಧ್ವನಿಯಲ್ಲಿ ಹೇಳಿದ.

ಸೇವಾ ಸಂಘದವರ ವಶಕ್ಕೆ ಒಪ್ಪಿಸಿಬಿಡಿ ಸ್ವಾಮಿ, ಎಂದು ಪೊಲೀಸಿನವನ ಕಡೆ ಬೀಡಿಯ ಕಟ್ಟನ್ನು ಮುಂದುಮಾಡುತ್ತಾ ಒಬ್ಬ ವ್ಯಕ್ತಿ ಹೇಳಿದ.

ಹೆಣ ನೆನ್ನೆಯಿಂದ ಬಿದ್ದಿದೆ. ಇನ್ನು ಹೆಚ್ಚು ಕಾಲ ಬಿಟ್ಟರೆ ಬೋ ನಾತ ಒಡಿಯೋಕೆ ಶುರುವಾಗುತ್ತೆ, ಗೊತ್ತೇನು? ಕಾನ್‌ಸ್ಟೇಬಲ್ ಸಾಹೇಬರೇ. ಬೇಗ ಏನಾದರೂ ವ್ಯವಸ್ಥೆ ಮಾಡಿ.

ಬೀಡಿಯ ಹೊಗೆಯನ್ನು ಮೂಗಿನಿಂದ ಹೊರಗೆ ಬಿಡುತ್ತಾ ಪೊಲೀಸಿನವ ಹೇಳಿದ: ಇವಳ ಅಣ್ಣ–ತಮ್ಮ, ಅಣ್ಣನ ಮಗ, ತಮ್ಮನ ಮಗ ಹೀಗೆ ಯಾರಾದರೂ ಇರಬೇಕಲ್ಲ. ಒಂದು ರಿಪೋರ್ಟ್ ಕೂಡ ತಯಾರಾಗಬೇಕು. ಒಂದು ಕ್ರಮ ಅನುಸರಿಸದೆ ಹೋದರೆ ಪೊಲೀಸಿನವರನ್ನು ಬಿಟ್ಟಾರೆ? ಆಮೇಲೆ ಗುಲ್ಲೆಬ್ಬಿಸುತ್ತಾರೆ, ಬಡ್ಡೀಮಕ್ಕಳು. ನನ್ನ ಮೇಲೇ ಪೆಟಿಷನ್ ಕೊಡ್ತಾರೆ. ಏನಾದರೂ ಗೊತ್ತಿದ್ದರೆ ಹೇಳಿ. ಬೀಡಿಯ ಹೊಗೆಯನ್ನು ಜೋರಾಗಿ ಎಳೆಯುತ್ತಾ ಗಾಢವಾಗಿ ಅವನು ಯೋಚಿಸತೊಡಗಿದ. ಕೆಲವರು ಪೊಲೀಸಿನವನ ಬಳಿಯೇ ಮೂಕರಾಗಿ ನಿಂತಿದ್ದರು. ಮತ್ತೆ ಕೆಲವರು ಸ್ವಲ್ಪ ದೂರದಲ್ಲಿ ಗುಂಪುಕಟ್ಟಿ ನಿಂತುಕೊಂಡು ಮಾತನಾಡುತ್ತಿದ್ದರು.

ಸಮೀಪದಲ್ಲಿಯೇ ಕೆಲವು ಚಿಕ್ಕ ಪುಟ್ಟ ಮನೆಗಳು, ಕೊಠಡಿಗಳೂ ಗುಡಿಸಲುಗಳೂ ಇದ್ದುವು. ಅವುಗಳ ಮುಂದೆ ಇದ್ದ ದಾರಿ ಕೂಡ ಒಳ್ಳೆಯ ಪಕ್ಕಾ ರಸ್ತೆಯಾಗಿರಲಿಲ್ಲ. ಆದರೂ ನೋಡುವುದಕ್ಕೆ ಚೆನ್ನಾಗಿಯೇ ಇತ್ತು. ಇಡೀ ದಿನ ಇಲ್ಲಿ ಗಾಳಿ ಧೂಳು. ಜೊತೆಗೆ ನಿರ್ಜನ ಪ್ರದೇಶ ಬೇರೆ.

ಎರಡು ಮೂರು ವರ್ಷದಿಂದ ಇಮರತಿ ಅಲ್ಲಿ ಒಬ್ಬಳೇ ಇರುತ್ತಿದ್ದಳು. ಎಷ್ಟೋ ಬಾರಿ ಅವಳ ಜೊತೆಗೆ ಜನ ಜಗಳ ಆಡಿದ್ದರೂ ಅಲ್ಲಿಂದ ಹೋಗಿರಲಿಲ್ಲ. ನೆರೆಹೊರೆಯ ಜನ ಕೂಡ ಈಗ ಆಕೆಯ ಇರುವಿಕೆಗೆ ಹೊಂದಿಕೊಂಡು ಬಿಟ್ಟಿದ್ದರು. ಅವಳ ವ್ಯವಹಾರ ಗೊತ್ತಿದ್ದರೂ ಯಾರೂ ಅವಳ ಜೊತೆಗೆ ಜಗಳಕ್ಕೆ ನಿಲ್ಲುತ್ತಿರಲಿಲ್ಲ. ಹೆಚ್ಚೆಂದರೆ ಅವಳ ಜೊತೆಗೆ ಮಾತನಾಡಲು ಇಷ್ಟಪಡುತ್ತಿರಲಿಲ್ಲ. ಅವಳು ಅಲಂಕಾರ ಮಾಡಿಕೊಂಡು ಬೀಡಾ ಅಂಗಡಿಯ ಮುಂದೆ ಹೋಗಿ ನಿಲ್ಲುತ್ತಿದ್ದ ಕೆಲನಿಮಿಷಗಳನ್ನು ಬಿಟ್ಟರೆ ಅವಳೊಡನೆ ಮಾತನಾಡುವ ಪ್ರಸಂಗಗಳೂ ಅವರಿಗೆ ಬರುತ್ತಿರಲಿಲ್ಲ.

ಬೆಳಿಗ್ಗೆಯಿಂದ ಹಿಡಿದು ಅರ್ಧ ರಾತ್ರಿ ವರೆಗೆ ಚಿತ್ರಗೀತೆಗಳ ರಕಾರ್ಡುಗಳನ್ನು ಹಾಕಿ ಕೊಂಡಿರುತ್ತಿದ್ದ ಪಕ್ಕದ ಹೊಟೇಲಿಗೆ ಸಂಜೆಯ ಹೊತ್ತು ತಿಂಡಿ ಕಟ್ಟಿಸಿಕೊಂಡು ಹೋಗಲು ಬಂದಾಗಲೂ ಅವಳು ಅಲ್ಲಿ ಹೆಚ್ಚು ಹೊತ್ತು ನಿಲ್ಲುತ್ತಿರಲಿಲ್ಲ. ಪ್ರಾಯಶಃ ತನ್ನ ಅನುಭವ ದಿಂದ. ಅಲ್ಲಿ ಕೂರುವ ಜನ ದುಡ್ಡು ಕೊಡುವ ಜನರಲ್ಲ ಎಂದು ತಿಳಿದುಕೊಂಡಿದ್ದಳು. ಬಿಟ್ಟಿ ಗಿರಾಕಿಗಳನ್ನು ಕಂಡರೆ ಅವಳಿಗೆ ಸ್ವಲ್ಪವೂ ಆಗುತ್ತಿರಲಿಲ್ಲ. ಎಂದೇ ಅವಳು ಒಬ್ಬ ಹುಡುಗನಿಗೆ ತಾನೇ ದುಡ್ಡು ಕೊಟ್ಟು. ಬಣ್ಣದ ಸೀಮೆಸುಣ್ಣದಿಂದ ಗುಂಡಾಗಿ, ತನ್ನ ಮನೆಯ ಗೋಡೆಯ ಮೇಲೆ ಬರೆಸಿದ್ದಳು – ಸಾಲದ ವ್ಯವಹಾರ ಮುಹಬ್ಬತ್ತಿನ ವೈರಿ ಎಂದು.

ಇಮರತಿ ಬಾಯಿ ಇತರ ವೇಶ್ಯೆಯರಿಗಿಂತ ಭಿನ್ನವಾಗಿದ್ದಳು. ಅವಳು ಅಂಗಡಿಗ ಬಂದು ಹೊರಟು ಹೋದಮೇಲೆ ಹೆಚ್ಚು ಮಾತನಾಡುವವಳಲ್ಲ ಎಂದು ಬೀಡಾ ಅಂಗಡಿಯವನು ಅಲ್ಲಿರುತ್ತಿದ್ದವರಿಗೆ ಹೇಳುತ್ತಿದ್ದ.

ಅವಳಲ್ಲಿಗೆ ಹೋಗುತ್ತಿದ್ದ ಗಿರಾಕಿಗಳ ಸಂಖ್ಯೆಯೂ ಕಡಿಮೆ. ಕೊನೆಯ ದಿನಗಳಲ್ಲಂತೂ ಒಬ್ಬಿಬ್ಬರು ಮಾತ್ರ ಬರುತ್ತಿದ್ದರು. ಅವಳು ಹಾಡುವುದೂ ಇಲ್ಲ, ಕುಂಡಿ ಕುಣಿಸುವುದೂ ಇಲ್ಲ. ಅವಳಲ್ಲಿಗೆ ಯಾರು ಹೋಗಬೇಕು ಎಂದು ಬೀಡಾ ಅಂಗಡಿಯವನು ಹೇಳುತ್ತಿದ್ದ. ಬರುವ ಮನುಷ್ಯ ಕೇವಲ ದೇಹದ ರುಚಿಯಿಂದಲೇ ತೃಪ್ತನಾಗುತ್ತಾನೇನು? ಕಾಲಕ್ಕೆ ತಕ್ಕಂತೆ ಇರಬೇಕು ತಾನೇ?

ಇಷ್ಟು ಹೇಳಿ ಮಾತು ನಿಲ್ಲಿಸಿದಾಗ. ಬರುವ ಜನ ಅವಳ ಹಾಡುಗಾರಿಕೆ ಮತ್ತು ಅವಳ ಕುಣಿತ ನೋಡಲು ಬರುತ್ತಾರೇನು? ಅವಳ ದೇಹವನ್ನು ಬಯಸಿ ಬರುತ್ತಾರೆ – ಎಂದು ಯಾರಾದರೂ ಹೇಳಿದರೆ ತನಗೆ ತುಂಬಾ ಗೊತ್ತಿರುವಂತೆ ಅವನು ಹೇಳುತ್ತಿದ್ದ: ಅವಳ ದೇಹದಲ್ಲಾದರೂ ಏನಿದೆ? ಅದರಲ್ಲೂ ಒಂದು ಮೋಹಕತೆ ಬೇಕಲ್ಲ? ಇರಬೇಕಾದ ಲಾವಣ್ಯವಾದರೂ ಎಲ್ಲಿದೆ? ಅವಳು ಏನಿದ್ದರೂ ಒಬ್ಬ ಸೂಳೆ ಮಾತ್ರ.

ಅವಳು ಸತ್ತುಹೋಗಿರುವ ಈ ಸಮಯದಲ್ಲಿ ಕೂಡ ಅವನು ಬೀಡಾ ತಯಾರಿಸುತ್ತಾ ತನ್ನ ವಿಚಾರಧಾರೆಯನ್ನು ಮತ್ತೆ ಹರಿಯಬಿಟ್ಟಿದ್ದ. ಇವಳ ಗತಿ ಹೀಗೆಯೇ ಆಗುತ್ತದೆ ಎಂದು ನನಗೆ ಗೊತ್ತಿತ್ತು. ಇಮರತಿ ಬಾಯಿ. ಇಲಾಜು ಮಾಡಿಸಿಕೋ. ಈಗಲೂ

ಬದುಕಿಕೊಳ್ಳುತ್ತಿ ಎಂದೂ ಹೇಳಿದ್ದೆ. ಹಾಳಾದವಳು ಬದುಕಿದ್ದಷ್ಟೂ ದಿನ ಊರಿಗೆಲ್ಲ ತನ್ನ ಕಾಯಿಲೆಯನ್ನು ಹಂಚುತ್ತಲೇ ಬದುಕಿದಳು. ಈಗ ಸತ್ತುಬಿದ್ದಿದ್ದಾಳೆ. ಎತ್ತಿ ಹಾಕಲೂ ಒಬ್ಬ ಗತಿ ಇಲ್ಲ. ನೀವೇನೇ ಹೇಳಿ, ಇಮರತಿ ಬಾಯಿ ಒಟ್ಟಿನಲ್ಲಿ ಅಪ್ಪಟ ಸೂಳೆಯಾಗಿದ್ದಳು. ಅವಳ ಕಥೆಯೆಲ್ಲ ನನಗೆ ಚೆನ್ನಾಗಿ ಗೊತ್ತು.

ಅವನು ಎಲೆಗೆ ಕತ್ಥಾ ಹಚ್ಚುತ್ತಾ ಕುಳಿತಲ್ಲಿಂದಲೇ ಮತ್ತೆ ಕೂಗಿ ಹೇಳಿದ: ಹವಾಲ್ದಾರಜೀ. ಬೇಗ ಹೆಣವನ್ನು ಸಾಗಿಸುವ ವ್ಯವಸ್ಥೆ ಮಾಡಿ. ಕಾಯಿಲೆ ಬಂದು ಸತ್ತಿದೆ ಅದು.

ಗಾಜಿನ ಗ್ಲಾಸಿನ ತುಂಬಾ ಇದ್ದ ಬಿಸಿ ಬಿಸಿ ಚಹಾವನ್ನು ಉಫ್-ಉಫ್ ಎಂದು ತಣ್ಣಗೆ ಮಾಡಿಕೊಳ್ಳುತ್ತಾ ಕುಡಿಯುತ್ತಿದ್ದ ಹವಲ್ದಾರ ಅಂಗಡಿಯವನ ಕಡೆಗೆ ತಿರುಗಿ ಏನೋ ಹೇಳಲು ಹೊರಟಿದ್ದ. ಆದರೆ ಆಗತಾನೇ ಮುನಿಸಿಪಾಲಿಟಿಯ ಕಸ ಎತ್ತುವ ಎತ್ತಿನಗಾಡಿ ಯೊಂದು ಈ ಕಡೆಗೇ ದಡದಡನೆ ಬರುತ್ತಿರುವುದು ಅವನ ದೃಷ್ಟಿಗೆ ಬಿತ್ತು.

ಚಹಾದ ಒಂದು ಗುಟುಕನ್ನು ಹೀರಿ ಗ್ಲಾಸನ್ನು ಹೋಟಲಿನ ಹುಡುಗನ ಕೈಗೆ ಕೊಡುತ್ತಾ ಆ ಗಾಡಿಯವನ ಮೇಲೆ ಎಗರಿ ಬೀಳುವವನಂತೆ ಅವನ ಕಡೆಗೆ ಧಾವಿಸಿ ನಿನ್ನ ಹೆಸರೇನೋ ಎಂದು ಕೇಳಿದ.

ಗಾಡಿಯಿಂದ ಇಳಿಯುತ್ತ ಅವನು ಹೇಳಿದ: ಬನ್ಸೀಲಾಲ್.

ಎಲ್ಲಿಗೆ ಹೋಗುತ್ತಿದ್ದೀ?

ಡ್ಯೂಟಿ ಮೇಲೆ ಹೋಗುತ್ತಿದ್ದೇನೆ. ಉದಾಸೀನದಿಂದಲೇ ಅವನು ಉತ್ತರ ಕೊಟ್ಟ. ಪೊಲೀಸರೆಂದರೆ ಅವನಿಗೆ ಅಷ್ಟಕ್ಕಷ್ಟೆ. ಜನಜಂಗುಳಿ ಅವನಿಗೆ ಕಾಣದೆ ಹೋಗಿದ್ದರೆ ಅವನು ಅಲ್ಲಿ ನಿಲ್ಲುತ್ತಲೇ ಇರಲಿಲ್ಲ.

ಯಾವುದಾದರೂ ಹಾಡು ಹಾಡುತ್ತಾ ಹೊರಟುಹೋಗುತ್ತಿದ್ದ. ಇಮರತಿ ಬಾಯಿ ಹೊರಗೆ ನಿಂತಿರಲಿ ಇಲ್ಲದಿರಲಿ. ಈ ಕಡೆ ಅವನು ಹೋಗುವಾಗ ಹಾಡುತ್ತಾ ಹೋಗುವುದು ಅವನ ವಾಡಿಕೆ.

ಏಯ್, ಬನ್ಸೀಲಾಲ್ ಕೇಳಿಲ್ಲಿ–ಪೊಲೀಸಿನವನು ಅವನ ಮೇಲೆ ತನ್ನ ಜಬರದಸ್ತು ತೋರಿಸುತ್ತಾ ಹೇಳಿದ – ಡ್ಯೂಟಿಗೆ ಹೋಗೋದು ಕ್ಯಾನ್ಸಲ್ ಮಾಡು. ಹೆಣ ಸಾಗಿಸ ಬೇಕು.

ಯಾರು ಸತ್ತಿದ್ದಾರೆ? ಬನ್ಸೀಲಾಲ್ ಕೈಲಿದ್ದ ಚಾಟಿಯನ್ನು ಗಾಡಿಯಲ್ಲಿ ಇಡುತ್ತಾ ಕೇಳಿದ.

ಇಮರತಿ ಬಾಯಿ. ಗುಂಪಿನಲ್ಲಿದ್ದ ಒಬ್ಬ ಹೇಳಿದ.

ಏನಂದೆ? ನಂಬಲಾಗದೆ ಮತ್ತೆ ಕೇಳಿದ: ಯಾರು?

ಬೇಗ ಇಲ್ಲಿಂದ ಹೆಣ ಸಾಗಿಸು ಮತ್ತು ಅದಕ್ಕೊಂದು ಗತಿ ಮಾಡು, ತಿಳೀತಾ? ನಾನು ಸ್ಟೇಷನ್ನಿಗೆ ಹೋಗಿ ರಿಪೋರ್ಟ್ ಕೊಡಬೇಕು, ಇಷ್ಟು ಹೇಳಿ ಪೊಲೀಸಿನವನು ಅವನ

ಬೆನ್ನು ತಟ್ಟಿದ. ಮತ್ತು ಜೇಬಿನಿಂದ ಒಂದು ಹರಕಲು ನೋಟ್-ಬುಕ್ ತೆಗದು ಪೆನ್ಸಿಲಿನಿಂದ ಅದರಲ್ಲಿ ಏನೇನೋ ಬರೆದುಕೊಳ್ಳುತ್ತಾ ಮುಂದೆ ನಡೆದ.

ಂ ಂ ಂ ಂ

ಬನ್ಸೀಲಾಲ್ ತನ್ನ ಗಾಡಿಯನ್ನು ಪಕ್ಕಕ್ಕೆ ನಿಲ್ಲಿಸಿದ್ದ. ಸ್ವಲ್ಪ ನೋಡೋಣ ಎಂದು ಅವನು ಒಳಗಡೆಗೆ ಹೋದ. ಇಷ್ಟರ ತನಕ ಅಲ್ಲಿ ನೆರೆದಿದ್ದವರ ಪೈಕಿ ಯಾರೂ ಒಳಗೆ ಹೋಗಿರಲಿಲ್ಲ. ಅವನು ಒಳಗೆ ಹೋಗಿದ್ದು ನೋಡಿ ಕೆಲವರು ಅವನನ್ನು ಹಿಂಬಾಲಿಸಿದರು.

ಹಣ ಚಾರಪಾಯಿಯ ಮೇಲೆ ಇತ್ತು. ಯಾರೂ ಅದರ ಮೇಲೆ ಬಟ್ಟೆ ಹೊದಿಸುವ ಗೋಜಿಗೂ ಹೋಗಿರಲಿಲ್ಲ.

ಬನ್ಸೀಲಾಲ್ ಆ ಕೊಠಡಿಯೊಳಕ್ಕೆ ಮೊದಲ ಬಾರಿ ಬಂದಿದ್ದ. ಒಳಗೆ ಕಾಲಿಡುತ್ತಿದ್ದ ಹಾಗೆಯೇ ಅವನಿಗೆ ಸ್ವಲ್ಪ ಕುತೂಹಳ ಇಟ್ಟರತಾಯಿತು.

ಇಮರತಿ ಬಾಯಿಯನ್ನು ಅವನು ಅನೇಕ ಬಾರಿ ನೋಡಿದ್ದ. ಒಂದಲ್ಲ ಒಂದು ದಿನ ಅವಳಲ್ಲಿಗೆ ತಾನು ಹೋಗುವ ಕನಸನ್ನೂ ಕಾಣುತ್ತಿದ್ದ. ಅವಳ ದೇಹದ ಆ ಗುಲಾಬಿ ಬಣ್ಣ; ಅವಳು ಸತ್ತುಹೋಗಿದ್ದರೂ ಮೋಹಕವಾಗಿತ್ತು.

ಅವನ ಕನಸು ನನಸಾಗಿರಲಿಲ್ಲ. ಅವಳಲ್ಲಿಗೆ ಹೋಗುವುದು ಅವನಿಗೆ ಸಾಧ್ಯವಾಗಿರಲಿಲ್ಲ. ಅಷ್ಟು ಹಣ ಜೋಡಿಸುವುದೂ ಆಗಿರಲಿಲ್ಲ. ಇಮರತಿಬಾಯಿ ಬಳಿಗೆ ಬರುವ ಗಿರಾಕಿಗಳ ಸಂಖ್ಯೆ ಕಡಿಮೆ ಇದ್ದರೂ ಅವಳ ರೇಟು ತುಂಬಾ ಹೆಚ್ಚಾಗಿಯೇ ಇತ್ತೆಂಬುದು ಅವನಿಗೆ ಗೊತ್ತಿತ್ತು. ರೇಟಿನ ಬಗ್ಗೆ ಅವಳು ಕೆಳಗಿಳಿಯುವ ಮಾತೇ ಇಲ್ಲವೆಂದೂ ಗೊತ್ತಿತ್ತು. ಅದು ಹಾಗಿರಲಿ. ಅವಳು ಅವನನ್ನು ಹತ್ತಿರ ಸೇರಿಸಬೇಕಲ್ಲ! ಅದೂ ಒಂದು ಪ್ರಶ್ನೆಯಾಗಿತ್ತು. ಅವನಲ್ಲಿ ಅವಳು ಅಪೇಕ್ಷಿಸಬಹುದಾಗಿದ್ದ ರೂಪವಾದರೂ ಇತ್ತೆ? ತಾನು ಕುರೂಪಿಯೆಂಬುದು ಅವನಿಗೇ ಗೊತ್ತಿತ್ತು; ತನ್ನ ಗಿಡ್ಡ ಆಕಾರ ಕಂಡು ಇತರರು ನಗುತ್ತಿದ್ದರು. ಅಯ್ಯೋ ಎನ್ನುತ್ತಿದ್ದರು. ಅಂತಹ ಪ್ರಸಂಗಗಳು ಬಂದಾಗ ತನ್ನ ಕೋಪವನ್ನು ತಾನೇ ನುಂಗಿಕೊಂಡು ಮುಂದೆ ಹೋಗುತ್ತಿದ್ದ.

ಡ್ಯೂಟಿ ಮುಗಿದ ಮೇಲೆ ಸಾಯಂಕಾಲ ಶುಭ್ರವಾದ ಕುರ್ತಾ ಮತ್ತು ಮಲ್ಲಿನ ಪಂಚೆ ಉಟ್ಟುಕೊಂಡು ಸಿನಿಮಾ ಮಂದಿರದವರೆಗೆ ಸುತ್ತಾಡಿ ಬರಲು ಹೋಗುತ್ತಿದ್ದ. ಮತ್ತು ಕೊಳಲಿನ ಮೇಲೆ ಸಿನಿಮಾ ಹಾಡುಗಳನ್ನು ನುಡಿಸಿ ಹುಡುಗರನ್ನು ತನ್ನ ಬಳಿಗೆ ಆಕರ್ಷಿಸುತ್ತಿದ್ದ. ತನ್ನ ಕೊಳಲಿನ ಕಾರಣ ಜನ ಅವನ ಸುತ್ತ ಸೇರುತ್ತಿದ್ದರು.

ಇಮರತಿ ಬಾಯಿಯ ಮುಖ ತುಂಬಾ ವಿಕಾರವಾಗಿ ಹೋಗಿತ್ತು. ಬಾಯಿ ಸ್ವಲ್ಪ ಬಿಚ್ಚಿಕೊಂಡಿತ್ತು. ಎದೆಯ ಮೇಲಿನ ಸೆರಗು ಕೆಳಗೆ ಜಾರಿತ್ತು. ಅವಳ ತೊಡೆಗಳೂ ಕಾಣುತ್ತಿದ್ದುವು. ಅವಳ ಈ ಸ್ಥಿತಿ ಕಂಡು ಅವನಿಗೆ ಸ್ವಲ್ಪ ದುಃಖವಾಯಿತು. ಇನ್ನು ಕಾಲವಿಳಂಬ ಮಾಡುವ ಹಾಗಿಲ್ಲ. ಹೀಗೆ ಯೋಚಿಸುತ್ತಾ ಅವನು ಸಮೀಪಕ್ಕೆ ಹೋಗಿ ಅವಳ ಸೀರೆಯನ್ನು ಸರಿಮಾಡಿ ದೇಹವನ್ನು ಮುಚ್ಚಿದ.

ಚಾರಪಾಯಿಯನ್ನು ಹೊರಕ್ಕೆ ತೆಗೆಯುವ ಅಗತ್ಯವಿಲ್ಲ ಎಂದುಕೊಂಡು ಹೆಣದ ಕಾಲಿನ ಕಡೆ ಭಾಗವನ್ನು ತಾನು ಹಿಡಿದುಕೊಂಡು ಅಲ್ಲಿ ನೆರೆದಿದ್ದವರನ್ನು ಉದ್ದೇಶಿಸಿ ದಯವಿಟ್ಟು ಸ್ವಲ್ಪ ಸಹಾಯಮಾಡಿ ಎಂದು ಹುರಿದುಂಬಿಸಿದ. ಒಬ್ಬ ಮುಂದೆ ಬಂದು ಕತ್ತಿನ ಭಾಗಕ್ಕೆ ಕೈಹಾಕಿದ. ಇನ್ನೊಬ್ಬ ಬೆನ್ನಿಗೆ. ಹೀಗೆ ಮೂವರು ಸೇರಿ ಹೆಣವನ್ನು ಹೊರಕ್ಕೆ ತಂದರು.

ಸ್ವಲ್ಪ ಇರಿ, ಎಂದು ಏನೋ ಮರೆತವನಂತೆ ಎಚ್ಚರಗೊಂಡು ಹೇಳಿದ. ಸ್ವಲ್ಪ ಗಾಡಿ ತೊಳೆದುಕೊಳ್ಳುತ್ತೇನೆ. ಹೆಣವನ್ನು ಎತ್ತಿ ಸಾಗಿಸುವುದು ಅವನಿಗೆ ಅಭ್ಯಾಸವಾಗಿತ್ತು. ಹೆಣವನ್ನು ಹೊಲಸು ತುಂಬಿದ ಗಾಡಿಯಲ್ಲಿ ಅದನ್ನು ತೊಳೆಯದೆ ತೆಗೆದುಕೊಂಡು ಹೋಗಬಾರದೆಂಬ ಪ್ರಜ್ಞೆ ಬಂದುದು ಮಾತ್ರ ಇದೇ ಮೊದಲು.

ಎತ್ತಿನ ಬೆನ್ನಿನ ಮೇಲೆ ತನ್ನ ಚಾಟಿಯನ್ನು ಮೃದುವಾಗಿ ಪ್ರಯೋಗಿಸುತ್ತಾ ಗಾಡಿಯನ್ನು ಪಕ್ಕದಲ್ಲಿಯೇ ಇದ್ದ ನೀರಿನ ಕೊಳಾಯಿಯ ಬಳಿಗೆ ತೆಗೆದುಕೊಂಡು ಹೋದ. ಮತ್ತು ನೀರು ಬಿಟ್ಟುಕೊಂಡು ಚೆನ್ನಾಗಿ ಗಾಡಿಯನ್ನೆಲ್ಲ ತೊಳೆಯತೊಡಗಿದ. ಅದೆಷ್ಟು ಆನಂದದಿಂದ ಆ ಕೆಲಸ ಮಾಡುತ್ತಿದ್ದ ಎಂಬುದು ಅವನ ಉತ್ಸಾಹದಿಂದ ಪ್ರಕಟವಾಗುತ್ತಿತ್ತು. ಬೊಗಸೆ ಬೊಗಸೆ ನೀರು ಹಿಡಿದು ಗಾಡಿಯ ಹೊರಭಾಗಕ್ಕೂ ಒಳಭಾಗಕ್ಕೂ ಛಪ್ಪರಿಸಿ ಚೆನ್ನಾಗಿ ತೊಳೆದ ಮತ್ತು ಆ ನಂತರ ಒಂದು ಕೊಳಕು ಬಟ್ಟೆಯಿಂದ ತೊಳೆದ ಭಾಗವನ್ನೆಲ್ಲ ಚೆನ್ನಾಗಿ ಉಜ್ಜಿ ಉಜ್ಜಿ ಒರೆಸಿದ. ಮತ್ತು ಒಮ್ಮೆಲೆ ಛಂಗನೆ ಎತ್ತಿನ ಬೆನ್ನಿನ ಮೇಲೆ ಹಾರಿ ಕುಳಿತು ತನ್ನ ತೊಳೆದ ಗಾಡಿಯತ್ತ ದೃಷ್ಟಿ ಹಾಯಿಸಿ "ಇಲ್ಲ. ಇನ್ನೂ ಸ್ವಲ್ಪ ತೊಳೆದುಕೊಳ್ಳೋಣ" ಎಂದು ತನಗೆ ತಾನೇ ಹೇಳಿಕೊಂಡು ಕೆಳಗೆ ಇಳಿದು ಮತ್ತೆ ಕಾರ್ಯೋನ್ಮುಖನಾದ.

ಹೆಣದ ಸುತ್ತಲೂ ಹತ್ತಿಪ್ಪತ್ತು ಜನ ಗುಂಪುಕಟ್ಟಿಕೊಂಡಿದ್ದರು. ಅವನು ತನ್ನ ಗಾಡಿಯನ್ನು ತುಂಬಾ ಜೋರಾಗಿ ಓಡಿಸಿಕೊಂಡು ಅವರ ಕಡೆಗೀಗ ಬಂದ. ಸ್ವಲ್ಪ ದೂರ ಸರಿಯಿರಿ; ಹಿಂದಕ್ಕೆ ಹೋಗಿ; ಸ್ಥಳ ಬಿಡಿ. ಮೇಲುಸಿರು ಬಿಡುತ್ತಾ ಕೆಳಗಿಳಿದವನೇ 'ಹಾಂ. ಈಗ ಸ್ವಲ್ಪ ಸಹಾಯ ಮಾಡಿ' ಎಂದು ತನ್ನ ಎಲ್ಲ ಶಕ್ತಿಯನ್ನೂ ಪ್ರಯೋಗಿಸಿ ಒಮ್ಮೆ ಜೋರಾಗಿ ಕೂಗು ಹಾಕಿದ - "ಸ್ವಲ್ಪ ಈ ಕಡೆ ಕೈಹಾಕಿ."

ಜನ ಮುಂದೆ ಬಂದರು. ಹೆಣವನ್ನು ಎತ್ತಲು ಮತ್ತೆ ಅದೇ ರೀತಿ ನೆರವಾದರು. ಸ್ವಲ್ಪ ಹುಷಾರಾಗಿ ಎತ್ತಿ. ಹಾಂ. ಹಾಗೇ!

ಅವನು ಗಾಡಿಯ ಮೇಲೆ ಹತ್ತಿ ಹೆಣವನ್ನು ಯಾವ ರೀತಿ ಇಡಬೇಕೆಂದು ಯೋಚಿಸಿ ಸ್ಥಳ ಮಾಡುತ್ತಿದ್ದ. ಆದರೆ ಹೆಣವನ್ನು ಮಲಗಿಸುವಷ್ಟು ಸ್ಥಳವಾದರೂ ಎಲ್ಲಿತ್ತು? ಅವನಿಗೆ ಬೇಜಾರಾಯಿತು. ಮುನಿಸಿಪಾಲಿಟಿಯ ಮೇಲೆ ಸಾಕಷ್ಟು ಕೋಪವೂ ಬಂತು. ಇಷ್ಟು ಚಿಕ ಗಾಡಿಯಲ್ಲಿ ಒಂದು ಮಗುವಿನ ಹೆಣ ಸಾಗಿಸುವುದೂ ಕಷ್ಟ.

ಹಾಗಲ್ಲ, ಹೀಗೆ. ಇನ್ನಿಬ್ಬರ ಸಹಾಯ ಪಡೆದು ಹೆಣದ ಅರ್ಧಭಾಗದಷ್ಟು ದೇಹವನ್ನು ಗಾಡಿಯಲ್ಲಿ ಮಲಗಿಸಿದ. ತನ್ನ ಹೆಗಲ ಮೇಲಿದ್ದ ಟವಲನ್ನು ತೆಗೆದು ಅದನ್ನೇ ದಿಂಬಾಗಿ ಮಾಡಿ ಹೆಣದ ತಲೆಯ ಕೆಳಗೆ ಒಪ್ಪವಾಗಿ ಇಟ್ಟ. ಇಷ್ಟೆಲ್ಲ ಅಚ್ಚುಕಟ್ಟು ಮಾಡಿದ ಮೇಲೆ ಅವನ ಮನಸ್ಸಿಗೆ ಒಂದಿಷ್ಟು ಸಮಾಧಾನವಾಯಿತು; ಮನಸ್ಸು ಪ್ರಸನ್ನಗೊಂಡಿತು.

ಗಾಡಿಯ ಮೇಲೆ ನಿಂತುಕೊಂಡವನೇ ಸುತ್ತಲೂ ನೆರೆದಿದ್ದವರ ಕಡೆಗೆ ಒಮ್ಮೆ ದೃಷ್ಟಿ ಹಾಯಿಸಿ ನೋಡಿದ. ಅವರೆಲ್ಲರಿಗಿಂತ ತಾನು ಸ್ವಲ್ಪ ಮೇಲೆ ಇರುವಂತಹ ಮನುಷ್ಯ ಎಂದು ಅವನಿಗೆ ಭಾಸವಾಯಿತು. ಅವರಲ್ಲಿ ಅವನಿಗೆ ಯಾರೂ ಏನನ್ನೇ ಹೇಳುವ ಮೊದಲೇ ಅವನು ಗಾಡಿಯನ್ನು ಮುಂದಕ್ಕೆ ಓಡಿಸಿ ತಾನೂ ಸಮಾಧಾನದಿಂದ ಅದರಲ್ಲಿ ಕುಳಿತುಕೊಂಡ.

ಸ್ವಲ್ಪ ದೂರ ಹೋದಮೇಲೆ ಹಿಂದಕ್ಕೆ ತಿರುಗಿ ನೋಡಿದ. ನೆರೆದಿದ್ದ ಜನ ಚದುರುತ್ತಿದ್ದರು. ಒಬ್ಬ ವ್ಯಕ್ತಿ ಮುಂದೆ ಹೋಗಿ ಇಮರತಿಬಾಯಿಯ ಮನೆಯ ಬಾಗಿಲಿಗೆ ಅಗಳಿ ಹಾಕುತ್ತಿದ್ದ.

ಈಗ ಅವನು ಗಾಡಿಯನ್ನು ಬೇಗ ಬೇಗ ಓಡಿಸುತ್ತಾ ಮುನ್ನಡೆದು ರಸ್ತೆ ತಿರುಗುವ ಕಡೆ ಸ್ವಲ್ಪ ನಿಲ್ಲಿಸಿದ. ಮತ್ತು ಗಾಡಿಯಿಂದ ಇಳಿದು ಹೆಣ ಸರಿಯಾಗಿ ಇದೆಯೇ ಇಲ್ಲವೋ ಎಂದೊಮ್ಮೆ ವೀಕ್ಷಿಸಿದ. ಸರಿಯಾಗಿದೆ ಎಂದು ಸಮಾಧಾನಪಟ್ಟುಕೊಂಡ. ಹೆಣ ಮಲಗಿಸಿದ್ದ ರೀತಿಯಲ್ಲಿಯೇ ಅರ್ಧ ಭಾಗಕ್ಕೆ ಮಲಗಿದೆ. ಗಾಡಿ ಬಂದ ಕುಲುಕಾಟದಲ್ಲಿ ಬಟ್ಟೆ ಮಾತ್ರ ಜಾರಿಕೊಂಡುಬಿಟ್ಟಿದೆ. ಅದರಿಂದಾಗಿ ಇಮರತಿ ಬಾಯಿಯ ನಗ್ನತೆ ಕಾಣುತ್ತಿತ್ತು. ಒಮ್ಮೆ ಅವನ ದೃಷ್ಟಿ ಆ ನಗ್ನತೆಯ ಮೇಲೆ ಓಡಾಡಿತು. ಇದರಿಂದಾಗಿ ಅವನಿಗೇ ನಾಚಿಕೆ ಆಯಿತು. ಬೇಗ ಬೇಗ ಸೀರೆಯನ್ನು ಸರಿಮಾಡಿ ಅವಳ ಆ ನಗ್ನತೆಯನ್ನು ಮುಚ್ಚಿದ.

ಅವನ ಆ ಜೇಬಿನಲ್ಲಿದ್ದ ಥೈಲಿಯಲ್ಲಿ ಏಳು ರೂಪಾಯಿಯಷ್ಟು ನಗದು ಇತ್ತು. ಅದು ಸಂಬಳದಲ್ಲಿ ಉಳಿಸಿದ್ದ ಹಣ. ಆ ಉಳಿತಾಯದಲ್ಲಿ ಏನೇನು ಕೊಂಡುಕೊಳ್ಳಬೇಕೆಂದು ಆಗಾಗ ಮನಸ್ಸಿನಲ್ಲೇ ಲೆಕ್ಕಾಚಾರ ಹಾಕುತ್ತಿದ್ದ. ಆದರೆ ಯಾವುದನ್ನೂ ಕೊಂಡಿರಲಿಲ್ಲ. ಆದರೆ ಈಗ ತನ್ನ ಜೇಬಿನಲ್ಲಿದ್ದ ದುಡ್ಡನ್ನು ಕೈಗೆ ತೆಗೆದುಕೊಂಡು ಸಮೀಪದ ಬೀಡಾ ಅಂಗಡಿಯ ಕಡೆ ಧಾವಿಸಿದ. ಇಷ್ಟಕ್ಕೆ ಚಿಲ್ಲರೆ ಕೊಟ್ಟುಬಿಡು.

ಅದಕ್ಕಾಗುವಷ್ಟು ಚಿಲ್ಲರೆ ನನ್ನಲ್ಲಿಲ್ಲ ಎಂದು ಅವನು ತುಂಟನಗೆ ನಗುತ್ತಾ ತಿಳಿಸಿದ.

ಅದನ್ನು ಕೇಳಿಯೂ ಕೇಳದವನಂತೆ ಅವನೆಂದ: ಸ್ವಲ್ಪ ಬೇಗ ಮಾಡು, ಹೊತ್ತಾಗಿ ಹೋಗ್ತಾ ಇದೆ.

ಅಂಗಡಿಯವನು ಚಿಲ್ಲರೆಯನ್ನು ಎಣಿಸಿ ಎಣಿಸಿ ಒಂದು ಕಡೆ ಜೋಡಿಸಿ ಕೊನೆಗೆ ಅವುಗಳನ್ನೆಲ್ಲ ಒಟ್ಟುಗೂಡಿಸಿ ಥೈಲಿಯಲ್ಲಿ ಹಾಕಿಕೊಟ್ಟ.

ಥೈಲಿಯನ್ನು ಕೈಗೆ ತೆಗೆದುಕೊಂಡ ಅವನಿಗೆ ಎಲ್ಲಿಲ್ಲದ ಉತ್ಸಾಹ ಬಂತು. ಹೋದವನೇ ಛಂಗನೆ ಹಾರಿ ಗಾಡಿಯ ಮೇಲೆ ಕುಳಿತುಕೊಂಡ. ಗಾಡಿ ಮುಂದಕ್ಕೆ ಹೊರಟಿತು.

ಹಾಗೆಯೇ ಹಿಂದಕ್ಕೊಮ್ಮೆ ತಿರುಗಿ ನೋಡಿದಾಗ ಅಂಗಡಿಯವನು ಮತ್ತು ಅಲ್ಲೇ ನಿಂತಿದ್ದ ಒಬ್ಬಿಬ್ಬರು ಅವನ ಕಡೆ ನೋಡುತ್ತಾ ಮುಗುಳ್ನಗುತ್ತಿದ್ದುದು ಕಂಡಿತು. ಎಲೆಗೆ ಕತ್ಥ ಹಚ್ಚಲು ಉಪಯೋಗಿಸುವ ಡಬ್ಬಿಯನ್ನು ತನ್ನ ಕಡೆಗೆ ತೋರಿಸಿಕೊಂಡು ಅಂಗಡಿಯವನು ಏನೇನೋ ಹೇಳುತ್ತಿದ್ದ. ಇದರಿಂದಾಗಿ ಅವನಿಗೆ ಕೋಪ ಬಂತು. ಮನಸ್ಸಿನಲ್ಲಿಯೇ ಅವನನ್ನು ಬೈಯುತ್ತಾ ಜೋರಾಗಿ ತನ್ನ ಚಾಟಿಯಿಂದ ಎತ್ತಿನ ಬೆನ್ನಿಗೆ ಬಾರಿಸಿದ.

ಜನವಸತಿ ಇದ್ದ ಪ್ರದೇಶವನ್ನು ಬಿಟ್ಟು ಮುಂದೆ ಹೋದಮೇಲೆ ಅವನಿಗೆ ಒಂದು ರೀತಿಯ ಸಮಾಧಾನವಾಯಿತು. ಬಿಸಿಲು ಜೋರಾಗಿತ್ತು. ಇಷ್ಟು ಹೊತ್ತೂ ಅವನು ಪಟ್ಟಿದ್ದ ಪರಿಶ್ರಮದ ಫಲವಾಗಿ ಅವನ ಮೈ ಬೆವರುತ್ತಿತ್ತು. ರಸ್ತೆಯ ಅಂಚುಗಳಲ್ಲಿ ಜನರ ಓಡಾಟ ಕಾಣುತ್ತಿತ್ತು. ಹೆಚ್ಚುಕಡಿಮೆ ಅಂಗಡಿಗಳೆಲ್ಲ ಬಿಚ್ಚಿದ್ದುವು.

ಹೆಣ ಯಾವ ರೀತಿ ಇದೆಯೆಂದು ಅವನೊಮ್ಮೆ ತಿರುಗಿ ನೋಡಿದ. ಎಲ್ಲವೂ ಸರಿಯಾಗಿತ್ತು. ತಲೆಯ 'ದಿಂಬು' ಸ್ವಲ್ಪ ಕೆಳಗೆ ಸರಿದುಹೋಗಿತ್ತು. ಗಾಡಿ ನಿಲ್ಲಿಸಿ ಕೆಳಗೆ ಇಳಿದು ತಲೆಯ 'ದಿಂಬ'ನ್ನು ಮತ್ತೆ ಸರಿಪಡಿಸಿದ.

ಸ್ವಲ್ಪ ಆ ಕಡೆ—ಈ ಕಡೆ ಮಾಡಿದುದರಿಂದಾಗಿ ಹೆಣ ಸ್ವಲ್ಪ ಅಲುಗಾಡಿದ ಹಾಗಾಯಿತು. ಅವನಿಗೆ ಗಾಬರಿಯಾಯಿತು. ಇನ್ನೂ ಜೀವವಿರುವ ಶರೀರವನ್ನು ತಾನು ಮುಟ್ಟುತ್ತಿರುವುದಾಗಿ ಭಾಸವಾಗಿ ಅವನ ಮೈ ನಡುಗಿತು. ಅವನ ನಾಡಿಯ ಮಿಡಿತ ಜೋರಾಯಿತು. ಹೋಗಿ ತನ್ನ ಸ್ಥಾನದಲ್ಲಿ ಮತ್ತೆ ಕುಳಿತುಕೊಂಡ. ಹೆಣಕ್ಕೆ ಒಂದು ಭಾರಿ ಸೀರೆ ಉಡಿಸಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಎಂದು ಯೋಚಿಸಿದ. ಬಣ್ಣ ಬಣ್ಣದ ಸೀರೆಗಳನ್ನು ಉಟ್ಟುಕೊಂಡು ಅವಳು ಬಾಗಿಲಲ್ಲಿ ನಿಂತಿರುತ್ತಿದ್ದುದನ್ನು ಅವನು ಎಷ್ಟೋ ಸಲ ನೋಡಿದ್ದ. ರಾಣಿ ರೂಪಮತಿ! ಯಾರದೋ ನಿರೀಕ್ಷೆಯಲ್ಲಿ ಅವಳು ಹಾಗೆ ನಿಂತಿರುವುದಾಗಿ ಅವನಿಗೆ ಪ್ರತಿ ಸಲ ಅನಿಸುತ್ತಿತ್ತು. ಅವಳ ಮನೆ ಇದ್ದ ಬೀದಿಯಲ್ಲಿ ಕಾಲಿಡುತ್ತಿರುವ ಹಾಗೆಯೇ ಅವನ ಎದೆ ಡವಡವನೆ ಹೊಡೆದುಕೊಳ್ಳುತ್ತಿತ್ತು. ಅವಳ ಮನೆಯ ಮುಂದೆ ಹಾದು ಹೋಗುವಾಗಲಂತೂ ಅವನ ಎದೆ ಧಸಕ್ಕೆನ್ನುತ್ತಿತ್ತು. ಅವಳನ್ನೊಮ್ಮೆ ಕಣ್ಣಲ್ಲಿ ಕಣ್ಣಿಟ್ಟು ನೋಡಬೇಕೆಂದು ಅಪೇಕ್ಷಿಸುತ್ತಿದ್ದನಾದರೂ ಆ ರೀತಿ ಮಾಡುವ ಸಾಹಸ ಮಾತ್ರ ಸಾಧ್ಯವಾಗಿರಲಿಲ್ಲ. ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಮುಂದೆ ಹೊರಟು ಹೋಗುತ್ತಿದ್ದ. ಬಹಳ ದೂರ ಬಂದಮೇಲೆ ಕುತೂಹಲದಿಂದ ಹಿಂದಕ್ಕೆ ತಿರುಗಿ ನೋಡುತ್ತಿದ್ದ. ಅವಳು ಆಗಲೂ ಅಲ್ಲೇ ನಿಂತಿರುವುದು ಕಾಣಿಸುತ್ತಿತ್ತು. ರಾಣಿ ರೂಪಮತಿ! ಅವಳು ಹಾಗೆ ಅಲ್ಲಿ ನಿಂತಿರುವುದು ಮತ್ತು ತಾನು ಅವಳ ಮನೆಯ ಮುಂದ ಹಾದು ಬರುವುದು ಇವೆರಡಕ್ಕೂ ಅವನು ಮನಸ್ಸಿನಲ್ಲಿಯೇ ಒಂದು ಸಂಬಂಧ ಕಲ್ಪಿಸಿಕೊಂಡುಬಿಟ್ಟಿದ್ದ. ಒಂದಲ್ಲ ಒಂದು ದಿನ ತಾನು ಅವಳಲ್ಲಿಗೆ ಹೋಗಿಯೇ ತೀರುವುದಾಗಿ ತಿಳಿದುಕೊಂಡಿದ್ದ.

ತನ್ನ ಮಡಿಲಿನಲ್ಲಿ ಸಿಕ್ಕಿಸಿಕೊಂಡಿದ್ದ ಕೈ ಚೀಲಕ್ಕಾಗಿ ಅವನು ತಡಕಾಡಿದ. ಬಹಳ ಅಭಿಮಾನದಿಂದ ಅದರ ಮೇಲೆ ಅವನು ಒಮ್ಮೆ ಕೈಯಾಡಿಸಿದ. ಮತ್ತು ಅದೇ ಚೀಲ

ದಿಂದ ಒಂದು ಹಿಡಿಯಷ್ಟು ಚಿಲ್ಲರೆ ತೆಗೆದುಕೊಂಡು ಆ ಕಡೆ ಈ ಕಡೆ ನೋಡಿದ ಮತ್ತು ಆ ಬಿಡಿಕಾಸುಗಳನ್ನು ಮೇಲಕ್ಕೆ ಎಸೆದ. ಅವು ರಸ್ತೆಯ ಮೇಲೆ ಬಿದ್ದ ಶಬ್ದ ಕೇಳಿ ಹತ್ತಿರದ ಅಂಗಡಿಗಳ ಬಳಿ ನಿಂತಿದ್ದವರು ಮತ್ತು ಅಲ್ಲೇ ರಸ್ತೆಯ ಅಂಚಿನಲ್ಲಿ ನಡೆದು ಹೋಗುತ್ತಿದ್ದವರು ಎಚ್ಚೆತ್ತುಕೊಂಡು ಆ ಕಡೆ ನೋಡಿದರು. ಕೆಲವರು ಹುಡುಗರ ಹಾಗೂ ಭಿಕ್ಷುಕರ ಗುಂಪು ಕೂಡಲೇ ಆ ಕಡೆಗೆ ನುಗ್ಗಿತು. ಅವನು ಗಾಡಿ ನಿಲ್ಲಿಸಿ ಅವರು ಪುಡಿ ಕಾಸುಗಳನ್ನು ಆರಿಸಿಕೊಳ್ಳುತ್ತಿದ್ದುದನ್ನು ನೋಡುತ್ತಿದ್ದ. ಸ್ವಲ್ಪ ಹೊತ್ತು ಹಾಗೆಯೇ ನಿಂತಿದ್ದು, ಮತ್ತೆ ತನ್ನ ಚೀಲಕ್ಕೆ ಕೈ ಹಾಕಿ ಒಂದು ಹಿಡಿ ಪುಡಿಕಾಸುಗಳನ್ನು ತೆಗೆದು ಬೀದಿಯೆಲ್ಲ ಹರಡಿಕೊಳ್ಳುವಂತೆ, ಹೆಣದ ಮೇಲಿನಿಂದ, ಎತ್ತರಕ್ಕೆ ಎಸೆದ. ಮತ್ತು ತುಂಬಿದ ಕಂಠದಿಂದ ಒಮ್ಮೆ ಘೋಷಿಸಿದ: ರಾಮ್ ನಾಮ್ ಸತ್ ಹೈ.

ಸಬಕೀ ಯಹೀ ಗತ್ ಹೈ ಎಂದು ಯಾಂತ್ರಿಕವಾಗಿ ಪುಡಿ ಕಾಸುಗಳನ್ನು ಆರಿಸಿಕೊಳ್ಳುತ್ತಿದ್ದ ಜನ ಮರುಘೋಷ ಹಾಕಿದರು.

ಅವನು ಭಾವೋನ್ಮತ್ತನಾಗಿ ಗಾಡಿಯನ್ನು ಮುಂದಕ್ಕೆ ನಡೆಸತೊಡಗಿದ. ಗಾಡಿಯನ್ನು ಎಳೆಯುತ್ತಿದ್ದ ಪ್ರಾಣಿಯ ಬೆನ್ನಿನ ಮೇಲೆ ಚಟೀರ್ ಚಟೀರ್ ಎಂದು ಹತ್ತಿಪ್ಪತ್ತು ಏಟುಗಳು ಬಿದ್ದುದೇ ತಡ ಗಾಡಿ ದಡದಡನೆ ಓಡತೊಡಗಿತು ಮತ್ತು ಅದರ ಹಿಂದೆ ಪುಡಿ ಕಾಸುಗಳ ಹಿಂದೆ ಬಿದ್ದಿದ್ದ ಜನರ ಗುಂಪೂ ಓಡತೊಡಗಿತು.

ಮುಂದೆ ರಸ್ತೆ ತಿರುಗುವ ಕಡೆ ಗಾಡಿಯನ್ನು ಅವನು ನಿಲ್ಲಿಸಿ ಮತ್ತೆ ಘೋಷ ಹಾಕಿದ,

ರಾಮ್ ನಾಮ್ ಸತ್ ಹೈ.

ಸಬಕೀ ಯಹೀ ಗತ್ ಹೈ.

ಇಷ್ಟು ಹೊತ್ತಿಗೆ ಅವನ ಗಾಡಿಯ ಹಿಂದೆ–ಮುಂದೆ ಎಲ್ಲ ಕಡೆ ಜನರ ಗುಂಪು ಜೋರಾಗಿಯೇ ಸೇರಿಕೊಂಡಿತ್ತು. ಕೆಲವರು ಗಾಡಿಯನ್ನು ಹಿಡಿದುಕೊಂಡೇ ಸಾಗುತ್ತಿದ್ದರು. ಇದರಿಂದಾಗಿ ಆ ಗಾಡಿ ಇದ್ದಕ್ಕಿದ್ದಂತೆ ಶವಸಂಸ್ಕಾರಕ್ಕೆ ಸಿದ್ಧವಾಗಿರುವ ಚಟ್ಟದ ರೂಪ ತಾಳಿದ್ದಂತೆ ಭಾಸವಾಯಿತು.

ಅವನ ಪಕ್ಕದಲ್ಲಿಯೇ ನಡೆದುಬರುತ್ತಿದ್ದ ಒಬ್ಬ ಭಿಕ್ಷುಕ ಆ ಅಂತಿಮ ಯಾತ್ರೆಯ ರಾಮನಾಮ ಘೋಷಗಳ ನಡುವೆಯೇ ಬಾಯಿ ಹಾಕಿ ಅವನೊಬ್ಬನಿಗೇ ಕೇಳಿಸುವಂತೆ ಉಸುರಿದ: ಸೇಠಜೀ, ಒಂದಿಷ್ಟು ಬಾಜಾಬಜಂತ್ರಿಯನ್ನೂ ಗೊತ್ತುಮಾಡಿಕೊಳ್ಳಿ.

ಮನಸ್ಸಿನಲ್ಲಾಗುತ್ತಿದ್ದ ಅಲ್ಲೋಲಕಲ್ಲೋಲದಿಂದಾಗಿ ಅವನ ಕಣ್ಣುಗಳು ಮುಚ್ಚಿದ್ದುವು. ಭಿಕ್ಷುಕ ತನ್ನ ಸಲಹೆಯನ್ನು ಮತ್ತೊಮ್ಮೆ ಅವನ ಮುಂದೆ ಇಡುತ್ತಾ ಹೇಳಿದ: ಸೇಠಜೀ, ಬ್ಯಾಂಡು ತರಲೇ?

ತಕ್ಕೊಂಡು ಬಾ. ಒಂದು ಹಿಡಿ ತುಂಬಾ ಪುಡಿಕಾಸುಗಳನ್ನೆತ್ತಿ ಈ ಸಲ ಅವನು ರಸ್ತೆಯ ಎಡ ಭಾಗಕ್ಕೆ ಎಸೆದ. ಪ್ರವಾಹ ಪಕ್ಕಕ್ಕೆ ತಿರುಗುವ ರೀತಿಯಲ್ಲಿ ಜನ ಆ ಕಡೆ ನುಗ್ಗಿ ಅವುಗಳನ್ನು ಆರಿಸಿಕೊಳ್ಳಲು ತೊಡಗಿದರು.

ಏತನ್ಮಧ್ಯೆ ಇನ್ನೊಬ್ಬ ಭಿಕ್ಷುಕ ಒಂದಿಷ್ಟು ಬಿಡಿ ಹೂವುಗಳನ್ನೂ ಹೂವಿನ ಕೆಲವು ಮಾಲೆಗಳನ್ನೂ ಸಂಗ್ರಹಿಸಿಕೊಂಡು ಬಂದಿದ್ದ. ಗಾಡಿ ನಿಂತಿತು. ಆ ಎಲ್ಲ ಹೂವುಗಳನ್ನು ಹೆಣದ ಮೇಲೆ ಹಾಕಿ ಅಲಂಕರಿಸಿದ.

ರಸ್ತೆಯ ಬದಿಯಲ್ಲಿ ನಿಂತ ಕೆಲವರು ಕುತೂಹಲದಿಂದ ಯಾರು ಸತ್ತವರು ಎಂದು ಕೇಳಿದರು.

ಇಮರತಿ ಬಾಯಿ. ಹೂವಿನ ಮಾಲೆಯನ್ನು ದೇಹದ ಮೇಲೆ ಬಿಸುಡುತ್ತಾ ಅವನ ಕೈ ಆನಂದದಿಂದಾಗಿ ಕಂಪಿಸಿತು.

ಯಾರು ಇಮರತಿ ಬಾಯಿ?

ಸೂಳೆ!

ಇದನ್ನು ಕೇಳಿದ ಅವನಿಗೆ ಕೋಪ ಬಂದು ಆ ಕಡೆ ನೋಡಿದ.

ಸಾಮಾನ್ಯ ಸೂಳೆಯಲ್ಲ. ಪ್ರಸಿದ್ಧ ಸೂಳೆ.

ಇಷ್ಟು ಹೊತ್ತಿಗೆ ಬಾಜಾಬಜಂತ್ರಿ ಬಂದಿತ್ತು.

ಬ್ಯಾಂಡು ಬಾರಿಸಬಹುದೇ ಸೇಠಜಿ.

ಹೂಂ, ಬಾರಿಸಿ.

ಅವನು ಮತ್ತೆ ಛಂಗನೆ ಹಾರಿ ತನ್ನ ಗಾಡಿಯ ಮೇಲೆ ಕುಳಿತುಕೊಂಡ. ಬ್ಯಾಂಡು ಆರಂಭವಾಯಿತು. ಅದರ ಪರಿಣಾಮವಾಗಿ ಜನರ ಗುಂಪು ಇನ್ನಷ್ಟು ಹೆಚ್ಚಾಗಿತ್ತು. ಅವನು ತನ್ನ ಕೈಚೀಲದಿಂದ ಪುಡಿಕಾಸುಗಳನ್ನು ತೆಗೆದು ಬೀದಿಯ ಕಡೆಗೆ ಎರಚಲು ಆರಂಭಿಸಿದ.

ರಾಮ ನಾಮ ಸತ್ ಹೈ.

ಸಬಕಿ ಯಹೀ ಗತ್ ಹೈ.

ಜನರ ಗುಂಪು ಬಹಳ ಹೆಚ್ಚಾಗಿದ್ದುದನ್ನು ಕಂಡು ಪರಿಸ್ಥಿತಿಯನ್ನು ಹೇಗೆ ಎದುರಿಸ ಬೇಕೆಂಬ ವಿಚಾರ ಬಂತು. ಆದರೂ ತನಗೆ ಇದು ಸಾಧ್ಯವಾಗುತ್ತದೆಯೆಂಬ ಆತ್ಮವಿಶ್ವಾಸ ಮಾತ್ರ ಇತ್ತು. ಒಮ್ಮೆ ಈ ಮೆರವಣಿಗೆಯನ್ನು ಹಿಂದಕ್ಕೆ ತಿರುಗಿಸಿ ಇಮರತಿ ಬಾಯಿಯ ಮನೆಮುಂದೆ ನಿಲ್ಲಿಸಿಬಿಡಲೇ ಎಂದು ಅನಿಸಿತು. ಅವನ ಮನಸ್ಸು ತುಂಬಾ ಉದ್ವೇಗ ಗೊಂಡಿತ್ತು. ಆದರೂ ಮನಸ್ಸಿನ ಈ ಉದ್ವೇಗವನ್ನು ಹೊರಕ್ಕೆ ತೋರಿಸಿಕೊಳ್ಳದೆ ತನ್ನ ಗಾಡಿಯ ವೇಗವನ್ನು ಹೆಚ್ಚಿಸಿದ. ಬಿಸಿಲು ಜೋರಾಗಿತ್ತು. ಆದಷ್ಟು ಬೇಗ ಶವಸಂಸ್ಕಾರ ಮುಗಿಸಬೇಕು. ಎಲ್ಲ ಬೇಗ ಮುಗಿದುಹೋಗಬೇಕಲ್ಲ. ಈ ಎಲ್ಲ ಸಡಗರ ಮುಗಿದು ಹೋಗುತ್ತದೆಯಲ್ಲ ಎಂಬ ಒಂದು ರೀತಿಯ ನಿರಾಶೆಯೂ ಆಯಿತು. ಹೀಗೆಲ್ಲ ಯೋಚಿ ಸುತ್ತಾ ಮುನ್ನಡೆದ.

ತಲೆ ಎತ್ತಿ ನೋಡುತ್ತಾನೆ, ಮನೆಗಳ ತಾರಸಿಗಳ ಮೇಲೆ ನಿಂತ ಯುವತಿಯರ ಮತ್ತು ವೃದ್ಧ ಸ್ತ್ರೀಯರ ಗುಂಪು, ಗಾಡಿಯನ್ನು ಹಿಂಬಾಲಿಸುತ್ತಿದ್ದ ಜನರ ಕಡೆಗಾಗಲಿ ಬ್ಯಾಂಡಿ

ಕಡೆಗಾಗಲಿ ಗಮನ ಕೊಡದೆ ತನ್ನ ಕಡೆಗೇ ಕುತೂಹಲದಿಂದ ನೋಡುತ್ತಿದೆ. ಅವನು ಅದರಿಂದ ಧೃತಿಗೆಡದೆ ಕಣ್ಣಲ್ಲಿ ಕಣ್ಣಿಟ್ಟು ಅವರ ಕಡೆ ಎದೆ ಎತ್ತಿ ನೋಡಿದ. ಅವರು ತನ್ನ ಬಗ್ಗೆ ಏನು ಮಾತನಾಡಿಕೊಳ್ಳುತ್ತಿದ್ದಾರೆ ಎಂಬುದನ್ನು ಕೇಳಬೇಕೆನಿಸಿತು.

ಬ್ಯಾಂಡಿನ ಶಬ್ದದ ಮಧ್ಯೆ ಅವನ ಕಿವಿಗೆ ಬಿದ್ದ ಮಾತು:

"ಆ ಜಲಗಾರ ಬನ್ನಿ ಕಣೇ,"

'ಜಲಗಾರ' ಎಂಬ ಪದ ಅವನ ಕಿವಿಗೆ ಬಿದ್ದುದೇ ತಡ, ಅವನಿಗೆ ಕಸಿವಿಸಿಯಾಗಿ, ಕೋಪದಿಂದ ತಾರಸಿಗಳ ಮೇಲೆ ಹಾಗೂ ಬಾಗಿಲುಗಳ ಬಳಿ ನಿಂತಿದ್ದ ಹೆಂಗಸರು ಮಕ್ಕಳ ಕಡೆಗೆ ದುರದುರನೆ ನೋಡಿದ.

ತನ್ನನ್ನು ಜಲಗಾರನೆಂದು ಯಾರಾದರೂ ಕರೆದರೆ ಅವನಿಗೆ ಆಗುತ್ತಿರಲಿಲ್ಲ. ಇತರರಿಗಿಂತ ಅವನು ಸ್ವಚ್ಛವಾಗಿರುತ್ತಿದ್ದ. ಯಾರಾದರೂ ನಿಮ್ಮನ್ನು ಜಲಗಾರನೆಂದು ಕರೆದರೆ, ಕಸ ತೆಗೆಯಲೇ ಹೋಗಬೇಡಿ ಎಂದು ಅವನು ತನ್ನ ಜಾತಿಯ ಯುವಕರಿಗೆ ಹೇಳಿಕೊಡುತ್ತಿದ್ದ.

ಈಗ ತನ್ನನ್ನೇ ಅವರು ಜಲಗಾರ ಎಂದು ಕರೆದುದನ್ನು ಕೇಳಿ ಅವನಿಗೆ ಎಲ್ಲಿಲ್ಲದ ಸಿಟ್ಟುಬಂತು. ತನ್ನ ಸಮೀಪದಲ್ಲಿಯೇ ನಡೆದು ಬರುತ್ತಿದ್ದ ಭಿಕ್ಷುಕನನ್ನುದ್ದೇಶಿಸಿ ಬ್ಯಾಂಡು ಇನ್ನಷ್ಟು ಜೋರುಮಾಡಿ ಎಂದು ಅರಚಿದ.

ತನ್ನ ಕೈಚೀಲದಲ್ಲಿ ಕೈಹಾಕಿ ಹುಡುಕತೊಡಗಿದಾಗ ಅಲ್ಲಿ ಇನ್ನು ಕೆಲವೇ ನಾಣ್ಯಗಳು ಉಳಿದಿದ್ದುವು. ಅವುಗಳನ್ನೀಗ ಹುಷಾರಾಗಿ ಖರ್ಚುಮಾಡಬೇಕು ಎಂದುಕೊಂಡು ಪುಡಿಕಾಸುಗಳನ್ನು ಎರಚುವ ವಿಚಾರ ಬಿಟ್ಟು ತನ್ನ ಗಾಡಿಯ ಚಕ್ರದ ಮೇಲೆ ಹತ್ತಿ ನಿಂತು ಜೋರಾಗಿ ಘೋಷ ಹಾಕಿದ. ರಾಮ ನಾಮ್ ಸತ್ ಹೈ, ರಾಮ್ ನಾಮ್ ಸತ್ ಹೈ.

ಊರಿನ ಹೊರಗೆ ಹೊಳೆ ಹರಿಯುತ್ತಿತ್ತು. ಹೊಳೆಯ ಆಚೆ ಬದಿಯಲ್ಲಿ ಸ್ಮಶಾನ. ದೂರದಲ್ಲಿ ಸೇತುವೆ ಕಾಣಿಸುತ್ತಿತ್ತು.

ತನ್ನ ಕೈ ಚೀಲದಿಂದ ಸ್ವಲ್ಪ ಪುಡಿಕಾಸುಗಳನ್ನು ತೆಗೆದು ಎಷ್ಟು ದೂರಕ್ಕೆ ಸಾಧ್ಯವಿತ್ತೋ ಅಷ್ಟು ದೂರಕ್ಕೆ ಕೈ ಬೀಸಿ ನಾಲ್ಕೂ ಕಡೆ ಅವು ಹರಡಿಕೊಳ್ಳುವಂತೆ ಎಸೆದ. ಜನ ಅವುಗಳನ್ನು ಆರಿಸಿಕೊಳ್ಳಲು ಆ ಕಡೆ ಈ ಕಡೆ ಚದುರಿಹೋದುದನ್ನು ನೋಡುತ್ತಾ ನಿಂತು ಸಂತೋಷಪಟ್ಟ.

ಗಾಡಿ ಸೇತುವೆಯನ್ನು ತಲಪಿದಾಗ ಅವನು ಸ್ವಲ್ಪ ನಿಲ್ಲಿಸಿದ. ಮತ್ತು ತನ್ನ ದುಡ್ಡಿನ ಚೀಲವನ್ನು ಭಿಕ್ಷುಕನ ಕೈಗೆ ಒಪ್ಪಿಸುತ್ತಾ, 'ಹೋಗು ವಾದ್ಯದವರನ್ನು ವಾಪಸ್ಸು ಕರೆದುಕೊಂಡು ಹೋಗು', ಎಂದು ತಿಳಿಸಿದ.

ಬ್ಯಾಂಡು ನಿಂತುಹೋಯಿತು. ಭಿಕ್ಷುಕರ ಹಾಗೂ ಹುಡುಗರ ಗುಂಪು ಹಿಂದಕ್ಕೆ ಹೋಗತೊಡಗಿತು. ಕೇವಲ ಮೂರು-ನಾಲ್ಕು ಜನ ಪಥಿಕರು ಮಾತ್ರ ಅಲ್ಲಿ ನಿಂತಿದ್ದರು.

ಅವರಲ್ಲಿ ಒಬ್ಬನು "ಅದು ಅಲುಗಿತು, ನಾನು ನೋಡಿದೆ" ಎಂದು ಹೇಳುತ್ತಿದ್ದುದು ಅವನ ಕಿವಿಗೆ ಬಿತ್ತು.

"ಏನು ಅಲುಗಿತು?" ಎಂದು ಅವರ ಕಡೆ ಹೆಜ್ಜೆ ಹಾಕುತ್ತಾ ಕೇಳಿದ.

"ನಿನ್ನ ಹೆಣ."

ಏನು, ನಿಜಕ್ಕೂ ಅಲುಗಾಡಿದೆಯೆ? ಹೆಣಗಳು ಇದ್ದಕ್ಕಿದ್ದಂತೆ ಜೀವಂತವಾಗಿದ್ದ ಕಥೆಗಳನ್ನು ಅವನು ಕೇಳಿದ್ದನು. ಚಿತೆಯ ಮೇಲಿದ್ದ ಹೆಣಗಳೂ ಎದ್ದು ಕುಳಿತಿದ್ದ ಹಲವು ಪ್ರಸಂಗಗಳೂ ಇದ್ದುವು. ಮೃತಗೊಂಡ ಮನುಷ್ಯರ ಪ್ರಾಣ ಮತ್ತೆ ವಾಪಸ್ಸು ಬರುವುದೂ ಉಂಟು. ಇದು ಹೇಗಾಗುತ್ತದೆ ಎಂಬುದು ಗೊತ್ತಿಲ್ಲ. ಮೃತಪಟ್ಟವನ ಅಂತ್ಯ ಕ್ರಿಯೆಗೆ ಮೊದಲು ಪ್ರಾಣ ಹೋಗಿದೆ ಎಂಬುದನ್ನು ಖಾತ್ರಿ ಮಾಡಿಕೊಳ್ಳಬೇಕು ಎಂದು ಡಾಕ್ಟರುಗಳೂ ಹೇಳುತ್ತಾರೆ.

ಅವನು ಓಡಿ ಹೋಗಿ ಹೆಣದ ಮೇಲೆ ಬಗ್ಗಿ ನೋಡಿದ. ಅದು ಸ್ವಲ್ಪ ಅಲುಗಾಡಿ ಹೋಗಿದ್ದುದೇನೋ ನಿಜ. ಅವನ ಕೈ ಒಂದು ಕಡೆ ಸಂತೋಷ ಹಾಗೂ ಇನ್ನೊಂದು ಕಡೆ ಅವಿಶ್ವಾಸದಿಂದ ಕೂಡಿ ನಡುಗುತ್ತಿತ್ತು. ಅವನ್ನು ಹೊದಿಕೆಯ ಒಳಗಿನಿಂದ ಕೈಯನ್ನು ಹೊರಕ್ಕೆಳೆದು ನಾಡಿಯ ಮೇಲೆ ಕೈ ಇಟ್ಟು ನೋಡಿದ. ನಾಡಿ ಮಿಡಿಯುತ್ತಿದೆಯೇನೋ ಎಂದು ಭಾಸವಾಯಿತು. ಮೈ ಮಾತ್ರ ತಣ್ಣಗೆ ಕೊರೆಯುತ್ತಿದೆ; ಮೂಗಿನ ಹತ್ತಿರ ಕೈಯಿಟ್ಟು ನೋಡಿದರೂ ಏನೇನೂ ಇಲ್ಲ, ಇನ್ನು ನಾಡಿ ಮಿಡಿಯುತ್ತಿದೆ ಎನ್ನುವುದಾದರೂ ಹೇಗೆ?

ಕೈಯನ್ನು ತನ್ನ ಎದೆಯ ಮೇಲಿಟ್ಟುಕೊಂಡು ನೋಡಿದ. ಹೃದಯಾಘಾತಕ್ಕೆ ಒಳಗಾಗಿರುವ ರೋಗಿಯ ಎದೆಯಂತೆ ಅದು ಡವಡವನೆ ಹೊಡೆದುಕೊಳ್ಳುತ್ತಿತ್ತು. ಎಷ್ಟು ಜೋರಾಗಿ ನನ್ನ ಎದೆ ಹೊಡೆದುಕೊಳ್ಳುತ್ತಿದೆ ಎನಿಸಿತು. ಮತ್ತೆ ಗಾಡಿಯನ್ನು ಹೊಡೆದುಕೊಂಡು ಅವನು ಸೇತುವೆಯ ಮೇಲೆ ಹೊರಟನು. ಎರಡೂ ಕಡೆ ಹೊಳೆಯ ನೀರು ವಿಸ್ತಾರವಾಗಿ ಹರಡಿಕೊಂಡಿತ್ತು. ದಡದ ಮೇಲಿನ ಮರಳಿನ ಕಣಗಳ ಮೇಲೆ ಬಿಸಿಲಿನ ಪ್ರಕಾಶ ಮಿನುಗುತ್ತಿತ್ತು.

ಜನರ ಗುಂಪು ಚದುರಿಹೋದ ಪರಿಣಾಮವಾಗಿ ಅವನೀಗ ಒಬ್ಬಂಟಿಗನಾಗಿದ್ದ. ಸುತ್ತ ಯಾರೂ ಇರಲಿಲ್ಲ. ಅವನ ಗಾಡಿಯ ಗಾಲಿಗಳ ಸದ್ದು ಮಾತ್ರ ಕೇಳಿಸುತ್ತಿತ್ತು.

ಸೇತುವೆಯನ್ನು ದಾಟಿ ಅವನು ಗಾಡಿಯನ್ನು ತಗ್ಗಿನಲ್ಲಿ ಬಿಟ್ಟುಕೊಂಡು ಸ್ಮಶಾನವನ್ನು ಪ್ರವೇಶಿಸುತ್ತಿದ್ದ ಹಾಗೆ ಅವನಿಗೆ ಏನೋ ಒಂದು ರೀತಿಯಾಯಿತು.

ಪಕ್ಕದಲ್ಲಿಯೇ ಒಂದು ಹೆಣ ಸುಡುತ್ತಿದ್ದು ಅದರ ದುರ್ಗಂಧ ಮೂಗಿಗೆ ಬಂದು ಬಡಿಯಿತು.

ಗಾಡಿಯನ್ನು ಅವನು ನೇರವಾಗಿ ತೆಗೆದುಕೊಂಡು ಹೋಗಿ ಸ್ಮಶಾನದ ಚೌಕಿದಾರನ ಮನೆಯ ಮುಂದೆ ತುಂಬಾ ನಿಧಾನವಾಗಿ ಬಿಟ್ಟುಕೊಂಡು ಹೋಗಿ ನಿಲ್ಲಿಸಿದ.

"ಯಾರು ?" ಎಂದುಕೊಂಡು ಚೌಕಿದಾರ ತನ್ನ ರಿಜಿಸ್ಟ್ರಿಯನ್ನು ಬಿಚ್ಚುತ್ತಾ ಕೇಳಿದ.

"ಸುಡಬೇಕಾಗಿದೇನು ?"

"ಹೂಳಬೇಕು."

"ಹೆಸರು ?"

"ಇಮರತಿ ಬಾಯಿ"

"ವಯಸ್ಸು ?"

"ಮೂವತ್ತೆರಡು ವರ್ಷ", ಅವನು ಯೋಚಿಸುವ ಗೊಡವೆಗೆ ಹೋಗದೆ ಹೇಳಿದ.

"ಗಂಡನ ಹೆಸರು ?" ಚೌಕಿದಾರ ತನ್ನ ತಲೆಯನ್ನು ಮೇಲಕ್ಕೆತ್ತಿ ನೋಡುತ್ತಾ ಕೇಳಿದ.

ಅವನು ಸ್ವಲ್ಪ ಯೋಚಿಸಿದ; ಯಾರೂ ಕೇಳಿಕೊಳ್ಳಬಾರದೆಂದು ಆ ಕಡೆ ಈ ಕಡೆ ನೋಡಿ ಖಾತ್ರಿ ಮಾಡಿಕೊಂಡು ಹೇಳಿದ: "ಬನ್ಸೀಲಾಲ್ ವಾಲ್ಮೀಕಿ. ಮತ್ತು ಕೈ ಮುಂದಕ್ಕೆ ಮಾಡಿ ರುಜು ಹಾಕುವ ಕಡೆ ರುಜು ಹಾಕಿಬಿಟ್ಟ.

ಹೊರಗೆ ಬಂದು ಬಹಳ ಎಚ್ಚರಿಕೆಯಿಂದ ಅವನು ಹೆಣವನ್ನು ಕೆಳಗೆ ಇಳಿಸಿದ ಮತ್ತು ಅದರ ಮೇಲೆ ಸೀರೆಯನ್ನು ಸರಿಯಾಗಿ ಮುಚ್ಚಿದ. ಗುದ್ದಲಿಯನ್ನು ಕೈಗೆ ತೆಗೆದುಕೊಂಡು ಗುಳಿ ಅಗೆಯಲು ಆರಂಭಿಸಿದ.

# ಮಧ್ಯಾಹ್ನದ ಭೋಜನ

ಸಿದ್ಧೇಶ್ವರಿ ಮಧ್ಯಾಹ್ನದ ಅಡಿಗೆಯನ್ನು ಸಿದ್ಧಮಾಡಿ ಒಲೆ ಆರಿಸಿಯಾದ ಮೇಲೆ ತನ್ನ ಎರಡೂ ಮೊಣಕಾಲುಗಳ ಮೇಲೆ ಮುಖವನ್ನು ಇಟ್ಟುಕೊಂಡು ತನ್ನ ಕಾಲಿನ ಬೆರಳುಗಳನ್ನೋ ಅಲ್ಲಿ ಹರಿದಾಡುತ್ತಿದ್ದ ಇರುವೆಗಳನ್ನೋ ನೋಡುತ್ತಾ ಕುಳಿತಳು. ಹಾಗೆ ಕುಳಿತಿದ್ದವಳಿಗೆ ಇದ್ದಕ್ಕಿದ್ದ ಹಾಗೆ ಬಹಳ ಹೊತ್ತಿನಿಂದ ತನಗೆ ಬಾಯಾರಿದ್ದ ವಿಷಯ ನೆನಪಿಗೆ ಬಂತು. ಅಲ್ಲಿಂದೆದ್ದವಳೇ ನೀರಿನ ಗಡಿಗೆಯ ಬಳಿಗೆ ಹೋಗಿ ಒಂದು ಲೋಟದ ತುಂಬಾ ನೀರು ತುಂಬಿಕೊಂಡು ಗಟಗಟನೆ ಹುಚ್ಚಿಯಂತೆ ಕುಡಿದಳು. ಹಾಗೆ ಹೊಟ್ಟೆತುಂಬ ನೀರು ಕುಡಿದುದರಿಂದಾಗಿ ಎಷ್ಟೋ ಸಮಾಧಾನವಾದಂತಾಗಿ "ಹಾಯ್ ರಾಮ್" ಎನ್ನುತ್ತಾ ಅಲ್ಲೇ ನೆಲದ ಮೇಲೆಯೇ ಹಾಯಾಗಿ ಉರುಳಿಕೊಂಡಳು.

ಸುಮಾರು ಅರ್ಧ ಗಂಟೆ ಕಾಲ ಅವಳು ಹಾಗೆ ವಿಶ್ರಮಿಸಿಕೊಂಡಮೇಲೆ ಅವಳಿಗೆ ಪ್ರಾಣದಲ್ಲಿ ಪ್ರಾಣ ಬಂದಹಾಗಾಯಿತು. ಆಮೇಲೆ ಎದ್ದು ಕುಳಿತು ಇಷ್ಟು ಹೊತ್ತು ಮಲಗಿಬಿಟ್ಟಿದ್ದೆನಲ್ಲಾ ಎಂಬ ಮನಸ್ಸಿನ ದುಗುಡದಿಂದ ಅತ್ತ ಇತ್ತ ದೃಷ್ಟಿಯನ್ನು ಹೊರಳಿಸಿ ಏನನ್ನೋ ಹುಡುಕಾಡಿದಳು. ಅವಳ ದೃಷ್ಟಿ ಹೋಗಿ ಅಲ್ಲಿಯೇ ಅಂಗಳದಲ್ಲಿ ಹರಕು ಮುರುಕು ಚಾರಪಾಯಿಯ ಮೇಲೆ ಮಲಗಿದ್ದ ಆರು ವರ್ಷ ವಯಸ್ಸಿನ ತನ್ನ ಮಗ ಪ್ರಮೋದನ ಮೇಲೆ ನಾಟಿತು. ಹುಡುಗನ ಮೈಮೇಲೆ ಬಟ್ಟೆಯ ಒಂದು ಚೂರೂ ಇರಲಿಲ್ಲ. ಅವನ ಕತ್ತಿನ ಕೆಳಗಿನ ಹಾಗೂ ಎದೆಯ ಭಾಗದ ಮೂಳೆಗಳು ಎದ್ದು ಕಾಣುತ್ತಿದ್ದುವು. ಅವನ ಕೈಕಾಲುಗಳು ಬಾಡಿಹೋದ ಕಕಡಿ* ಗಳಂತೆ ನಿಸ್ತೇಜವಾಗಿ ಬಿದ್ದುಕೊಂಡಿದ್ದುವು. ಅವನ ಹೊಟ್ಟೆ ಮಡಕೆಯಂತೆ ಊದಿಕೊಂಡಿತ್ತು. ಬಾಯಿ ತೆರೆದಿದ್ದು ಲೆಕ್ಕವಿಲ್ಲದಷ್ಟು ನೊಣಗಳು ಅದರ ಮೇಲೆ ಹಾರಾಡುತ್ತಿದ್ದುವು.

ಕುಳಿತಲ್ಲಿಂದ ಅವಳು ಎದ್ದು ಹೋಗಿ ಮಗುವಿನ ಮುಖದ ಮೇಲೆ ತನ್ನ ಹರಕು ಹಾಗೂ ಕೊಳಕು ರವಿಕೆಯನ್ನು ಹರಡಿ ಅಲ್ಲೇ ಒಂದು ನಿಮಿಷ ಮೂಕಳಾಗಿ ನಿಂತು ಅನಂತರ ಬಾಗಿಲ ಬಳಿ ಹೋಗಿ ದಾರಿ ಕಾಯುತ್ತಾ ನಿಂತಳು. ಹನ್ನೆರಡು ಗಂಟೆ ಆಗಿ ಹೋಗಿತ್ತು. ಬಿಸಿಲು ತುಂಬಾ ಜೋರಾಗಿತ್ತು. ಆಗಾಗ ಒಬ್ಬಿಬ್ಬರು ತಲೆಯ ಮೇಲೆ ಟವಲು ಹಾಕಿಕೊಂಡೋ ಬಿಗಿಯಾಗಿ ಕೊಡೆಹಿಡಿದುಕೊಂಡೋ ಬೇಗ ಮನೆ ಸೇರಿಕೊಂಡರೆ ಸಾಕು ಎಂಬ ಆತುರದಿಂದ ಹೆಜ್ಜೆ ಹಾಕುತ್ತಾ ಅವಳ ಕಣ್ಮುಂದೆ ಹಾದು ಹೋಗುತ್ತಿದ್ದರು.

---

*ಉದ್ದನೆಯ ಸೌತೆಕಾಯಿ ರುಚಿಯ ತರಕಾರಿ. ಅಂಗುಷ್ಠಗಾತ್ರದ ಪಡವಲಕಾಯಿ ಆಕಾರಕ್ಕೆ ಹೋಲಿಸಬಹುದು.

ಹತ್ತು-ಹದಿನೈದು ನಿಮಿಷ ಅವಳು ಹಾಗೆಯೇ ದಾರಿ ಕಾಯುತ್ತಾ ನಿಂತಿದ್ದಳು. ಆನಂತರ ಅವಳ ಮುಖ ವ್ಯಾಕುಲಗೊಂಡಿತ್ತು. ಆಕಾಶದ ಕಡೆಗೂ ಆ ಉರಿ ಬಿಸಿಲಿನ ಕಡೆಗೂ ಚಿಂತಾಗ್ರಸ್ತಳಾಗಿ ನೋಡತೊಡಗಿದಳು. ಒಂದೆರಡು ನಿಮಿಷ ಹಾಗೆ ನಿಂತಮೇಲೆ ಕಾತರಳಾಗಿ ಅವಳು ತನ್ನ ತಲೆಯನ್ನು ಹೊಸಲಿನ ಆಚೆಗೆ ಆದಷ್ಟು ಚಾಚಿ, ರಸ್ತೆಯ ದೂರಕ್ಕೆ ದೃಷ್ಟಿ ಹಾಯಿಸಿ, ನೋಡಿದಾಗ ಅಲ್ಲಿ ದೂರದಲ್ಲಿ ಅವಳ ಹಿರಿಯ ಮಗ ರಾಮಚಂದ್ರ ಕಾಲೆಳೆದುಕೊಂಡು ಬರುತ್ತಿರುವುದು ಕಂಡುಬಂತು.

ಅವಳು ಈಗ ಬೇಗ ಹೋಗಿ ಒಂದು ಲೋಟ ನೀರು ತಂದು ಅಂಗಳದ ಬಾಗಿಲ ಬಳಿ ಅಣಿ ಮಾಡಿ ಇಟ್ಟಳು. ಮತ್ತು ಅಡಿಗೆಮನೆಗೆ ಹೋಗಿ ಬೇಗ ಬೇಗ ಊಟ ಮಾಡುವ ಸ್ಥಳಕ್ಕೆ ನೀರು ಚಿಮುಕಿಸಿ ಶುದ್ಧಮಾಡಿ, ಕುಳಿತುಕೊಳ್ಳಲು ಮಣೆಯನ್ನಿಟ್ಟು, ಬಾಗಿಲ ಕಡೆ ಹೊರಳುತ್ತಿದ್ದ ಹಾಗೆಯೇ ರಾಮಚಂದ್ರನೂ ಮನೆಯೊಳಕ್ಕೆ ಕಾಲಿಟ್ಟ.

ರಾಮಚಂದ್ರ ಬಂದವನೇ ಅಲ್ಲಿಯೇ ಇದ್ದ ಬೆಂಚಿನ ಮೇಲೆ ಕುಳಿತುಕೊಂಡು ಹಾಗೆಯೇ ಅದರ ಮೇಲೆ ಸುಸ್ತಾಗಿ ಮಲಗಿಕೊಂಡ. ಅವನ ಮುಖ ಕೆಂಪಾಗಿತ್ತು, ಹಾಗೂ ತುಂಬಾ ಆಯಾಸಗೊಂಡಂತಿತ್ತು. ತಲೆಯ ಕೂದಲು ಕೆದರಿಕೊಂಡಿತ್ತು. ಮತ್ತು ಅವನ ಹರಕಲು ಚಪ್ಪಲಿಗಳ ಮೇಲೆ ಧೂಳು ತುಂಬಿಕೊಂಡಿತ್ತು.

ಅವನ ಬಳಿಗೆ ಕೂಡಲೇ ಬಂದು ಮಾತನಾಡಿಸುವ ಸಾಹಸ ಅವಳಿಗಿರಲಿಲ್ಲ. ಅಡಿಗೆ ಮನೆಯಿಂದಲೇ ಕತ್ತನ್ನು ಉದ್ದ ಮಾಡಿಕೊಂಡು ಆಗಾಗ ದೃಷ್ಟಿ ಹೊರಳಿಸುತ್ತಾ ಮಗನ ವ್ಯಗ್ರಸ್ಥಿತಿಯನ್ನು ಅವಳು ನೋಡುತ್ತಿದ್ದಳು. ಹತ್ತು ನಿಮಿಷ ಆದರೂ ಮಗ ಎದ್ದು ಬರಲಿಲ್ಲವಾದ ಕಾರಣ ಅವಳು ಗಾಬರಿಗೊಂಡು ಅವನ ಹತ್ತಿರಕ್ಕೆ ಹೋಗಿ, "ರಾಮೂ, ರಾಮೂ" ಎಂದು ಕೂಗಿದಳು. ಅವನು ಉತ್ತರ ಕೊಡದೆ ಹಾಗೆಯೇ ಬಿದ್ದುಕೊಂಡಿದ್ದು ದನ್ನು ಕಂಡು ಗಾಬರಿಯಾಗಿ ತನ್ನ ಕೈಯನ್ನು ಮಗನ ಮೂಗಿನ ಬಳಿ ತೆಗೆದುಕೊಂಡು ಹೋಗಿ ಸರಿಯಾಗಿ ಉಸಿರಾಡುತ್ತಿದ್ದಾನೆಯೋ ಇಲ್ಲವೋ ಎಂದು ಪರೀಕ್ಷಿಸಿದಳು. ಸರಿ ಯಾಗಿತ್ತು. ಆಮೇಲೆ ತನ್ನ ಕೈಯನ್ನು ಅವನ ಹಣೆಯ ಮೇಲಿಟ್ಟು ಜ್ವರ ಗಿರ ಬಂದಿ ದೆಯೋ ಎಂದು ನೋಡಿದಳು. ಬಂದಿರಲಿಲ್ಲ. ಅವಳ ಕೈ ಸ್ಪರ್ಶದಿಂದಾಗಿ ರಾಮಚಂದ್ರ ಎಚ್ಚೆತ್ತು ಕಣ್ಣುಬಿಟ್ಟು ನೋಡಿದ. ಮೊದಲು ತುಂಬಾ ಆಯಾಸಗೊಂಡವನಂತೆ ತಾಯಿಯ ಕಡೆ ನೋಡಿ ಮರು ಘಳಿಗೆಯಲ್ಲಿಯೇ ಹಠಾತ್ತನೆ ಎದ್ದು ಕುಳಿತ. ಪಾದರಕ್ಷೆ ಯನ್ನು ತೆಗೆದಿಟ್ಟು ತಾಯಿ ತಂದಿಟ್ಟಿದ್ದ ನೀರಿನ ಲೋಟವನ್ನೆ ಎತ್ತಿಕೊಂಡು ಕೈಕಾಲು ತೊಳೆದುಕೊಂಡ. ಯಾಂತ್ರಿಕವಾಗಿ ಬಂದು ಮತ್ತೆ ಬೆಂಚಿನ ಮೇಲೆ ಕುಳಿತುಕೊಂಡ.

"ಅಡಿಗೆ ಆಗಿದೆ; ಇಲ್ಲಿಗೇ ತರಲೇನು?" ಎಂದು ಸಿದ್ಧೇಶ್ವರಿ ಹೆದರಿಕೊಂಡೇ ಕೇಳಿದಳು.

ರಾಮಚಂದ್ರ ಕುಳಿತಲ್ಲಿಂದ ಏಳುತ್ತಾ, "ಅಪ್ಪಾಜಿಯವರ ಊಟ ಆಯಿತಾ?" ಎಂದು ಕೇಳಿದ.

ಸಿದ್ಧೇಶ್ವರಿ ಅಡಿಗೆಯ ಮನೆ ಕಡೆಗೆ ಧಾವಿಸುತ್ತಾ ಉತ್ತರಿಸಿದಳು: "ಇನ್ನೇನು ಬರ್ತಾ ಇರಬೇಕು, ಅವರೂನು."

ರಾಮಚಂದ್ರ ಹೋಗಿ ಮಣೆಯ ಮೇಲೆ ಕುಳಿತುಕೊಂಡ. ಅವನ ವಯಸ್ಸು ಸುಮಾರು ಇಪ್ಪತ್ತೊಂದಿರಬೇಕು. ತೆಳ್ಳಗೆ ಬೆಳ್ಳಗೆ ಎತ್ತರಕ್ಕೆ ಇದಾನೆ; ವಿಶಾಲವಾದ ಕಣ್ಣುಗಳು, ಒಣಗಿದ ತುಟಿಗಳು. ಅವನು ಸ್ಥಳೀಯ ದಿನಪತ್ರಿಕೆಯೊಂದರ ಕಚೇರಿಯಲ್ಲಿ ಸ್ವಯಿಚ್ಛೆ ಯಿಂದ ಪ್ರೂಫ್-ರೀಡರ್ ಕೆಲಸ ಕಲಿಯುತ್ತಿದ್ದಾನೆ. ಕಳೆದ ವರ್ಷವಷ್ಟೇ ಅವನು ಇಂಟರ್ ಪಾಸುಮಾಡಿದ್ದ.

ಸಿದ್ಧೇಶ್ವರಿ ಊಟದ ತಟ್ಟೆಯನ್ನು ಅವನ ಮುಂದೆ ಇರಿಸಿದಳು ಮತ್ತು ಪಕ್ಕದಲ್ಲಿಯೇ ಕುಳಿತು ಗಾಳಿ ಬೀಸತೊಡಗಿದಳು. ರಾಮಚಂದ್ರ ಒಬ್ಬ ದಾರ್ಶನಿಕನಂತೆ ತಟ್ಟೆಯ ಕಡೆ ನೋಡಿದ. ಎರಡು ರೊಟ್ಟಿ, ಬಟ್ಟಲು ತುಂಬಾ ನೀರು ನೀರಾಗಿದ್ದ ಬೇಳೆಯ ಕಟ್ಟು, ಜೊತೆಗೆ ಕಡಲೆ ಹುರಿದು ನಂಜಿಕೊಳ್ಳಲು ಮಾಡಿದ್ದ ವ್ಯಂಜನ.

ರಾಮಚಂದ್ರ ರೊಟ್ಟಿಯ ಮೊದಲ ಚೂರನ್ನು ಬಾಯಿಯಲ್ಲಿಟ್ಟುಕೊಳ್ಳುತ್ತಾ ಕೇಳಿದ: "ಮೋಹನ್ ಎಲ್ಲಿ? ಬಿಸಿಲು ಏರುತ್ತಾ ಇದೆ, ಅವನ ಪತ್ತೆಯಿಲ್ಲವಲ್ಲ."

ಮೋಹನ್ ಸಿದ್ಧೇಶ್ವರಿಯ ಎರಡನೆಯ ಮಗ. ಅವನ ವಯಸ್ಸು ಹದಿನೆಂಟು. ಇದೇ ವರ್ಷ ಹೈಸ್ಕೂಲಿನ ಪರೀಕ್ಷೆಗೆ 'ಪ್ರೈವೇಟ್'ನಲ್ಲಿ ಕುಳಿತುಕೊಳ್ಳುವ ಸಿದ್ಧತೆಯಲ್ಲಿದ್ದಾನೆ. ಅವನು ಮನೆಯಿಂದ ಹೋಗಿ ಎಷ್ಟೋ ಹೊತ್ತಾಗಿತ್ತು. ಎಲ್ಲಿ ಹೋಗಿದ್ದಾನೆಂಬುದು ಸಿದ್ಧೇಶ್ವರಿಗೇ ತಿಳಿದಿರಲಿಲ್ಲ. ಆದರೂ ನಿಜ ಹೇಳುವ ಮನಸ್ಸು ಅವಳಿಗಿರಲಿಲ್ಲ; ಸುಳ್ಳು ಕಥೆಕಟ್ಟಿ ಹೇಳಿದಳು: "ಯಾರೋ ಸ್ನೇಹಿತನ ಜೊತೆಗೆ ಓದೋದಕ್ಕೆ ಹೋಗಿದ್ದಾನೆ. ಇನ್ನೇನು ಬರಬಹುದು. ಬಹಳ ಚುರುಕು ಬುದ್ಧಿ ಅವನದು, ಹುಷಾರು. ಇಪ್ಪತ್ತನಾಲ್ಕು ಗಂಟೆ ಪುಸ್ತಕದ ಹಿಂದೆ ಬಿದ್ದಿರ್ತಾನೆ. ಯಾವಾಗ್ಲೂ ಓದು, ಓದು. ಅದೇ ವಿಚಾರ."

ರಾಮಚಂದ್ರ ಏನೂ ಹೇಳಲಿಲ್ಲ. ರೊಟ್ಟಿಯ ಒಂದು ಚೂರನ್ನು ಬಾಯಿಯಲ್ಲಿ ತುರುಕಿ ಕೊಂಡು ಒಂದು ಗ್ಲಾಸು ಪೂರ್ತಿ ನೀರನ್ನು ಗಟಗಟ ಗಂಟಲಲ್ಲಿ ಇಳಿಸಿದ ಮತ್ತೆ ತಿನ್ನಲು ಆರಂಭಿಸಿದ. ತುಂಬಾ ಚಿಕ್ಕ ಚಿಕ್ಕ ಚೂರುಗಳನ್ನು ಬಾಯಿಯಲ್ಲಿ ಇಟ್ಟುಕೊಳ್ಳುತ್ತಾ ನಿಧಾನವಾಗಿ ಅವುಗಳನ್ನು ಅಗಿಯುತ್ತಿದ್ದ.

ಸಿದ್ಧೇಶ್ವರಿ ತನ್ನ ಮಗನ ಕಡೆಗೇ ಭಯದಿಂದ ಹಾಗೂ ಸಂಕೋಚದಿಂದ ಒಂದೇ ಸಮನೆ ದಿಟ್ಟಿಸಿ ನೋಡುತ್ತಾ, ಸ್ವಲ್ಪ ಹೊತ್ತಿನ ನಂತರ, ಹೆದರುತ್ತಲೇ ಕೇಳಿದಳು: "ಅಲ್ಲಿ ಏನಾದರೂ ಕೆಲಸ ಆಯಿತೇನು?"

ರಾಮಚಂದ್ರನು ತನ್ನ ದೊಡ್ಡ ದೊಡ್ಡ ನಿಸ್ತೇಜ ಕಣ್ಣುಗಳನ್ನು ತಾಯಿಯ ಕಡೆಗೆ ಹೊರಳಿಸಿ ನೋಡಿ, ಮತ್ತೆ ತಲೆ ತಗ್ಗಿಸಿಕೊಂಡು ಸ್ವಲ್ಪ ನಿರಾಶೆಯಿಂದಲೇ ಹೇಳಿದ: "ಕಾಲ ಕೂಡಿಬಂದಾಗ ಎಲ್ಲ ತಾನಾಗಿಯೇ ಸರಿಹೋಗುತ್ತೆ."

ಸಿದ್ಧೇಶ್ವರಿ ಸುಮ್ಮನಿದ್ದಳು. ಬಿಸಿಲಿನ ತೀವ್ರತೆ ಇನ್ನಷ್ಟು ಹೆಚ್ಚಾಗಿತ್ತು. ಅಂಗಳದ ಕಡೆ ನೋಡಿದಾಗ ಆಕಾಶದಲ್ಲಿ ಒಂದೆರಡು ಮೋಡಗಳು ಸಮುದ್ರದ ಮೇಲಿನ ಸಾಧಾರಣ ನೌಕೆಗಳಂತೆ ನಿಧಾನವಾಗಿ ಹೋಗುತ್ತಿದ್ದುವು. ಹೊರಗೆ ಬೀದಿಯಲ್ಲಿ ಹೋಗುತ್ತಿದ್ದ ಜಟಕಾ ಗಾಡಿಗಳ ಖಟ-ಖಟ ಶಬ್ದ ಕಿವಿಗೆ ಬೀಳುತ್ತಿತ್ತು. ಜೊತೆಗೆ ಮುರುಕು ಚಾರಪಾಯಿ ಮೇಲೆ ಮಲಗಿದ್ದ ಹುಡುಗನ ಉಸಿರಾಡುವ ಖರ-ಖರ ಶಬ್ದ ಕೂಡ ಕಿವಿಗೆ ಬೀಳುತ್ತಿತ್ತು.

ರಾಮಚಂದ್ರ ಪ[illegible]ವನ್ನು ಮುರಿಯುತ್ತಾ ಕೇಳಿದ: “ಪ್ರಮೋದ್ ಊಟ ಮಾಡಿದನೆ?”

ಸಿದ್ಧೇಶ್ವರಿಯು ಪ್ರಮೋದನ ಕಡೆ ನೋಡುತ್ತಾ ನಿರುತ್ಸಾಹದಿಂದ ಹೇಳಿದಳು: “ಹಾಂ, ಮಾಡಿದ.”

“ಅಳಲಿಲ್ಲ ತಾನೇ?”

ಸಿದ್ಧೇಶ್ವರಿ ಮತ್ತೆ ಸುಳ್ಳು ಹೇಳಿದಳು: “ಇವೊತ್ತು ಏನೋ ಅಳಲೇ ಇಲ್ಲ. ತುಂಬಾ ಚೂಟಿಯಾಗಿಬಿಟ್ಟಿದ್ದಾನೆ. ಇವೊತ್ತು ಹೇಳ್ತಿದ್ದ, ದೊಡ್ಡಣ್ಣ ಕೆಲ್ಸಕ್ಕೆ ಹೋಗ್ತಾನಲ್ಲ ಅಲ್ಲಿಗೆ ಹೋಗ್ತೀನಿ ಅಂತ. ಇವನು……”

ಮುಂದೆ ಅವಳಿಂದ ಏನನ್ನೂ ಹೇಳಲಾಗಲಿಲ್ಲ; ಗಂಟಲಲ್ಲಿ ಏನೋ ಸಿಕ್ಕಿಕೊಂಡಂತಾಯಿತು. ನಿನ್ನೆ ತಾನೇ ಪ್ರಮೋದನು ರೇವಡಿ* ತಿನ್ನಲು ಬೇಕೆಂದು ಒಂದೇ ಸಮನೆ ಹಟ ಹಿಡಿದಿದ್ದ; ಒಂದೂವರೆ ಗಂಟೆಕಾಲ ಅದಕ್ಕಾಗಿ ಅತ್ತು, ಅತ್ತು ಮಲಗಿದ್ದ.

ರಾಮಚಂದ್ರನು ಸ್ವಲ್ಪ ಆಶ್ಚರ್ಯದಿಂದಲೇ ತಾಯಿಯ ಕಡೆಗೆ ನೋಡಿದ ಮತ್ತು ಮರುಘಳಿಗೆಯಲ್ಲಿಯೇ ತಲೆ ತಗ್ಗಿಸಿಕೊಂಡು ಸ್ವಲ್ಪ ಬೇಗ ಬೇಗ ಊಟ ಮಾಡತೊಡಗಿದ.

ತಟ್ಟೆಯಲ್ಲಿ ರೊಟ್ಟಿಯ ಒಂದೇ ಒಂದು ಚೂರು ಇದೆಯೆನ್ನುವಾಗ ಸಿದ್ಧೇಶ್ವರಿಯು ಕುಳಿತಲ್ಲಿಂದ ಏಳುತ್ತಾ ಹೇಳಿದಳು: “ಇನ್ನೊಂದು ರೊಟ್ಟಿ ತರ್ತೀನಿ.”

ರಾಮಚಂದ್ರನು ಬೇಡವೆಂದು ಕೈಯಿಂದ ಸನ್ನೆ ಮಾಡುತ್ತಾ, ಒಮ್ಮೆಲೆ ಗಡಬಡಿಸಿ ಹೇಳಿದ: “ಬೇಡ, ಬೇಡ, ಸ್ವಲ್ಪವೂ ಬೇಡ. ನನ್ನ ಹೊಟ್ಟೆ ತುಂಬಿದೆ. ನಾನು ಇದನ್ನೇ ಬಿಡ್ಬೇಕು ಅಂತಿದ್ದೆ. ಸಾಕು, ಇನ್ನು ಖಂಡಿತಾ ಬೇಡ.”

ಸಿದ್ಧೇಶ್ವರಿ ಹಟ ಹಿಡಿದಳು: “ಸರಿ, ಅರ್ಧ ಆದ್ರೂ ತಕೋ ಹಾಗಾದರೆ.”

ರಾಮಚಂದ್ರ ಕುಪಿತನಾಗಿ ಹೇಳಿದ: “ಹೆಚ್ಚಾಗಿ ತಿನ್ನಿಸಿ ಕಾಯಿಲೆ ಬೀಳಿಸ್ತೀ, ಅಷ್ಟೆ. ನೀವು ಸ್ವಲ್ಪಾನೂ ಯೋಚಿಸೋದಿಲ್ಲ. ಬಲವಂತ ಮಾಡಬೇಡ, ಸಾಕು. ಹೊಟ್ಟೆ ಹಸಿದಿದ್ರೆ ಕೇಳಿ ತಕೊಳ್ತಾ ಇರ್ಲಿಲ್ವೇ?”

---

* ರೇವಡಿ = ಎಳ್ಳು ಮತ್ತು ಸಕ್ಕರೆ ಸೇರಿಸಿ ಮಾಡುವ ಒಂದು ಸಿಹಿತಿಂಡಿ. ಚಿಕ್ಕ ಚಿಕ್ಕ ಬಿಲ್ಲೆಗಳಂತೆ ಮಾಡಿ ಮಾರುತ್ತಾರೆ.

ಸಿದ್ಧೇಶ್ವರಿ ಕುಳಿತಲ್ಲಿಯೇ ಕುಳಿತುಬಿಟ್ಟಳು. ರಾಮಚಂದ್ರ ತಟ್ಟೆಯಲ್ಲಿದ್ದ ರೊಟ್ಟಿ ಚೂರಿನಿಂದ ಕೈಯನ್ನು ತೆಗೆದುಕೊಂಡು ನೀರಿನ ಲೋಟದ ಕಡೆ ನೋಡುತ್ತಾ, "ಅಮ್ಮಾ, ನೀರು ಕೊಡು" ಎಂದು ಹೇಳಿದ.

ಸಿದ್ಧೇಶ್ವರಿ ಅಲ್ಲಿದ್ದ ಲೋಟಾ ತೆಗೆದುಕೊಂಡು ನೀರು ತರಲು ಹೋದಳು. ರಾಮ ಚಂದ್ರ ಬರಿದಾಗಿದ್ದ ಬಟ್ಟಲಿನ ಮೇಲೆ ಕೈ ಬೆರಳುಗಳನ್ನು ಕುಣಿಸುತ್ತಾ ಠಣ್ ಠಣ್ ಶಬ್ದ ಬಾರಿಸಿದ ಮತ್ತು ಮತ್ತೆ ತಟ್ಟೆಯ ಕಡೆಗೆ ಕೈಹಾಕಿದ. ಕ್ಷಣಕಾಲ ಹಾಗೆಯೇ ಇದ್ದು ತಟ್ಟೆಯಲ್ಲಿ ಉಳಿದಿದ್ದ ರೊಟ್ಟಿಯ ಚೂರನ್ನು ಕೈಗೆತ್ತಿಕೊಂಡು ಅದನ್ನೇ ದಿಟ್ಟಿಸಿ ನೋಡುತ್ತ ಒಮ್ಮೆ ಆ ಕಡೆ ಈ ಕಡೆ ನೋಡಿ ಆ ರೊಟ್ಟಿಯ ಚೂರನ್ನು ಒಂದೇ ಬಾರಿಗೆ ಸರಳವಾಗಿ ಬಾಯಿಗೆ ಹಾಕಿಕೊಂಡ. ಊಟ ಮುಗಿದ ಮೇಲೆ ಬೀಡಾ ಬಾಯಿಗೆ ಹಾಕಿಕೊಂಡಂತಿತ್ತು ಅವನು ಅದನ್ನು ಬಾಯಿಗೆ ತುರುಕಿಕೊಂಡ ರೀತಿ.

ಂಂ ಂಂ ಂಂ ಂಂ

ಎರಡನೆಯ ಮಗ ಮೋಹನ್ ಮನೆಗೆ ಬಂದೊಡನೆಯೇ ಕೈಕಾಲು ತೊಳೆದುಕೊಂಡು ಮಣೆಯ ಮೇಲೆ ಕುಳಿತುಕೊಂಡ. ನೋಡುವುದಕ್ಕೆ ಅವನು ಸ್ವಲ್ಪ ಕಪ್ಪು ಬಣ್ಣಕ್ಕಿದ್ದ; ಚಿಕ್ಕ ಚಿಕ್ಕ ಕಣ್ಣುಗಳು. ಮುಖದ ಮೇಲೆ 'ಅಮ್ಮ' ಬಂದಿದ್ದ ಕಲೆಗಳು, ತನ್ನ ಅಣ್ಣ ನಂತೆಯೇ ಸಣಕಲು ಆಕಾರ. ಆದರೆ ಅಷ್ಟು ಎತ್ತರ ಇರಲಿಲ್ಲ. ವಯಸ್ಸಿಗೆ ಮೀರಿದ ಗಾಂಭೀರ್ಯ ಹಾಗೂ ನಿರಾಶೆ ಅವನ ಮುಖದಲ್ಲಿ ಎದ್ದು ಕಾಣುತ್ತಿತ್ತು.

ಸಿದ್ಧೇಶ್ವರಿ ಅವನ ಮುಂದೆ ತಟ್ಟೆಯನ್ನಿಡುತ್ತಾ ಕೇಳಿದಳು: "ಎಲ್ಲಿ ಹೊರಟುಹೋಗಿ ದ್ದೆಯೋ ಇಷ್ಟು ಹೊತ್ತು? ಎಲ್ಲಿ ಹೋದ ಅಂತ ಅಣ್ಣಾ ವಿಚಾರಿಸ್ತಾ ಇದ್ದ."

ರೊಟ್ಟಿಯ ಒಂದು ದೊಡ್ಡ ಚೂರನ್ನು ಗಂಟಲಲ್ಲಿ ಇಳಿಸುವ ಸಾಹಸ ಮಾಡುತ್ತಾ ಅಸ್ವಾಭಾವಿಕವಾದ ಗಡಸು ಧ್ವನಿಯಲ್ಲಿ ಹೇಳಿದ: "ನಾನೆಲ್ಲಿ ಹೋಗಿದ್ದೆ; ಇಲ್ಲಿಯೇ ಇದ್ದೆನಲ್ಲ."

ಸಿದ್ಧೇಶ್ವರಿ ಅಲ್ಲಿಯೇ ಕುಳಿತು ಮಗನಿಗೆ ಗಾಳಿ ಬೀಸುತ್ತಾ, ಸ್ವಪ್ನದಲ್ಲಿ ಬಡಬಡಾಯಿ ಸುವ ರೀತಿಯಲ್ಲಿ ಯಾಂತ್ರಿಕವಾಗಿ ಹೇಳಿದಳು: "ನಿಮ್ಮ ಅಣ್ಣ ನಿನ್ನನ್ನು ತುಂಬಾ ಹೊಗಳ್ತಾ ಇದ್ದ. ಮೋಹನ್ ತುಂಬಾ ಬುದ್ಧಿವಂತನಾಗ್ತಾನೆ, ದಿನದ ಇಪ್ಪತ್ನಾಲ್ಕು ಗಂಟೇನೂ ಓದಿನ ಕಡೇನೇ ಅವನ ಗಮನ." ಇಷ್ಟು ಹೇಳಿ ಅವಳು ಮಗನ ಕಡೆ ನೋಡಿದ ರೀತಿ ಅವನು ಏನೋ ಕಳ್ಳತನ ಮಾಡಿದ್ದಾನೆ ಎನ್ನುವ ರೀತಿಯಲ್ಲಿತ್ತು.

ಮೋಹನ್ ತಾಯಿಯ ಕಡೆ ನೋಡಿ ಒಣ ನಗೆಯನ್ನು ನಟಿಸಿ ಮತ್ತೆ ತನ್ನ ಊಟ ವನ್ನು ಮುಂದುವರಿಸಿದ. ಬಿಡಿಸಿದ್ದ ಎರಡು ರೊಟ್ಟಿಗಳ ಪೈಕಿ ಒಂದನ್ನು ಆಗಲೇ ಮುಗಿಸಿದ್ದ; ಬಟ್ಟಲಿನಲ್ಲಿದ್ದ 'ದಾಲಿ'ನ ಪೈಕಿ ಮುಕ್ಕಾಲು ಭಾಗಕ್ಕೂ ಹೆಚ್ಚು ಭಾಗ ಮುಗಿದಿತ್ತು.

ಸಿದ್ಧೇಶ್ವರಿಗೆ ಏನು ಮಾಡಬೇಕೆಂಬುದೇ ತೋಚುತ್ತಿರಲಿಲ್ಲ. ಈ ಇಬ್ಬರು ಮಕ್ಕಳನ್ನು ನೋಡಿದಾಗ ಅವಳಿಗೊಂದು ರೀತಿಯ ಭಯವಾಗುತ್ತಿತ್ತು; ಕಣ್ಣಿನಲ್ಲಿ ನೀರು ಬರುತ್ತಿತ್ತು; ಬೇರೆ ಕಡೆ ನೋಡತೊಡಗಿದಳು.

ಸ್ವಲ್ಪ ಹೊತ್ತಿನ ನಂತರ ಅವಳು ಮೋಹನನ ಕಡೆಗೆ ಮುಖ ತಿರುಗಿಸಿ ನೋಡಿದಾಗ ಅವನು ಹೆಚ್ಚುಕಡಿಮೆ ಊಟ ಮುಗಿಸಿದ್ದುದು ಕಂಡುಬಂತು.

ಸಿದ್ಧೇಶ್ವರಿ ಎಚ್ಚೆತ್ತುಕೊಂಡು ಕೇಳಿದಳು: "ಇನ್ನೊಂದು ರೊಟ್ಟಿ ಹಾಕ್ತೀನಿ."

ಮೋಹನನು ಅಡಿಗೆಮನೆಯ ಕಡೆಗೆ ಅರ್ಥಪೂರ್ಣವಾಗಿ ನೋಡಿದ ಮತ್ತು ಸೋತ ಧ್ವನಿಯಲ್ಲಿ ಹೇಳಿದ: "ಬೇಡ."

ಸಿದ್ಧೇಶ್ವರಿ ಗಡಬಡಿಸಿಕೊಂಡು ಹೇಳಿದಳು: "ಇಲ್ಲವೋ, ನನ್ನಾಣೆ, ಅರ್ಧ ಆದರೂ ತಕೋ! ನಿಮ್ಮ ಅಣ್ಣ ಕೂಡ ತಕೊಂಡಿದ್ದ."

ಮೋಹನ ಗಂಭೀರವಾಗಿ ತನ್ನ ತಾಯಿಯ ಕಡೆ ದಿಟ್ಟಿಸಿ ನೋಡಿದ; ಅನಂತರ ನಿಧಾನವಾಗಿ ಒಬ್ಬ ಗುರು ತನ್ನ ಶಿಷ್ಯನಿಗೆ ಹೇಳಿಕೊಡುವ ರೀತಿಯಲ್ಲಿ ಹೇಳಿದ: "ಇಲ್ಲಮ್ಮಾ, ಸಾಕು. ನಿಜ ಹೇಳುವುದಾದರೆ ಈಗ ನನಗೆ ಹೊಟ್ಟೆ ಹಸಿವಿಲ್ಲ. ಇನ್ನು ನೀನು ರೊಟ್ಟಿ ಮಾಡಿರುವ ರೀತಿ ನೋಡಿದರೆ, ಅವು ಗಂಟಲಲ್ಲಿ ಇಳಿಯುವುದೇ ಕಷ್ಟ. ಅಷ್ಟು ಒರಟಾಗಿವೆ, ನೀನು ಕೊಡಲೇಬೇಕು ಅಂದ್ರೆ, ಬಟ್ಟಲಲ್ಲಿ ಒಂದಿಷ್ಟು ದಾಲ್ ಹಾಕಿಬಿಡು; ದಾಲ್ ಬಹಳ ರುಚಿಯಾಗಿದೆ."

ಸಿದ್ಧೇಶ್ವರಿಗೆ ಮತ್ತೇನೂ ಹೇಳಲಾಗಲಿಲ್ಲ; ಬಟ್ಟಲು ತುಂಬಾ ದಾಲ್ ಹಾಕಿ ಕೊಟ್ಟಳು.

ಮೋಹನ್ ಬಟ್ಟಲನ್ನು ಬಾಯಿಗಿಟ್ಟುಕೊಂಡು ಗಟಗಟನೆ ಕುಡಿಯುತ್ತಿರುವಹಾಗೆಯೇ ಮುನ್ಷೀ ಚಂದ್ರಿಕಾ ಪ್ರಸಾದರು ತಮ್ಮ ಪಾದರಕ್ಷೆಗಳನ್ನು ಸಟ್ ಸಟ್ ಎಳೆದುಕೊಂಡು ಒಳಗೆ ಬಂದರು. ಮತ್ತು ಹೈ ರಾಮ್ ಎಂದು ರಾಮನನ್ನು ಸ್ಮರಿಸುತ್ತಾ ಅಲ್ಲೇ ಬೆಂಚಿನ ಮೇಲೆ ಕುಳಿತುಕೊಂಡರು. ಅವರನ್ನು ಕಂಡು ಸಿದ್ಧೇಶ್ವರಿಯು ತನ್ನ ತಲೆಯ ಮೇಲಿನ ಮುಸುಕನ್ನು ಎಳೆದುಕೊಂಡಳು. ಮೋಹನನು ದಾಲನ್ನು ಒಂದೇ ಗುಟುಕಿಗೆ ಕುಡಿದು ಮಣೆಯಿಂದೆದ್ದು ನೀರಿನ ಲೋಟ ತೆಗೆದುಕೊಂಡು ಬೇಗ ಬೇಗ ಹೊರಗೆ ನಡೆದ.

oo oo oo oo

ಎರಡು ರೊಟ್ಟಿ, ಬಟ್ಟಲು ತುಂಬಾ ದಾಲ್, ಜೊತೆಗೆ ಕಡಲೆ ಹುರಿದ ವ್ಯಂಜನ. ಮುನ್ಷೀ ಚಂದ್ರಿಕಾ ಪ್ರಸಾದರು ಬಂದು ಮಣೆಯ ಮೇಲೆ ಅಚ್ಚುಕಟ್ಟಾಗಿ ಕುಳಿತುಕೊಂಡರು. ಮುದಿ ಹಸು ಮೇವನ್ನು ಮೆಲುಕುಹಾಕುವ ರೀತಿಯಲ್ಲಿ ಅವರೂ ರೊಟ್ಟಿಯ ಚೂರುಗಳನ್ನು ಬಹಳ ಪ್ರಯಾಸದಿಂದ ಅಗಿದು ತಿನ್ನತೊಡಗಿದರು. ಅವರ ವಯಸ್ಸು ನಲವತ್ತೈದಿರಬೇಕು; ಆದರೆ ನೋಡುವುದಕ್ಕೆ ಐವತ್ತು–ಐವತ್ತೈದರಂತೆ ಕಾಣುತ್ತಿದ್ದರು. ಶರೀರದ ಚರ್ಮ ಸುಕ್ಕು ಹಿಡಿಯತೊಡಗಿತ್ತು. ಬೋಳಾದ ತಲೆ ಕನ್ನಡಿಯಂತೆ ಹೊಳೆಯು

ತ್ತಿತ್ತು. ಕೊಳಕು ಪಂಚೆಯ ಮೇಲೆ ತೊಟ್ಟಿದ್ದ ಸ್ವಲ್ಪ ಬೆಳ್ಳಗಿದ್ದ ಬನಿಯನ್ ಹರಿದು ಅದರ ಹರಿದ ಚೂರುಗಳು ನೇತಾಡುತ್ತಿದ್ದುವು.

ಮುನ್ಶೀಜಿ ದಾಲಿನ ಬಟ್ಟಲನ್ನು ಬಾಯಿಗಿಟ್ಟು ಹೀರುತ್ತಾ ಕೇಳಿದರು: "ದೊಡ್ಡ ಹುಡುಗ ಎಲ್ಲೋ ಕಾಣಿಸೋಲ್ಲ."

ಸಿದ್ಧೇಶ್ವರಿಯ ಮನಸ್ಸಿಗೆ ಏನೂ ತೋಚದಂತಾಗಿತ್ತು. ಯಾವುದೋ ಅವ್ಯಕ್ತ ವೇದನೆ ಅವಳನ್ನು ಬಾಧಿಸುತ್ತಿತ್ತು. ಬೀಸಣಿಗೆಯನ್ನು ಇನ್ನಷ್ಟು ಜೋರಾಗಿ ಬೀಸುತ್ತಾ ಹೇಳಿದಳು: "ಈಗತಾನೇ ಊಟಮಾಡಿ ಕೆಲಸದ ಮೇಲೆ ಹೋಗಿದ್ದಾನೆ. ಕೆಲವು ದಿನಗಳಲ್ಲೇ ಕೆಲಸ ಸಿಗುತ್ತೆ ಎಂದು ಹೇಳ್ತಿದ್ದ. ಅವನಿಗೆ ಯಾವಾಗಲೂ ನಿಮ್ಮದೇ ಧ್ಯಾನ; ಮಾತು ಮಾತಿಗೂ ಬಾಬೂಜಿ ಬಾಬೂಜಿ ಎಂದು ಹೇಳುತ್ತಿರುತ್ತಾನೆ. ಬಾಬೂಜಿ ದೇವರಂಥಾ ಮನುಷ್ಯರು ಅಂತ ಹೇಳ್ತಿದ್ದ."

ಮುನ್ಶೀಜಿ ಮುಖದ ಮೇಲೆ ಒಂದಿಷ್ಟು ಹೊಳಪು ಬಂತು. ಸ್ವಲ್ಪ ಸಂಕೋಚದಿಂದಲೇ ಮತ್ತೆ ಕೇಳಿದರು: "ಏನು, ಬಾಬೂಜಿ ದೇವರಂಥ ಮನುಷ್ಯ ಅಂತ ಹೇಳ್ತಿದ್ದನೇ? ಹುಚ್ಚು ಹುಡುಗ."

ಸಿದ್ಧೇಶ್ವರಿಯ ಮೈಮೇಲೆ ಆವೇಶ ಬಂದಂತಿತ್ತು. ಹುಚ್ಚಿಯಂತೆ ಬಡಬಡಾಯಿಸ ತೊಡಗಿದಳು: "ಅವನೇಕೆ ಹುಚ್ಚನಾದಾನು, ತುಂಬಾ ಬುದ್ಧಿವಂತ. ಹಿಂದಿನ ಜನ್ಮದಲ್ಲಿ ಅವನೊಬ್ಬ ಮಹಾತ್ಮನೇ ಆಗಿರಬೇಕು. ಅವನ ಬಗ್ಗೆ ಮೋಹನನಿಗಂತೂ ಎಲ್ಲಿಲ್ಲದ ಗೌರವ. ಅಣ್ಣನ ಬಗ್ಗೆ ಊರಿನಲ್ಲೆಲ್ಲ ತುಂಬಾ ಗೌರವವಿದೆ ಎಂದು ಇವೊತ್ತು ಹೇಳ್ತಿದ್ದ. ವಿದ್ಯಾವಂತ ಜನ ಅವನನ್ನು ತುಂಬಾ ಗೌರವಿಸುತ್ತಾರೆ ಅಂತ ಹೇಳ್ತಿದ್ದ. ತಮ್ಮಂದಿರು ಅವನಿಗೆ ಪಂಚಪ್ರಾಣ. ಜೀವನದಲ್ಲಿ ಎಂಥ ಕಷ್ಟದ ಪರಿಸ್ಥಿತಿಯನ್ನೂ ಅವನು ಸಹಿಸಿಯಾನು, ಆದರೆ ಪ್ರಮೋದನಿಗೆ ಒಂದಿಷ್ಟು ತೊಂದರೆಯಾದರೂ ಅವನು ನೋಡಲಾರ."

ಮುನ್ಶೀಜಿ ದಾಲ್ ಅಂಟಿದ್ದ ತಮ್ಮ ಕೈಬೆರಳುಗಳನ್ನು ಚೀಪುತ್ತಿದ್ದರು. ತಮ್ಮ ಮುಂದಿದ್ದ ತಟ್ಟೆಯ ಕಡೆಗೆ ನೋಡುತ್ತಾ ಅವರು ಹೇಳಿದರು: "ದೊಡ್ಡ ಹುಡುಗನ ಬುದ್ಧಿ ಬಹಳ ತೀಕ್ಷ್ಣ. ಚಿಕ್ಕವನಿದ್ದಾಗ ತುಂಬಾ ತುಂಟನೂ ಆಗಿದ್ದ. ಯಾವಾಗಲೂ ಆಟ, ಆದರೆ ಇದೂ ನಿಜ. ಓದೋದಕ್ಕೆ ಕೊಡ್ತಿದ್ದ ಪಾಠಾನ ಚೆನ್ನಾಗಿ ಓದಿಕೊಂಡಿರುತ್ತಿದ್ದ. ಮೂರೂ ಜನ ಬುದ್ಧಿವಂತರು, ಹಾಗೆ ನೋಡಿದರೆ. ಪ್ರಮೋದ ಏನು ಕಡಿಮೆ ಅಂದು ಕೊಂಡೆಯಾ?" – ಹೀಗೆ ಹೇಳಿ ಇದ್ದಕ್ಕಿದ್ದಂತೆ ಜೋರಾಗಿ ನಕ್ಕುಬಿಟ್ಟರು.

ಮುನ್ಶೀಜಿ ಒಂದೂವರೆ ರೊಟ್ಟಿ ತಿಂದಾದಮೇಲೆ ಒಂದು ಚೂರನ್ನು ಬಾಯಿಗೆ ಹಾಕಿಕೊಂಡು ಅದರ ಜೊತೆಗೆ ಯುದ್ಧ ಮಾಡುತ್ತಿದ್ದರು. ಅದು ಗಂಟಲೊಳಕ್ಕೆ ಹೋಗುವುದು ಕಷ್ಟವೆನಿಸಿದಾಗ ಒಂದು ಗ್ಲಾಸಿನಷ್ಟು ನೀರನ್ನು ಕುಡಿದು ಮುಗಿಸಿದರು. ಮತ್ತು ಖೋ ಖೋ ಎಂದು ಕೆಮ್ಮಿ ಮತ್ತೆ ತಮ್ಮ ಊಟ ಮುಂದುವರಿಸಿದರು.

ಮತ್ತೆ ಮೌನ ಆವರಿಸಿತ್ತು. ಬೀಸುವ ಕಲ್ಲಿನ ಶಬ್ದ ದೂರದಿಂದ ಕೇಳಿಬರುತ್ತಿತ್ತು. ಹತ್ತಿರದ ಬೇವಿನಮರದ ಮೇಲೆ ಕುಳಿತಿದ್ದ ಒಂದು ಹಕ್ಕಿಯ ಕೂಗು ಮತ್ತೆ ಮತ್ತೆ ಕೇಳಿಸುತ್ತಿತ್ತು.

ಏನು ಹೇಳಬೇಕೆಂಬುದೇ ಸಿದ್ಧೇಶ್ವರಿಗೆ ಗೊತ್ತಾಗುತ್ತಿರಲಿಲ್ಲ. ಪ್ರತಿಯೊಂದು ವಿಚಾರ ವನ್ನೂ ಸರಿಯಾಗಿ ಕೇಳಿ ತಿಳಿದುಕೊಳ್ಳಬೇಕೆಂಬುದು ಅವಳ ಅಪೇಕ್ಷೆಯಾಗಿತ್ತು. ಪ್ರಪಂಚದ ಪ್ರತಿಯೊಂದು ವಿಚಾರದ ಬಗ್ಗೆಯೂ ಮೊದಲಿನಂತೆಯೇ ಗಂಭೀರವಾಗಿ ಚರ್ಚಿಸ ಬೇಕೆಂಬುದು ಅವಳ ಅಪೇಕ್ಷೆ. ಆದರೆ ಇಂತಹ ಹರಟೆಗೆ ಅವಳಲ್ಲಿ ಈಗ ಹುಮ್ಮಸ್ಸೇ ಇರಲಿಲ್ಲ. ಅವಳ ಮನಸ್ಸನ್ನು ಯಾವುದೋ ರೀತಿಯ ಭಯ ಆವರಿಸಿತ್ತು.

ಮುನ್ನೀಜಿ ತಮ್ಮದೇ ರೀತಿಯಲ್ಲಿ ಊಟ ಮಾಡುತ್ತಿದ್ದರು; ಎರಡು ದಿನಗಳಿಂದ ಮೌನವ್ರತ ನಡೆಸುತ್ತಿದ್ದು ಇವೊತ್ತು ಸಂಜೆ ಮೌನ ಮುರಿಯಲಿದ್ದಾರೆ ಎನ್ನುವಂತಿತ್ತು ಅವರ ಮುಖಮುದ್ರೆ.

ಸಿದ್ಧೇಶ್ವರಿಗೆ ಸುಮ್ಮನಿರಲಾಗಲಿಲ್ಲ, "ಮಳೆ ಬರುವ ಲಕ್ಷಣ ಕಾಣಿಸುತ್ತಿಲ್ಲ," ಎಂದು ಹೇಳಿದಳು.

ಮುನ್ನೀಜಿ ಕ್ಷಣಕಾಲ ಆ ಕಡೆ ಈ ಕಡೆ ನೋಡಿ ನಿರ್ವಿಕಾರ ಸ್ವರದಲ್ಲಿ ತಮ್ಮ ಅಭಿ ಪ್ರಾಯ ತಿಳಿಸಿದರು: "ನೊಣ ಬಹಳ ಆಗ್ಬಿಟ್ವು."

ಸಿದ್ಧೇಶ್ವರಿ ಕಾತರದಿಂದ ಕೇಳಿದಳು: "ಮಾವನವರ ಕಾಯಿಲೆ ಹೇಗಿದೆಯೋ! ಸಮಾಚಾರಾನೇ ಇಲ್ಲ."

ಮುನ್ನೀಜಿ ಕಡಲೆಕಾಳಿನ ಕಡೆ ದಿಟ್ಟಿಸಿ ನೋಡುತ್ತಾ ಅವುಗಳ ಜೊತೆ ಮಾತನಾಡಲು ಹೊರಟಿದ್ದಾರೋ ಎನ್ನುವ ರೀತಿಯಲ್ಲಿ ಕುಳಿತಿದ್ದರು. ಆಮೇಲೆ ಹೇಳಿದರು: "ಗಂಗಾ ಶರಣ ಬಾಬುಗಳ ಮಗಳ ಮದುವೆ ಗೊತ್ತಾಗಿ ಹೋಯಿತು. ಹುಡುಗ ಎಂ.ಎ. ಪಾಸ್ ಮಾಡಿದ್ದಾನೆ."

ಸಿದ್ಧೇಶ್ವರಿ ಮುಂದೆ ಮಾತನಾಡದೆ ಸುಮ್ಮನಾಗಿಬಿಟ್ಟಳು. ಮುನ್ನೀಜಿ ಕೂಡ ಮತ್ತೆ ಏನೂ ಹೇಳಹೋಗಲಿಲ್ಲ, ಅವರ ಊಟ ಮುಗಿದಿತ್ತು. ತಟ್ಟೆಯಲ್ಲಿ ಉಳಿದುಹೋಗಿದ್ದ ಕಾಳುಗಳನ್ನು ಒಂದು ಕೋತಿ ಹುಡುಕಾಡಿ ತಿನ್ನುವಂತೆ ಹುಡುಕಾಡಿ ಒಂದೊಂದನ್ನೇ ತಿನ್ನುತ್ತಿದ್ದರು.

ಸಿದ್ಧೇಶ್ವರಿ ಕೇಳಿದಳು: "ಇನ್ನೊಂದು ರೊಟ್ಟಿ ತಕೊಳ್ಳಿ", ಇನ್ನೂ ಸಾಕಷ್ಟು ಇವೆ... ಒಂದಾದರೂ ತಗೊಳ್ಳಿ, ನನ್ನಾಣೆ."

ಮುನ್ನೀಜಿ ಒಬ್ಬ ಅಪರಾಧಿಯ ರೀತಿಯಲ್ಲಿ ಅವಳ ಕಡೆಗೂ ಅಡಿಗೆಮನೆಯ ಕಡೆಗೂ ಓರೆಗಣ್ಣಿನಿಂದ ನೋಡಿ ಅನಂತರ ಸೋತ ಉನ್ಮಾದನ ಧ್ವನಿಯಲ್ಲಿ ಹೇಳಿದರು: "ರೊಟ್ಟಿ ಈಗ ಬೇಡ, ಹೊಟ್ಟೆ ತುಂಬಿದೆ. ಅದೂ ಇದೂ ತಿಂದು ಹೊಟ್ಟೆ ಕೆಟ್ಟುಹೋಗಿದೆ.

ಉಪ್ಪಿನ ಪದಾರ್ಥಗಳೂ ಆರೋಗ್ಯಕ್ಕೆ ಒಳ್ಳೆಯದಲ್ಲ. ನೀನು ಆಣೆ ಬೇರೆ ಹಾಕಿದ್ದಿ. ಅದಕ್ಕಾಗೆಂದು ತೆಕೋಬೇಕು. ಮನೆಯಲ್ಲಿ ಬೆಲ್ಲ ಇದೇ ಏನು?"

ಮಡಕೆಯಲ್ಲಿ ಒಂದು ಚೂರು ಬೆಲ್ಲ ಇರಬಹುದೆಂದು ಸಿದ್ಧೇಶ್ವರಿ ಹೇಳಿದಳು. "ಬೆಲ್ಲದ ಪಾನಕ ಒಂದಿಷ್ಟು ಮಾಡು, ಕುಡೀತೀನಿ. ನೀನು ಆಣೆ ಹಾಕಿದ್ದಕ್ಕೂ ಪರಿಹಾರ ಆಗುತ್ತೆ, ದೇಹಸ್ಥಿತಿಗೂ ಒಂದಿಷ್ಟು ಒಳ್ಳೇದಾಗುತ್ತೆ. ಯಾವಾಗಲೂ ರೊಟ್ಟಿ, ರೊಟ್ಟಿ, ರೊಟ್ಟಿ. ಬೇಜಾರಾಗಿಹೋಗಿದೆ" ಹೀಗೆ ಹೇಳಿ ಅವರು ಜೋರಾಗಿ ನಕ್ಕುಬಿಟ್ಟರು.

ಮುನ್ಶೀಜಿ ಅಲ್ಲಿಂದೆದ್ದ ಮೇಲೆ ಸಿದ್ಧೇಶ್ವರಿ ಅವರ ಎಂಜಲು ತಟ್ಟೆಯನ್ನೆತ್ತಿಕೊಂಡು ಅಡಿಗೆಮನೆಯಲ್ಲಿ ಕುಳಿತುಕೊಂಡಳು. ತಪ್ಪಲೆಯಲ್ಲಿದ್ದ ದಾಲನ್ನು ಬಟ್ಟಲಿಗೆ ಸುರಿದಳು. ಆದರೆ ಅದು ತುಂಬಲೇ ಇಲ್ಲ. ಪಲ್ಯದ ಪಾತ್ರೆಯಲ್ಲಿ ಸ್ವಲ್ಪವೇ ಸ್ವಲ್ಪ ಕಡಲೆ ಮಿಕ್ಕಿತ್ತು. ಅದನ್ನು ಹತ್ತಿರಕ್ಕೆ ಎಳೆದುಕೊಂಡಳು. ರೊಟ್ಟಿ ಇಟ್ಟಿದ್ದ ತಟ್ಟೆಯನ್ನೂ ಸಮೀಪಕ್ಕೆ ಎಳೆದು ಕೊಂಡಳು. ಅದರಲ್ಲಿ ಮಿಕ್ಕಿದ್ದುದು ಒಂದೇ ರೊಟ್ಟಿ. ಸುಟ್ಟುಹೋಗಿದ್ದ ಆ ಒಣಗಿಕೊಂಡ ದಪ್ಪ ರೊಟ್ಟಿಯನ್ನು ಎಂಜಲು ತಟ್ಟೆಗೆ ಹಾಕಿಕೊಳ್ಳುತ್ತಿದ್ದ ಹಾಗೆಯೇ ಅವಳ ಗಮನ ಹಠಾತ್ತನೆ ಹೊರಗೆ ಅಂಗಳದಲ್ಲಿ ಮಲಗಿದ್ದ ಪ್ರಮೋದನ ಕಡೆಗೆ ಹೊರಳಿತು. ಸ್ವಲ್ಪ ಹೊತ್ತು ಅವನ ಕಡೆಗೇ ನೋಡುತ್ತಿದ್ದು ಆ ರೊಟ್ಟಿಯನ್ನೇ ಸರಿಯಾಗಿ ಅರ್ಧ ಪಾಲು ಮಾಡಿದಳು. ಅರ್ಧ ರೊಟ್ಟಿಯನ್ನು ಒಂದು ಕಡೆ ಪಕ್ಕದಲ್ಲಿಟ್ಟು ಇನ್ನರ್ಧ ರೊಟ್ಟಿಯನ್ನು ತನ್ನ ಎಂಜಲು ತಟ್ಟೆಗೆ ಹಾಕಿಕೊಂಡಳು. ಅನಂತರ ಒಂದು ಲೋಟ ನೀರಿಟ್ಟುಕೊಂಡು ಊಟಕ್ಕೆ ಕುಳಿತಳು. ಮೊದಲನೆಯ ರೊಟ್ಟಿ ಚೂರನ್ನು ತನ್ನ ಬಾಯಿಯಲ್ಲಿ ಇಟ್ಟು ಕೊಳ್ಳುತ್ತಿದ್ದಂತೆ ಅವಳ ಕಣ್ಣಲ್ಲಿ ನೀರು ತುಂಬಿ ಬಂತು.

ಮನೆ ತುಂಬಾ ನೊಣಗಳೇ ಆಗಿಹೋಗಿದ್ದುವು. ಹಿತ್ತಲಿನ ಕಡೆ ಬಟ್ಟೆ ಒಣಗಿಸಲು ಕಟ್ಟಿದ್ದ ಹಗ್ಗದ ಮೇಲೆ ಕೊಳಕು ಸೀರೆಯೊಂದು ನೇತಾಡುತ್ತಿತ್ತು. ಅದರ ಮೇಲಿನ ತ್ಯಾಪೆಗಳು ಎದ್ದು ಕಾಣುತ್ತಿದ್ದುವು. ಇಬ್ಬರು ದೊಡ್ಡ ಹುಡುಗರೂ ನಾಪತ್ತೆಯಾಗಿ ದ್ದರು. ಹೊರಗಡೆ ಕೊಠಡಿಯಲ್ಲಿ ಮುನ್ಶೀಜಿ ಬೋರಲಾಗಿ ಬಿದ್ದುಕೊಂಡು ಹಾಯಾಗಿ ಮಲಗಿ ನಿದ್ರೆ ಮಾಡುತ್ತಿದ್ದರು. ಬಾಡಿಗೆ ನಿಯಂತ್ರಣ ಕಚೇರಿಯಲ್ಲಿ ಕೆಲಸಕ್ಕಿದ್ದು ಒಂದೂ ವರೆ ತಿಂಗಳ ಹಿಂದೆ ಆ ಕೆಲಸದಿಂದ ಮುಕ್ತರಾಗಿದ್ದುದಾಗಲಿ ಸಂಜೆಯ ಹೊತ್ತಿಗೆ ಕೆಲಸ ಹುಡುಕಿಕೊಂಡು ಹೋಗಬೇಕಾಗಿದೆ ಎಂಬುದಾಗಲಿ ಅವರ ಗಮನದಲ್ಲಿರುವಂತೆ ಕಾಣಲಿಲ್ಲ.

## ಫೆನ್ಸಿನ ಈ ಕಡೆ, ಆ ಕಡೆ

ನಮ್ಮ ಪಕ್ಕದ ಮನೆಯಲ್ಲಿ ಈಗ ಮುಖರ್ಜಿ ಇಲ್ಲ. ಅವನಿಗೆ ಈಗ ಇಲ್ಲಿಂದ ವರ್ಗ ವಾಗಿಹೋಗಿದೆ. ಈಗ ಬಂದಿರುವವರು ನಮ್ಮೊಡನೆ ಯಾವ ಸಂಬಂಧವನ್ನೂ ಇಟ್ಟು ಕೊಂಡಿಲ್ಲ. ನೋಡುವುದಕ್ಕೆ ಅವರು ಪಂಜಾಬಿಗಳ ಹಾಗೆ ಕಾಣುತ್ತಾರೆ; ಪಂಜಾಬಿಗಳಲ್ಲ ದಿದ್ದರೂ ಇರಬಹುದು. ಅವರ ವಿಚಾರವಾಗಿ ಏನೊಂದೂ ಗೊತ್ತಾಗುವುದಿಲ್ಲ. ಅವರು ಹೊಸದಾಗಿ ಬಂದಾಗ ಅವರ ಬಗ್ಗೆ ತಿಳಿಯಲು ವಿಶೇಷ ರೀತಿಯ ಆಸಕ್ತಿ ಉಂಟಾಯಿತು. ಇದಕ್ಕೆ ಕಾರಣ ತಿಳಿಯಿತು. ಅವರು ಯಾರಾದರೆ ನನಗೇನು ಎಂದು ನನ್ನ ಪಾಡಿಗೆ ಇರು ವುದು ಸಾಧ್ಯವಾಗಲಿಲ್ಲ. ರೈಲಿನಲ್ಲಿ ಪ್ರಯಾಣ ಮಾಡುವಾಗಲೂ ಅಷ್ಟೆ; ಸಹಪ್ರಯಾಣಿ ಕರ ಪರಿಚಯ ಮಾಡಿಕೊಳ್ಳದ ಹೊರತು ನನಗೆ ಸಮಾಧಾನವಿಲ್ಲ. ಪ್ರಾಯಶಃ ನನ್ನ ಸ್ವಭಾವವೇ ಹೀಗೆ ಎನಿಸುತ್ತೆ. ಆದರೆ ಒಂದು ಮಾತು. ನಮ್ಮ ಮನೆಯಲ್ಲಿ ಕೂಡ ಯಾರೂ ಅವರ ಬಗ್ಗೆ ಅನಾಸಕ್ತಿಯಿಂದ ಇರುವುದನ್ನು ಕಾಣೆ. ನಮ್ಮದು ಗೌರವಸ್ಥ ಕುಟುಂಬ. ನಮ್ಮ ನೆರೆಹೊರೆಯಲ್ಲಿರುವ ಮನೆಗಳಿಗೆ ಸಂಬಂಧಪಟ್ಟಂತೆ ಅವರ ಮಗಳು ಹೇಗೆ, ಸೊಸೆ ಹೇಗೆ–ಹೀಗೆ ಎಲ್ಲ ವಿಚಾರ ತಿಳಿದಿರಬೇಕಾಗುತ್ತದೆ. ಆದುದರಿಂದಲೇ ನಾವು ಪ್ರತಿಯೊಂದನ್ನೂ ತಿಳಿಯುವ ಪ್ರಯತ್ನದಲ್ಲಿರುತ್ತೇವೆ. ಯಾವಾಗಲೂ ಉತ್ಸುಕತೆ ಯಿಂದಿದ್ದು ನಮ್ಮ ನೆರೆಯವರ ಬಗ್ಗೆ ನಮ್ಮ ಭಾವನೆಗಳನ್ನು ರೂಪಿಸಿಕೊಳ್ಳುತ್ತಿರು ತ್ತೇವೆ. ಅವರನ್ನು ಸಪರಿವಾರ ಸಮೇತರಾಗಿ ನಮ್ಮ ಮನೆಗೆ ಬರಮಾಡಿಕೊಳ್ಳಲು ನನಗೆ ಆಸಕ್ತಿ ಇದೆ. ಅದೇ ರೀತಿಯಲ್ಲಿ ನಾನೂ ಅವರ ಮನೆಗೆ ಹೋಗಿಬರುತ್ತಿರಲು ಅಪೇಕ್ಷಿಸು ತ್ತೇನೆ. ಆದರೆ ಅವರಿಗೆ ನಮ್ಮ ಭಾವನೆಗಳ ಕಲ್ಪನೆಯೇ ಬಂದಿರಲಾರದು ಎನಿಸುತ್ತದೆ. ಅವರದು ಎಲ್ಲರ ಜೀವನದಂತಿಲ್ಲ. ಅವರ ಮನೆಯ ವರಾಂಡಾದ ಈಚೆಗಿರುವ ನೆಲದ ಮೇಲೆ, ಕಾಂಪೌಂಡಿನಲ್ಲಿ, ಕುರ್ಚಿಗಳನ್ನು ಹಾಕಿಕೊಂಡು ಪ್ರತಿದಿನ ಬಹಳ ಹೊತ್ತು ಕುಳಿತಿರುತ್ತಾರೆ. ಆ ಕುರ್ಚಿಗಳು ಯಾವಾಗಲೂ ಅಲ್ಲಿಯೇ ಇರುತ್ತವೆ. ರಾತ್ರಿಯಲ್ಲಿ ಅಲ್ಲಿಯೇ ಬಿದ್ದಿರುತ್ತವೆ. ಈ ವಿಚಾರದಲ್ಲಿ ಅವರು ತುಂಬಾ ಬೇಜವಾಬ್ದಾರಿಯ ಜನ. ಆದರೂ ಅವರ ಆ ಕುರ್ಚಿಗಳನ್ನು ಯಾರೂ ಕದ್ದುಕೊಂಡು ಹೋಗಿಲ್ಲ.

ನಮ್ಮ ಮನೆಯ ಒಂದು ಪಕ್ಕಕ್ಕೆ ಸರ್ಕಾರದ ಕಚೇರಿಯೊಂದು ಇದ್ದು, ಇಟ್ಟಿಗೆಯ ಎತ್ತರದ ಗೋಡೆ ಇದೆ. ಹಿಂಭಾಗಕ್ಕೆ ಎರಡು ಅಂತಸ್ತಿನ ಫ್ಲ್ಯಾಟುಗಳ ಕಟ್ಟಡವಿದ್ದು, ಆ ಫ್ಲ್ಯಾಟುಗಳ ಹಿಂಭಾಗವಿದೆ. ನಮ್ಮ ಮನೆಯ ಮುಂಭಾಗದಲ್ಲಿ ಮುಖ್ಯ ರಸ್ತೆ.

ಹೀಗೆ ನಮ್ಮ ಮನೆಯವರಿಗೆ, ಇವರನ್ನು ಬಿಟ್ಟರೆ, ಸಮೀಪವರ್ತಿಗಳಾದ ಬೇರೆ ನೆರೆ ಯವರೇ ಇಲ್ಲ. ದೊಡ್ಡ ದೊಡ್ಡ ಪಟ್ಟಣಗಳಲ್ಲಿ ನೆರೆಹೊರೆಯವರ ಸಂಪರ್ಕವಿಲ್ಲದೆ

ಬದುಕುವ ಹವ್ಯಾಸದ ಜನ ಇರುತ್ತಾರೆ. ಪ್ರಾಯಶಃ ಅದೇ ವರ್ಗಕ್ಕೆ ಸೇರಿದ ಜನ ನಮ್ಮ ಪಕ್ಕದ ಮನೆಗೆ ಈಗ ಬಂದಿರುವಂತಿದೆ. ನಮ್ಮ ನಗರ ಮತ್ತು ಈ ನಮ್ಮ ಮೊಹಲ್ಲಾ – ಇವೆರಡೂ ತುಂಬಾ ಪ್ರಶಾಂತವಾಗಿವೆ. ಜನ ತುಂಬಾ ನಿಧಾನವಾಗಿ ಓಡಾಡುತ್ತಾರೆ. ಅವರ ನಡಿಗೆಯಲ್ಲಿ ಯಾವ ಆತುರವೂ ಇರುವುದಿಲ್ಲ. ಅದಕ್ಕೆ ಬದಲು ಅಪೇಕ್ಷಿತ ನಿಧಾನ ಪ್ರವೃತ್ತಿ ಇರುತ್ತದೆ. ಕಾರಣ ಅವರ ಜೀವನದಲ್ಲಿ ಯಾವುದೇ ರೀತಿಯ ತೀವ್ರತೆಯೆಂಬುದಿಲ್ಲ. ಈ ಕಾರಣದಿಂದಲೂ ನಮ್ಮ ನೆರೆಯವರು ನಮಗೆ ಸ್ವಲ್ಪ ವಿಚಿತ್ರವಾಗಿ ಕಾಣುತ್ತಾರೆ.

ನಾನು ಹೊರಗಡೆ ಹೊರಟಿದ್ದೇನೆ. ಅವರಿನ್ನೂ ಬೆಳಿಗ್ಗೆಯ ಚಹಾ ಕುಡಿಯುತ್ತಾ ಕುಳಿತಿದ್ದಾರೆ. ಈಗಾಗಲೇ ಒಂಭತ್ತು ಗಂಟೆ ಆಗಿದೆ. ಗಂಡ–ಹೆಂಡತಿ ಜೊತೆಗೆ ಒಬ್ಬ ಹುಡುಗಿಯೂ ಇದ್ದಾಳೆ. ಹುಡುಗಿ ಅವರ ಮಗಳಿರಬೇಕು. ಯಾವಾಗಲೂ ಈ ಮೂವರೇ ಕಣ್ಣಿಗೆ ಬೀಳುತ್ತಾರೆ. ನಾಲ್ಕನೆಯವರೆಂಬುವವರು ಇಲ್ಲ. ಹುಡುಗಿ ಸುಂದರಿಯೇನೂ ಅಲ್ಲ, ಆದರೆ ತುಂಬಾ ಚೂಟಿ ಇದ್ದಾಳೆ. ಸರಿಯಾಗಿ ಮೇಕಪ್ ಮಾಡಿಕೊಂಡರೆ ಸುಂದರಿಯಾಗಿಯೂ ಕಾಣಬಹುದು. ನಾನು ನೋಡಿದಹಾಗೆ ಅವಳು ಯಾವಾಗಲೂ ನಗುತ್ತಲೇ ಇರುತ್ತಾಳೆ; ತುಂಬಾ ನಗುತ್ತಾಳೆ. ಅವರ ತಂದೆ-ತಾಯಿ ಕೂಡ ಹಾಗೆಯೇ ನಗುತ್ತಿರುತ್ತಾರೆ. ಯಾವಾಗಲೂ ಖುಷಿಯಾಗಿರುತ್ತಾರೆ. ಅವರು ನಡೆಸುವ ಮಾತುಕತೆ ಯಾದರೂ ಏನು ? ಏಕೆ ಹಾಗೆ ನಗುತ್ತಿರುತ್ತಾರೆ ? ಯಾವಾಗಲೂ ನಗುನಗುತ್ತಾ ಇರಲು ಸಾಧ್ಯವಾಗುವಷ್ಟು ಅನುಕೂಲಸ್ಥಿತಿಯಲ್ಲಿ ಅವರು ಇರಬೇಕು. ಅವರಿಗೆ ಜೀವನದ ಕಠಿಣತೆ ಹಾಗೂ ವಾಸ್ತವಿಕತೆಯ ಅನುಭವವೇ ಇಲ್ಲವೇ ? ಇದನ್ನು ನೋಡಿ ನನಗೆ ಆಶ್ಚರ್ಯವಾಗುತ್ತದೆ. ನಮ್ಮದೇ ಮನೆಯ ಹಾಗೂ ನೆರೆಹೊರೆಯ ಇತರ ಕುಟುಂಬಗಳ ಪರಿಸ್ಥಿತಿಗೆ ಅವರ ಮನೆಯ ಪರಿಸ್ಥಿತಿಯನ್ನು ಹೋಲಿಸಿ ನೋಡ ತೊಡಗುತ್ತೇನೆ.

ಈಗತಾನೆ ಒಂದು ಪ್ರಸಂಗ ಬಂತು. ಅವರೆಲ್ಲರೂ ಇದ್ದಕ್ಕಿದ್ದಂತೆ ಘೊಳ್ಳನೆ ನಗತೊಡಗಿದುದನ್ನು ಕೇಳಿ ನಾನು ಬೆಚ್ಚಿದೆ. ನನ್ನ ದೃಷ್ಟಿ ಆಗ ಗುಲಾಬಿ ಹೂವಿನ ಪಾತಿಗಳ ಕಡೆಗೆ ಇತ್ತು. ನಗುವಿನ ಆ ಶಬ್ದ ಕೇಳಿ ನನ್ನ ಜಂಘಾಬಲವೇ ಉಡುಗಿಹೋದಂತಾಯಿತು. ಆದರೆ ಅವರ ನಗುವಿನ ಅಬ್ಬರ ಮಾತ್ರ ಉಡುಗಿಹೋಗುವಂತಿರಲಿಲ್ಲ. ಹುಡುಗಿ ಕುಳಿತಿದ್ದವಳು ಕುರ್ಚಿಯಿಂದೆದ್ದು, ತನ್ನ ನಗುವಿನಿಂದಾಗಿ ಎಲ್ಲಿ ಚಹಾ ಚೆಲ್ಲಿಹೋಗುವುದೋ ಎಂದು ಚಹಾ ಕಪ್ಪನ್ನು ತಾಯಿಯ ಕೈಗೆ ಕೊಟ್ಟಿದ್ದಾಳೆ. ಅವಳು ನೆಟ್ಟಗೆ ನಿಂತಿಲ್ಲ. ನಿಂತಲ್ಲೆ ತುಂಡುತುಂಡಾಗುತ್ತಿದ್ದಾಳೆ. ತುಂಬಾ ನಗು ಬರುವಂತಹ ಮಾತೇ ಇರಬೇಕು. ಅದರ ಪರಿಣಾಮವಾಗಿಯೇ ಅವಳು ಹಾಗೆ ನಗುತ್ತಿರಬೇಕು. ನಗುವನ್ನು ತಡೆಯಲಾಗುತ್ತಿಲ್ಲ. ಮೈಮೇಲೆ ಹೊದ್ದುಕೊಂಡಿರುವ ದುಪಟ್ಟಾ ಈಗ ಹೆಗಲ ಮೇಲೆ ಮಾತ್ರ ಇದೆ ಎಂಬುದೂ ಅವಳಿಗೆ ತಿಳಿದಿಲ್ಲ. ಅವಳ ಎದೆ ಕಾಣುತ್ತಿದೆ. ಈ ಚೆಲ್ಲಾಟ ಚೆನ್ನಾಗಿಲ್ಲ. ಅತಿಯಾಯಿತು. ತಾಯಿಯಾದವಳು ಈಗ ಅವಳನ್ನು ತರಾಟೆಗೆ ತೆಗೆದುಕೊಳ್ಳಬೇಕು.

ಮೈ ಕಾಣುತ್ತಿದೆ ಎಂದು ಎಚ್ಚರಿಸಬೇಕು. ಆದರೆ ತಾಯಿಯಾದವಳಿಗೆ ಇದು ಕೆಟ್ಟದ್ದೆಂದು ತೋರುವ ಸೂಚನೆಯೇ ಕಾಣುತ್ತಿಲ್ಲ. ಅದೆಂತಹ ತಾಯಿಯಿರಬೇಕು ಅವಳು. ನನ್ನ ನ್ನೊಬ್ಬನನ್ನು ಬಿಟ್ಟರೆ ಬೇರೆ ಯಾರಿಗೂ ಆ ವಿಚಾರದ ಕಡೆ ಗಮನವಿರುವಂತೆಯೇ ಕಾಣುವುದಿಲ್ಲ.

ಪ್ರತಿದಿನ ನಾನು ಒಂದಲ್ಲ ಒಂದು ರೀತಿಯಲ್ಲಿ ಅಸಹಾಯಕನಾಗಿಬಿಡುತ್ತೇನೆ. ನನ್ನ ಪಕ್ಕದ ಮನೆಗೆ ಬಂದಿರುವ ಈ ಹೊಸಬರ ಕಡೆಗೆ ಮನಸ್ಸಿನಲ್ಲಿಯೇ ಆಕರ್ಷಿತನಾಗು ತ್ತಿದ್ದೇನೆ. ನಾನೊಬ್ಬನೇ ಹಾಗಲ್ಲ. ಪಪ್ಪೀ ಕೂಡ ಆ ಹುಡುಗಿಯ ಬಟ್ಟೆಬರೆಗಳ ಬಗ್ಗೆ ತನ್ನ ಪ್ರಶಂಸೆಯನ್ನು ವ್ಯಕ್ತಪಡಿಸುತ್ತಿರುತ್ತಾಳೆ. ನನ್ನ ಅತ್ತಿಗೆ ಕೂಡ ಆಗಾಗ ತನ್ನ ಅಡಿಗೆಮನೆಯಿಂದಲೇ ಪಕ್ಕದ ಮನೆಯ ಕಡೆಗೆ ದೃಷ್ಟಿ ಹೊರಳಿಸುತ್ತಿರುತ್ತಾಳೆ. ನನ್ನ ಅಜ್ಜಿಗಂತೂ ಪಕ್ಕದ ಮನೆಯವರು ಯಾವಾಗ ಏನೇನು ತರಕಾರಿ ಕೊಂಡುಕೊಂಡರು, ಯಾವಾಗ ಒಲೆ ಹೊತ್ತಿಸಿದರು–ಎಂಬುದೆಲ್ಲ ತಿಳಿದಿರುತ್ತದೆ. ನಾವು ಅವರ ಬಗ್ಗೆ ಇಷ್ಟೆಲ್ಲ ಆಸಕ್ತಿ ವಹಿಸಿದ್ದರೂ ಅವರು ನಮ್ಮ ಬಗ್ಗೆ ಎಳ್ಳಷ್ಟೂ ಗಮನ ಕೊಡಬೇಡವೆ?

ಆ ಹುಡುಗಿ ನಮ್ಮ ಕಡೆ ಯಾವಾಗಲೂ ನೋಡುವುದಿಲ್ಲ. ಅವಳ ತಾಯಿತಂದೆಗಳೂ ಅಷ್ಟೆ. ಅವರೊಬ್ಬರೂ ನಮ್ಮ ಕಡೆ ನೋಡುವುದೇ ಇಲ್ಲ. ಬೇಕೆಂತಲೇ ಅವರು ಹಾಗೆ ಮಾಡುತ್ತಿದ್ದಾರೆಂದೂ ಅನಿಸುವುದಿಲ್ಲ. ಇನ್ನು ಅವರು ನಮ್ಮನ್ನು ಮಾತನಾಡಿಸ ಹೋಗುವುದಂತೂ ನಮ್ಮ ಕಲ್ಪನೆಗೂ ಮೀರಿದ ದೂರದ ಮಾತಾಯಿತು. ತಮ್ಮ ಸಂಸಾರದ ವಿಚಾರದಲ್ಲಿ ನಾವು ತಲೆಹಾಕುವುದು ಅವರಿಗೆ ಬೇಕಾಗಿರಲಿಲ್ಲವೆಂದೆನಿಸು ತ್ತದೆ. ಅವರ ಮಟ್ಟಕ್ಕಿಂತ ನಾವು ಕೀಳು ಎಂದು ಪರಿಗಣಿಸಿರಲೂ ಸಾಕು. ನಮ್ಮನ್ನು ಹತ್ತಿರ ಸೇರಿಸಿದರೆ ತಮ್ಮ ಏಕಾಂತಕ್ಕೆ ಹಾಗೂ ಶಾಂತಿಗೆ ಭಂಗಬರುತ್ತದೆ ಎಂದೂ ಸಂದೇಹಪಟ್ಟು ಗಾಬರಿಗೊಂಡಿರಬಹುದು. ಇದು ಎಷ್ಟು ನಿಜ ಎಂದು ಹೇಳುವಂತೆಯೂ ಇಲ್ಲ. ಪಪ್ಪಿಯ ಕಡೆಗೆ ನನ್ನ ಸ್ನೇಹಿತರಾಗಿರುವ ಹುಡುಗರು ಯಾರಾದರೂ ನೋಡಿದಾಗ ನಮ್ಮ ತಂದೆಯ ಮನಸ್ಸಿನಲ್ಲಾಗುವಂತಹ ಕಸಿವಿಸಿ ಆ ಹುಡುಗಿಯ ತಂದೆಯ ಮನಸ್ಸಿ ನಲ್ಲಾಗುವಂತೆ ತೋರುವುದಿಲ್ಲ; ಪಕ್ಕದ ಮನೆಯ ಯೌವನಸ್ಥ ಹುಡುಗ ತನ್ನ ಮಗಳ ಎದೆಯ ಕಡೆ ನೋಡುತ್ತಿದ್ದಾನೆ ಎಂದು ಅವರು ಗಾಬರಿಗೊಳ್ಳುವಂತೆ ಅವರು ಕಾಣು ತ್ತಲೇ ಇಲ್ಲ.

ಅವರ ಮನೆಯಲ್ಲಿ ರೇಡಿಯೋ ಶಬ್ದವೇ ಇಲ್ಲ; ನಮ್ಮಲ್ಲಿ ಆಗಾಗ ಜೋರಾಗಿಯೇ ರೇಡಿಯೋ ಶಬ್ದ ಕೇಳಿಸುತ್ತದೆ. ಅವರ ಮನೆಯ ಮುಂದೆ ಖಾಲಿ ಬಿದ್ದಿರುವ ಸ್ಥಳ ಇದೆ. ಆದರೆ ಹುಲ್ಲಿನ ಒಂದು ಗರಿಯನ್ನೂ ಬೆಳೆಯಗೊಟ್ಟಿಲ್ಲ. ನಮ್ಮ ಮನೆಯ ಮುಂದೆ ಒಳ್ಳೆಯ ಲಾನ್ ಇದೆ; ಪಕ್ಕದಲ್ಲಿಯೇ ತರಕಾರಿಯನ್ನೂ ಒಂದು ಕಡೆ ಬೆಳೆಯುತ್ತೇವೆ; ಒಳ್ಳೆ ಸುಗಂಧ ಚೆಲ್ಲುವ ಹೂಬಳ್ಳಿಗಳೂ ಇವೆ. ಆ ಹುಡುಗಿ ನನ್ನ ತಂಗಿಯ ಜೊತೆಗೋ ಅತ್ತಿಗೆ ಜೊತೆಗೋ ಏಕೆ ಸ್ನೇಹ ಬೆಳೆಸುತ್ತಿಲ್ಲ? ಅವಳ ತಂದೆ-ತಾಯಿಗಳು ಏಕೆ ನಮ್ಮ

ತಂದೆ-ತಾಯಿಗಳ ಜೊತೆಗೆ ಸೇರುವುದಿಲ್ಲ? ತಾವು ಚಹಾ ಕುಡಿಯುವ ಕಪ್ಪು-ಸಾಸರು ಗಳಿಗಿಂತ ನಾವು ಚಹಾ ಕುಡಿಯುವ ಕಪ್ಪು-ಸಾಸರುಗಳು ಚೆನ್ನಾಗಿವೆ ಎಂಬುದನ್ನು ಏಕೆ ನೋಡುವುದಿಲ್ಲ? ತಮ್ಮ ಸಂಪರ್ಕದ ಜನರ ಜೊತೆಗೆ ನಮ್ಮನ್ನೂ ಅವರು ಸೇರಿಸಿ ಕೊಳ್ಳಬೇಕು. ನಮ್ಮ ಎಲ್ಲ ವಸ್ತುಗಳ ವಿಚಾರವಾಗಿ ಅವರು ತಮ್ಮ ಸಂಬಂಧವನ್ನು ಸ್ಥಾಪಿಸಿಕೊಳ್ಳಬೇಕು. ಅವರ ಮನೆಗೂ ನಮ್ಮ ಮನೆಗೂ ಮಧ್ಯೆ ಇರುವ ಫೆನ್ಸ್‌ಗೆ ತಗಲಿ ಕೊಂಡ ಎತ್ತರವಾದ ದೊಡ್ಡ ಹುಣಿಸೆಮರವೊಂದಿದೆ. ಅದರಲ್ಲಿ ಆರು ಆರು ಇಂಚ್ ಉದ್ದದ ಹುಣಿಸೆಕಾಯಿಗಳು ಬಿಟ್ಟಿದ್ದು ನೇತಾಡುತ್ತಿರುತ್ತವೆ. ಹುಣಿಸೆಕಾಯಿ ನೋಡಿ ಹೆಣ್ಣುಮಕ್ಕಳು ಹುಚ್ಚಾಗುತ್ತಾರೆ. ಆದರೆ ಪಕ್ಕದ ಮನೆಯ ಆ ಹುಡುಗಿ ಯಾವತ್ತೂ ಹುಣಿಸೆಕಾಯಿಗಳ ಕಡೆ ನೋಡಿ ಅವುಗಳಿಗಾಗಿ ಆಸೆಪಡುವುದಿಲ್ಲ. ಅವಳು ಯಾವತ್ತೂ ನಮ್ಮ ಹುಣಿಸೆಮರದಿಂದ ಹುಣಿಸೆಕಾಯಿ ಕಿತ್ತು ನನ್ನನ್ನು ಸಂತೋಷಪಡಿಸಲಿಲ್ಲ.

ನನ್ನ ನಿರೀಕ್ಷೆಯಲ್ಲಿ......

ನಮ್ಮ ಪಕ್ಕದ ಮನೆಯವರಿಗೆ ಯಾವತ್ತೂ ಯಾವುದೇ ವಿಚಾರದಲ್ಲಿ ನಮ್ಮ ಸಹಕಾರ ವನ್ನು ಅಪೇಕ್ಷಿಸುವ ಸ್ಥಿತಿಯೇ ಬಂದಿರಲಾರದು. ನಮ್ಮ ಇತರ ನೆರೆಹೊರೆಯ ಜನರ ಮಧ್ಯೆ ಆಗಿಂದಾಗ್ಗೆ ಪರಸ್ಪರ ಸಹಾಯವನ್ನಪೇಕ್ಷಿಸುವ ಸಣ್ಣಪುಟ್ಟ ಪ್ರಸಂಗಗಳು ಬರು ತ್ತಲೇ ಇರುತ್ತವೆ. ಆದರೆ ನಮ್ಮ ಪಕ್ಕದ ಮನೆಯವರಿಗೆ ಅಂತಹ ಪ್ರಸಂಗಗಳೇ ಬಂದಿಲ್ಲ. ಆ ಸ್ಥಿತಿಯಲ್ಲಿ ನಾನು ಯಾವತ್ತೂ ಅವರನ್ನು ನೋಡಿಲ್ಲ. ಹುಡುಗಿಯ ತಂದೆ ಕಷ್ಟ ಗಳನ್ನು ಎದುರಿಸುತ್ತಿರಬಹುದು. ಅವಳ ತಾಯಿ ಕೂಡ ಆಗಾಗ ಕೂಗಾಡಬಹುದು – ಆದರೆ ಇದೊಂದೂ ಇಲ್ಲಿ ನಮ್ಮ ದೃಷ್ಟಿಗೆ ಬೀಳುವುದಿಲ್ಲ, ಕಿವಿಗೂ ಮುಟ್ಟುವುದಿಲ್ಲ. ಹುಡುಗಿಯ ಮನಸ್ಸಿನಲ್ಲಿ ಅವಳಿಗೂ ತನಗೂ ಸಂಬಂಧಪಟ್ಟ ನಿಜವಾದ ಒಂದು ಸಂಬಂಧ ಇರಲೂಬಹುದು. ಆವೇಶಕ್ಕೊಳಪಟ್ಟ ಮನಸ್ಸಿನ ಕಸಿವಿಸಿಯೂ ಇರಬಹುದು. ಅಂತಹ ಯಾವುದೇ ಮನೋವಿಕಾರ ಇಲ್ಲದೆಯೂ ಇರಬಹುದು. ಯಾವುದೂ ಖಂಡಿತವಾಗಿ ಹೀಗೆಯೇ ಎಂದು ಗೊತ್ತಾಗುತ್ತಿಲ್ಲ.

ರಾತ್ರಿಯ ಹೊತ್ತು ಅವರು ಮಲಗುವ ಮಧ್ಯದ ಕೋಣೆಯಲ್ಲಿ ಬಹಳ ಸಮಯದ ವರೆಗೆ ದೀಪ ಹಚ್ಚಿರುತ್ತದೆ. ಅವರು ಎಲ್ಲ ಒಟ್ಟಾಗಿ ಒಂದೇ ಕೋಣೆಯಲ್ಲಿ ಮಲಗುತ್ತಾರೆ. ಮನೆಯ ಒಳಗೂ ಸಹ ಅವರು ಒಟ್ಟಾಗಿ ಕುಳಿತು ಹರಟೆಹೊಡೆಯುತ್ತಿರುತ್ತಾರೆ ಎಂದು ತೋರುತ್ತದೆ. ಎಷ್ಟು ಹರಟಿದರೂ ತೃಪ್ತಿಯಾಗದಷ್ಟು ವಿಷಯಗಳು ಇರಬೇಕು. ಅದನ್ನು ಯೋಚಿಸಿದಾಗ ಒಂದು ದೀರ್ಘ ನಿಟ್ಟುಸಿರು ತಾನಾಗಿಯೇ ಬರುತ್ತದೆ. ನಮ್ಮ ಮನೆಯಲ್ಲಿಯೇ ಹವಾಗುಣದ ಮಾತು ಬರುತ್ತದೆ. ಸೊಳ್ಳೆಗಳ ಕಾಟದ ಮಾತು ಬರು ತ್ತದೆ, ಮಕ್ಕಳು ಹುಟ್ಟಿರುವ ವಿಚಾರ, ಸಂಬಂಧದ ಸೊಸೆಯರ ವಿಚಾರ, ಅಡಿಗೆ ವಿಚಾರ, ನಮ್ಮ ಕಾಲದ ಸಮಸ್ಯೆಗಳು ಹಾಗೂ ಆಗಿಹೋದ ಮಹಾಪುರುಷರ ಗುಣಗಾನ – ಇತ್ಯಾದಿ ವಿಚಾರಗಳೇ ಕಿವಿಗೆ ಬೀಳುತ್ತವೆ.

ನಮ್ಮ ಮತ್ತು ಪಕ್ಕದ ಮನೆಯ ಮಧ್ಯೆ ಇರುವ ಬೇಲಿ ನಾಮಮಾತ್ರದ್ದು. ಒಂದು ಅಡಿ ಎತ್ತರದ ಗೋಡೆಯ ಮೇಲೆ ಈ ಫೆನ್ಸ್ ಇದೆ. ಚಿಕ್ಕ ಚಿಕ್ಕ ಹಣ್ಣುಗಳು ಬಿಡುವ, ಮುಳ್ಳುಗಳಿಂದ ಕೂಡಿದ, ಬೇಲಿ ಅಲ್ಲಿ ಹುಟ್ಟಿದೆ. ಎಲೆಗಳು ತುಂಬಾ ಕಹಿ. ಒಂದು ಕಾಡು ಜಾತಿಯ ಕುರುಚಲು ಗಿಡವನ್ನು ಬೇಲಿಗಾಗಿ ಉಪಯೋಗಿಸಲಾಗಿದೆ. ಅದಕ್ಕೆ ನಾಗಫಣಿ ಎನ್ನುತ್ತಾರೆ. ಹೆಸರು ತಿಳಿಯದ ಇನ್ನು ಕೆಲವು ಗಿಡಗಳೂ ಇವೆ. ಅವುಗಳ ಬೇರಿಗೆ ಗೆದ್ದಲು ಹಿಡಿದುಕೊಂಡಿದೆ. ಎಲೆಗಳು ತುಂಬಾ ಹಸಿರು. ಬೇಲಿಯುದ್ದಕ್ಕೂ ಇರುವ ಮೋಟು ಗೋಡೆ ಅಲ್ಲಲ್ಲಿ ಕಿತ್ತುಹೋಗಿದೆ. ಹೀಗೆ ಕಿತ್ತುಹೋಗಿರುವ ಕಡೆ ಕಾಲುಹಾದಿಗಳು ನಿರ್ಮಾಣವಾಗಿವೆ. ಇವುಗಳ ಮೂಲಕವೇ ಆ ಮನೆಗೂ ನಮ್ಮ ಮನೆಗೂ ಮಧ್ಯೆ ಕೆಲವರು ಓಡಾಡುತ್ತಾರೆ; ತರಕಾರಿ ಮಾರುವವರು, ಹಣ್ಣುಹಂಪಲು ಮಾರುವವರು, ವೃತ್ತಪತ್ರಿಕೆ ಮಾರುವ ಹುಡುಗರು, ಕಕ್ಕಸು ಗುಡಿಸುವವನು ಇವರೆಲ್ಲರಿಗೂ ಈ ದಾರಿಗಳು. ಪೋಸ್ಟ್‌ಮನ್ ಮತ್ತು ಹಾಲುಮಾರುವವರು ಕೂಡ ಹಲವು ವರ್ಷಗಳಿಂದ ಈ ಕಾಲುದಾರಿಗಳನ್ನೇ ಉಪಯೋಗಿಸುತ್ತಿದ್ದಾರೆ: ನಾಯಿ-ಬೆಕ್ಕುಗಳು ಯಾವುದೇ ಆತಂಕವಿಲ್ಲದೆ ಓಡಾಡಲೂ ಇದರಿಂದ ಅನುಕೂಲವಾಗಿದೆ. ಹುಲ್ಲು ಮೇಯಲು ಮತ್ತು ಕಾಂಪೌಂಡಿನಲ್ಲಿರುವ ಇತರ ಹೂಗಿಡಗಳನ್ನು ತಿಂದು ಮುಗಿಸಲು ಬರುವ ದನಕರುಗಳೂ ಇದೇ ಅಡ್ಡದಾರಿಗಳ ಮೂಲಕ ಬಂದು ನಷ್ಟಮಾಡಿ ಹೋಗುತ್ತವೆ. ಈ ಫೆನ್ಸ್ ಎಷ್ಟು ಅನುಕೂಲವಾಗಿದೆಯೆಂದರೆ ಸೈಕಲ್ಲಿನಿಂದ ಇಳಿಯದೆಯೇ ಆ ಕಾಲುದಾರಿಗಳ ಮೂಲಕವಾಗಿ ಸರ್ಕಸ್ ಮಾಡುತ್ತಾ ಒಂದು ಕಡೆಯಿಂದ ಇನ್ನೊಂದು ಕಡೆಗೆ ಹೋಗಬಹುದು. ಮೊದಲು ಹೀಗೆಯೇ ಹೋಗುತ್ತಿದ್ದೆವು. ಈಗ ಹೋಗುವುದಿಲ್ಲ. ಕಾರಣ, ನಮ್ಮ ಹೊಸ 'ಪಡೋಸಿ'ಯ ದೃಷ್ಟಿಯಲ್ಲಿ ಫೆನ್ಸ್ ಎಂಬುದು ಹಾಗೆ ಯಾರೂ ಬರಬಾರದ ಅರ್ಥವನ್ನೇ ಕೊಡುತ್ತದೆ.

ಅವರು ಬಂದು ಮೂರು ತಿಂಗಳಾಗಿದೆ:

ಕುಳಿತು ಓದುವ ಸಲುವಾಗೆಂದು ನಾನು ಆಗಾಗ ನನ್ನ ಮೇಜನ್ನು ಹೊರಗೆ ಹಾಕಿಕೊಳ್ಳುತ್ತಿರುತ್ತೇನೆ. ಬಿಸಿಲುಗಾಲದಲ್ಲಿ ಐಸ್ ಹಾಕಿದ ನೀರು ಎಷ್ಟು ಹಿತಕರವಾಗಿರುತ್ತದೆಯೋ ಹಾಗೆ ಹೊರಗೆ ಕುಳಿತಾಗ ತಂಗಾಳಿ ಆನಂದದಾಯಕವಾಗಿರುತ್ತದೆ. ಆದರೆ ಹೊರಗೆ ಕುಳಿತು ಓದುವುದು ದುಸ್ಸಾಧ್ಯವಾಗುತ್ತದೆ. ನನ್ನ ದೃಷ್ಟಿ ಆಗಾಗ ಫೆನ್ಸಿನ ಆ ಕಡೆಗೆ ಹೋಗುತ್ತದೆ. ಮನಸ್ಸು ನಮ್ಮ ಪಡೋಸಿಯ ಮನೆಯಲ್ಲೆಲ್ಲಾ ಸುತ್ತಾಡತೊಡಗುತ್ತದೆ. ಯುವಾವಸ್ಥೆಯಲ್ಲಿರುವ ಇನ್ನೂ ಮದುವೆಯಾಗದ ಹುಡುಗಿ. ಒಳ್ಳೆ ಆನಂದದಲ್ಲಿರುವ ಒಳ್ಳೇ ಧೈರ್ಯವಂತ ತಂದೆ ತಾಯಿಗಳು. ನಾನೂ ಅವರ ಮನೆಯಲ್ಲಿ ಹುಟ್ಟಿದ್ದರೆ! ಹೀಗೆ ಮನಸ್ಸು ಎಲ್ಲೆಲ್ಲಿಗೋ ಓಡುತ್ತದೆ.

ಆಗೊಮ್ಮೆ ಈಗೊಮ್ಮೆ ಪಕ್ಕದ ಮನೆಯ ಆ ಹುಡುಗಿ ಒಬ್ಬಳೇ ಕುಳಿತಿರುತ್ತಾಳೆ. ಏನಾದರೂ ಕೆಲಸ ಮಾಡುತ್ತಾ ಇಲ್ಲವೆ ಹಾಗೆಯೇ ಕೆಲಸವಿಲ್ಲದೆ ಹಾಯಾಗಿ ಕುಳಿತಿರು

ವುದೂ ಉಂಟು. ಅಲ್ಲಿಯೇ ತಮ್ಮ ಕಾಂಪೌಂಡಿನಲ್ಲಿ ಅಡ್ಡಾಡುತ್ತಾ ನಮ್ಮ ಮನೆಯ ಪಾರ್ಶ್ವದ ಗೋಡೆಯ ತನಕವೂ ಬರುತ್ತಾಳೆ. ಮತ್ತು ಒಮ್ಮೊಮ್ಮೆ ಮೊಣಕೈಗಳ ಮೇಲೆ ಭಾರ ಹಾಕಿ ರಸ್ತೆಯ ಕಡೆಗೆ ನೋಡುತ್ತಿರುತ್ತಾಳೆ. ಸ್ವಲ್ಪ ಹೊತ್ತು ಹಾಗೆ ನೋಡುತ್ತಾ ನಿಂತಿದ್ದು ಹಿಂದಕ್ಕೆ ಬರುತ್ತಾಳೆ. ಹತ್ತಿರದ ಪೋಲಿ ಹುಡುಗರು ನಮ್ಮ ಮೊಹಲ್ಲೆಗೂ ಬಹಳವಾಗಿ ಬರುತ್ತಿರುತ್ತಾರೆ. ನಮ್ಮ ಮೊಹಲ್ಲೆಯಲ್ಲೂ ಪೋಲಿ ಹುಡುಗರ ಸಂಖ್ಯೆ ಯೇನೂ ಕಡಿಮೆ ಇಲ್ಲ. ಆದರೆ ಈ ಹುಡುಗಿಗೆ ಅವರ ಪರವೆಯೇ ಇಲ್ಲವೆನ್ನುವಷ್ಟು ಹಾಯಾಗಿ ಓಡಾಡುತ್ತಿರುತ್ತಾಳೆ; ಅವಳ ಚಿಕ್ಕ ಚಿಕ್ಕ ಸ್ತನಗಳು ತುಂಬಾ ಮೋಹಕವಾಗಿವೆ. ನಮ್ಮ ಮನೆಯ ವಿಷಯವೇ ಬೇರೆ. ಪೂಜೆಗೆ ಬೇಕಾದ ಹೂವು ತರಬೇಕಾದರೂ ನಮ್ಮ ಅತ್ತಿಗೆ ಜೊತೆಗೆ ಪಪ್ಪುವನ್ನು ಕರೆದುಕೊಂಡೇ ಹೋಗುತ್ತಾರೆ. ಹೊರಗಡೆಯೂ ಆಕೆಗೆ ಹೆದರಿಕೆ, ಮನೆಯಲ್ಲೂ ಹೆದರಿಕೆ. ಆಕೆಯನ್ನು ಹೆದರಿಸಿಯೇ ಇಟ್ಟಿದ್ದಾರೆ. ಪಪ್ಪೀ ಚಲನವಲನಗಳ ಮೇಲೂ ಕಣ್ಣಿದ್ದೇ ಇದೆ. ಒಂದು ದಿನ ನಮ್ಮ ನೆರೆಹೊರೆಯ ಹುಡುಗಿಯ ಅಪ್ಪ ತನ್ನ ಹೆಂಡತಿಯ ಹೆಗಲ ಮೇಲೆ ಕೈ ಇಟ್ಟು ಮಾತನಾಡುತ್ತಿದ್ದುದನ್ನು ನೋಡಿದಾಗ ಕೂಡಲೇ ಪಪ್ಪಿಯನ್ನು ಅಲ್ಲಿ ನಿಲ್ಲಗೊಡದೆ ಒಳಗಡೆಗೆ ಕರೆದುಕೊಂಡು ಹೋದರು. ಆ ದೃಶ್ಯವನ್ನು ಕುರಿತು ಆಮೇಲೆ ನಮ್ಮ ಮನೆಯಲ್ಲಿ ಅಲ್ಲೋಲಕಲ್ಲೋಲವೇ ನಡೆದುಹೋಯಿತು. ಎಂಥ ನಾಚಿಕೆಗೇಡಿನ ಪ್ರಸಂಗ ಎಂದುಕೊಂಡರು. ಕ್ರಮೇಣ ನಮ್ಮ ಮನೆಯುವರು ನೆರೆಯ ಆ ಮನುಷ್ಯನನ್ನು ತುಂಬಾ ಕೆಟ್ಟ ಮನುಷ್ಯನೆಂದೇ ಭಾವಿಸತೊಡಗಿದ್ದರು.

ದಿನಗಳಂತೂ ಉರುಳುತ್ತಿವೆ. ಈಗಂತೂ ನಮ್ಮ ಮನೆಯಲ್ಲಿ ನಮ್ಮ ಪಡೋಸಿಯ ಬಗ್ಗೆ ಸಮಾಧಾನಕ್ಕೆ ಬದಲು ಅಸಮಾಧಾನವೇ ಪ್ರಕಟವಾಗುತ್ತಿದೆ. ಅವರ ಇರುವಿಕೆ ಈಗ ನಮಗೆ ಬೇಡವಾಗಿರುವ ಮಟ್ಟಕ್ಕೆ ಹೋಗಿದೆ. ಕ್ರಮೇಣ ಪ್ರಪಂಚದಲ್ಲಿರುವ ಎಲ್ಲ ಕೆಟ್ಟ ವಿಚಾರಗಳಿಗೂ ನಮ್ಮ ಪಡೋಸಿಯ ಉದಾಹರಣೆ ಕೊಡುವ ಮಟ್ಟಕ್ಕೆ ಹೋಗಿದೆ ನಮ್ಮ ಮನೆಯುವರ ತಿರಸ್ಕಾರ. ನಮ್ಮ ದೃಷ್ಟಿ ಸಾವಿರ ಸಲ ಫೆನ್ಸಿನ ಆ ಕಡೆಗೆ ಹೋಗುತ್ತದೆ. ನಮ್ಮ ದಿನನಿತ್ಯದ ಬೇಕು ಬೇಡವಾದ ಹಲವು ಕೆಲಸಗಳ ಮಧ್ಯೆ ಇದೂ ಒಂದಾಗಿದೆ. ಇತರ ಅನೇಕ ಚಿಂತೆಗಳ ಮಧ್ಯೆ ಈ ಹೊಸ ಉದ್ವಿಗ್ನತೆಯೂ ಒಂದು ಸೇರಿಕೊಂಡಿದೆ. ಇದರ ಹಿಂದೆ ಬಿದ್ದು ನಾನೂ ಎಷ್ಟೋ ಸಮಯವನ್ನು ಹಾಳುಮಾಡುತ್ತೇನೆ. ಆದರೆ ಆ ಕಡೆಯಿಂದ ಯಾರೊಬ್ಬರ ದೃಷ್ಟಿಯೂ ಈ ಕಡೆ ಬೀಳುವುದೇ ಇಲ್ಲ.

ಹತ್ತಿರದಲ್ಲಿಯೇ ಎಲ್ಲೋ ಔಟರ್ ಸಿಗ್ನಲ್ ಬೀಳದೆ ಡೀಜಿಲ್ ಎಂಜಿನ್ ಕಿರುಚಿಕೊಳ್ಳುತ್ತಿದೆ. ಅದರ ಕೂಗಿನ ವಿಚಿತ್ರ ರೀತಿ ನಮ್ಮನ್ನು ಹೊಡೆದೆಬ್ಬಿಸುವ ರೀತಿಯಲ್ಲಿದೆ. ನಾವೆಲ್ಲ ಸ್ವಲ್ಪ ಹೊತ್ತು ಆ ಎಂಜಿನ್ ಕೂಗುವ ವಿಚಾರವಾಗಿಯೇ ಮಾತನಾಡುತ್ತಿದ್ದೇವೆ.

ಈದಿನ ನಮ್ಮ ಪಡೋಸಿ ಬೆಳಿಗ್ಗೆಯಿಂದಲೂ ಮನೆಯಲ್ಲಿಲ್ಲ. ಅವರ ಮನೆಗೆ ಇಬ್ಬರು–ಮೂವರು ನೆಂಟರು ಬಂದಿರುವಂತಿದೆ. ಆದರೂ ಯಾವುದೇ ರೀತಿಯ ಗಲಾಟೆ ಇಲ್ಲ.

ಎಂದಿನಿಂದಲೂ ಇರುವ ಸ್ಥಿತಿಯೇ ಈಗಲೂ ಇದೆ. ನಾನು ಎದ್ದು ಮನೆಯೊಳಗೆ ಹೋದೆ. ನನ್ನ ಅತ್ತಿಗೆ ಕೂದಲು ಒಣಗಿಸಿಕೊಳ್ಳುತ್ತಿದ್ದಾರೆ. ನಮ್ಮ ಪಕ್ಕದ ಮನೆ ಹುಡುಗಿಗೂ ನನಗೂ ಸಂಬಂಧ ಜೋಡಿಸಿ ಅವರು ತಮಾಷೆ ಮಾಡಿದರೆಂಬುದು ನನಗೆ ತಿಳಿಯದು. ನಾನು ಮನಸ್ಸಿನಲ್ಲೇ ನಗುತ್ತಾ ಹೊರಗೆ ಬಂದುಬಿಟ್ಟೆ. ನಾನು ಹಾಗೆ ಬರುವುದಕ್ಕೂ ನಮ್ಮ ಪಕ್ಕದ ಮನೆಯ ಹುಡುಗಿ ಹಾಗೂ ಅವಳ ತಾಯಿ ಇಬ್ಬರೂ ಪ್ಯಾಕ್ ಆದ ಸಾಮಾನುಗಳನ್ನು ಹೊತ್ತುಕೊಂಡು ಪ್ರಾಯಶಃ ಬಾಜಾರಿನಿಂದ ವಾಪಸ್ಸು ಬರುವುದಕ್ಕೂ ಒಂದಾಯಿತು. ತಂದೆ ಓಂದೆಯೇ ಉಳಿದಿರಬೇಕು.

ಆ ಸಂಜೆ ಹಾಗೂ ಮಾರನೆಯ ದಿನ ಬೆಳಿಗ್ಗೆಯೂ ಅವರ ಮನೆಗೆ ಜನ ಬಂದು ಹೋಗುತ್ತಿದ್ದರು. ಆದರೆ ಅಂತಹ ಯಾವುದೇ ವಿಶೇಷವಿರುವಂತೆ ಕಾಣುತ್ತಿರಲಿಲ್ಲ. ಆದರೂ ಯಾವುದೋ ಹೊಸ ವಾತಾವರಣ ಇತ್ತು – ಸಡಗರವೇನೂ ಇಲ್ಲದ ಸಾಧಾರಣ ವಿಶೇಷ ಸಂದರ್ಭವಿರಬೇಕು ಎಂದುಕೊಂಡೆವು. ಆದರೆ ಹಾಲಿನವನು ಬಂದು ನಿನ್ನೆ ರಾತ್ರಿ ಆ ಹುಡುಗಿಯ ಮದುವೆ ಆಯಿತು ಎಂದು ಹೇಳಿದಾಗ ನಮಗೆ ಆಶ್ಚರ್ಯವೇ ಆಯಿತು. ಅವಳನ್ನು ಮದುವೆಯಾಗಿದ್ದ ಹುಡುಗ ಇಲ್ಲಿಯೇ ಮಿಲಿಟರಿಯಲ್ಲಿರುವ ಒಬ್ಬ 'ಬಾಬೂ'. ಆರ್ಯಸಮಾಜದ ಪದ್ಧತಿಯ ಪ್ರಕಾರ ಮದುವೆ ನಡೆದಿದೆ. ಅತ್ತಿಗೆ ನನ್ನ ಕಡೆಗೆ ಹಾಸ್ಯ ಮಾಡುವ ದೃಷ್ಟಿಯಿಂದ ನೋಡಿದಾಗ ನನಗೆ ನಗುಬಂತು. ನಾವೆಲ್ಲ ಎಷ್ಟು ಬೇಸ್ತು ಬಿದ್ದಿದ್ದೆವು ಎನಿಸಿ ನನಗೆ ಜೋರಾಗಿ ನಗು ಬಂತು.

ಅವರ ಮನೆಗೆ ಆಗಾಗ ಒಬ್ಬಿಬ್ಬರು ಬರುತ್ತಿದ್ದರು. ಅವರು ಮನೆಯೊಳಕ್ಕೆ ಹೋಗಿ ಸ್ವಲ್ಪ ಹೊತ್ತಿದ್ದು ಮತ್ತೆ ಹೊರಟುಹೋಗುತ್ತಾರೆ. ಬರುವವರು ಬಹುಮಟ್ಟಿಗೆ ಗಂಭೀರ ಪ್ರವೃತ್ತಿಯವರಾಗಿದ್ದು ಶಿಷ್ಟಾಚಾರ ಪಾಲಿಸುವವರು. ಕೆಲವೊಮ್ಮೆ ಮಕ್ಕಳೂ ಒಟ್ಟೊಟ್ಟಿಗೆ ಬಂದು ಕಿಲಕಿಲನೆ ನಗುತ್ತಾ ಅಲ್ಲಿ ಓಡಾಡುವುದೂ ಉಂಟು. ಆದರೆ ಆ ಮಕ್ಕಳ ಗಲಾಟೆ ಇಲ್ಲ. ಪ್ರತಿಯೊಂದೂ ತುಂಬಾ ಸರಳವಾಗಿ ಸುವ್ಯವಸ್ಥೆಯಿಂದ ನಡೆಯುತ್ತಿರುವಂತೆ ಭಾಸವಾಗುತ್ತದೆ. ಏನೇನು ಯಾವ ರೀತಿ ನಡೆಯಿತು ಎಂಬ ಸುಳಿವೂ ಸಿಗದು. ಇವೊತ್ತು ನಮ್ಮ ಮನೆಯಲ್ಲಂತೂ ತುಂಬಾ ಏನೋ ನಡೆಯಬಾರದ್ದು ನಡೆದುಹೋಗಿದೆ ಎನ್ನುವಂತಹ ದಿನ. ಎಷ್ಟೋ ಗಂಟೆಗಳ ನಂತರ ಹುಡುಗಿ ಹೊರಗೆ ಬಂದಳು. ಪ್ರಾಯಶಃ ಮೊದಲನೆಯ ಬಾರಿ ಅವಳು ಸೀರೆಯನ್ನು ಉಟ್ಟಿದ್ದಳು. ಸೀರೆಯನ್ನು ಸರಿಮಾಡಿಕೊಳ್ಳುತ್ತಾ ಕೈಯಲ್ಲಿ ಒಂದು ತೆಂಗಿನ ಕಾಯಿಯನ್ನು ಹಿಡಿದುಕೊಂಡು ಹೊರಗಿನ ಪಡಸಾಲೆಗೆ ಬಂದಿದ್ದಾಳೆ. ಅವಳು ಚಟುವಟಿಕೆಯಿಂದಲೇ ಇದ್ದಾಳೆ. ಸೀರೆಯಿಂದ ಮುಚ್ಚಿಹೋಗಿರುವ ಅವಳ ಸುಂದರ ಹೆಜ್ಜೆಗಳು ಬಹಳ ಚಿಕ್ಕದಾಗಿ ಕಾಣುತ್ತಿವೆ. ಪ್ರತಿ ಸಲವೂ ಮುಂದೆ ನೋಡಿಕೊಂಡು ಹೆಜ್ಜೆಯನ್ನಿಡುತ್ತಿರುವಂತೆ ಕಾಣುತ್ತದೆ. ಯಾರನ್ನಾಗಲಿ ಅಪ್ಪಿಕೊಂಡುಹೋಗುವುದಾಗಲಿ ಪತಿಯ ಜೊತೆಗೆ ಹೋಗುವಾಗ ಸಾಮಾನ್ಯವಾಗಿ ಹೆಣ್ಣು ಮಕ್ಕಳಲ್ಲಿ ಕಾಣುವ ನಾಚಿಕೆಯಾಗಲಿ ಕಾಣುತ್ತಿಲ್ಲ. ಅವಳ ಪತಿಯ ಮುಖ ನನ್ನ ಯಾರೋ

ಸ್ನೇಹಿತನ ಮುಖದಂತೆಯೇ ಕಾಣುತ್ತಿದೆ. ಯಾರೂ ಅಳುತ್ತಿಲ್ಲ. ಹುಡುಗಿಯ ತಾಯಿ ಮಗಳ ಎರಡೂ ಕೆನ್ನೆಗಳಿಗೆ ಪ್ರೀತಿಯಿಂದ ಹಲವು ಬಾರಿ ಮುತ್ತಿಟ್ಟಿದ್ದಾಳೆ. ತಂದೆ ಅವಳ ತಲೆಯನ್ನು ನೇವರಿಸುತ್ತಿದ್ದಾರೆ. ಈಗ ಹುಡುಗಿಯ ಕಣ್ಣುಗಳಲ್ಲಿ ತಂದೆತಾಯಿಗಳನ್ನು ಬಿಟ್ಟುಹೋಗುವ ವೇದನೆ ಕಾಣಿಸಿಕೊಳ್ಳುವ ರೂಪದಲ್ಲಿ ಒತ್ತಟ್ಟಿ ಬಂದಿರುವ ನೀರಿನ ಪದರದ ಹೊಳಪು ಕಾಣಿಸುತ್ತಿದೆ; ಜೊತೆಗೆ ಹೊಸ ಜೀವನದ ಉತ್ಸಾಹ ಕೂಡ ಕಾಣದೆ ಇಲ್ಲ.

ಫೆನ್ಸಿನ ಒಂದು ಕಡೆಯಿಂದ ಇನ್ನೊಂದು ಕಡೆಗೆ ಅಲೆಗಳು ಓಡಾಡುತ್ತಿವೆ. ಹುಡುಗಿ ಅತ್ತಿಲ್ಲ ಎಂದು ನನ್ನ ಅಮ್ಮ ನನ್ನೊಡನೆ ತನ್ನ ಆಶ್ಚರ್ಯವನ್ನು ವ್ಯಕ್ತಪಡಿಸುತ್ತಿದ್ದಾಳೆ. ಓದಿದ ಹುಡುಗಿಯರು ತುಂಬಾ ಕಠೋರ ಮನಸ್ಸಿನವರಾಗುತ್ತಾರೆ ಎಂಬುದು ಅವಳ ಅಭಿಪ್ರಾಯ. ಅದರಿಂದಲೇ ಅವರಿಗೆ ತಂದೆ ತಾಯಿಗಳೆಂಬ ವ್ಯಾಮೋಹ ಇರುವುದಿಲ್ಲ. "ಇವೊತ್ತಿನ ಹುಡುಗಿಯರೇ ಹೀಗೆ... ಹೊಟ್ಟೆಬಟ್ಟೆ ಕಟ್ಟಿ ಇವರನ್ನು ಸಾಕಿ ಸಲಹುವ ಅವರಿಗಾಗಿ ಎರಡು ಹನಿ ಕಣ್ಣೀರು ಕೂಡ ಹಾಕುವುದಿಲ್ಲ."

ಇಂತಹ ಮಾತುಗಳನ್ನು ಕೇಳಲು ನನ್ನ ಕಿವಿಗಳಿಗೆ ರುಚಿಸುವುದಿಲ್ಲ. ಬಿಸಿಲು ಕಾಯಿಸಿಕೊಳ್ಳುವುದು ನನ್ನ ತಾಯಿಗೆ ಹಿತವಾಗಿದೆ. ಬಿಸಿಲು ಯಾವ ಯಾವ ಕಡೆಗೆ ಸರಿಯುತ್ತದೆಯೋ ಆ ಕಡೆಗೆ ಅವಳೂ ಸರಿದು ಕೂರುತ್ತಿದ್ದಾಳೆ. ಆಗ ನನ್ನ ತಂದೆ ಸ್ಮೃತಿಪೂರ್ವ ವಿಚಾರವೊಂದನ್ನು ಮಂಡಿಸುತ್ತಾರೆ. "ಹಿಂದಿನ ಕಾಲದಲ್ಲಿ ಹುಡುಗಿಯರು ಊರಿನ ಗಡಿ ದಾಟುವವರೆಗೂ ಅಳುತ್ತಲೇ ಇರುತ್ತಿದ್ದರು. ಯಾರು ಅಳುತ್ತಿರಲಿಲ್ಲವೋ ಅವರನ್ನು ಹೊಡೆದು ಬಡಿದು ಅಳಿಸುತ್ತಿದ್ದರು. ಹಾಗೆ ಅಳದೆ ಹೋದರೆ ಗಂಡನ ಮನೆಯಲ್ಲಿ ಅವರ ಜೀವನ ಸುಖಮಯವಾಗುತ್ತಲೇ ಇರಲಿಲ್ಲ". ಪರಿಸ್ಥಿತಿ ಇವೊತ್ತು ಹಾಗಿಲ್ಲವಲ್ಲ ಎಂದು ತಂದೆಯವರಿಗೆ ತುಂಬಾ ವ್ಯಥೆಯಾಗಿದೆ. ಹಳೆಯ ಕಾಲ ಹೋಗುತ್ತಿದೆ. ಮನುಷ್ಯನ ಮನಸ್ಸು ಯಂತ್ರವಾಗಿಹೋಗುತ್ತಿದೆ – ಕೇವಲ ಯಂತ್ರ. ಇಂತಹ ಸಂಬಂಧಗಳಲ್ಲಿ ಯಾವಾಗಲೂ ತಂದೆಯ ಸ್ವರ ಗಡುಸಾಗುತ್ತದೆ ಮತ್ತು ಅವರ ಕಣ್ಣುಗಳಲ್ಲಿ ಕಲಿಯುಗದ ನಡೆವಳಿಕೆಗಳ ಬಗ್ಗೆ ತಿರಸ್ಕಾರ ತಾಂಡವವಾಡುತ್ತದೆ.

ನಮ್ಮ ಮನೆಯ ಮೇಲಿನ ಆಕಾಶದಲ್ಲಿ ಕೆಲವು ಮೋಡಗಳು ಹಾದುಹೋಗಿವೆ. ಪಕ್ಕದ ಮನೆಯ ಹುಡುಗಿಯನ್ನು ಗಂಡನ ಮನೆಗೆ ಕಳುಹಿಸಿಕೊಡಲು ಅವಳ ತಂದೆ ತಾಯಿಗಳು ಮನೆಯ ಬಾಗಿಲ ಬಳಿ ಬಂದಿದ್ದಾರೆ. ಹುಡುಗನ ಕಡೆಯವರು ಸೊಸೆಯನ್ನು ಕರೆದುಕೊಂಡು ಹೋಗಲು ಹೆರಾಲ್ಡ್ ಕಾರನ್ನು ತಂದಿದ್ದಾರೆ. ಹೆರಾಲ್ಡ್ ಗಾಡಿ ಒಂದು ವರ್ಣರಂಜಿತ ಕೋಣೆಯಂತೆ ಕಾಣುತ್ತಿದೆ. ಅದು ಈಗ ನಿಧಾನ ಚಲಿಸತೊಡಗಿದೆ. ಈಗ ಹೊರಟುಹೋಯಿತು.

ಎಲ್ಲರಿಗಿಂತ ಹೆಚ್ಚಿನ ಆತಂಕ ಅಜ್ಜಿಯದು. ತನ್ನಲ್ಲಿ ತಾನು ಏನೇನೋ ಬಡಬಡಿಸುತ್ತಿದ್ದಾಳೆ. ನಮ್ಮ ಪಕ್ಕದ ಮನೆಯಲ್ಲಿ ನಡೆದ ಮದುವೆ ಅವಳಿಗೆ ಯಾವ ರೀತಿಯಲ್ಲೂ

ಅರ್ಥವೇ ಆಗುತ್ತಿಲ್ಲ. ಬಾಜಾಬಜಂತ್ರಿ, ಧೂಮ್‌ಧಾಮ್, ಅಡಿಗೆಯ ಸಂಭ್ರಮ, ಒಂದೂ ಇಲ್ಲ. ಇಂತಹ ಕಂಜೂಸಿ ವ್ಯವಹಾರ ಇರಕೂಡದು. ನೆರೆಹೊರೆಯವರನ್ನು ಕರೆಯುವುದೂ ಬೇಡವೇ? ಇದೆಂತಹ ವ್ಯವಹಾರದ ಜನ. ರಾಮ, ರಾಮ!

ಅವರು ಹುಡುಗಿಯನ್ನು ಕಳುಹಿಸಿಕೊಟ್ಟು ಹಿಂದಕ್ಕೆ ಬಂದಿದ್ದಾರೆ. ಒಂದೊಂದು ಕುರ್ಚಿಯನ್ನು ಎಳೆದುಕೊಂಡು ಹೊರಗಡೆಯೇ ಕುಳಿತುಬಿಟ್ಟಿದ್ದಾರೆ. ಹುಡುಗಿಯನ್ನು ಕಳುಹಿಸಿಕೊಟ್ಟ ಮೇಲೆ ಅವಳ ತಾಯಿಗೆ ಮನಸ್ಸು ವ್ಯಗ್ರವಾಗಿದೆ. ಕೆಲವರು ಸಮೀಪವಲ್ಲಿ ನಿಂತುಕೊಂಡು ಅವಳಿಗೆ ಸಮಾಧಾನ ಹೇಳುತ್ತಿದ್ದಾರೆ. ನನ್ನ ಸ್ನೇಹಿತ ರಾಘು ದಾವೆ ಆ ಹುಡುಗಿಯ ಬಗ್ಗ ಆಡಿದ್ದ ಮಾತು ಜ್ಞಾಪಕಕ್ಕೆ ಬರುತ್ತದೆ. ಅವಳು ಲೋಕ ನೋಡಿದವಳು ಎಂಬುದನ್ನು ಮನದಟ್ಟು ಮಾಡಿಕೊಡಲು ಅವನು ಹೊರಟಿದ್ದ. ನನ್ನ ಮಟ್ಟಿಗೆ ಹೇಳುವುದಾದರೆ ಈಗ ಆಗಿರುವ ಯಾವುದೋ ಭಾರಿ ಕೊರತೆಯಿಂದಾಗಿ ಮನಸ್ಸು ವ್ಯಗ್ರಗೊಂಡಿದೆ. ಬರಿದೋ ಬರಿದಾಗಿರುವ ಅನುಭವ ಈಗ ನನ್ನ ಪಾಲಿನದು. ವಿಮುಖನಾಗಿ ನಿಲ್ಲುವುದರಿಂದ ಈ ಶೂನ್ಯ ಸ್ಥಿತಿ ಬಂದಿರಬಹುದು ಅಥವಾ ರಾಘು ಆ ಹುಡುಗಿಯ ಬಗ್ಗ ಆಡಿದ್ದ ಬೇಜವಾಬ್ದಾರಿ ಮಾತಿನಿಂದಾಗಿಯೂ ಅಂತಹ ಒಂದು ಶೂನ್ಯಸ್ಥಿತಿ ಉಂಟಾಗಿರಬಹುದು. ಹುಡುಗಿಯ ಕೆಟ್ಟ ನಡತೆಯನ್ನು ಪ್ರಸ್ತಾಪಿಸಿ ಆಡುವ ಮಾತುಗಳೂ ಕೆಲವು ವೇಳೆ ಅವಳು ಪತಿತಳು ಎಂಬ ವಿಶ್ವಾಸ ಮೂಡಿಸುವುದುಂಟು. ಪ್ರಾಯಶಃ ನಾನೂ ನನ್ನ ಮನೆಯವರಂತೆ ಮನಸ್ಸಿನ ಯಾವುದೋ ಮೂಲೆಯಲ್ಲಿ ಪಕ್ಕದ ಮನೆಯವರ ಬಗ್ಗ ಅಸಹನೆಯ ಭಾವನೆಯನ್ನು ತುಂಬಿಕೊಂಡಿರಬೇಕು.

ಸಂಜೆ ಕಳೆದು ರಾತ್ರಿಯಾಗುತ್ತಿದೆ. ಫೆನ್ಸಿನ ಆ ಕಡೆ ಟೇಬಲಿನ ಸುತ್ತ ಕುಳಿತ ಜನ ಒಬ್ಬೊಬ್ಬರಾಗಿ ಎದ್ದುಹೋಗಿದ್ದಾರೆ. ಎಂದಿನಂತೆ ಮಧ್ಯದ ಕೋಣೆಯಲ್ಲಿ ದೀಪ ಹಾಕಲಾಗಿದೆ. ಬಾಗಿಲ ಮೇಲೆ ಮಂದ ಬೆಳಕು ಬೀಳುತ್ತಿದೆ. ಅವರ ರಾತ್ರಿ ಎಂದಿನಂತೆ ಶಾಂತವಾಗಿ ಮತ್ತು ನಿಯಮಾನುಸಾರವಾಗಿ ಕಳೆಯತೊಡಗಿದೆ. ಮನೆಯಲ್ಲಿ ಒಬ್ಬರು ಕಡಿಮೆಯಾಗಿರುವ ಬಗ್ಗೆ ಅವರಿಗೆ ಹೇಗೆ ಅನಿಸುತ್ತಿದೆಯೋ ತಿಳಿಯದು. ನಮ್ಮ ಮನೆಯಂತೂ ಪಕ್ಕದ ಮನೆಯವರ ನಿಂದೆಯಲ್ಲಿ ತೊಡಗಿರುವ ಬಾಜಾರಿನಂತಾಗಿದೆ.

ಭೋಲಾಬಾಬು ಅವರು ಕೆಲಸದಿಂದ ನಿವೃತ್ತರಾಗಿ ಇನ್ನೂ ಒಂದು ವಾರ ಕೂಡ ಆಗಿರಲಿಲ್ಲ. ಅಷ್ಟರಲ್ಲಿ ಒಂದು ಘಟನೆ ನಡೆದುಹೋಯಿತು.

ಕೊಠಡಿಯಲ್ಲಿ ಬಿದ್ದುಕೊಂಡು ವೃತ್ತಪತ್ರಿಕೆ ಓದುತ್ತಾ ಕಾಲ ಕಳೆಯುತ್ತಿದ್ದರು. ಒಂದು ದಿನ ಸಂಜೆ ಕಿಟಕಿಯಿಂದ ಸೂರ್ಯನ ಒಂದು ಕಿರಣ ಬಂದು ಅವರ ಬೋಳು ತಲೆಯ ಮೇಲೆ ಬೀಳುತ್ತಿತ್ತು – ಹಸುಗೂಸಿನ ಮೃದುವಾದ ಹಸ್ತದ ಮೇಲೆ ಬಿಸಿ ಕಿರಣ ಬೀಳುವ ರೀತಿಯಲ್ಲಿ. ಮಲಗಿಕೊಂಡಿದ್ದ ಭೋಲಾಬಾಬು ಎದ್ದು ಕುಳಿತರು. ನೋಡು ತ್ತಾರೆ, ಸೂರ್ಯ ಬೆಟ್ಟದ ಆಚೆ ಎಲ್ಲೋ ಹೊರಟುಹೋಗಿದ್ದಾನೆ. ಆದರೆ ಅವನ ಕಿರಣ ಮಾತ್ರ ಅವರ ತಲೆಯ ಮೇಲೇ ಇದೆ.

ಅವರು ಅಲ್ಲಿಂದೆದ್ದರು. ಎದ್ದು ತಮ್ಮ ಕೈಯನ್ನು ಎದುರುಗಡೆಯ ಗೋಡೆಯ ಮೇಲೆ ಇಟ್ಟು ನೋಡಿದರು. ಸ್ವಲ್ಪ ಹೊತ್ತಿಗೆ ಮುಂಚೆ ಈ ಗೋಡೆಯ ಮೇಲೂ ಸೂರ್ಯನ ಹೊಂಬೆಳಕು ಇತ್ತು. ಅಂತೆಯೇ ಭೋಲಾಬಾಬುಗಳು ಅಲ್ಲಿ ಕೈಯಿಟ್ಟಾಗ ಸ್ವಲ್ಪ ಬಿಸಿ ತಾಕಿತು. ಅವರು ಅಲ್ಲಿಂದ ಕೈ ತೆಗೆದು ತಮ್ಮ ಕೆನ್ನೆಯ ಮೇಲೆ ಇಟ್ಟುಕೊಂಡರು. ಕೆನ್ನೆಯ ಚರ್ಮ ಅವರ ಹಸ್ತಭಾಗದಿಂದ ಒಂದು ಇಂಚಿನಷ್ಟು ಒಳಗೆ ಹೋಗಿದ್ದುದು ಅವರ ಗಮನಕ್ಕೆ ಬಂತು. ತುಂಬಾ ಕಸಿವಿಸಿಯಾಯಿತು. ಕೂಡಲೇ ಹೊರಗೆ ಹೊರಟರು.

ಹೊರಗೆ ನೋಡುತ್ತಾರೆ. ಹಸಿರು ಹುಲ್ಲು ಕೆಂಪಾಗಿ ಕಾಣುತ್ತಿದೆ. ಹೊರಗಿನ ಗೋಡೆ ಗಳೆಲ್ಲ ಕೆಂಪುಕೆಂಪಾಗಿವೆ. ಬೇಗ ಬೇಗ ಕಾಲು ಹಾಕುತ್ತಾ ಇನ್ನೊಂದು ಗೋಡೆಯ ಸಮೀ ಪಕ್ಕೆ ಹೋದರು. ಅಲ್ಲಿಯೇ ನಿಂತರು. ನಿಂತು ಆಕಾಶದತ್ತ ನೋಡಿದರು. ಇಲ್ಲಿಗೆ ಸೂರ್ಯ ಕಾಣಿಸುತ್ತಿದ್ದ – ಬೆಟ್ಟಗಳ ಆಚೆ, ಆಕಾಶದ ಮೋಡಗಳ ಸಮೀಪದಲ್ಲಿ; ಎತ್ತರಕ್ಕೆ ಕಾಣುವ ತಾಳೆಮರಗಳ ಮಧ್ಯದಲ್ಲಿ. ಭೋಲಾಬಾಬು ಈಗ ತಮ್ಮ ಮೈಯನ್ನೇ ಒಮ್ಮೆ ದಿಟ್ಟಿಸಿ ನೋಡಿಕೊಂಡರು. ಬಿಳಿಯ ಬಣ್ಣದ ತಮ್ಮ ಉಡುಪು ಗುಲಾಬಿ ಬಣ್ಣಕ್ಕೆ ತಿರುಗಿದೆ. ಮುಗುಳ್ನಕ್ಕು ಹೇಳಿದರು: "ನೋಡಿ, ಈ ಜಗತ್ತಿನಲ್ಲಿ ಏನೇನಿದೆ, ಎಷ್ಟೆಷ್ಟು ಒಳ್ಳೆಯ ವಸ್ತುಗಳಿವೆ!"

ಮತ್ತೊಮ್ಮೆ ಅವರು ಗೋಡೆಯ ಹೊರಕ್ಕೆ ದೃಷ್ಟಿ ಹಾಯಿಸಿ ಆ ಕಡೆ ಈ ಕಡೆ ನೋಡಿದರು. ದೂರದಲ್ಲಿ ಕಾಣುತ್ತಿದ್ದ ಹರಿಜನರ ಗುಡಿಸಲುಗಳ ಕಡೆಗೂ ಅವರ ದೃಷ್ಟಿ ಹೋಯಿತು. ನೋಡುತ್ತಾರೆ, ಆ ಗುಡಿಸಲುಗಳು ಉದ್ದುದ್ದಕ್ಕೆ ಕಾಣಿಸುತ್ತಿವೆ. ಮಂದಿರದ ಬಳಿ ಒಂದು ಹಸು ನಿಂತಿದೆ ಮತ್ತು ತನ್ನ ಬಾಲದಿಂದ ಚಾಮರ ಹಾಕುತ್ತಿದೆ. ಹಸುವನ್ನು

ಅವರು ಲಕ್ಷ್ಯವಿಟ್ಟು ನೋಡುತ್ತಾರೆ – ಅದರ ಬಣ್ಣ ಕೆಂಪೋ ಬಿಳಿಯದೋ ಅವರು ಖಚಿತವಾಗಿ ಹೇಳಲಾಗಲಿಲ್ಲ. ಇದೆಷ್ಟು ಆಶ್ಚರ್ಯ! ಅವರಿಗೇ ನಗು ಬಂತು.

ಭೋಲಾಬಾಬುಗಳ ಗಮನ ಥಟ್ಟನೆ ಈಗ ಮುಳುಗುತ್ತಿರುವ ಸೂರ್ಯನ ಕಡೆಗೆ ಹೋಯಿತು. ಸೂರ್ಯ ದುಂಡಗಿದ್ದು ಆ ಗೋಲಾಕಾರ ದೊಡ್ಡದು ಚಿಕ್ಕದು ಆಗುತ್ತಿದ್ದಂತೆ ಅವರಿಗೆ ಭಾಸವಾಯಿತು. ಜೊತೆಗೆ ಅದು ಕಂಪಿಸುತ್ತಿರುವಂತೆಯೂ ಕಂಡಿತು.

"ಬಚ್ಚೀ ಕೀ ಮಾಂ," ಅವರು ಹೆಂಡತಿಯನ್ನು ಕೂಗಿದರು.

ಯಾವ ಉತ್ತರವೂ ಬರಲಿಲ್ಲ.

"ಬಚ್ಚೀ ಕೀ ಮಾಂ," ಮತ್ತೊಮ್ಮೆ ಜೋರಾಗಿ ಕೂಗಿದರು.

"ಏನಾಯಿತು ಅಂದ್ರೆ?" ಸೆರಗಿನಿಂದ ಕೈ ಒರೆಸಿಕೊಳ್ಳುತ್ತಾ ಬಂದ ಅವರ ಹೆಂಡತಿ ಕೇಳಿದರು.

"ಸ್ವಲ್ಪ ಈ ಕಡೆ ಬರಬಾರದೆ?"

ಬಚ್ಚೀ ಕೀ ಮಾಂ ಓಡಿ ಹೋಗಿ ಅವರ ಪಕ್ಕದಲ್ಲಿ ನಿಂತುಕೊಂಡದ್ದೂ ಆಯಿತು.

"ಮುಂದೆ, ಅಲ್ಲಿ ನೋಡು."

ಆಕೆ ಬೀದಿಯ ಕಡೆಗೆ ನೋಡಿದರು.

"ಬೀದಿಯ ಕಡೆ ಅಲ್ಲ, ಅಲ್ಲಿ ದೂರದಲ್ಲಿ ನೋಡು – ತಾಳೆಮರಗಳ ಹಿಂಭಾಗಕ್ಕೆ...

ಆಕೆ ಕತ್ತೆತ್ತಿ ನೋಡಿದರು. ಅನಂತರ ಭೋಲಾಬಾಬುಗಳ ಕಡೆಗೆ ಹಿಗ್ಗಿನಿಂದ ಮುಖ ತಿರುಗಿಸಿದರು.

"ಎಷ್ಟು ಚೆನ್ನಾಗಿದೆ!" ಭೋಲಾಬಾಬು ಗದ್ಗದಸ್ವರದಲ್ಲಿ ಹೇಳಿದರು.

"ಹೌದು, ಬಹಳ ಚೆನ್ನಾಗಿದೆ," ಎಂದು ಅವರ ಹೆಂಡತಿ ಮರುದನಿ ಕೊಟ್ಟರು.

ಏನು ಚೆನ್ನಾಗಿದೆ ಎಂದೆ?" ಎಂದು ಭೋಲಾಬಾಬು ಬಲಭಾಗಕ್ಕೆ ತಿರುಗಿದರು.

"ಇಟ್ಟಿಗೆಗಳನ್ನು ಹೊತ್ತ ಕತ್ತೆಗಳ ಸಾಲು; ಅದರ ಹಿಂದೆ ಹೋಗುತ್ತಿರುವ ಜನ."

ಭೋಲಾಬಾಬುಗಳಿಗೆ ಜೋರಾಗಿ ನಗು ಬಂತು.

"ಎಷ್ಟೇ ಆಗಲಿ ಹೆಂಗಸಿನ ಜಾತಿ ನಿನ್ನದು. ಕತ್ತೆಗಳು ಕುದುರೆಗಳ ವಿನಾಃ ನೀನು ಇನ್ನೇನು ತಾನೇ ನೋಡಬಲ್ಲೆ?"

"ಇಂಥದನ್ನು ನೋಡು ಎಂದು ಹೇಳಬಾರದೆ?"

"ನೀನೇನನ್ನೂ ನೋಡಬೇಡ. ಹೋಗು. ಹೋಗಿ ಅಡಿಗೆಮನೆ ಕೆಲಸ ನೋಡು ಹೋಗು."

"ಇಲ್ಲಾಂದ್ರೆ, ಅದೇನು ನನಗೂ ತೋರಿಸಬಾರದೆ?" ಎಂದು ಆಕೆ ಹಟಹಿಡಿದರು.

"ಏನು ತೋರಿಸಲಿ, ನಿನ್ನ ತಲೆ. ಕತ್ತೆಗಳನ್ನು ತೋರಿಸೋಕೆ ಇಷ್ಟು ಹೊತ್ತೂ ಒದ್ದಾಡಬೇಕಾಗಿತ್ತೆ?"

"ಏನದು ಹೇಳಬಾರದೆ?" ಎಂದು ಸ್ವಲ್ಪ ಜೋರಾಗಿಯೇ ಆಕೆ ಮತ್ತೆ ಕೇಳಿದರು.

"ತಾಳೆ ಮರಗಳ ಮಧ್ಯೆ ದೃಷ್ಟಿ ಹಾಯಿಸಿ ನೋಡಿದೆಯಾ? ಅಲ್ಲಿ ಬೆಟ್ಟಗಳ ಸಾಲು ಕಾಣಿಸಿತು ತಾನೇ?"

"ಹೌದು."

"ಅಲ್ಲಿ ಕೆಂಪನೆಯ ಸೂರ್ಯ ಕಾಣಿಸುತ್ತಾನೆ, ತಾನೆ?"

"ಹೂಂ."

"ದುಂಡನೆಯ ಆಕಾರದ ಅಂಚಿನಲ್ಲಿ ಕಂದು ಬಣ್ಣದ ಮೋಡಗಳ ಗೆರೆ ಕಾಣಿಸುವುದಿಲ್ಲವೇ?"

"ಹೌದು, ಕಾಣಿಸುತ್ತದೆ."

"ಸರಿ ಹಾಗಾದರೆ, ಅದನ್ನು ಸ್ವಲ್ಪ ಸರಿಯಾಗಿ ನೋಡು."

"ಅದನ್ನೇನು ನೋಡಬೇಕು? ನೀವು ಇವೊತ್ತು ನೋಡ್ತಿದ್ದೀರೇನು? ನಾನು ಇಡೀ ಜೀವಮಾನ ಅದನ್ನು ನೋಡುತ್ತಾ ಬಂದಿದ್ದೀನಿ."

"ಹೂಂ." ಭೋಲಾಬಾಬು ಗೋಣುಹಾಕಿ ಹೇಳಿದರು. "ಇಡೀ ಜೀವಮಾನ ಅದನ್ನು ನೋಡ್ತಾ ಬಂದಿದ್ದೀಯಾ?"

"ಹೂಂ."

"ಸರಿ, ಹಾಗಾದರೆ. ಒಳ್ಳೆಯದಾಯಿತು. ಈಗ ಹೋಗು ಹಾಗಾದರೆ... ಹೋಗಿ ಒಲೆ ಉರಿಸು ಹೋಗು."

ಬಚ್ಚೀ ಕೀ ಮಾಂ ನಿಂತಲ್ಲೇ ನಿಂತು ಭೋಲಾಬಾಬುಗಳ ಕಡೆಗೇ ನೋಡುತ್ತಿದ್ದರು.

"ನಾನು ಹೇಳಿದ್ದು ಕೇಳಿಸಲಿಲ್ಲವೆ? ಈಗ ಹೋಗು," ಭೋಲಾಬಾಬು ಗರ್ಜಿಸಿದರು.

ಆಕೆ ಅಲ್ಲಿ ನಿಲ್ಲದೆ ಹೆದರಿ ಓಡಿದರು.

ಭೋಲಾಬಾಬು ನೋಡುತ್ತಾ ನಿಂತಿದ್ದರು – ಸೂರ್ಯ, ಮೋಡಗಳು, ಅವು ಕೆಂಪಾಗಿವೆ, ಮೋಡಗಳ ಅಂಚಿನ ಆ ಗೆರೆಗಳು, ಬೆಟ್ಟಗಳ ಆ ಸಾಲು, ಸೂರ್ಯನ ಬೆಳಕಿನಲ್ಲಿ ಅವು ಕಾಣುತ್ತಿರುವ ರೀತಿ, ಎತ್ತರದ ಆ ಅಂಚಿನಲ್ಲಿ ಕಾಣುತ್ತಿರುವ ಬಣ್ಣ... ಇವುಗಳೆಲ್ಲ ಅವರಿಗೆ ಹೊಸದು. ಅವರು ತಮ್ಮ ಇಡೀ ಜೀವಮಾನವನ್ನು ಟೆಲಿಗ್ರಾಫ್ ಆಫೀಸಿನಲ್ಲಿ ಕಳೆದಿದ್ದರು. ಅವರು ಹಾಗೆಯೇ ಯೋಚಿಸಿದರು. ಪಹಾಡಿಗಳ ಈ ಜಿಲ್ಲೆಯಲ್ಲೇ ಅವರ ಸರ್ವಿಸ್ ಆಗಿತ್ತು. ಪ್ರತಿಯೊಂದು ಊರನ್ನೂ ಅವರು ನೋಡಿದ್ದಾರೆ. ಯಾವ ಕಸಬೆಯನ್ನೂ ಬಿಟ್ಟಿಲ್ಲ. ಯಾವ ನಗರವನ್ನೂ ಬಿಟ್ಟಿಲ್ಲ. ಆದರೆ ಈ ಸೂರ್ಯ! ಅವನೆಲ್ಲಿ ಅಡಗಿಕೊಂಡಿದ್ದ. ಇಷ್ಟು ದಿನ ತಮಗೆ ಅವನ ದರ್ಶನವೇ ಆಗಬಾರದೆ? ಇಂತಹ ಒಂದು ಸಂಜೆಯನ್ನೂ ತಾವು ನೋಡಿದ್ದಿಲ್ಲವಲ್ಲ!... ಇವೊತ್ತು ನಾನೇನು ನೋಡುತ್ತಿದ್ದೇನೆ?

ತಮ್ಮ ಬೆನ್ನಿನ ಹಿಂದೆ ಯಾವುದೋ ಮಗು ನಗುತ್ತಿರುವಂತೆ ಅವರಿಗೆ ಭಾಸವಾಯಿತು.

"ಯಾರು? ನೀಲೂನೇ?"

ನೀಲು ನೆಗೆಯುತ್ತಾ ಅವರ ಕಡೆಗೆ ಧಾವಿಸಿದ.

"ಉಳಿದವರೆಲ್ಲ ಎಲ್ಲೋ?"

"ಆಟ ಆಡ್ತಾ ಇದಾರೆ."

"ಎಲ್ಲಿ?"

ನೀಲೂ ಕೈ ಸಂಜ್ಞೆಯಿಂದಲೇ ಮನೆಯ ಆಚೆಯ ಮೈದಾನದ ಕಡೆಗೆ ತೋರಿಸಿದ.

"ಸರಿ, ಹೋಗಿ ಎಲ್ಲರನ್ನೂ ಕರೆದುಕೊಂಡು ಬಾ."

ನೀಲೂ ಓಡಿಹೋದ.

ಭೋಲಾಬಾಬು ಸೂರ್ಯನ ಕಡೆಗೇ ನೋಡುತ್ತಾ ನಿಂತರು. ಒಮ್ಮೆ ಈ ಕಡೆಯಿಂದ, ಒಮ್ಮೆ ಆ ಕಡೆಯಿಂದ, ಒಮ್ಮೆ ಎತ್ತರಕ್ಕೆ ಕತ್ತುಮಾಡಿ, ಒಮ್ಮೆ ಬಗ್ಗಿ ಕೆಳಗಿಂದ – ಹೀಗೆ ನಾಲ್ಕೂ ಕಡೆಯಿಂದ ಅದನ್ನೇ ನೋಡಿ ನೋಡಿ ಆನಂದಿಸುತ್ತಿದ್ದರು. ಸಂತೋಷದಿಂದ ಹಿಗ್ಗಿ ಚಪ್ಪಾಳೆ ಹಾಕಿದರು. ಸೂರ್ಯನ ದುಂಡನೆಯ ಆಕಾರವನ್ನು ನೋಡುತ್ತಿದ್ದಂತೆ ಅದರ ಅಂಚಿನ ಭಾಗದ ಮೋಡದ ಕಪ್ಪು ಗೆರೆ, ಅದೀಗ ಬೆಟ್ಟಗಳ ಹಿಂದಕ್ಕೆ ಮುಳುಗುತ್ತಿದ್ದುದು ಅವರ ಗಮನಕ್ಕೆ ಬಂತು. ಸೂರ್ಯನ ಕಿರಣಗಳು ಈಗ ಈ ಕಡೆ ಇಲ್ಲ; ಮೈದಾನದ ಮೇಲೂ ಇಲ್ಲ. ಹಸಿರು ಹೊಲಗಳ ಮೇಲೂ ಇಲ್ಲ, ಗುಡಿಸಲುಗಳ ಮೇಲೆ ಸಹ ಇಲ್ಲ. ಕಿರಣಗಳು ಈಗ ಏನಿದ್ದರೂ ಮೋಡಗಳ ಹಿಂದೆ ಎತ್ತರದ ಆಕಾಶದ ಕಡೆಗೆ ಹೋಗುತ್ತಿವೆ. ಪ್ರಕಾಶದ ಹಲವು ರಂಗುಗಳ ರೂಪದಲ್ಲಿ.

"ನೀಲೂ", ಅವರು ಹಿಂದಕ್ಕೆ ತಿರುಗಿ ಕೂಗುಹಾಕಿದರು.

ಅಲ್ಲಿ ಯಾರೂ ಕಾಣಿಸಲಿಲ್ಲ.

"ಎಲ್ಲರೂ ಎಲ್ಲಿ ಮಾಯವಾಗಿಬಿಟ್ಟರು?" ಎಂದು ಅವರು ಬಡಬಡಾಯಿಸಿದರು.

"ಓ, ಯಾರಲ್ಲಿ? ಯಾರು ಹೋಗುತ್ತಿರೋದು?"

ಮುಂಭಾಗದ ಬೀದಿಯ ಕಡೆಗೆ ಒಂದು ಒಂಟೆ ಹೋಗುತ್ತಿತ್ತು. ಅದರ ಮೇಲೆ ಕೊಳಕು ಅಂಗಿ ತೊಟ್ಟಿದ್ದ ಒಬ್ಬ ಮನುಷ್ಯ ಕುಳಿತಿದ್ದ. ಮತ್ತು ಹಾಯಾಗಿ ಬೀಡಿ ಸೇದುತ್ತಿದ್ದ.

"ನಿನಗಯ್ಯಾ ನಾನು ಹೇಳುತ್ತಿರೋದು."

ಒಂಟೆಯ ಮೇಲೆ ಕುಳಿತಿದ್ದ ವ್ಯಕ್ತಿ ಅವರ ಕಡೆ ತಿರುಗಿ ನೋಡಿದ.

"ಸ್ವಲ್ಪ ಆ ತಾಳೆಮರಗಳ ಮಧ್ಯೆ ದೃಷ್ಟಿ ಹಾಯಿಸಿ ನೋಡಬಾರದೆ ಮಹರಾಯ? ಅಲ್ಲೇನಿದೆ ನೋಡು."

ಒಂಟೆಯ ಮೇಲೆ ಕುಳಿತಿದ್ದವನು ಆ ಕಡೆ ನೋಡಿಕೊಂಡು ಮುಂದಕ್ಕೆ ತನ್ನ ಪಾಡಿಗೆ ತಾನು ಹೋದ.

"ಅಲಾ, ಇವನ," ಎಂದು ಭೋಲಾಬಾಬು ಎಂದುಕೊಂಡರು.

ಅತ್ತ ಸೂರ್ಯನೂ ಮುಳುಗಿದ. ಅವರು ಅಲ್ಲಿಂದ ಕಾಲ್ತೆಗೆದರು. ಒಳಗೆ ಬಂದು ಆರಾಮ ಕುರ್ಚಿಯಲ್ಲಿ ಹಾಗೆಯೇ ಒರಗಿ ಬಿದ್ದುಕೊಂಡರು. ಮಾತೇ ಇರಲಿಲ್ಲ. ಮನಸ್ಸು ಮಾತ್ರ ಉದಾಸಗೊಂಡಿತು.

ಒಳಗಿನಿಂದ ಚಹಾ ಬಂತು. ಅವರ ಮುಂದಿದ್ದ ಮೇಜಿನ ಮೇಲೆ ಅದನ್ನು ಇಡಲಾಯಿತು. ಕಣ್ಣು ಬಿಚ್ಚಿ ನೋಡಿದರು. ಅವರ ಮುಂದೆ ಅವರ ಪತ್ನಿ ನಿಂತಿದ್ದರು.

"ಪಂಚೆ ಹಾಗೂ ನನ್ನ ಕೈಗೋಲನ್ನು ಒಂದಿಷ್ಟು ತೆಗೆದುಕೊಂಡು ಬಾ."

"ಯಾಕೆ? ಎಲ್ಲಿಗಾದರೂ ಹೋಗಬೇಕೇನು?"

ಭೋಲಾಬಾಬೂ ಏನೂ ಹೇಳಲಿಲ್ಲ.

ಪಂಚೆ ಹಾಗೂ ಕೈಗೋಲು ಬಂದುವು. ಪಂಚೆ ಬದಲಾಯಿಸಿದರು. ಕೋಲನ್ನು ಕೈಗೆ ತೆಗೆದುಕೊಂಡು ಹೊರಟರು. ಇದು ಇಲ್ಲಿಗೇ ಬಿಟ್ಟುಬಿಡುವಂತಹ ಮಾತಲ್ಲ ಎಂದು ಅವರು ಯೋಚಿಸಿದರು. ಹೋಗಿ ಹೇಳಲೇಬೇಕು. ಎಲ್ಲರಿಗೂ ಹೇಳಬೇಕು. ಮೊದಲು ಮಾಧವನಲ್ಲಿಗೆ ಹೋಗಬೇಕು. ಅವನು ಎಷ್ಟೇ ಆಗಲಿ ಊರಿನ ಮುಖಂಡ. ಎಲ್ಲ ವಿಚಾರ ಅವನಿಗೆ ತಿಳಿಯುತ್ತದೆ, ಒಳ್ಳೆ ವ್ಯವಹಾರಜ್ಞಾನ ಇರುವವನು. ಮುಂದೆ ಅವನನ್ನೂ ಜೊತೆಗೆ ಕರೆದುಕೊಂಡು ಹೋಗಬೇಕು.

ಹಾಗೆ ಹೊರಟವರು ಇನ್ನೊಂದು ದಾರಿಗೆ ತಿರುಗಬೇಕು ಎಂದಾಗ ಮುಂದೆ ಅವರಿಗೆ ಕಾಣಿಸಿದ್ದು ಬಿತ್ತನೆ ಬೀಜಗಳ ಗೋದಾಮು. ಅಲ್ಲಿಗೆ ಜಿಲ್ಲಾಧಿಕಾರಿಗಳೂ ಬಂದಿದ್ದಾರೆ. ಉಳಿದ ಜನರೂ ಇದ್ದಾರೆ. ಅದನ್ನು ಗಮನಿಸಿ ಭೋಲಾಬಾಬು ಒಳಗೆ ನಡೆದರು.

"ಬನ್ನಿ ತಾರ್‌ಬಾಬುಗಳೇ. ಬನ್ನಿ. ಕುಳಿತುಕೊಳ್ಳಿ" – ಜಿಲ್ಲಾಧಿಕಾರಿಗಳು ಅವರಿಗೆ ಆಹ್ವಾನ ಕೊಟ್ಟರು.

ಭೋಲಾಬಾಬುಗಳು ಒಂದು ಕುರ್ಚಿ ಎಳೆದುಕೊಂಡು ಕುಳಿತರು. ಮತ್ತು ತಮ್ಮ ಮುದಿ ಕಣ್ಣುಗಳ ಮೂಲಕ ಸುತ್ತ ದಿಟ್ಟಿಸಿ ನೋಡಿದರು – ಹಲವು ಹೊಸ ಮುಖಗಳಿದ್ದುವು. ಅವರ ಆಗಮನದಿಂದಾಗಿ ಅಲ್ಲಿ ನಡೆಯುತ್ತಿದ್ದ ಮಾತುಕತೆ ನಿಲ್ಲುವಂತಾಯಿತು.

"ಏನು ಹೇಳಿ, ಒಂದು ಥರಾ ಇದ್ದೀರಿ?"

"ಅಂಥದೇನೂ ಇಲ್ಲ, ಹೀಗೆಯೇ......", ಭೋಲಾಬಾಬು ನಗಲು ಪ್ರಯತ್ನಿಸುತ್ತಾ ಹೇಳಿದರು. ಮಧ್ಯೆ ನಿಂತುಹೋಗಿದ್ದ ಮಾತುಕತೆ ಮುಂದುವರಿಯಿತು. ನಾಲೆಯಲ್ಲಿ ಮೀನುಗಳು ಸಾಕಷ್ಟು ಬಂದಿವೆಯೆಂದು ಜಿಲ್ಲಾಧಿಕಾರಿಗಳು ಹೇಳಿದರು.

"ಸಾಹೇಬರೇ, ಮೀನು ಹಿಡಿಯುವ ಹವ್ಯಾಸ ಇಟ್ಟುಕೊಂಡಿದ್ದರೆ ನೀವು ಒಂದು ಕೆಲಸ ಮಾಡಿ" ಎಂದು ಒಬ್ಬಾತ ಹೇಳಿದ.

"ಏನು?"

"ರಾತ್ರಿಯೇ ರಾತ್ರಿ ನೀವು ಬಲೆ ಹಾಕಿ ಬಿಟ್ಟಿರಬೇಕು."

"ಹೌದು ಸಾಹೇಬರೇ, ಮೀನುಗಳು ರಾತ್ರಿ ಮೇಲಕ್ಕೆ ಬರುತ್ತವೆ", ಎಂದು ಇನ್ನೊಬ್ಬ ಅವನ ಮಾತನ್ನು ಸಮರ್ಥಿಸಿದ.

ತಾವೂ ಮಾತನಾಡುವುದಕ್ಕೆ ಭೋಲಾಬಾಬುಗಳಿಗೆ ಈಗೊಂದು ಅವಕಾಶ ದೊರಕಿತು. ಒಂದು ಹೆಜ್ಜೆ ಮುಂದೆ ಹೋಗಿ ಅವರು ತಮ್ಮ ಸಲಹೆಯನ್ನು ಮುಂದಿಟ್ಟರು.

"ಬಲೆಯನ್ನು ಸಂಜೆಯೇ ಕಟ್ಟಿಸಿದರೆ ಹೇಗೆ?"

"ಹಾಂ, ಹಾಗೂ ಮಾಡಬಹುದು", ಜಿಲ್ಲಾಧಿಕಾರಿಗಳು ಹೇಳಿದರು.

"ಸಂಜೆಯೇ ಅಂದರೆ, ಸೂರ್ಯ ಮುಳುಗುವ ಸಮಯಕ್ಕೆ" ಎಂದು ಭೋಲಾಬಾಬು ಸ್ಪಷ್ಟಪಡಿಸಿ ಹೇಳಿದರು.

"ಸಂಜೆಗಿಂಜೆ ಕಟ್ಟಿದರೆ ಆಗೋದಿಲ್ಲ. ಮೀನುಗಳು ಮೇಲಕ್ಕೆ ಬರುವುದಾದರೂ ಮಧ್ಯರಾತ್ರಿ ಹೊತ್ತಿಗೆ ಅಥವಾ ಬೆಳಗಿನ ಝಾವದ ಹೊತ್ತಿಗೆ," ಮೊದಲನೆಯವನು ಹೇಳಿದ.

"ಆದರೆ ಬೆಳಗಿನ ಝಾವಾನೆ ಜಾಸ್ತಿ ಬರೋದು. ಆಗ ಬರುವಷ್ಟು ಬೇರೆ ಯಾವಾಗಲೂ ಬರುವುದಿಲ್ಲ."

ಭೋಲಾಬಾಬುಗಳು ಮತ್ತೆ ಕುರ್ಚಿಯ ಬೆನ್ನಿಗೆ ಒರಗಿದರು. ತಮ್ಮ ಮಾತಿಗೆ ಬಂದಿದ್ದ ಅವಕಾಶ ಕೈತಪ್ಪಿಹೋಗಿತ್ತು. ಇದರಿಂದ ಅವರಿಗೆ ವ್ಯಥೆಯಾಯಿತು. ಸುಮ್ಮನಾಗಿಬಿಟ್ಟರು. ಇಷ್ಟೆಲ್ಲ ಜನರ ಮುಂದೆ ತಮ್ಮ ವಿಚಾರ ತೆಗೆಯುವುದು ಉಚಿತವಾಗಲಾರದು ಎಂದುಕೊಂಡರು. ಒಬ್ಬರೇ ಇದ್ದರೆ ಹೇಳಬಹುದು. ಧೈರ್ಯ ತಂದುಕೊಂಡು ಎಲ್ಲರೂ ಅಲ್ಲಿಂದ ಹೋಗಬಹುದೆಂಬ ನಿರೀಕ್ಷೆಯಲ್ಲಿ ಕುಳಿತರು. ಆದರೆ ಅಲ್ಲಿಂದ ಯಾರೂ ಅಲುಗಾಡುವ ಸೂಚನೆ ಕಂಡುಬರಲಿಲ್ಲ.

"ಜಿಲ್ಲಾಧಿಕಾರಿ ಸಾಹೇಬರೇ!" ಭೋಲಾಬಾಬು ಸ್ವಲ್ಪ ಜೋರಾಗಿಯೇ ಹೇಳಿದರು.

ಜಿಲ್ಲಾಧಿಕಾರಿಗಳು ಆ ಕಡೆ ತಿರುಗಿ ನೋಡಿದರು.

"ತಮ್ಮ ಜೊತೆಗೆ ಸ್ವಲ್ಪ ಜರೂರು ಮಾತು ಇವೆ."

"ನನ್ನ ಜೊತೆಗೆ?" ಜಿಲ್ಲಾಧಿಕಾರಿಗಳು ಗಂಭೀರವಾಗಿಯೇ ಹೇಳಿದರು. "ಆಗಲಿ."

ಭೋಲಾಬಾಬು ಎದ್ದರು. ಅವರ ಸಂಕೇತವನ್ನು ಅನುಸರಿಸಿ ಜಿಲ್ಲಾಧಿಕಾರಿಗಳೂ ಎದ್ದರು.

ಭೋಲಾಬಾಬು ಅವರನ್ನು ಗೋದಾಮಿನ ಆ ಬದಿಗೆ ಏಕಾಂತಕ್ಕೆ ಕರೆದುಕೊಂಡು ಹೋದರು.

"ಜಿಲ್ಲಾಧಿಕಾರಿ ಸಾಹೇಬರೇ," ಭೋಲಾಬಾಬು ಹೇಳಿದರು. "ಈಗ ನಿಮ್ಮಲ್ಲಿ ಮುಚ್ಚುಮರೆ ಏನು? ತಾವು ಎಷ್ಟೇ ಆಗಲಿ ತಿಳಿದವರು."

"ಏನು ಹೇಳಿ ತಾರ್‌ಬಾಬುಗಳೇ, ಏಕಿಷ್ಟು ಪೀಠಿಕೆ?"

ಭೋಲಾಬಾಬುಗಳು ಕ್ಷಣಕಾಲ ಸುಮ್ಮನಿದ್ದು ಹೇಳಿದರು: "ತಾವು ಪ್ರತಿ ಸಂಜೆ ತಿರುಗಾಡಲು ಹೋಗಿಯೇ ಹೋಗುತ್ತೀರಿ."

"ಹೌದು, ಹೋಗುತ್ತೇನೆ."

"ರಾತ್ರಿಯಾದ ಮೇಲೆ ಹಿಂದಿರುಗುತ್ತೀರಿ."

"ಹೌದು."

"ಈವೊತ್ತು ನೀವು ಸೂರ್ಯನನ್ನು ನೋಡಿರಬೇಕು."

"ಹೌದು, ನೋಡಿದೆ."

ಭೋಲಾಬಾಬುಗಳು ಸ್ವಲ್ಪ ಹೊತ್ತಿನ ಮಟ್ಟಿಗೆ ಜಿಲ್ಲಾಧಿಕಾರಿಗಳ ಕಡೆಗೇ ಕುತೂಹಲ ದಿಂದ ನೋಡುತ್ತಾ ನಿಂತರು. ಜಿಲ್ಲಾಧಿಕಾರಿಗಳು ಏನನ್ನೂ ಹೇಳದೆ ನಿಂತಿದ್ದುದನ್ನು ಗಮನಿಸಿ ಕೊನೆಗೆ ಅವರೇ ಹೇಳಿದರು: "ಇವೊತ್ತಿನ ಸೂರ್ಯ ಅದೆಷ್ಟು ಕೆಂಪು. ಅದೆಷ್ಟು ಚೆನ್ನಾಗಿ ಕಾಣಿಸುತ್ತಿದ್ದ ಅಂತೀರಿ... ಅವನ ಪ್ರಕಾಶದಿಂದ ಇಡೀ ಭೂಮಿ ಕೆಂಪಾಗಿ ಹೋಗಿತ್ತು, ಸಾಹೇಬರೇ. ನೀವು ನೋಡಿದಿರಲ್ಲ?"

"ಇದೇನು ಹೊಸ ವಿಷಯ ಅಂತ ಹೇಳ್ತಿದೀರಿ? ಪ್ರತಿದಿನವೂ ಹೀಗೆಯೇ. ಈಗಿನ ಹವಾಮಾನವೇ ಹೀಗೆ, ಕಾಲಾನೇ ಹಾಗೆ," ಜಿಲ್ಲಾಧಿಕಾರಿಗಳು ಹೇಳಿದರು.

"ಇಲ್ಲ ಸಾಹೇಬರೇ, ಪ್ರತಿದಿನವೂ ಹೀಗೆಲ್ಲಿರುತ್ತೆ?" ಎಂದು ಆಶ್ಚರ್ಯವನ್ನು ವ್ಯಕ್ತ ಪಡಿಸುತ್ತಾ ಭೋಲಾಬಾಬು ಕೇಳಿದರು.

"ಸರಿ. ಅದು ಹೇಗಾದರೂ ಆಗಲಿ, ನೀವು ಹೇಳಬೇಕಾದ್ದೇನು ಹೇಳಿ." ಎಂದು ಜಿಲ್ಲಾಧಿಕಾರಿಗಳು ಅಲಕ್ಷ್ಯ ಪ್ರದರ್ಶಿಸುತ್ತಾ ಕೇಳಿದರು.

"ಈಗ ನಿಮಗೆ ಹೇಳುವುದೇನಿದೆ ಸಾಹೇಬರೆ?" ಎಂದು ನಿಧಾನವಾಗಿ ಭೋಲಾ ಬಾಬು ರಾಗ ಎಳೆದರು.

ಅವರು ಅಲ್ಲಿಂದ ನೆಟ್ಟಗೆ ಪೇಟೆ ಬೀದಿಯ ಕಡೆ ನಡೆದರು. ಪೇಟೆಯ ಈ ಭಾಗ ವಿಸ್ತಾರ ವಾಗಿದೆ. ರಸ್ತೆಯ ಮೇಲೆ ಬೆಳಕಿದೆ. ಜನ ಇದ್ದಾರೆ – ಪರಿಚಿತರು, ಅಪರಿಚಿತರು. ಆದರೆ ಭೋಲಾಬಾಬುಗಳು ತಮ್ಮ ಹಾದಿ ಹಿಡಿದು ತಾವು ಹೋಗುತ್ತಿದ್ದಾರೆ. ಸೂರ್ಯನ ವಿಷಯವಾಗಿ ಎಲ್ಲರಿಗೂ ಹೇಳಬೇಕೆಂದು ಹೊರಟಿದ್ದವರು ಈಗ ಯಾರಿಗೂ ಅದನ್ನು ಹೇಳುವ ಆಸಕ್ತಿಯಿಂದಿರಲಿಲ್ಲ. ಅವರೀಗ ದುಃಖಿತರಾಗಿದ್ದರು. ಜಿಲ್ಲಾಧಿಕಾರಿಗಳಲ್ಲಿಗೆ ಹಿಂದು ಮುಂದು ವಿಚಾರ ಮಾಡದೆ ಹೋದೆನಲ್ಲ ಎಂಬ ಯೋಚನೆಯಿಂದಾಗಿ ಅವರು ದುಃಖಿತರಾಗಿದ್ದರು. ಜಿಲ್ಲಾಧಿಕಾರಿ ತುಂಬಾ ಯೋಗ್ಯರು ಮತ್ತು ಬುದ್ಧಿವಂತರು ಎಂದೆಲ್ಲ ಜನ ಹೇಳುತ್ತಿದ್ದರು. ತಾವೂ ಹಾಗೇ ತಿಳಿದುಕೊಂಡಿದ್ದರು. ಆದರೆ ಇವೊತ್ತು ರಹಸ್ಯ ಬಯಲಾಗಿತ್ತು. ಅವರು ಇವೊತ್ತು ಸೂರ್ಯನನ್ನು ನೋಡದೆಯೇ ಇದ್ದಿದ್ದರೆ ಆ ಮಾತು ಬೇರೆಯಿತ್ತು. ಆದರೆ ಅವರು ನೋಡಿದ್ದಾರೆ ಅದೂ ಚೆನ್ನಾಗಿ ನೋಡಿದ್ದಾರೆ.

ಭೋಲಾಬಾಬು ಮತ್ತೆ ಇದೇ ವಿಚಾರವನ್ನು ಒಂದು ಹೊಸ ದೃಷ್ಟಿಯಿಂದ ನೋಡಲು ಪ್ರಯತ್ನಿಸಿದರು. ಈ ಬಗ್ಗೆ ಯೋಚಿಸಿದರು. "ಇದು ಎಲ್ಲರಿಗೂ ಅರ್ಥವಾಗುವಂತಹ ವಿಚಾರವೂ ಅಲ್ಲ," ಎಂದುಕೊಂಡರು. ಹೀಗೆ ವಿಚಾರ ಮಾಡಿದಾಗ ಅವರು ಇನ್ನಷ್ಟು ವೇದನೆಗೊಳಗಾದರು.

ಕ್ರಮೇಣ ಅವರು ಯೋಚಿಸುತ್ತಿದ್ದಂತೆ ಒಂದು ರೀತಿಯ ಸಂತೋಷವೂ ಅವರಿಗಾಯಿತು. "ಜಿಲ್ಲಾಧಿಕಾರಿಗಳೇನೋ ಬಹಳ ಓದಿದ್ದಾರೆ: ಆದರೆ ಓದಿದ ಮಾತ್ರಕ್ಕೇ ಏನಾದಹಾಗಾಯಿತು? ವಾಸ್ತವಿಕವಾಗಿ ನೋಡಿದರೆ ಓದು ಮತ್ತು ಪ್ರಪಂಚಜ್ಞಾನ ಇವು ಬೇರೆ ಬೇರೆಯೇ. ಮುಖ್ಯವಾಗಿ ಇಂತಹ ವಿಚಾರಗಳಿಗೆ ವಯಸ್ಸು ಮತ್ತು ಅನುಭವ ಇವು ಮುಖ್ಯವಾಗುತ್ತವೆ."

ಭೋಲಾಬಾಬು ಮಾಧವ ವಾಸವಾಗಿದ್ದ ಬೀದಿಯ ಕಡೆಗೆ ತಿರುಗುತ್ತಿದ್ದರೆ ಕೈಯಲ್ಲಿ ಒಂದು ಬಕೀಟು ಹಿಡಿದುಕೊಂಡು ಮಾಧವ ಇನ್ನೊಂದು ಬೀದಿಯಿಂದ ಬರುತ್ತಿದ್ದಾನೆ. ಅಲ್ಲಿ ಸ್ವಲ್ಪ ಕತ್ತಲೆ ಇತ್ತು.

"ಮಾಧವ್", ಅವರು ಕೂಗಿದರು.

"ಬಾಬೂ, ನಾನು ಸೋಹನ್".

"ಓ, ನೀನಾ, ಸರಿ ಏನೂ ಇಲ್ಲ."

ಅವರೀಗ ಸೋಹನ್‌ನನ್ನು ಕರೆದು ಕೇಳಿದರು.

"ಯಜಮಾನರು ಮಧ್ಯಾಹ್ನ ಹೋದವರು ಇನ್ನೂ ಬಂದಿಲ್ಲ," ಎಂದು ಸೋಹನ್ ಹೇಳಿದ.

"ಎಲ್ಲಿಗೆ ಹೋಗಿದ್ದಾರೆ?"

"ಯಾವುದೋ ಹಳ್ಳಿಗೆ ಹೋಗಿದ್ದಾರೆ. ವ್ಯವಹಾರದ ಮೇಲೆ."

"ಮಧ್ಯಾಹ್ನ ಹೋದವರು ಇನ್ನೂ ಬಂದೇ ಇಲ್ಲವೋ ಹಾಗಾದರೆ?"

"ಹೌದು, ಬಂದೇ ಇಲ್ಲ."

"ಹಾಗಾದರೆ ಮಾಧವ ಸೂರ್ಯನನ್ನು ಎಲ್ಲಿ ನೋಡಿರಬೇಕು?" ಎಂದು ಭೋಲಾಬಾಬು ವಿಚಾರಮಾಡಿದರು. ಅನಂತರ ಸೋಹನನ ವಯಸ್ಸು ಮತ್ತು ಅನುಭವದ ಯೋಚನೆ ಕೂಡ ಅವರಿಗೆ ಬಂತು. ಗಂಭೀರವಾಗಿ ಯೋಚಿಸಿದರು.

"ಸಂಜೆಯ ಹೊತ್ತು ನೀನು ಏನು ಮಾಡುತ್ತಿ?"

"ಗಾಣಕ್ಕೆ ಹೋಗ್ತೀನಿ, ಹಿಂಡಿ ಎತ್ತಿಹಾಕ್ತೀನಿ. ಕಲಗಚ್ಚು ತಯಾರಿಸುತ್ತೀನಿ, ಹಾಲು ಕರೀತೀನಿ ಮತ್ತು..."

"ಸೂರ್ಯನನ್ನು ನೋಡುತ್ತೀಯೋ ಇಲ್ಲವೋ?"

"ಸೂರ್ಯನನ್ನೇ?" ಸೋಹನ್ ಆಶ್ಚರ್ಯದಿಂದ ಕೇಳಿದ.

"ಇವೊತ್ತು ನೀನು ಸೂರ್ಯನನ್ನು ನೋಡಿದಿಯೇನು?"

"ಯಾವ ಸೂರಜನನ್ನು? ಗಾಣಿಗ ಇದಾನಲ್ಲ, ಆ ಸೂರಜಾನನ್ನೇ?"

"ಹೋಗೋ, ಬೇವಕೂಫ ಎಲ್ಲೀದೋ!" ಭೋಲಾಬಾಬು ಚೀರಿದರು.

ಸೋಹನ್ ನಗತೊಡಗಿದ. "ಬಾಬೂ, ನಾನೊಬ್ಬ ಹಳ್ಳಿ ಗಮಾರ. ನೀವು ಯಾರನ್ನು ಕೇಳುತ್ತಿದ್ದೀರಿ ಎಂದು ಹೇಗೆ ಗೊತ್ತಾಗಬೇಕು, ನನಗೆ?"

"ನಾನು ಹೇಳುತ್ತಿರೋದು ಆಕಾಶದ ಸೂರ್ಯನ ವಿಚಾರವಾಗಿ."

"ಹೌದು ಬಾಬು, ನೋಡಿದ್ದೆ."

"ನಿನಗೇನೂ ವಿಶೇಷ ಕಾಣಲಿಲ್ಲವೇ?"

"ಅಂದರೆ?" ಸೋಹನ್ ಅಸಹಾಯಕನಾಗಿ ದೈನ್ಯತೆಯಿಂದ ಕೇಳಿದ.

"ದುಂಡುದುಂಡಗೆ, ಕೆಂಪುಕೆಂಪಾಗಿ," ಭೋಲಾಬಾಬು ಅವನಿಗೆ ಸಹಾಯಕರಾಗಿ ಹೇಳಿದರು.

"ನೋಡಿದೆ ಎಂದಿಟ್ಟುಕೊಳ್ಳಿ."

"ನಿನ್ನ ತಲೆ, ಎಲ್ಲಾದರೂ ಎಮ್ಮೆ ಕಾಯಿಸು ಹೋಗು," ಎಂದು ಭೋಲಾಬಾಬು ಗದರಿಕೊಂಡರು.

ಮತ್ತು, ಅಲ್ಲಿಂದ ಕೂಡಲೇ ಹಿಂದಿರುಗಿದರು. ಈ ಸಲ ಭೋಲಾಬಾಬು ಸಂಪೂರ್ಣ ಹತಾಶರಾದರು. "ಜನ ಎಷ್ಟು ಅಧೋಗತಿಯಲ್ಲಿದ್ದಾರೆ", ಎಂದು ಮರುಗಿದರು. ಅವರು ಸಂಪೂರ್ಣ ನಿರಾಶೆಗೊಂಡರು.

ಮನೆಗೆ ಹೋಗಿ ಬಾಗಿಲು ತೆಗೆದರು. ಒಳಗೆ ಪ್ರವೇಶಿಸಿದರು. ಕೋಲನ್ನು ಮೂಲೆಗೆ ಇಟ್ಟು ಹಾಸಿಗೆಯಲ್ಲಿ ಬಿದ್ದುಕೊಂಡರು. "ಹಾಯ್, ಪ್ರಪಂಚ ಎಷ್ಟು ಬದಲಾಗಿ ಹೋಗಿದೆ!" ಎಂದು ಮತ್ತೆ ಮತ್ತೆ ಅವರು ಯೋಚಿಸಿದರು. ಹಾಗೆಯೇ ಒಂದು ವಿಚಾರ ಹೊಳೆಯಿತು. ನಾಳೆ ಮತ್ತೆ ಸಾಯಂಕಾಲವಾಗುತ್ತದೆ. ಆಗ ಎಲ್ಲರನ್ನೂ ಕರೆದು ಸೂರ್ಯನನ್ನು ತೋರಿಸುತ್ತೇನೆ. ಪ್ರಪಂಚದಲ್ಲಿ ಅಡಿಗೆಮನೆ, ಯೋಜನೆ, ಆಫೀಸು, ಒಂಟೆ, ಹಾಲು ಇವುಗಳಷ್ಟೇ ಮುಖ್ಯ ಅಲ್ಲ. ಸೂರ್ಯನನ್ನೂ ನೋಡಿ ಎಂದು ತೋರಿಸುತ್ತೇನೆ. ಸೂರ್ಯನೆಂಬುವನೂ ಇದ್ದಾನೆ, ಅವನನ್ನು ನೋಡಬೇಕಾದರೆ ಆ ಬೆಟ್ಟಗಳ ಆಚೆ ನೋಡಿ, ತಾಳೆಮರಗಳ ಮಧ್ಯಭಾಗದಿಂದ ಕಾಣುತ್ತಾನೆ ನೋಡಿ. ಹಾಗೆಯೇ ನೋಡುತ್ತಿದ್ದರೆ ಕಂಪಿಸುತ್ತಾನೆ, ಕೊನೆಗೆ ಅವನು ಬೆಟ್ಟಗಳ ಹಿಂದೆ ಮರೆಯಾಗಿಹೋಗುವ ಘಳಿಗೆಯೂ ಬರುತ್ತದೆ ನೋಡಿ ಎಂದು ತೋರಿಸುತ್ತೇನೆ. ಅವನು ಮುಳುಗುವುದಕ್ಕೆ ಮೊದಲು ಅವನ ಒಂದು ಮಧುರ ಕಿರಣ ನಿಮ್ಮ ಬೋಳು ತಲೆಯ ಮೇಲೆ ಬೀಳುತ್ತದೆ. ಅವನದನ್ನು ಬಿಟ್ಟು ಹೋಗುತ್ತಾನೆ.

ಅವರಿಗೆ ಇದ್ದಕ್ಕಿದ್ದಂತೆ ಅವರದೇ ನೆನಪು ಬಂತು. ತಲೆಯ ಮೇಲೆ ತಮ್ಮ ಕೈ ಆಡಿಸಿದರು. ಹುಡುಕಾಡಿದರು. ಆ ಭಾಗ ಸಂಪೂರ್ಣ ತಣ್ಣಗಿತ್ತು. ಅವರಿಗೆ ವ್ಯಥೆಯಾಯಿತು –

"ಆದರೆ ಎಷ್ಟು ಜನ ನಾಳೆಯಾದರೂ ಇದನ್ನು ಅರ್ಥ ಮಾಡಿಕೊಂಡಾರು? ಅವರು ಹತಾಶರಾಗತೊಡಗಿದರು.

ಯಾರೋ ಒಳಗೆ ಬರುತ್ತಿರುವರೆಂದು ಭೋಲಾಬಾಬುಗಳಿಗೆ ಗೊತ್ತಾಯಿತು. ನೋಡುತ್ತಾರೆ, ಮೇಜಿನ ಮೇಲೆ ಭೋಜನದ ತಟ್ಟೆ ತಯಾರಾಗಿದೆ. ಮತ್ತು ಜಾರ ಪಾಯಿಯ ಒಂದು ಪಕ್ಕದಲ್ಲಿ ಅವರ ಹೆಂಡತಿ ಕುಳಿತಿದ್ದಾರೆ.

"ಸಂಜೆ ಎಲ್ಲಿ ಹೊರಟುಹೋಗಿದ್ದಿರಿ?"

"ಎಲ್ಲಿಯೂ ಇಲ್ಲ," ಭೋಲಾಬಾಬು ಮನಸ್ಸಿಲ್ಲದ ಮನಸ್ಸಿನಿಂದ ಉತ್ತರ ಕೊಟ್ಟರು.

"ದೇಹಸ್ಥಿತಿ ಸರಿ ಇದೇ ತಾನೇ?"

ಭೋಲಾಬಾಬು ಯಾವ ಉತ್ತರವನ್ನೂ ಕೊಡಲಿಲ್ಲ.

ಅವರ ಹೆಂಡತಿ ಹೊದಿಕೆಯೊಳಕ್ಕೆ ಕೈಹಾಕಿ ಅವರ ಕಾಲು ಮುಟ್ಟಿ ನೋಡಿದರು.

"ಏನೂ ಕಾಣಿಸುತ್ತಿಲ್ಲ, ಸರಿಯಾಗಿಯೇ ಇದೆ" ಎಂದು ಹೇಳಿ ಸುಮ್ಮನಾದರು. ಅಷ್ಟರಲ್ಲೇ ಬಿಟ್ಟೀ, ನೀಲೂ ಮತ್ತಿತರ ಮಕ್ಕಳೂ ಬಂದು ಸೇರಿಕೊಂಡರು.

"ಸರಿ, ಏಳಿ ಹಾಗಾದರೆ, ಎದ್ದು ಊಟ ಮಾಡಿಕೊಳ್ಳಿ."

"ಇಲ್ಲ, ಇವೊತ್ತು ನಾನು ಊಟ ಮಾಡುವುದಿಲ್ಲ,"

"ಯಾಕೆ?" ಅವರ ಹೆಂಡತಿ ಗಾಬರಿಗೊಂಡು ಕೇಳಿದರು.

ಭೋಲಾಬಾಬು ಬಹಳ ಹೊತ್ತು ಹಾಗೆಯೇ ಯಾವುದೇ ಉತ್ತರ ಕೊಡದೆ ಬಿದ್ದು ಕೊಂಡಿದ್ದರು, ಉದಾಸಗೊಂಡು ಮತ್ತು ಚಿಂತಿತರಾಗಿ.

ಅನಂತರ ಗಂಭೀರವಾಗಿ ಹೇಳಿದರು: "ನೋಡು, ಹೇಳಿಕೊಳ್ಳುವುದಕ್ಕೆ ಎಲ್ಲ ಇದ್ದಾರೆ, ಇವಳು ಹೆಂಡತಿ, ಇವನು ಮಗ, ಇವಳು ಮಗಳು. ಇದು ಮನೆ, ಇದು ನನ್ನ ಆಸ್ತಿ, ಇವರು ಸ್ನೇಹಿತರು, ಇವರು ಬಂಧುಗಳು – ಎಂದೆಲ್ಲ ಹೇಳಿಕೊಳ್ಳಬಹುದು, ಆದರೆ ನಿಜ ಹೇಳುವುದಾದರೆ ಯಾರು ಯಾರಿಗೂ ಆಗುವುದಿಲ್ಲ."

"ಏಕೆ ಹೀಗೆಲ್ಲ ಮಾತನಾಡುತ್ತಿದ್ದೀರಿ?" – ಅವರ ಹೆಂಡತಿಯ ಕಣ್ಣಿನಲ್ಲಿ ನೀರು ಬಂತು.

"ನನ್ನ ದುಃಖವನ್ನು ಯಾರೂ ತಿಳಿಯಲಾರಿರಿ. ಅಂದಮೇಲೆ ನೀನೆಂಥ ಹೆಂಡತಿ, ಇವರೆಂಥ ಮಕ್ಕಳು?"

ಅವರ ಹೆಂಡತಿ ಇದನ್ನು ಕೇಳಿ ಅಳತೊಡಗಿದರು.

"ನನ್ನವರೆಂಬುವವರು ಯಾರೂ ಇಲ್ಲ," ಭೋಲಾಬಾಬುಗಳು ಗದ್ಗದ ಕಂಠದಿಂದ ಗೋಳಾಡಿದರು.

"ಇಲ್ಲ, ಹಾಗನ್ನಬೇಡಿ. ನೀವೇಕೆ ಹೀಗೆಲ್ಲ ಮಾತನಾಡುತ್ತಿದ್ದೀರಿ, ನಿಮಗೇನಾಗಿದೆ?"

ಅವರ ಹೆಂಡತಿ ಅಳುತ್ತಲೇ ಹೇಳಿದರು. ಅದನ್ನು ಕಂಡ ಮಕ್ಕಳೂ ಅಳತೊಡಗಿ ದರು.

"ಇದರಲ್ಲಿ ಅಳುವುದಕ್ಕೇನಿದೆ. ನೀವೆಲ್ಲ ಈಗ ಹೋಗಿ. ನೀವೆಲ್ಲ ಊಟಮಾಡಿ. ನಾನು ಮಾತ್ರ ಮಾಡಲಾರೆ," ಭೋಲಾಬಾಬುಗಳು ನೊಂದಮನಸ್ಸಿನಿಂದ ಹೇಳಿ ಇನ್ನೊಂದು ಪಕ್ಕಕ್ಕೆ ಹೊರಳಿಕೊಂಡರು

ಅವರು ಹೆಂಡತಿ ಮಕ್ಕಳ ಮುಖ ನೋಡಿ ಜೋರಾಗಿ ಅಳತೊಡಗಿದರು. ಮಕ್ಕಳೂ ಬೊಬ್ಬೆಹಾಕಿ ಅಳತೊಡಗಿದರು. ಭೋಲಾಬಾಬುಗಳೂ ದಿಂಬಿಗೆ ಮುಖಮಾಡಿಕೊಂಡು ಒಳಗೇ ಅಳತೊಡಗಿದರು. ಮತ್ತು ಆನಂತರ ಮೊಣಕೈಯೂರಿ ಎದ್ದು ಕುಳಿತರು.

"ಬಿಟ್ಟೀ ಕೀ ಮಾಂ. ಏನೇ ಇದೆಲ್ಲ ರಂಪ? ಏನು ಹಚ್ಚಿದ್ದೀರೇ?" ಎಂದು ಹೆಂಡತಿಯ ಮೇಲೆ ಗದರಿಕೊಂಡರು.

ಆಕೆ ಇನ್ನಷ್ಟು ಜೋರು ಜೋರಾಗಿ ಅಳತೊಡಗಿದರು. ಭೋಲಾಬಾಬು ನೋಡುತ್ತಾ ಇದ್ದು ತಾವೂ ಜೋರಾಗಿ ಅಳತೊಡಗಿದರು.

ಅಳುವವರ ಪೈಕಿ ಎಲ್ಲರಿಗಿಂತ ದೊಡ್ಡ ಹಾಗೂ ದುಃಖಪೂರ್ಣ ಅಳು ಮಾತ್ರ ಅವರದೇ ಆಗಿತ್ತು.

# ಲೇಖಕರ ಪರಿಚಯ

**೧. ಚಂದ್ರಧರ ಶರ್ಮ ಗುಲೇರಿ**

(೧೮೮೩–೧೯೨೦) ಜನ್ಮಸ್ಥಳ: ಗುಲೇರ್ (ಪಂಜಾಬ್). ಮೊದಲು ಅಜ್ಮೀರನ ಮೆಯೋ ಕಾಲೇಜಿನಲ್ಲಿ ಶಿಕ್ಷಕರಾಗಿದ್ದರು. ಅನಂತರ ಹಿಂದೂ ವಿಶ್ವವಿದ್ಯಾನಿಲಯಕ್ಕೆ ಸೇರಿದ ಸಂಸ್ಕೃತ ಮಹಾವಿದ್ಯಾಲಯದ ಪ್ರಿನ್ಸಿಪಾಲರಾದರು. ಪ್ರಾಚೀನ ವಸ್ತು ವಿಚಾರತಜ್ಞ ಹಾಗೂ ಭಾಷಾತಜ್ಞ. ಹಿಂದಿಯಲ್ಲಿ "ಕಛುವಾ ಧರ್ಮ", "ಮಾರೇಸಿ ಭೌಂಹಿ", "ಕುಠಾವ್ಞಂ" ಇವೇ ಕೆಲವು ಲಲಿತಪ್ರಬಂಧಗಳನ್ನು ಬರೆದರು. ಮೂರು ಸಣ್ಣ ಕಥೆಗಳನ್ನೂ ಬರೆದರು. "ಉಸನೆ ಕಹಾ ಥಾ" – ಅವಳ ಕೋರಿಕೆ – ಮೊದಲು ಸರಸ್ವತಿ ಪತ್ರಿಕೆಯಲ್ಲಿ ೧೯೧೫ರಲ್ಲಿ ಪ್ರಕಟವಾಯಿತು.

**೨. ಪ್ರೇಮಚಂದ್**

(೧೮೮೦–೧೯೩೬) ಜನ್ಮಸ್ಥಳ: ಉತ್ತರ ಪ್ರದೇಶದ ವಾರಾಣಸಿಯ ಬಳಿಯ ಲಮಹೀ ಎಂಬ ಗ್ರಾಮ. 'ಜಾಗರಣ' ಸಾಪ್ತಾಹಿಕ ಮತ್ತು 'ಹಂಸ' ಮಾಸಿಕದ ಸಂಪಾದಕರಾಗಿದ್ದರು. ಸುಮಾರು ಹನ್ನೆರಡು ಕಾದಂಬರಿಗಳನ್ನೂ ಇನ್ನೂರಿಪ್ಪತ್ತೈದು ಸಣ್ಣ ಕಥೆಗಳನ್ನೂ ಬರೆದರು. ಮುಖ್ಯ ಕಾದಂಬರಿಗಳೆಂದರೆ "ಸೇವಾ ಸದನ", "ಪ್ರೇಮಾಶ್ರಮ", "ರಂಗಭೂಮಿ", "ಕರ್ಮಭೂಮಿ", "ಗಬನ್" ಮತ್ತು "ಗೋದಾನ್" ಇವು ಮುಖ್ಯವಾದುವು. "ಮಾನಸರೋವರ" ಎಂಬ ಹೆಸರಿನ ಎಂಟು ಸಂಪುಟಗಳಲ್ಲಿ ಅವರ ಬಹುತೇಕ ಸಣ್ಣ ಕತೆಗಳು ಪ್ರಕಟವಾಗಿವೆ. "ಕಫನ್" – ಶವದ ಬಟ್ಟೆ – ೧೯೨೬ರಲ್ಲಿ ಪ್ರಕಟವಾಯಿತು.

**೩. ಜಯಶಂಕರ ಪ್ರಸಾದ್**

(೧೮೮೯–೧೯೩೭) ಜನ್ಮಸ್ಥಳ: ವಾರಾಣಸಿ (ಉ. ಪ್ರ.) ಇವರು ಮುಖ್ಯವಾಗಿ ಒಬ್ಬ ಕವಿ ಹಾಗೂ ನಾಟಕಕಾರರು. ಪ್ರಮುಖ ನಾಟಕಗಳು – 'ಸ್ಕಂದಗುಪ್ತ' ಮತ್ತು 'ಚಂದ್ರಗುಪ್ತ'. ಮುಖ್ಯ ಕಾದಂಬರಿ – 'ತಿತಲಿ ಔರ್ ಕಂಕಾಲ್'. ಸಣ್ಣ ಕಥೆಗಳ ಸಂಗ್ರಹಗಳು: "ಛಾಯಾ", "ಪ್ರತಿಧ್ವನಿ", "ಇಂದ್ರಜಾಲ", "ಆಂಧೀ" ಮತ್ತು "ಆಕಾಶದೀಪ್."

## ೪. ಜೈನೇಂದ್ರ ಕುಮಾರ್

ಜನ್ಮ: ೧೯೦೫, ಕೋಡಿಯಾಗಂಜ್ ಜಿಲ್ಲೆ, ಅಲೀಘಡ್ (ಉ. ಪ್ರ.) ವಾಸ: ದೆಹಲಿ. ಕಾದಂಬರಿಕಾರರು; ಜೊತೆಗೆ ಸಣ್ಣ ಕತೆಗಳನ್ನೂ ಬರೆಯುತ್ತಾರೆ. ಒಳ್ಳೆ ವಿಚಾರ ವೇತ್ತರೂ ಹೌದು. ಪ್ರಮುಖ ಕಾದಂಬರಿಗಳು: "ಪರಖ್", "ಸುನೀತಾ", "ತ್ಯಾಗಪತ್ರ್" ಮತ್ತು "ಜಯವರ್ಧನ್". ಅವರ ಬಹುತೇಕ ಕತೆಗಳು "ಜೈನೇಂದ್ರ ಕೀ ಕಹಾನಿಯಾಂ" ಎಂಬ ಹತ್ತು ಸಂಪುಟಗಳ ಗ್ರಂಥದಲ್ಲಿ ಪ್ರಕಟವಾಗಿವೆ.

## ೫. ಯಶಪಾಲ್

ಜನ್ಮ: ೧೯೦೩, ಫಿರೋಜ್‌ಪುರ್ ದಂಡಿನ ಭಾಗ (ಪಂಜಾಬ್) ಪೂರ್ವ ಕಾಂಗಾಡಾ ಜಿಲ್ಲೆ. ಹಾಲಿ ವಾಸ – ಲಖನೌ. ಬಹಳ ಕಾಲ ಕ್ರಾಂತಿಕಾರಿ ಸಂಘಟನೆಯಲ್ಲಿ ನಿರತ ರಾಗಿದ್ದವರು ಮತ್ತು ಜೈಲುವಾಸ ಅನುಭವಿಸಿದವರು. ೧೯೩೮ರಲ್ಲಿ ಲೇಖನ ವೃತ್ತಿಯ ಆರಂಭ. ಕಾದಂಬರಿಕಾರರು. ಸಣ್ಣ ಕತೆಗಳನ್ನೂ ಬರೆದಿರುವರಲ್ಲದೆ ಒಳ್ಳೆಯ ವಿಚಾರವೇತ್ತರು. ಪ್ರಮುಖ ಕಾದಂಬರಿಗಳು: "ದಾದಾ ಕಾಮ್ರೇಡ್," "ಪಾರ್ಟಿ ಕಾಮ್ರೇಡ್", "ದೇಶದ್ರೋಹಿ", "ಮನುಷ್ಯಕೇ ರೂಪ್", "ದಿವ್ಯಾ" ಮತ್ತು "ಝೂಠಾ ಸಚ್". ಮುಖ್ಯ ಸಣ್ಣ ಕತೆ ಸಂಗ್ರಹಗಳು: "ಪಿಂಜರೇ ಕೀ ಉಡಾನ್", "ಜ್ಞಾನದಾನ್", "ವೋ ದುನಿಯಾ", "ಧರ್ಮಯುದ್ಧ್", "ಚಿತ್ರ ಕಾ ಶೀರ್ಷಕ್", "ತುಮನೆ ಕ್ಯೋಂ ಕಹಾ ಥಾ ಮೈ ಸುಂದರ್ ಹೂಂ" – ಇತ್ಯಾದಿ.

## ೬. ರಾಂಗೇಯ ರಾಘವ

(೧೯೨೩–೧೯೬೨) ದಕ್ಷಿಣಾತ್ಯಮೂಲ. ತಾಯಿಯದು ಕನ್ನಡ ಭಾಷೆ, ತಂದೆ ಯದು ತಮಿಳು. ಪ್ರಾಯಶಃ ಆಗ್ರಾ ಮತ್ತು ಭರತಪುರದಲ್ಲಿದ್ದರು. ಮುಖ್ಯವಾಗಿ ಕಾದಂಬರಿಕಾರರು ಮತ್ತು ವಿಚಾರವೇತ್ತರು. ಕವನಗಳನ್ನೂ ಬರೆದಿದ್ದಾರೆ. ಮುಖ್ಯ ಕಾದಂಬರಿಗಳು: "ಘರೋಂದೆ," "ಮುರ್ದೋಂಕಾ ಟೀಲಾ", "ವಿಷಾದ ಮಠ್", "ಕಬ್ ತಕ್ ಪುಕಾರೂಂ" – ಇತ್ಯಾದಿ. ಪ್ರಮುಖ ಸಣ್ಣಕತೆಗಳ ಸಂಗ್ರಹ: "ಮೇರಿ ಪ್ರಿಯ ಕಹಾನಿಯಾಂ."

## ೭. ಫಣೀಶ್ವರ್‌ನಾಥ್ 'ರೇಣು'

ಜನ್ಮ ೧೯೨೧, ಪೂರ್ಣಿಯಾ (ಬಿಹಾರ್) ಕಾದಂಬರಿಗಳನ್ನೂ ಸಣ್ಣ ಕತೆಗಳನ್ನೂ ಬರೆದಿದ್ದಾರೆ. ಪ್ರಮುಖ ಕಾದಂಬರಿಗಳು: "ಮೈಲಾ ಆಂಚಲ್", "ಪರತಿ

ಪರಿಕಥಾ", "ದೀರ್ಘತಯಾ" – ಇತ್ಯಾದಿ. ಸಣ್ಣಕತೆ ಸಂಗ್ರಹಗಳು: "ಠುಮರೀ" ಮತ್ತು "ಆದಿಮ್ ರಾತ್ರಿ ಕೀ ಗಂಧ್."

೮. **ನಿರ್ಮಲ್‌ವರ್ಮಾ**

ಜನ್ಮ ೧೯೨೯, ಸಿಮ್ಲಾ (ಹಿಮಾಚಲ ಪ್ರದೇಶ). ಹಾಲಿ ವಾಸ – ದೆಹಲಿ. ಇತ್ತೀಚೆಗೆ ಯೂರೋಪಿನ ಪ್ರವಾಸದಲ್ಲಿದ್ದಾರೆ. ಮುಖ್ಯವಾಗಿ ಸಣ್ಣಕತೆಗಳನ್ನು ಬರೆದಿದ್ದಾರೆ. "ವೇದಿನ್" ಎಂಬ ಹೆಸರಿನ ಕಾದಂಬರಿ ಕೂಡ ಪ್ರಕಟವಾಗಿದೆ. ಸಣ್ಣ ಕತೆಗಳ ಸಂಗ್ರಹ: "ಪರಿಂದೆ", "ಜಲತಿ ಝಾಡಿ," ಮತ್ತು "ಫಿಛಲಿ ಗರ್ಮಿಯೋಂಮೆ."

೯. **ಅಮರಕಾಂತ್**

ಜನ್ಮ ೧೯೨೫, ಬಲಿಯಾ (ಉ. ಪ್ರ.) ಹಾಲಿ ವಾಸ: ಅಲಹಾಬಾದ್. ಮುಖ್ಯವಾಗಿ ಸಣ್ಣ ಕತೆಗಾರರು. ಕಾದಂಬರಿಗಳನ್ನೂ ಬರೆದಿದ್ದಾರೆ. ಮುಖ್ಯ ಸಣ್ಣ ಕತೆಗಳ ಸಂಗ್ರಹ: "ಜಿಂದಗಿ ಔರ್ ಜೋಂಕ್."

೧೦. **ಜ್ಞಾನರಂಜನ್**

ಜನ್ಮ ೧೯೩೬ ಅಲಹಾಬಾದ್ (ಉ. ಪ್ರ.) ಮುಖ್ಯವಾಗಿ ಸಣ್ಣಕತೆಗಳನ್ನು ಬರೆದಿರುವರು. ಪ್ರಕಾಶಿತ ಸಣ್ಣ ಕತೆಗಳ ಸಂಗ್ರಹ: "ಫೆನ್ಸ್ ಕೆ ಇಧರ್ ಔರ್ ಉಧರ್" "ಫೆನ್ಸಿನ ಈ ಕಡೆ, ಆ ಕಡೆ."

೧೧. **ಕಾಶಿನಾಥ್ ಸಿಂಗ್**

ಜನ್ಮ ೧೯೩೭, ವಾರಾಣಸಿ (ಉ. ಪ್ರ.) ಮುಖ್ಯವಾಗಿ ಸಣ್ಣ ಕತೆಗಳನ್ನು ಬರೆದಿದ್ದಾರೆ. ಪ್ರಕಾಶಿತ ಸಣ್ಣಕತೆ ಸಂಗ್ರಹ: "ಲೋಗ್ ಬಿಸ್ತರೋಂ ಪರ್."

೧೨. **ಮೋಹನ್ ರಾಕೇಶ್**

ಜನ್ಮ ೧೯೨೫, ಅಮೃತಸರ (ಪಂಜಾಬ್) ವಾಸ – ದೆಹಲಿ. ನಾಟಕಕಾರರು, ಕಾದಂಬರಿಕಾರರು ಮತ್ತು ಕತೆಗಾರರು. ನಾಟಕಗಳು – "ಆಷಾಢ್ ಕಾ ಏಕ್ ದಿನ್", "ಲಹರೋಂಕ ರಾಜಹಂಸ್" ಮತ್ತು "ಆಧೆ ಅಧೂರೆ". ಕಾದಂಬರಿ: "ಅಂಧೇರೆ ಬಂದ್ ಕಮರೇ". ಸಣ್ಣ ಕತೆಗಳ ಸಂಗ್ರಹ: "ನಯೇ ಬಾದಲ್", "ಜಾನವರ್ ಔರ್ ಜಾನವರ್" "ಏಕ್ ಔರ್ ಜಿಂದಗೀ" ಮತ್ತು "ಫೌಲಾದ್ ಕಾ ಆಕಾಶ್."

## ೧೩. ರಾಜೇಂದ್ರ ಯಾದವ್

ಜನ್ಮ ೧೯೨೯, ಆಗ್ರಾ (ಉ. ಪ್ರ.) ವಾಸ: ದೆಹಲಿ. ಕಾದಂಬರಿಕಾರರು ಮತ್ತು ಕತೆಗಾರರು. ಒಂದು ಕವನಸಂಗ್ರಹ ಕೂಡ ಪ್ರಕಟಿತವಾಗಿದೆ. ಕಾದಂಬರಿಗಳು: "ಸಾರಾ ಆಕಾಶ್" "ಉಖಡೆ ಹುಯೇ ಲೋಗ್", "ಶಹ್ ಔರ್ ಭಾತ್" "ಕುಲಟಾ ಔರ್ ಸಂತ್ರಬದ್ಧ್." ಸಣ್ಣಕತೆ ಸಂಗ್ರಹಗಳು: "ಖೇಲ್ ಖಿಲೌನೆ," "ಜಹಾಂ ಲಕ್ಷ್ಮೀ ಕೈದ್ ಹೆ", "ಛೋಟೆ ಛೋಟೆ ತಾಜಮಹಲ್", "ಕಿನಾರೇಸೆ ಕಿನಾರೆ ತಕ್", "ಪ್ರತೀಕ್ಷಾ", "ಟೂಟನಾ" – ಇತ್ಯಾದಿ.

## ೧೪. ಕಮಲೇಶ್ವರ್

ಜನ್ಮ: ೧೯೩೨. ಮೈನ್‌ಪುರ್ (ಉ. ಪ್ರ.) ಕೆಲ ಸಮಯದ ವರೆಗೆ ವಾಸ: ಅಲಹಾಬಾದ್ ಮತ್ತು ದೆಹಲಿ. ಹಾಲಿ ವಾಸ: ಮುಂಬಯಿ. ಕತೆಗಾರರು ಮತ್ತು ಕಾದಂಬರಿಕಾರರು. ಸಣ್ಣಕತೆ ಸಂಗ್ರಹಗಳು: "ರಾಜಾ ನಿರಬೇಸಿಯಾ", "ಕಸಬೇಕಾ ಆದ್ಮಿ", "ಖೋಯಿ ಹುಯಿ ದಿಶಾಯೇಂ" ಮತ್ತು "ಮಾಂಸ ಕಾ ದರಿಯಾ". ಕಾದಂಬರಿಗಳು: "ಏಕ್ ಸಡಕ್ ಸತ್ತಾವನ್ ಗಲಿಯಾಂ," "ಡಾಕ್ ಬಂಗಲಾ", ಮತ್ತು "ತೀಸ್ರಾ ಆದ್ಮಿ."

## ೧೫. ಶ್ರೀಕಾಂತ ವರ್ಮಾ

ಜನ್ಮ ೧೯೩೧. ಬಿಲಾಸಪುರ (ಮಧ್ಯಪ್ರದೇಶ) ಹಾಲಿ ವಾಸ: ದೆಹಲಿ. ಮುಖ್ಯವಾಗಿ ಕವಿ. ಕಾದಂಬರಿಗಳನ್ನೂ ಸಣ್ಣ ಕತೆಗಳನ್ನೂ ಬರೆದಿದ್ದಾರೆ. ಕವನಸಂಗ್ರಹಗಳು: "ಮಟಕಾ ಮೇಘ," "ಮಾಯಾ ದರ್ಪಣ್" ಮತ್ತು "ದಿನಾರಂಭ್". ಕಾದಂಬರಿ – "ದೂಸರಿ ಬಾರ್." ಸಣ್ಣಕತೆ ಸಂಗ್ರಹಗಳು: "ಝಾಡಿ" ಮತ್ತು "ಸಂವಾದ್."